# ವಿಷಯಾನುಕ್ರಮಣಿಕೆ.

# ಪ್ರಸ್ತಾವನೆ.



ಇದುವರೆಗೆ ಕನ್ನಡದಲ್ಲಿ ಪ್ರಸಿದ್ಧವಾಗದೆಯಿದ್ದ ಈ ಮನೋಹರವಾದ ದೊಡ್ಡ ಪುಸ್ತಕವು, ಶ್ರೀ ಶೇಷಾಚಲ ಸದ್ಗುರುಗಳ ಕೃಪೆಯಿಂದಲೂ, ವೇ. ಶಾ. ಸ. ರಾ. ರಾ. ಶ್ರೀಕಂಠಶಾಸ್ತ್ರಿಗಳವರ ಪರಿಶ್ರಮದಿಂದಲೂ, ಸದ್ಬೋಧ ಚಂದ್ರಿಕೆಯ ಸಹಾಯದಿಂದಲೂ ಮುಗಿದು, ಮುದ್ರಿಸಿ ಸಿದ್ಧವಾಯಿತೆಂದು ಬರೆಯಲು ಬಹಳ ಸಂತೋಷವಾಗುತ್ತದೆ. ಲೇಖನ ಕಾರ್ಯದಲ್ಲಿ ಇನ್ನೂ ನುರುಪಡೆಯಾಗದೆಯಿದ್ದ ನಮ್ಮ ಶಾಸ್ತ್ರಿಗಳು, ಸರಾಸರಿ ಎರಡೇ ತಿಂಗಳಲ್ಲಿ, ಅದೂ ತಮ್ಮ ಅಧ್ಯಾಪನದ ಕಾರ್ಯವನ್ನು ಸಾಗಿಸಿ ಹೊತ್ತು ಸಿಕ್ಕಾಗ, ಬರೆದು ಒಗೆದದ್ದನ್ನು ನೆನಿಸಿದಾಗೆಲ್ಲ ನಮಗೆ ಬಹಳ ಆಶ್ಚರ್ಯವಾಗುತ್ತದೆ. ಶಾಸ್ತ್ರಿಗಳ ಲೆಕ್ಕಣಿಕೆಯು ಬಲುವೇಗಶಾಲಿಯೆಂಬದನ್ನು ಎಲ್ಲರೂ ಒಪ್ಪಿಕೊಳ್ಳಬಹುದು. ಇಂಥ ಹುಟ್ಟು ಲೇಖಕರು ಬರವಣಿಗೆಯಲ್ಲಿ ಒಂದೆರಡುವರ್ಷ ನುರಿತರೆ, ಚಂದ್ರಿಕೆಗೆ ದೊಡ್ಡ ಆಧಾರಸ್ತಂಭವು ದೊರೆತಂತಾಗುವದೆಂದು ಯಾರಾದರೂ ಒಪ್ಪಿಕೊಳ್ಳಬಹುದು.

ವಾಲ್ಮೀಕಿರಾಮಾಯಣ, ಅಧ್ಯಾತ್ಮರಾಮಾಯಣ ಮೊದಲಾದ ಸುಪ್ರಸಿದ್ಧ ರಾಮಾಯಣಗಳಲ್ಲಿ ಈ ಆನಂದರಾಮಾಯಣವು ಒಂದಾಗಿರುತ್ತದೆ. ವಾಲ್ಮೀಕಿರಾಮಾಯಣದೊಳಗಿನ ಎಷ್ಟೋ ಸಂದಿಗ್ಧ ವಿಷಯಗಳ ವಿವೇಚನವು ಇದರಲ್ಲಿ ಮಾಡಲ್ಪಟ್ಟಿರುವದು. ವಾಲ್ಮೀಕಿರಾಮಾಯಣದೊಳಗಿನ ವಿಷಯವೆಲ್ಲ ಇದರಲ್ಲಿ ಮನೋಹರವಾಗಿ ವರ್ಣಿಸಿರುವದಲ್ಲದೆ, ಶ್ರೀರಾಮನ ತೀರ್ಥಾಟನ, ಅಶ್ವಮೇಧ, ಪತ್ನಿಯೊಡನೆ ನಡೆದ ಪ್ರಭುವಿನ ವಿಲಾಸ, ಸತೀಸುತರ ಸ್ವೀಕಾರ, ಎಲ್ಲ ಪುತ್ರರ ವಿವಾಹ, ಭೂಲೋಕದ ಕಾಪಾಡುವಿಕೆ, ಸಮಸ್ತರೊಡನೆ ನಿಜಸ್ಥಾನವನ್ನು ಕುರಿತು [illegible] ೀಹರವಾಗಿ ವರ್ಣಿಸಲ್ಪಟ್ಟವೆ. ವಾಚಕರ [illegible] ಮೂಲ ಆನಂದರಾಮಾಯಣದ ಸಾರವು ಶೋಧಿಸಲ್ಪಟ್ಟದೆ. ಪುಸ್ತಕದ ಬರವಣಿಗೆಯು ಬಹು ಸುಲಭ, ಬಲು ಸವಿ. ಈ ಮಹತ್ವದ ಗ್ರಂಥದ ಉಪಸಂಹಾರವನ್ನು ಬರೆಯಲಿಕ್ಕೆ ಕೆಲಕಾರಣಗಳಿಂದ ಶಾಸ್ತ್ರಿಗಳಿಗೆ ಅನುಕೂಲಿಸದ್ದಕ್ಕಾಗಿ ನಮಗೆ ಬಹು ವಿಷಾದವಾಗಿರುತ್ತದೆ.

ಈ ಮೊದಲೇ ಚಂದ್ರಿಕೆಯಲ್ಲಿ ಈ ಆನಂದರಾಮಾಯಣದ ಸಾರಕಾಂಡವು ಪ್ರಸಿದ್ಧವಾಗಿರುವದರಿಂದ ಪುಸ್ತಕದ ಸವಿಯು ನಮ್ಮ ಚಂದ್ರಿಕೆಯ ವಾಚಕರಿಗಾ-

ದರೂ ಗೊತ್ತಾಗಿರುವದು. ವಾಚಕರಲ್ಲಿ ಬಹು ಜನರು ಸಂಪೂರ್ಣವಾದ ಆನಂದ ರಾಮಾಯಣದ ಬಗ್ಗೆ ಪತ್ರಗಳನ್ನು ಬರೆಬರೆದು ಈ ಪುಸ್ತಕವನ್ನು ಮುಗಿಸಿಕೊಂಡದ್ದಕ್ಕಾಗಿ ಕೃತಜ್ಞತೆಯನ್ನು ಪ್ರಕಟಿಸದೆ ಇರಲಾಗುವದಿಲ್ಲ. ಈ ಉಪಕೃತಿಗಾಗಿಯೇ ನಮ್ಮ ಚಂದ್ರಿಕೆಯ ಎಲ್ಲ ವರ್ಗಣಿದಾರರಿಗೆ ಸಂಪೂರ್ಣ ಆನಂದರಾಮಾಯಣವನ್ನು ಈ ಮೊದಲೇ ಮಾತುಕೊಟ್ಟಂತೆ ಹನ್ನೆರಡೇ ಆಣೆಗೆ ಕೊಡಲು ನಿಶ್ಚಯಿಸಿರುತ್ತದೆ. ಈ ಪುಸ್ತಕದಮೇಲಿನ ನಮ್ಮ ಕನ್ನಡಿಗರ ಪ್ರೇಮವನ್ನು ತೂಗಿನೋಡಿ, ಅಧ್ಯಾತ್ಮರಾಮಾಯಣವನ್ನೂ, ಬೇರೆ ಪೌರಾಣಿಕ ಗ್ರಂಥಗಳನ್ನೂ ಸುರಸವಾದ ಕನ್ನಡದಿಂದ ಸಂಪೂರ್ಣವಾಗಿಯಾಗಲಿ, ಸಂಕ್ಷೇಪವಾಗಿಯಾಗಲಿ ಆಯಾ ಪುಸ್ತಕಗಳ ತಾರತಮ್ಯವರಿತು ಪ್ರಸಿದ್ಧಿಸಬೇಕೆಂದು ಮಾಡಿರುತ್ತೇವೆ. ಶ್ರೀ ಸದ್ಗುರುವು ಏನು ಮಾಡುವನೋ ನೋಡಬೇಕು. ನೋಡುವದೇನು! ನಮ್ಮ ವೇ. ಶಾ. ಸ. ರಾ. ರಾ. ಶ್ರೀಕಂಠಶಾಸ್ತ್ರಿಗಳಂಥ ಪುಣ್ಯಪುರುಷರು ಈ ಕಾರ್ಯಕ್ಕಾಗಿ ಟೊಂಕ ಕಟ್ಟಿಹರೆ, ಶ್ರೀ ಶೇಷಾಚಲಸದ್ಗುರುವು ನಿಂತು ಕೆಲಸಮಾಡಿಸುವನು! ಅಂಥ ಸುಯೋಗವು ಒದಗಿ ನಮ್ಮ ಕನ್ನಡವಾಙ್ಮಯವು ವಿವಿಧ ಗ್ರಂಥಪರಿಪೂರ್ಣವಾಗಲೆಂದು ಕರುಣಾಳುವಾದ ಆ ಸದ್ಗುರುವನ್ನು ಪ್ರಾರ್ಥಿಸುತ್ತೇವೆ.

| | |
|---|---|
| ಆನಂದವನ, | ನಮ್ರಸೇವಕ, |
| ತಾ|| ೨೦–೮–೧೯.೧೨. | ವೆ. ತಿ. ಕುಲಕರಣಿ, ಗಳಗನಾಥ. |



॥ ಶ್ರೀ ರಾಮ ॥

# ಶ್ರೀಮದಾನಂದರಾಮಾಯಣ.

## ಸಾರಕಾಂಡ.

### ೧ನೆಯ ಪ್ರಕರಣ—ಶ್ರೀ ರಾಮಾದಿಗಳ ಅವತಾರ.

ಯಾವ ಮಹಾತ್ಮನ ಎಡಭಾಗದಲ್ಲಿ ಸೀತಾದೇವಿಯೂ, ಮುಂಭಾಗದಲ್ಲಿ ಆಂಜನೇಯನೂ, ಹಿಂದುಗಡೆ ಲಕ್ಷ್ಮಣನೂ, ಉಭಯ ಪಾರ್ಶ್ವಗಳಲ್ಲಿ ಭರತ-ಶತ್ರುಘ್ನರೂ, ನಾಲ್ಕೂ ದಿಕ್ಕುಗಳಲ್ಲಿ ಸುಗ್ರೀವ, ವಿಭೀಷಣ, ಅಂಗದ, ಜಾಂಬುವಂತ ಇವರೇ ಮೊದಲಾದ ಸೇನಾನಾಯಕರೂ ಕಂಗೊಳಿಸುತ್ತಿರುವರೋ, ಅಂಥ ಮೇಘಶ್ಯಾಮ-ಶರೀರದಿಂದೊಪ್ಪುವ ಶ್ರೀ ರಾಮಚಂದ್ರನಿಗೆ ನಮಸ್ಕಾರ ಮಾಡುತ್ತೇನೆ.

ಒಂದಾನೊಂದು ಕಾಲದಲ್ಲಿ ಪಾರ್ವತಿಯು ಶ್ರೀ ಚಂದ್ರಮೌಳಿಯನ್ನು ಕುರಿತು—"ಪ್ರಭೋ, ನೀವು ನನಗಾಗಿ ಅನೇಕ ಇತಿಹಾಸಗಳನ್ನೂ, ಪುರಾಣಗಳನ್ನೂ ಹೇಳಿದಿರಿ. ಶ್ರೀ ರಾಮನ ಚರಿತ್ರವನ್ನೂ ತಮ್ಮ ಮುಖದಿಂದ ಕೇಳಿರುವೆನು. ಆದರೂ ನನಗೆ ಸಮಾಧಾನವಾಗಲಿಲ್ಲ. ಆದ್ದರಿಂದ ನನಗೆ ಶ್ರೀ ರಾಮಚಂದ್ರನ ಆನಂದದಾಯಕಗಳಾದ ಲೀಲೆಗಳನ್ನು ಹೇಳಿರಿ. ನನ್ನ ಈ ಮನಸ್ಸಿನ ಅನುತಾಪವು ಶಾಂತವಾಗಲಿ" ಎಂದು ಪ್ರಾರ್ಥಿಸಿದಳು.

ತನ್ನ ಪ್ರಿಯ ಸಖಿಯಾದ ಗೌರಿಯು ಈ ಮಾತುಗಳನ್ನು ಕೇಳಿ ಶಂಭುವಿಗೆ ಪರಮಾನಂದವಾಯಿತು. ಆಗ ಶಂಕರನು—"ಗಿರಿಜೆ, ಬಹು ಶ್ರೇಷ್ಠವಾದ ಪ್ರಶ್ನೆ ಮಾಡಿದೆ. ಪರಮಾನಂದವನ್ನುಂಟುಮಾಡುವ ಶ್ರೀ ರಾಮಚಂದ್ರನ ಚರಿತ್ರೆಯನ್ನು ನಿನಗೆ ಹೇಳುವೆನು. ಸೂರ್ಯವಂಶದಲ್ಲಿ ಹುಟ್ಟಿದ ಪರಮ ಧಾರ್ಮಿಕನಾದ ದಶ

ರಘುಮಹಾರಾಜನು ಜಂಬೂದ್ವೀಪಕ್ಕೆ ರಾಜನಾಗಿದ್ದನು. ಆತನ ರಾಜಧಾನಿ, ಅಯೋಧ್ಯೆಯು. ಈ ನಗರಕ್ಕೆ ಸಮೀಪದಲ್ಲಿ ಕೋಸಲವೆಂಬ ದೇಶವಿತ್ತು. ಆ ದೇಶದ ಅರಸನಾದ ಕೋಸಲನಿಗೆ ಬಹು ಸುಂದರಿಯಾದ ಒಬ್ಬ ಮಗಳು ಇದ್ದಳು. ಆಕೆಯ ಹೆಸರು ಕೌಸಲ್ಯೆ. ಆ ರಾಜಪುತ್ರಿಯು ವಿವಾಹಕ್ಕೆ ಯೋಗ್ಯಳಾದಳು. ಆಕೆಯ ತಂದೆಯೂ ಕುಲ-ಶೀಲ ಸಂಪನ್ನನಾದ ದಶರಥ ಮಹಾರಾಜನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಲು ನಿಶ್ಚಯ ಮಾಡಿದನು; ಮತ್ತು ದಶರಥನನ್ನು ಕರೆತರುವದಕ್ಕೋಸ್ಕರ ದೂತನನ್ನು ಅಯೋಧ್ಯೆಗೆ ಕಳುಹಿದನು; ಆ ಕಾಲದಲ್ಲಿ ದಶರಥನು ತನ್ನ ಮಿತ್ರರೊಡನೆ ಸರಯೂ ನದಿಯಲ್ಲಿ ಜಲಕ್ರೀಡೆಮಾಡುತ್ತಿದ್ದನು.

ಇತ್ತ ಲಂಕೆಯಲ್ಲಿ ರಾಕ್ಷಸಾಧಿಪನಾದ ರಾವಣನು ಬ್ರಹ್ಮನೊಡನೆ ಮಾತನಾಡುತ್ತ ಕುಳಿತಾಗ ಆತನು ಬ್ರಹ್ಮನನ್ನು ಕುರಿತು—'ಭೋ ಪರಮೇಷ್ಠಿಯೇ, ನನ್ನ ಮರಣವು ಯಾರ ಕೈಯಿಂದ ಆಗುವದು, ಖಂಡಿತವಾಗಿ ಹೇಳು, ಸಂಶಯ ಪಡಬೇಡ,' ಎಂದು ಕೇಳಿದನು. ಆಗ್ಗೆ ಬ್ರಹ್ಮದೇವನೂಕೂಡ ಆ ಮಾತನ್ನು ಕೇಳಿ—'ಎಲೈ ರಾವಣನೇ, ದಶರಥ ಮಹಾರಾಜನ ಪತ್ನಿಯಾದ ಕೌಸಲ್ಯೆಯು ಉದರದಲ್ಲಿ ಒಬ್ಬ ಪರಾಕ್ರಮಿಯಾದ ರಾಮನೆಂಬ ಮಗನು ಹುಟ್ಟತಕ್ಕವನಿರುತ್ತಾನೆ. ಪರಬ್ರಹ್ಮಸ್ವರೂಪಿಯಾದ ಆ ಶ್ರೀರಾಮನು ಯುದ್ಧದಲ್ಲಿ ನಿನ್ನನ್ನು ಕೊಲ್ಲುವನು; ಈ ಹೊತ್ತಿಗೆ ಐದನೇ ದಿವಸದಲ್ಲಿ ಕೌಸಲ್ಯೆಯನ್ನು ದಶರಥನಿಗೆ ಕೊಟ್ಟು ವಿವಾಹ ನಡೆಯುವದು. ಆ ವಿವಾಹ ಮುಹೂರ್ತವು ಬಹಳ ಪ್ರಶಸ್ತವಾಗಿರುವದರಿಂದ ಕೌಸಲ್ಯೆಯು ಶ್ರೇಷ್ಠವಾದ ಪುತ್ರರತ್ನವನ್ನು ಪಡೆಯುವಳು. ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಹೊಂದುವ ಆ ವೀರನು ನಿನ್ನನ್ನು ನಾಶಮಾಡದೆ ಬಿಡನು;' ಎಂದು ಹೇಳಿದನು.

ಬ್ರಹ್ಮನ ಈ ಮಾತುಗಳನ್ನು ಕೇಳಿದೊಡನೆ ರಾವಣನಿಗೆ ದೇಹಭಾನವು ತಪ್ಪಿತು. ಒಡನೆ ಆ ರಾಕ್ಷಸೇಶ್ವರನು ಪುಷ್ಪಕವಿಮಾನವನ್ನೇರಿ ರಾಕ್ಷಸರೊಡನೆ ಅಯೋಧ್ಯೆಗೆ ಪ್ರಯಾಣ ಮಾಡಿದನು. ಆತನು ಸರಯೂನದಿಯಲ್ಲಿ ನೌಕಾರೂಢನಾಗಿದ್ದ ದಶರಥನನ್ನು ಯುದ್ಧದಲ್ಲಿ ಸೋಲಿಸಿ, ಆತನ ನಾವೆಯನ್ನು ಚೂರು ಚೂರು ಮಾಡಿದನು. ನಾವೆಯು ಒಡೆದ ಕೂಡಲೆ, ಸೇನಾಪತಿಯೇ ಮುಂತಾದ ಸಮಸ್ತ ಜನರೂ ನದಿಯಲ್ಲಿ ಮುಳುಗಿದರು. ಆದರೆ ದೈವಯೋಗದಿಂದ ದಶರಥ ಸುಮಂತ್ರರಿಬ್ಬರಿಗೆ ಸ್ವಲ್ಪ ದೂರದ ಮೇಲೆ ನಾವೆಯ ಒಂದು ಹಲಿಗೆಯು ದೊರಕಿತು. ಅವರಿಬ್ಬರೂ ಆ ಹಲಿಗೆಯನ್ನಾಶ್ರಯಿಸಿ ಸರಯೂಪ್ರವಾಹದೊಡನೆ ಹೋಗುತ್ತಿರಲು,

ಮುಂದೆ ಆ ನದಿಯು ಭಾಗೀರಥಿಗೆ ಸೇರಿತು. ಇವರು ಮುಂದೆ ಭಾಗೀರಥೀ ಪ್ರವಾಹವನ್ನನುಸರಿಸಿ ದುರವಗಾಹವಾದ ಸಾಗರವನ್ನು ಹೊಂದಿದರು. ಆದರೆ ಅವರಿಗೆ ಯಾವ ವಿಧವಾದ ಅಪಾಯುಗಳೂ ಸಂಭವಿಸಲಿಲ್ಲ.

ಇತ್ತಲಾ ರಾವಣನು ಕೋಸಲದೇಶಕ್ಕೆ ಪ್ರಯಾಣ ಮಾಡಿ, ಕೋಸಲೇಂದ್ರನೊಡನೆ ಮಹತ್ತರವಾದ ಯುದ್ಧ ಮಾಡಿ, ಆತನನ್ನು ಸೋಲಿಸಿ, ಆತನ ಮಗಳಾದ ಕೌಸಲ್ಯೆಯೆಂಬ ಕನ್ಯಾರತ್ನವನ್ನು ಅಪಹರಿಸಿದನು. ಮುಂದೆ ರಾವಣನು ಪರಮ ಹರ್ಷದಿಂದ ಲಂಕಾನಗರವನ್ನು ಕುರಿತು ಪ್ರಯಾಣ ಮಾಡುತ್ತಿರಲು, ಸಮುದ್ರದಲ್ಲಿರುವ ದೊಡ್ಡದಾದ ತಿಮಿಂಗಿಲವು ಅವನ ಕಣ್ಣಿಗೆ ಬಿತ್ತು. ಆ ತಿಮಿಂಗಿಲವನ್ನು ನೋಡಿದಾಗಲೇ ರಾವಣನು—'ಈ ಯುವತಿಯನ್ನು ನಮ್ಮ ರಾಜಧಾನಿಗೆ ಕರೆದುಕೊಂಡು ಹೋಗುವದರಿಂದ ಏನೂ ಉಪಯೋಗವಿಲ್ಲ, ದೇವತೆಗಳಿಗೆ ನಮ್ಮಲ್ಲಿ ದ್ವೇಷವಿರುವದರಿಂದ ಅವರು ಈ ತರುಣಿಯನ್ನು ಹೇಗಾದರೂ ಗುಪ್ತರೀತಿಯಿಂದ ಒಯ್ಯದೆ ಬಿಡಲಾರರು. ಆದ್ದರಿಂದ ಈ ಸ್ತ್ರೀಯನ್ನು ತಿಮಿಂಗಿಲಕ್ಕೆ ಕೊಟ್ಟು ಬಿಡುವೆನು. ಮುಂದೆ ನನಗೆ ಮರಣದ ಭಯವೆಲ್ಲಿಯದು?' ಹೀಗೆಂದು ಆಲೋಚಿಸಿ, ಆ ಕುಮಾರಿಯನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಭದ್ರಪಡಿಸಿ, ತಿಮಿಂಗಿಲದ ಬಾಯಿಗೆ ಕೊಟ್ಟು, ಜಾಗರೂಕತೆಯಿಂದ ಕಾಪಾಡಿಕೊಂಡಿರುವಂತೆ ಆಜ್ಞಾಪಿಸಿ, ಆ ವಿಚಾರ ಶೂನ್ಯನು ಲಂಕೆಗೆ ಪ್ರಯಾಣ ಬೆಳಸಿದನು. ಆ ತಿಮಿಂಗಿಲವು ಬಹು ಸಂತೋಷದಿಂದ ಆ ಪೆಟ್ಟಿಗೆಯನ್ನು ದವಡೆಯಲ್ಲಿ ಧರಿಸಿ ಸಂಚರಿಸುತ್ತಿರಲು, ಒಂದಾನೊಂದು ದಿನ ಅದು ತನ್ನ ವೈರಿಯನ್ನು ಕಂಡಿತು. ಮತ್ತು ಅದರೊಡನೆ ಯುದ್ಧ ಮಾಡಬೇಕೆಂದು ಬಯಸಿ ಅದು ಪೆಟ್ಟಿಗೆಯನ್ನು ಸಮುದ್ರದ ಒಂದು ತೀರದಲ್ಲಿಟ್ಟು ಶತ್ರುವಿನೊಡನೆ ಹೊಡೆದಾಡಲಾರಂಭಿಸಿತು.

ಇಷ್ಟರೊಳಗೆ ಹಲಿಗೆಯ ಸಹಾಯದಿಂದ ನದಿಯಲ್ಲಿ ಬರುತ್ತಿರುವ ಆ ದಶರಥ ಸುಮಂತ್ರರಿಬ್ಬರು ಸಮುದ್ರದಲ್ಲಿ ಪ್ರಯಾಣ ಮಾಡುತ್ತಾ ನಾಲ್ಕು ದಿವಸಗಳನಂತರ ಒಂದು ದ್ವೀಪವನ್ನು ದೈವಯೋಗದಿಂದ ಹೊಂದಿದರು. ಅಲ್ಲಿ ಸ್ವಲ್ಪ ದೂರ ಪ್ರಯಾಣ ಮಾಡಲು ಪೆಟ್ಟಿಗೆಯೊಂದು ಅವರ ಕಣ್ಣಿಗೆ ಬಿತ್ತು. ಇಂಥಾ ಜನಗಳಿಲ್ಲ ಸ್ಥಳದಲ್ಲಿ ಪೆಟ್ಟಿಗೆ ಯಾರದಿರಬಹುದೆಂದು ಆಶ್ಚರ್ಯಪಡುತ್ತ ಸಮೀಪಕ್ಕೆ ಹೋಗಿ, ದಶರಥನು ಆ ಪೆಟ್ಟಿಗೆಯ ಬಾಯಿ ತೆಗೆದು ನೋಡಿದನು. ಒಳಗೆ ಕೋಮಲಾಂಗಿಯಾದ ಕನ್ಯಾರತ್ನ! ಮತ್ತೆ ವಿಚಾರ ಮಾಡಿ ನೋಡಲು, ಆಕೆಯು ತಾನು ಪಾಣಿಗ್ರಹಣ ಮಾಡಲು ಯೋಚಿಸಿದ್ದ ಕೌಸಲ್ಯೆಯಾಗಿಯೇ ಇದ್ದಳು. ಈ ಎಲಾ

ವೃತ್ತಾಂತವನ್ನೂ ಸುಮಂತ್ರನಿಗೆ ದಶರಥನು ತಿಳಿಸಿದನು. ಈ ವಿಚಿತ್ರವನ್ನು ನೋಡಿ ಅವರಿಗೆ ಬಹಳ ಆಶ್ಚರ್ಯವಾಯಿತು. ದೈವಗತಿಯಿಂದ ಮೊದಲು ನಿಶ್ಚಯಿಸಿದ ವಿವಾಹಮುಹೂರ್ತಕ್ಕೆ ಇಂಥಾ ಕಷ್ಟದಲ್ಲಿ ಒದಗಿದ ವಧೂವರರ ಸಂಘಟನವು ಪರಮಾಶ್ಚರ್ಯಕರವಾಗಿತ್ತು. ಇದೇ ಮುಹೂರ್ತದಲ್ಲಿ ಗಾಂಧರ್ವ ವಿಧಿಯಿಂದ ಕೌಸಲ್ಯೆಯ ಪಾಣಿಗ್ರಹಣ ಮಾಡಬೇಕೆಂದು ದಶರಥನು ನಿಶ್ಚಯಿಸಿದನು. ಮಂಗಳಕಾರ್ಯವೂ ಕೈಗೂಡಿತು. ಅನಂತರ ದಶರಥ, ಸುಮಂತ್ರ, ಕೌಸಲ್ಯೆ, ಈ ಮೂರು ಜನಗಳೂ ಅದೇ ಪೆಟ್ಟಿಗೆಯಲ್ಲಿ ಕುಳಿತುಕೊಂಡು ಮೊದಲಿನಂತೆ ಬಾಗಿಲು ಭದ್ರಮಾಡಿದರು. ಇಷ್ಟರೊಳಗೆ ತಿಮಿಂಗಿಲವು ತನ್ನ ವೈರಿಯನ್ನು ಸೋಲಿಸಿ, ಮತ್ತೆ ಆ ಪೆಟ್ಟಿಗೆಯನ್ನು ದವಡೆಯಲ್ಲಿಟ್ಟುಕೊಂಡು ಸಮುದ್ರದಲ್ಲಿ ತಿರುಗಲಾರಂಭಿಸಿತು.

ಇತ್ತ ಲಂಕಾಪಟ್ಟಣಕ್ಕೆ ಪ್ರಯಾಣಮಾಡಿದ ರಾವಣನು ತಾನು ನಡೆಸಿದ ಸಂಗತಿಗಳನ್ನು ಸವಿಸ್ತಾರವಾಗಿ ಬ್ರಹ್ಮನಿಗೆ ತಿಳುಹಿ, ಇನ್ನು ಮೇಲೆ ನನಗೆ ಮರಣವೆಲ್ಲಿಯದು, ಎಂದು ಬ್ರಹ್ಮನೊಡನೆ ಹಾಸ್ಯಮಾಡಲುದ್ಯುಕ್ತನಾದನು. ಆದರೆ, ಬ್ರಹ್ಮನು ಇವನ ಮಾತನ್ನು ಕೇಳಿ, 'ಓಂ ವೃಣಾಮ್ಯಹಂ' ಇವೇ ಮೊದಲಾದ ಮಂಗಳವಚನಗಳನ್ನು ಘಟ್ಟಿಯಾಗಿ ಹೇಳಲಾರಂಭಿಸಿದನು. ಈ ಮಾತುಗಳ ಅಭಿಪ್ರಾಯವು ರಾವಣನಿಗೆ ಆಗಲಿಲ್ಲ. ಆತನು ಇದೇನು, ನಿನ್ನ ಮನೋಗತವಾದ ಸಂಗತಿಯನ್ನು ತಿಳುಹೆಂದು ಬ್ರಹ್ಮನನ್ನು ಕೇಳಿದನು. ಆಗ ಆತನು—'ಎಲೈ ರಾವಣನೇ, ಬ್ರಹ್ಮಸಂಕಲ್ಪವು ಎಂದಿಗೂ ಸುಳ್ಳಾಗಲಾರದು. ಇದೇ ಮುಹೂರ್ತದಲ್ಲೇ ಕೌಸಲ್ಯೆಯ ವಿವಾಹ-ಮಹೋತ್ಸವವು ನಡೆಯುತ್ತಿರುವದು, ಎಂದು ಹೇಳಿದನು. ಆದರೂ ರಾವಣನಿಗೆ ಬ್ರಹ್ಮನ ಮಾತು ನಂಬಿಕೆಗೆ ಬರಲಿಲ್ಲ. ಒಡನೆ ಆತನು ತನ್ನ ದೂತರ ಕೈಯಿಂದ ಆ ತಿಮಿಂಗಿಲದ ಬಳಿಯಲ್ಲಿದ್ದ ಪೆಟ್ಟಿಗೆಯನ್ನು ತರಿಸಿ ನೋಡುವಷ್ಟರಲ್ಲಿ ದಶರಥ, ಕೌಸಲ್ಯೆ, ಸುಮಂತ್ರ ಈ ಮೂವರು ಅದರಲ್ಲಿ ಕಾಣಿಸಿದರು. ಇದೆಲ್ಲವನ್ನೂ ನೋಡುತ್ತಿರುವ ರಾವಣನಿಗೆ ಪರಮಾಶ್ಚರ್ಯವೂ ಪ್ರಚಂಡಕೋಪವೂ ಒಂದೇಕಾಲದಲ್ಲಿ ಉತ್ಪನ್ನವಾದವು. ಆಗ ಕ್ರೂರನಾದ ರಾಕ್ಷಸಾಧಿಪನು ಕೈಯಲ್ಲಿ ಖಡ್ಗವನ್ನು ಧರಿಸಿ, ಆ ಮೂವರನ್ನು ಸಂಹರಿಸಬೇಕೆಂದು ಮುಂದು ಬಿದ್ದನು. ಆ ಕಾಲದಲ್ಲಿ ಬ್ರಹ್ಮನು—"ಎಲೈ ರಾವಣನೇ, ಏನು ಕೆಲಸಮಾಡಲಾರಂಭಿಸಿದೆ? ಇಂಥಾ ಸಾಹಸವನ್ನೆಂದಿಗೂ ಮಾಡಬಾರದು. ದೈವಯೋಗದಿಂದ ಈ ಪೆಟ್ಟಿಗೆಯಲ್ಲಿ ಈಗ ಮೂರು ಜನಗಳಾಗಿರುವರು. ಇನ್ನು

ಮುಂದೆ ಲಕ್ಷಾವಧಿ ಜನಗಳಾದಾರು. ಅದರಿಂದ ಈ ದಿವಸವೇ ನಿನ್ನ ನಾಶವಾ ದೀತು. ವ್ಯರ್ಥವಾಗಿ ಆಯುಷ್ಯವನ್ನು ಹಾಳುಮಾಡಿಕೊಳ್ಳಬೇಡ. ನನ್ನ ವ ಚನವು ಎಂದಿಗೂ ಸುಳ್ಳಾಗಲಾರದು. ನೀನು ಬದುಕಬೇಕೆಂದಿಷ್ಟವಿದ್ದರೆ, ಇ ವರನ್ನು ಸುಮ್ಮನೆ ಅಯೋಧ್ಯೆಗೆ ಕಳುಹಿಸಿಬಿಡು." ಎಂದು ಹೇಳಿದನು.

ಈ ಮಾತುಗಳನ್ನು ಕೇಳಿ, ರಾವಣನು ಪೆಟ್ಟಿಗೆಯನ್ನು ಅಯೋಧ್ಯೆಗೆ ಕಳುಹಿಸಿ ದನು. ರಾಜನು ಕೌಸಲ್ಯೆ-ಸುಮಂತ್ರರೊಡನೆ ಸುಖವಾಗಿ ಪಟ್ಟಣವನ್ನು ಸೇರಿದ್ದನ್ನು ಕೇಳಿ, ಅಯೋಧ್ಯೆಯ ಹಾಗೂ ಕೋಸಲದೇಶದ ಪ್ರಜೆಗಳಿಗೆ ಬಹಳ ಹರ್ಷವಾ ಯಿತು. ಕೋಸಲರಾಜನು ಸಂತೋಷದಿಂದ ಮಗಳ ವಿವಾಹವನ್ನು ಲೋಕಪದ್ಧ ತಿಯಂತೆ ಬಹು ವಿಜೃಂಭಣೆಯಿಂದ ನಡೆಸಿದನು. ಕೆಲವುಕಾಲದನಂತರ ದಶರಥ ನು ಮಗಧರಾಜನ ಮಗಳಾದ ಸುಮಿತ್ರೆಯನ್ನೂ, ಕೇಕಯಭೂಪಾಲನ ಮಗಳಾ ದ ಕೈಕೇಯಿಯನ್ನೂ ಲಗ್ನವಾದನು. ಈ ಮೂವರೊಳಗೆ ಕೈಕೇಯಿಯು ಪರಮ ಸೌಂದರ್ಯವತಿಯಾದ್ದರಿಂದ ಈಕೆಯಲ್ಲಿ ದಶರಥನ ಪ್ರೇಮವು ಹೆಚ್ಚಿನದಾಗಿ ತ್ತು. ಕೌಸಲ್ಯೆಯೇ ಮೊದಲಾದ ರಾಜಪುತ್ರಿಯರಾದರೂ ಪತಿಯ ಮನೋವೃ ತ್ತಿಯನ್ನನುಸರಿಸಿ ನಡೆಯುತ್ತಿದ್ದರು.

ದಯಾಶಾಲಿಯಾದ ಆ ದಶರಥನು ರಾಜ್ಯಭಾರ ಮಾಡುವಾಗ, ದೇವತೆಗ ಳಿಗೂ, ರಾಕ್ಷಸರಿಗೂ ಯುದ್ಧವು ಪ್ರಾರಂಭವಾಯಿತು. ಆಯುದ್ಧದ ಸಮಾರಂಭ ನಡೆ ಯುತ್ತಿರುವಾಗ 'ಯಾವಪಕ್ಷದಲ್ಲಿ ದಶರಥಮಹಾರಾಜನು ಸೇರುವನೋ, ಆ ಪಕ್ಷಕ್ಕೆ ಜಯವಾಗುವದು,' ಹೀಗೆಂದು ಅಶರೀರವಾಣಿಯುಂಟಾಯಿತು. ದೇವತೆಗಳು ಕೂ ಡಲೆ ದಶರಥನ ಬಳಿಗೆ ಬಂದು, 'ಪ್ರಭೋ, ಧರ್ಮರಕ್ಷಣೆಗಾಗಿ ಅವತರಿಸಿರುವ ನೀನು ನಮಗೆ ಈಗ ಬಂದಿರುವ ರಾಕ್ಷಸರ ಬಾಧೆಯನ್ನು ತಪ್ಪಿಸು, ಎಂದು ಮೊರೆಬಿದ್ದರು. ಆಗ ಕರುಣಾನಿಧಿಯಾದ ದಶರಥನು ಯುದ್ಧಕ್ಕೆ ಹೊರಡಲು ಸಿದ್ಧನಾದನು. ಅ ದನ್ನು ನೋಡಿ ಕೈಕೇಯಿಯು; 'ನಾನೂ ಜೊತೆಗೆ ಬರುವೆನೆಂ'ದು ಆಗ್ರಹ ಮಾಡಿದ ಳು. ಬಳಿಕ ಕೈಕೇಯಿಯನ್ನು ಕರೆದುಕೊಂಡು ದಶರಥನು ಸ್ವರ್ಗಕ್ಕೆ ಪ್ರಯಾಣ ಬೆಳೆಸಿದನು. ಆಗ ದೇವದಾನವರಿಗೆ ದೊಡ್ಡ ಯುದ್ಧವಾಯಿತು. ಶೂರನಾದ ದಶರ ಥನಿಂದ ಎಣಿಕೆಯಿಲ್ಲದಷ್ಟು ರಾಕ್ಷಸರು ಹತರಾದರು. ಈಮಧ್ಯದಲ್ಲಿ ದಶರಥಮ ಹಾರಾಜನ ರಥದ ಕೀಲು ಬಿದ್ದುಹೋಗಿತ್ತು. ಯುದ್ಧದಭರದಲ್ಲಿ ಆತನು ಈ ಅ ನಾಹುತವನ್ನು ನೋಡಲೇ ಇಲ್ಲ. ಇದನ್ನೆಲ್ಲಾ ನೋಡುತ್ತಿದ್ದ ಕೈಕೇಯಿಯು ಪ ತಿಗೆ ಜಯವಾಗಲೆಂದು ತನ್ನ ಕೈಯನ್ನು ಆ ಕೀಲಿನಸ್ಥಾನದಲ್ಲಿಟ್ಟುಕೊಂಡು, ರಥ

ವು ಬೀಳದಂತೆ ಕಾಪಾಡಿದಳು.

ಪೂರ್ವದಲ್ಲಿ ಬಾಲಭಾವದಿಂದಿರುವಾಗ ಕೈಕೇಯಿಯು ಒಬ್ಬ ಋಷಿಯ ಮುಖಕ್ಕೆ ಮಸಿಹಚ್ಚಿ ಕಪ್ಪುಮಾಡಿದ್ದಳು. ಆಗ ಮುನಿಯು 'ಯಾವದೋ ಒಂದು ಅಪವಾದದ ನಿಮಿತ್ತವಾಗಿ ನಿನ್ನ ಮುಖವನ್ನು ಯಾರೂ ನೋಡದೆ ಹೋಗಲಿ, ಎಂದು ಶಪಿಸಿದನು. ಬಳಿಕ ಕೈಕೇಯಿಯು ಅಪರಾಧವಾಯಿತೆಂದು ಮುನಿಯನ್ನು ಬಹಳವಾಗಿ ಬೇಡಿಕೊಂಡಳು. ಆಗ ಮುನಿಯು—'ಕೈಕೇಯಿಯೇ, ಕೇಳು. ನಿನ್ನ ಹಸ್ತವು ವಜ್ರಕ್ಕಿಂತಲೂ ಕಠಿಣವಾಗಿರಲಿ. ಅದು ಯಾವಾಗಲೂ ನಾಶವಾಗದಿರಲಿ. ಇದರಿಂದ ನಿನಗೆ ಕೀರ್ತಿಯೊದಗಲಿ' ಎಂದು ಶ್ರೇಷ್ಠವರವನ್ನು ಕೊಟ್ಟು, ತಾನು ಮುಂದೆ ತೆರಳಿದನು. ಈ ಸಂದರ್ಭವು ಕೈಕೇಯಿಯು ನೆನಪಿಗೆ ಬಂದುದರಿಂದ ಸಮಯವನ್ನರಿತು ಗಂಡನಿಗೆ ಸಹಾಯ ಮಾಡಿದಳು. ದೇವಾಸುರರ ಯುದ್ಧಮುಗಿದನಂತರ ಹೆಂಡತಿಯ ಮಹಾಭಯಂಕರವಾದ ಈ ಕಾರ್ಯವನ್ನು ನೋಡಿ, ದಶರಥನು ವಿಸ್ಮಿತನಾದನು. ಮತ್ತು ತನಗೆ ಜಯಕಾಲದಲ್ಲಿ ಆಕೆಯು ಮಾಡಿದ ಸಹಾಯಕ್ಕೆ ಸಂತುಷ್ಟನಾಗಿ 'ಪ್ರಿಯೇ, ನಿನಗೆ ಬೇಕಾದ ಎರಡು ವರಗಳನ್ನು ಕೇಳು, ಈಗಲೇ ಕೊಡುವೆನು' ಎಂದು ನುಡಿದನು. ಆಗಲಾ ಕೈಕೇಯಿಯು 'ಪ್ರಾಣಪ್ರಿಯರೇ, ಈ ಎರಡು ವರಗಳು ನನ್ನವುಗಳಾಗಿ ತಮ್ಮಲ್ಲೀ ಇರಲಿ. ಸಮಯ ಬಂದಾಗ ಬೇಡುವೆನು' ಎಂದು ಮಾತನಾಡಿದಳು. ದಶರಥನೂ ಕೂಡ ಹಾಗೆಯೇ ಆಗಲೆಂದು, ದೇವತೆಗಳಿಂದ ಸನ್ಮಾನವನ್ನು ಹೊಂದಿ, ಪತ್ನಿಯೊಡನೆ ತನ್ನ ರಾಜಧಾನಿಯಾದ ಅಯೋಧ್ಯೆಯನ್ನು ಸೇರಿದನು.

ಮುಂದೆ ದಶರಥನು ಬೇಟೆಯಾಡುವದಕ್ಕಾಗಿ ಹೊರಟು, ಅನೇಕ ದುಷ್ಟಮೃಗಗಳನ್ನು ನಾಶಮಾಡುತ್ತ ಅಡವಿಯಲ್ಲಿ ಸಂಚರಿಸುತ್ತಿದ್ದನು. ಇದೇ ಸಮಯದಲ್ಲಿ ಒಬ್ಬ ವೈಶ್ಯಕುಲದ ತರುಣನು ಕುರುಡರಾದ ತನ್ನ ತಾಯಿತಂದೆಗಳನ್ನು ಬುಟ್ಟಿಯಲ್ಲಿರಿಸಿಕೊಂಡು ಆ ಬುಟ್ಟಿಯಿಂದ ಕೂಡಿದ ಕಾವಡಿಯನ್ನು ಹೆಗಲಮೇಲೆ ಇರಿಸಿ, ಕಾಶಿಗೆ ಪ್ರಯಾಣ ಮಾಡುತ್ತಿದ್ದನು. ಆಗ ವಸಂತಕಾಲವಾದ್ದರಿಂದ ಬಿಸಿಲಿನ ತಾಪವನ್ನು ತಡೆಯಲಾರದೆ ಆತನು ರಾತ್ರಿ ಪ್ರಯಾಣಮಾಡುತ್ತಿದ್ದನು. ದಾರಿಯಲ್ಲಿ ಆ ವೃದ್ಧರಾದ ತಾಯಿತಂದೆಗಳು "ಅಪ್ಪಾ ಮಗು, ಬಾಯಾರಿಕೆಯಾಗುತ್ತಲಿದೆ. ಸ್ವಲ್ಪ ನೀರು ಕೊಡೆ"ಂದು ಕೇಳಿದರು. ಈ ತರುಣನಲ್ಲಿ ನೀರಿದ್ದಿಲ್ಲ. ಮಾತಾ-ಪಿತೃ-ಸೇವೆಯಲ್ಲಿ ನಿಪುಣನಾದ ಆತನು ಕಾವಡಿಯನ್ನು ಹಾದಿಯಲ್ಲಿಟ್ಟು, ನೀರನ್ನು ತರುವದಕೋಸ್ಕರ ಸಮೀಪದಲ್ಲಿರುವ ಜಲಾಶಯಕ್ಕೆ

ಹೊರಟನು. ಅಲ್ಲಿ ನೀರನ್ನು ತುಂಬುತ್ತಿರುವ ಆ ವೈಶ್ಯನ ಹೂಜಿಯು ಕಂಠವು ಚಿಕ್ಕದು. ಆದ್ದರಿಂದ ಅದು 'ಬುಡು ಬುಡು' ಎಂದು ಶಬ್ದಮಾಡುತ್ತಿತ್ತು. ಈ ಧ್ವನಿಯನ್ನು ಕೇಳಿ, ಶಬ್ದವನ್ನನುಸರಿಸಿ ಗುರಿಯನ್ನು ಹೊಡೆಯಲು ನಿಪುಣನಾದ ದಶರಥನು ಇಲ್ಲಿ ಆನೆಯು ನೀರು ಕುಡಿಯುತ್ತಿರಬಹುದೆಂದು ತಿಳಿದು, ತನ್ನ ಕೈಯ್ಯಲ್ಲಿದ್ದ ಬಾಣವನ್ನು ಆ ಭಾಗಕ್ಕೆ ಪ್ರಯೋಗಿಸಿದನು. ಆ ಬಾಣವಾದರೂ ಬಹಳ ಹದನವಾಗಿದ್ದುದರಿಂದ ಅದು ವೈಶ್ಯಕುಮಾರನ ಉದರವನ್ನು ಸೀಳಿತು. ಆಗ ವೈಶ್ಯಕುಮಾರನು ವ್ಯಥೆಯನ್ನು ತಾಳಲಾರದೆ 'ಯಾವನೋ ಒಬ್ಬ ಘಾತುಕನು ನಿರಪರಾಧಿಯಾದ ನನ್ನನ್ನು ಬಾಣದಿಂದ ಹೊಡೆದನಲ್ಲ' ಎಂದು ಒದರಿ ಮೂರ್ಛೆ ಹೊಂದಿದನು.

ಈ ಮಾತುಗಳನ್ನು ಕೇಳಿ, ದಶರಥನು ಏನೋ ಅನರ್ಥವು ನಡೆಯಿತೆಂದು, ಗಾಬರಿಯಿಂದ ಅದೇ ಶಬ್ದವನ್ನನುಸರಿಸಿ ಆ ತರುಣನ ಬಳಿಗೆ ಬಂದನು. ಆ ವೈಶ್ಯವರನಿಂದ ಆತನ ಎಲ್ಲಾ ವೃತ್ತಾಂತವನ್ನೂ ರಾಜನು ಕೇಳಿಕೊಂಡನು. ಮತ್ತು ಆತನ ಉದರದಿಂದ ಬಾಣವನ್ನು ಬಹು ಶ್ರಮದಿಂದ ಹೊರಗೆ ತೆಗೆದನು. ಮುಂದೆ ದಶರಥನು ಆ ತರುಣನ ತಾಯಿತಂದೆಗಳ ಬಳಿಗೆ ಹೋಗಿ—ತನ್ನ ಅಪರಾಧವನ್ನು ಹೇಳಿಕೊಂಡನು. ಆ ದಂಪತಿಗಳು ಬಹು ದುಃಖದಿಂದ—ಅಪ್ಪಾ, ದೊರೆಯೇ, ಅಂಥಾ ಮಗನಿಲ್ಲದ ಮೇಲೆ ನಾವು ಬದುಕಿ ಏನು ಫಲ! ಚಿತೆಯನ್ನು ಸಿದ್ಧಪಡಿಸು. ನಾವಿಬ್ಬರೂ ದೇಹ ತ್ಯಾಗಮಾಡುತ್ತೇವೆ. ಎಂದು ಹೇಳಿದರು. ದಶರಥನೂ ಅದರಂತೆ ಸಿದ್ಧಪಡಿಸಿದನು. ಮುಂದೆ ಆ ವೃದ್ಧರು ಚಿತಾ ಪ್ರವೇಶ ಮಾಡುವಾಗ—ಎಲೈ ದಶರಥನೇ, ನಾವು ಅಂತ್ಯಕಾಲದಲ್ಲಿ ಹ್ಯಾಗೆ ಪುತ್ರಶೋಕದಿಂದ ಮರಣಹೊಂದಿದೆವೋ, ನೀನಾದರೂ ಹಾಗೆಯೇ ಮರಣಹೊಂದು' ಎಂದು ಶಪಿಸಿದರು. ಮುಂದೆ ದಶರಥನು ಅವರ ಎಲ್ಲಾ ಕಾರ್ಯಗಳನ್ನು ಮುಗಿಸಿ, ಬಹಳ ದುಃಖದಿಂದ ಅಯೋಧ್ಯೆಗೆ ಬಂದನು. ಮತ್ತು ಇದೆಲ್ಲಾ ಸಂಗತಿಯನ್ನೂ ತಮ್ಮ ಗುರುಗಳಾದ ವಸಿಷ್ಠರಿಗೆ ತಿಳಿಸಿದನು. ಆಗ ಗುರುಗಳೂ ದೋಷ ಪರಿಹಾರಕ್ಕೋಸ್ಕರ ದಶರಥನಿಂದ ಅಶ್ವಮೇಧವೆಂಬ ಮಹಾಕ್ರತುವನ್ನು ಮಾಡಿಸಿದರು. ಅದರಿಂದ ದಶರಥನಿಗೆ ಸ್ವಲ್ಪ ಸಮಾಧಾನವಾಯಿತು.

ದಶರಥನಿಗೆ ಶಾಂತೆಯೆಂಬ ಒಬ್ಬ ಮಗಳಿದ್ದಳು. ಆತನು ತನ್ನ ಮಿತ್ರನಾದ ರೋಮಪಾದನಿಗೆ ಮಕ್ಕಳಿಲ್ಲದ್ದರಿಂದ ಆ ಕನ್ಯಾಮಣಿಯನ್ನು ಆತನಿಗೆ ಕೊಟ್ಟಿದ್ದನು. ಆ ರೋಮಪಾದ ರಾಜನ ದೇಶದಲ್ಲಿ ಹನ್ನೆರಡು ವರ್ಷಗಳು ಮಳೆ ಇಲ್ಲದಂತಾಯಿತು.

ಆಗ ವಿಭಾಂಡಕರ ಮಕ್ಕಳಾದ ಋಶ್ಯಶೃಂಗರನ್ನು ಕರೆತಂದರೆ, ವೃಷ್ಟಿಯಾಗುವದೆಂದು ತಿಳಿದು, ರಾಜನು ಬಹು ಪ್ರಯಾಸದಿಂದ ಆ ಮುನಿಯನ್ನು ತನ್ನ ರಾಜಧಾನಿಗೆ ಕರೆತರಿಸಿದನು. ಕೂಡಲೆ ಸಮೃದ್ಧವಾದ ವೃಷ್ಟಿಯಾಯಿತು. ತನ್ನ ಮಗಳಾದ ಶಾಂತೆಯನ್ನು ಆ ಮಹರ್ಷಿಗಳಿಗೆ ಕೊಟ್ಟು ವಿವಾಹವನ್ನು ಬೆಳಿಸಿ ಅಳಿಯನನ್ನು ತನ್ನ ಮನೆಯಲ್ಲೆ ಇರಿಸಿಕೊಂಡಿದ್ದನು. ಈ ಅಶ್ವಮೇಧದ ಕಾಲದಲ್ಲಿ ಸುಮಂತ್ರನೂ ವಸಿಷ್ಠರೂ, ತಮ್ಮ ಯಜಮಾನನಾದ ದಶರಥನಿಗೆ ಮಕ್ಕಳಿಲ್ಲವೆಂತಲೂ, ಋಶ್ಯಶೃಂಗರನ್ನು ಕರಿಸಿ ಅವರ ಸಹಾಯದಿಂದ ಪುತ್ರ ಕಾಮೇಷ್ಟಿಯನ್ನು ಮಾಡಿಸಿದರೆ ಮಕ್ಕಳಾಗುವವೆಂತಲೂ ಯೋಚಿಸಿ, ಆ ಮಹರ್ಷಿಗಳನ್ನು ಕರೆಸಿದ್ದರು. ಪುತ್ರಕಾಮೇಷ್ಟಿಯು ಸಾಂಗವಾಗಿ ನೆರವೇರಿತು. ಯಾಗದ ಕೊನೆಯಲ್ಲಿ ಯಜ್ಞಪುರುಷನು ಪ್ರತ್ಯಕ್ಷನಾಗಿ ಸುವರ್ಣದ ಪಾತ್ರೆಯಲ್ಲಿರುವ ಪಾಯಸವನ್ನು ದಶರಥನಿಗೆ ಕೊಟ್ಟು, ಇದನ್ನು ನಿನ್ನ ಪತ್ನಿಯರಿಗೆಕೊಡು, ಎಂದು ಹೇಳಿ ಅಂತರ್ಹಿತನಾದನು. ಹಾಗೆಯೇ ದಶರಥನು ಪಾಯಸವನ್ನು ಹಂಚಿದನು. ಆಗ ಬ್ರಹ್ಮನ ಶಾಪದಿಂದ ಹದ್ದಿನ ರೂಪವನ್ನು ಹೊಂದಿದ ಒಬ್ಬ ಅಪ್ಸರಸ್ತ್ರೀಯು ಕೈಕೇಯಿಯ ಕೈಯ್ಯಲ್ಲಿದ್ದ ಭಾಗವನ್ನು ಕಿತ್ತುಕೊಂಡುಹೋಗಿ, ಶೇಷಾಚಲದಲ್ಲಿ ತಪಸ್ಸು ಮಾಡುತ್ತಿದ್ದ ಅಂಜನಾದೇವಿಯ ಕೈಯ್ಯಲ್ಲಿ ಹಾಕಿ, ಮೊದಲಿನ ದಿವ್ಯವಾದ ತನ್ನ ರೂಪವನ್ನು ಹೊಂದಿ ಬ್ರಹ್ಮಲೋಕವನ್ನು ಸೇರಿದಳು. ಬಳಿಕ ಕೌಸಲ್ಯಾ-ಸುಮಿತ್ರೆಯರಿಬ್ಬರೂ ತಮ್ಮ ಭಾಗಗಳಲ್ಲಿ ಸ್ವಲ್ಪ ಸ್ವಲ್ಪ ತೆಗೆದು, ಕೈಕೇಯಿಗೆ ಕೊಟ್ಟರು. ಮುಂದೆ ಮೂವ್ವರು ರಾಜಪತ್ನಿಯರೂ ಗರ್ಭಿಣಿಯಾದರು. ದಶರಥನಿಗೆ ಪರಮಸಂತೋಷವಾಯಿತು. ಮತ್ತು ಪುಂಸವನವೇ ಮೊದಲಾದ ಗರ್ಭಸಂಸ್ಕಾರಗಳನ್ನೆಲ್ಲಾ ನೆರವೇರಿಸಿ, ತನ್ನ ಪ್ರೀತಿಪಾತ್ರರಾದ ಪತ್ನಿಯರ ಬಯಕೆಗಳನ್ನೆಲ್ಲಾ ಸಮಯವರಿತು ಕೈಗೂಡಿಸಿದನು.

ಇಷ್ಟರೊಳಗೆ ಪಾಪಿಯಾದ ರಾವಣನ ಬಾಧೆಯು ಭೂದೇವಿಗೆ ತಡೆಯದಂತಾಯಿತು. ಆಕೆಯು ಬ್ರಹ್ಮನನ್ನು ಮರೆಹೊಕ್ಕಳು. ಬ್ರಹ್ಮನೂಕೂಡ ಸಮಸ್ತದೇವತೆಗಳೊಡನೆ ಕ್ಷೀರಸಮುದ್ರದಲ್ಲಿ ವಾಸಮಾಡುವ ಶ್ರೀಮನ್ನಾರಾಯಣನ ಮರೆಬಿದ್ದನು. ಆಗ ಜಗದೀಶನು ಬ್ರಹ್ಮನೇ ಮೊದಲಾದ ದೇವತೆಗಳ ಮುಖದಿಂದ ರಾವಣನ ಹಾವಳಿಯನ್ನು ಕೇಳಿ "ನಾನೇ ಭೂಲೋಕದಲ್ಲಿ ದಶರಥಮಹಾರಾಜನಿಗೆ ಮಗನಾಗಿ ಜನಿಸಿ, ನಿಮ್ಮೆಲ್ಲರ ಬಾಧೆಯನ್ನು ಪರಿಹಾರ ಮಾಡುವೆನು. ಹೆದರಬೇಡಿರಿ. ನನಗೆ ಸಹಾಯ ಮಾಡಲು ನೀವೆಲ್ಲರೂ ವಾನರ ರೂಪದಿಂದ ಭೂಮಿ

ಯಲ್ಲಿ ಅವತಾರಮಾಡತಕ್ಕದ್ದು. ಹಾಗೂ ದುಂದುಭಿಯೆಂಬ ಗಂಧರ್ವಕನ್ಯೆಯು ಮಂಥರೆಯೆಂಬ ಹೆಸರಿನಿಂದ ಅಯೋಧ್ಯೆಯಲ್ಲಿ ದಶರಥನ ಪತ್ನಿಯಾದ ಕೈಕೇಯಿಯ ದಾಸಿಯಾಗಿದ್ದುಕೊಂಡು, ಮುಂದೆ ನನ್ನ ರಾಜ್ಯಾಭಿಷೇಕದ ಸಮಯದಲ್ಲಿ ಕೈಕೇಯಿಗೆ ದುರ್ಬೋಧನೆ ಮಾಡಲಿ" ಎಂದು ಎಲ್ಲರಿಗೂ ಅಪ್ಪಣೆಮಾಡಿ, ತಾನೂ ಕೌಸಲ್ಯೆಯ ಗರ್ಭದಲ್ಲಿ ಪ್ರವೇಶಮಾಡಿದನು. ಚೈತ್ರಮಾಸದ ಶುದ್ಧನವಮಿಯ ದಿವಸ ಭಕ್ತವತ್ಸಲನಾದ ಶ್ರೀ ನಾರಾಯಣನು ಕೌಸಲ್ಯೆಯ ಗರ್ಭದಿಂದ ಬಾಲಸೂರ್ಯನಂತೆ ಉತ್ಪನ್ನನಾದನು. ಆ ಕಾಲದಲ್ಲಿ ದಿಕ್ಕುಗಳು ನಿರ್ಮಲಗಳಾಗಿದ್ದವು. ಸುಮಿತ್ರೆಯ ಉದರದಲ್ಲಿ ಶ್ರೀ ಮದಾದಿಶೇಷನೂ, ಕೈಕೇಯಿಯ ಗರ್ಭದಲ್ಲಿ ಶ್ರೀ ಮಹಾವಿಷ್ಣುವಿನ ಶಂಖ ಮತ್ತು ಚಕ್ರಗಳೂ ಪುತ್ರರೂಪದಿಂದ ಜನಿಸಿದರು. ಈ ಬಾಲಕರು ತಾಯಿಯರಿಗೆ ಪರಮಸಂತೋಷವನ್ನುಂಟುಮಾಡುತ್ತಿದ್ದರು. ಈ ವರ್ತಮಾನವನ್ನು ಕೇಳಿದೊಡನೆ ಆದ ದಶರಥನ ಸಂತೋಷಕ್ಕೆ ಪಾರವೇ ಇಲ್ಲದಾಯಿತು. ನಗರದಲ್ಲೆಲ್ಲ ಸಕ್ಕರೆಯು ಸೂರೆಯಾಯಿತು. ಮುಂದೆ ಗುರುಗಳಾದ ವಸಿಷ್ಠರು ದೊಡ್ಡ ಮಗನಿಗೆ ರಾಮನೆಂತಲೂ, ಎರಡನೆಯವನಿಗೆ ಲಕ್ಷ್ಮಣನೆಂತಲೂ ಮಿಕ್ಕ ಇಬ್ಬರಿಗೆ ಭರತ, ಶತ್ರುಘ್ನರೆಂತಲೂ ನಾಮಕರಣ ಮಾಡಿದರು. ಆ ದಿವಸ ಪರಮವಿಜೃಂಭಣೆಯಿಂದ ಮಹೋತ್ಸವವು ನಡೆಯಿತು. ಆ ಮಕ್ಕಳಲ್ಲಿ ರಾಮ-ಲಕ್ಷ್ಮಣರಿಬ್ಬರು ಯಾವಾಗಲೂ ಒಂದೇ ಕಡೆ ಇರುವದರಲ್ಲಿ ಪ್ರೀತಿಪಡುತ್ತಿದ್ದರು. ಆ ಕೌಸಲ್ಯೆಯೇ ಮೊದಲಾದ ರಾಜಪತ್ನಿಯರು ನಾನಾವಿಧವಾದ ಭೂಷಣಗಳಿಂದಲೂ, ವಸ್ತ್ರಗಳಿಂದಲೂ ಬಾಲಕರ ಅಲಂಕರಿಸಿ ಸಂತೋಷಪಡುತ್ತಿದ್ದರು. ಆ ಮಕ್ಕಳಾದರೂ ತಮ್ಮ ಬಾಲಲೀಲೆಗಳಿಂದ ತಾಯಿ-ತಂದೆಗಳ ಮನಸ್ಸನ್ನು ಯಾವಾಗಲೂ ಹರ್ಷಗೊಳಿಸುವರು. ಮಕ್ಕಳ ತಪ್ಪುಹೆಜ್ಜೆಯ ನಡಿಗೆಗಳನ್ನು ನೋಡಿ ತಾಯಿಯರು ಬಹಳ ಹಿಗ್ಗುವರು. ಹೀಗೆಯೇ ವರ್ಷಗಳೆಲ್ಲ ಆ ತಾಯಿಯರಿಗೆ ದಿವಸಗಳಂತೆ ಕಳೆದು ಹೋದವು. ಮುಂದೆ ಯೋಗ್ಯವಾದ ಕಾಲದಲ್ಲಿ ನಾಲ್ವರು ಮಕ್ಕಳಿಗೂ ಉಪನಯನ ಮುಹೂರ್ತವು ನಡೆಯಿತು. ಅನಂತರ ದಶರಥನು ಮಕ್ಕಳನ್ನು ಗುರುಗಳಾದ ವಸಿಷ್ಠರ ಬಳಿಯಲ್ಲಿಟ್ಟು ಅವರನ್ನು ವೇದ-ಶಾಸ್ತ್ರ-ಪುರಾಣಗಳೇ ಮೊದಲಾದ ವಿದ್ಯೆಗಳಲ್ಲಿ ಪಾರಂಗತರನ್ನಾಗಿ ಮಾಡಿಸಿದನು. ಮುಂದೆ ಧನುರ್ವಿದ್ಯೆಯಲ್ಲಾದರೂ ಈ ಬಾಲಕರು ಅಸಹಾಯಶೂರರಾದರು. ವಿದ್ಯಾಭ್ಯಾಸವಾದನಂತರ ಬಾಲಕರು ಕುಲಗುರುಗಳಿಗೆ ಸಂತೋಷವನ್ನುಂಟುಮಾಡಿ, ಅವರ ಅಪ್ಪಣೆಯನ್ನು ಪಡೆದು ಅಯೋಧ್ಯಾನಗರವನ್ನು ಹೊಂದಿ, ತಂದೆತಾಯಿ

...ಗೆ ಪರಮಹರ್ಷವನ್ನು ಉಂಟುಮಾಡಿದರು. ಇಂಥಾ ಬಾಲಕರನ್ನು ನೋಡಿ ...ರೆ, ಯಾವ ಪ್ರಾಣಿಗೆ ತಾನೆ ಸಂತೋಷವಾಗಲಿಕ್ಕಿಲ್ಲ? ಪ್ರಜೆಗಳಿಗೆ ಈ ರಾಜಪುತ್ರ... ಮೇಲೆ ಬಹು ಪ್ರೀತಿಯುಂಟಾಯಿತು.

## ೨ ನೆಯ ಪ್ರಕರಣ.

### ಸೀತಾ–ಸ್ವಯಂವರ.

ಶ್ರೀ ಶಂಕರನು ಪಾರ್ವತಿಯನ್ನು ಕುರಿತು ಹೇಳುತ್ತಾನೆ.—"ಪ್ರಿಯೇ, ...ವಾನೊಂದು ದಿವಸ ವಿಶ್ವಾಮಿತ್ರ ಮಹರ್ಷಿಗಳು, ದಶರಥಮಹಾರಾಜನ ಸಭೆಗೆ ...ಮಾಡಿಸಿ, 'ನಿನ್ನ ಮಕ್ಕಳಾದ ರಾಮ-ಲಕ್ಷ್ಮಣರನ್ನು ನನ್ನ ಯಜ್ಞವನ್ನು ಕಾಪಾ...ವದಕ್ಕೆ ನನ್ನೊಡನೆ ಕಳುಹಿಸು' ಎಂದು ದಶರಥನನ್ನು ಕೇಳಿದರು. ಆತನು ಗುರು...ಳ ಅಪ್ಪಣೆಯಂತೆ ಮಕ್ಕಳನ್ನು ವಿಶ್ವಾಮಿತ್ರರ ಜೊತೆಗೆ ಕಳುಹಿಸಿದನು. ತಂದೆ...ಯ ಅಪ್ಪಣೆಯಂತೆ ಆ ಧೈರ್ಯಶಾಲಿಗಳಾದ ಮಕ್ಕಳು ಗಾಧಿನಂದನನೊಡನೆ ಪ್ರ-ಯಾಣ ಮಾಡಿದರು. ಆ ಮಹರ್ಷಿಗಳಿಗಾದರೂ ರಾಮ-ಲಕ್ಷ್ಮಣರನ್ನು ನೋಡಿ ಬಹಳ ಸಂತೋಷ. ಮುಂದೆ ಅವರೆಲ್ಲರೂ ಕಾಮಾಶ್ರಮಕ್ಕೆ ಬಂದಬಳಿಕ ವಿಶ್ವಾಮಿತ್ರನು ತಮ್ಮಲ್ಲಿಯ ಸಮಸ್ತ ವಿದ್ಯೆಗಳನ್ನು ಆ ಕುಮಾರರಿಗೆ ಉಪದೇಶ ಮಾಡಿದನು. ಆ ವಿದ್ಯಾಬಲದಿಂದ ರಾಮ-ಲಕ್ಷ್ಮಣರು ಶತ್ರುಗಳಿಗೆ ಸಾಕ್ಷಾತ್ ಮೃತ್ಯುವಿನಂತೆ ಕಾಣುತ್ತಿದ್ದರು. ಮುಂದೆ ವಿಶ್ವಾಮಿತ್ರರ ಆಶ್ರಮದ ದಾರಿಯಲ್ಲಿ ಮುನಿಗಳ ಸತ್ಕ್ರಿಯೆಗಳಿಗೆ ಕಂಟಕದಂತೆ ಇದ್ದ ತಾಟಕೆಯೆಂಬ ರಾಕ್ಷಸಿಯನ್ನು ಒಂದು ಬಾಣದಿಂದಲೇ ರಾಮನು ಸೀಳಿದನು. ಬಳಿಕ ಆತನು ವಿಶ್ವಾಮಿತ್ರರ ಆಶ್ರಮಕ್ಕೆ ಹೋಗಿ ಅಲ್ಲಿ ಸುಬಾಹುವೆಂಬ ರಾಕ್ಷಸನನ್ನು ಕೊಂದು, ಮಾರೀಚನೆಂಬ ದೈತ್ಯನನ್ನು ನೂರು ಯೋಜನೆಗಳಿಂದಾಚೆಗೆ ಬೀಳುವಂತೆ ಹೊಡೆದನು. ಇದರಂತೆ ಆ ರಾಜಪುತ್ರರು ಅಪರಿಮಿತ ರಾಕ್ಷಸರನ್ನು ನಾಶಮಾಡಿದರು. ಶ್ರೀ ರಾಮಚಂದ್ರನ ಪರಾಕ್ರಮದಿಂದ ಗಾಧಿನಂದನನ ಯಜ್ಞವು ಸಮಾಪ್ತವಾಯಿತು.

ಇಷ್ಟರಲ್ಲಿ ಜನಕಮಹಾರಾಜನ ಪುತ್ರಿಯಾದ ಸೀತಾದೇವಿಯ ಸ್ವಯಂವರವು ಮಿಥಿಲಾನಗರದಲ್ಲಿ ನಡೆಯುವ ವರ್ತಮಾನವು ವಿಶ್ವಾಮಿತ್ರರಿಗೆ ತಿಳಿಯಲು, ಅವರು ರಾಮ-ಲಕ್ಷ್ಮಣರೊಡನೆ ಅಲ್ಲಿಗೆ ಪ್ರಯಾಣಮಾಡಲಿಕ್ಕೆ ಸಂಕಲ್ಪ ಮಾಡಿ, ಕೂಡನೆ ರಾಜಕುವರರನ್ನೊಡಗೂಡಿ ಮಿಥಿಲಾನಗರಕ್ಕೆ ಹೊರಟರು. ದಾರಿಯಲ್ಲಿ ವಿಶ್ವಾಮಿತ್ರರು ಅಹಲ್ಯಾ ವೃತ್ತಾಂತವನ್ನು ಸವಿಸ್ತಾರವಾಗಿ ಶ್ರೀ ರಘುನಾಥನಿಗೆ ನಿವೇದನ ಮಾಡಿದರು. ಅದೆಲ್ಲವನ್ನು ಕೇಳಿ ಶ್ರೀ ರಾಮಚಂದ್ರನು ಆಶ್ಚರ್ಯಗೊಂಡು, ಗೌತಮರ ಶಾಪದಿಂದ ಕಲ್ಲಾಗಿ ಬಿದ್ದಿದ್ದ ಋಷಿಪತ್ನಿಯನ್ನು ತನ್ನ ಪಾದ ಧೂಳಿಯಿಂದ ಉದ್ಧಾರ ಮಾಡಿದನು. ಬಳಿಕ ಅಂಥಾ ಋಷಿಪತ್ನಿಯನ್ನು ಗೌತಮರಿಗೆ ಸಮರ್ಪಿಸಿ, ಮುಂದೆ ಗಂಗಾತೀರವನ್ನನುಸರಿಸಿ ಪ್ರಯಾಣ ಮಾಡಿದರು. ನದಿಯ ಪ್ರವಾಹವು ಪೂರ್ಣವಾಗಿದ್ದುದರಿಂದ, ನಾವೆಯ ಸಹಾಯದಿಂದ ನದಿಯನ್ನು ದಾಟುವ ಸಮಯಬಂತು. ಅಲ್ಲಿ ಕುಳಿತಿರುವ ನಾವಿಕನನ್ನು ನೋಡಿ, ಶ್ರೀ ರಾಮನು—'ಎಲೆಲೇ ನಾವಿಕನೇ ನಮ್ಮನ್ನು ನದಿಯಿಂದ ಆಚೆಗೆ ದಾಟಿಸು, ಎನ್ನಲು ನಾವಿಕನು—'ಸ್ವಾಮೀ ರಾಮಚಂದ್ರಾ, ನಿನ್ನ ಪಾದಗಳನ್ನು ತೊಳೆದು ನೀರು ವಸ್ತ್ರದಿಂದ ಒರಸದೆ ಎಂದಿಗೂ ನಾನು ನಿನ್ನನು ನಾವೆಯಲ್ಲಿ ಕೂಡ್ರಿಸುವ... ಯಾಕಂದರೆ, ಇತ್ತ ಸಮೀಪದಲ್ಲಿರುವ ಕಲ್ಲಿಗೆ ನಿನ್ನ ಪಾದಧೂಳಿ ಸೋಕಿದ್ದ... ರಿಂದ ಕಲ್ಲೂ ಕೂಡ ಹೆಣ್ಣಾಯಿತು!! ಕಲ್ಲಿಗೂ ಕಟ್ಟಿಗೆಗೂ ಏನು ಭೇದವಿರುವದು? ಹೀಗೆ ಮಾತನಾಡಿ, ಆತನು ಶ್ರೀ ರಾಮನ ಚರಣಕಮಲಗಳನ್ನು ತೊಳೆದು, ಒಂದು ಕ್ಷಣದೊಳಗಾಗಿ ಅವರೆಲ್ಲರನ್ನೂ ಆಚೆಗೆ ದಾಟಿಸಿದನು.

ಬಳಿಕ ರಾಮ-ಲಕ್ಷ್ಮಣರು ವಿಶಾಮಿತ್ರರೊಡನೆ ಮಿಥಿಲಾನಗರವನ್ನು ದೂರದಿಂದ ಕಂಡರು. ಅಲ್ಲಿಗೆ ಅನೇಕ ರಾಜರುಗಳು ಸ್ವಯಂವರ ಮಹೋತ್ಸವಕ್ಕಾಗಿ ಬಂದೊದಗಿದ್ದರು. ರಾವಣನಾದರೂ ಜನಕಮಹಾರಾಜನು ಕರೆಸದಿದ್ದರೂ ಪುಷ್ಪಕವಿಮಾನವನ್ನೇರಿ ತಾನಾಗಿಯೇ ಸೀತಾಸ್ವಯಂವರಕ್ಕೆ ಬಂದಿದ್ದನು. ಆದರೆ ಮಕ್ಕಳನ್ನು ವಿಶಾಮಿತ್ರರು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದದ್ದರಿಂದ ಅದೇ ಯೋಚನೆಯಲ್ಲಿ ಮುಳುಗಿದ ದಶರಥಮಹಾರಾಜನು ಮಾತ್ರ ಸ್ವಯಂವರಕ್ಕೆ ಬಂದಿರಲಿಲ್ಲ. ವಿಶ್ವಾಮಿತ್ರರು ಸಾವಿರಾರು ಜನ ರಾಜರಿಂದ ಪರಿಪೂರ್ಣವಾದ ಮಿಥಿಲಾನಗರವನ್ನು ಆತುರದಿಂದ ಪ್ರವೇಶಮಾಡಲಿಲ್ಲ. ಮೆಲ್ಲ ಮೆಲ್ಲಗೆ ಸಮೀಪದಲ್ಲಿರುವ ಒಂದು ಉಪವನವನ್ನು ಪ್ರವೇಶಿಸಿದರು. ಸ್ವಲ್ಪ ಹೊತ್ತಿನ ಮೇಲೆ ವಿಶ್ವಾಮಿತ್ರರು ಬಂದಿರುವ ವರ್ತಮಾನವು ಜನಕಮಹಾರಾಜನಿಗೆ ...

ಯಿತು ಆತನು ಒಡನೆ ಪುರೋಹಿತರು, ಮಂತ್ರಿಗಳು ಇವರುಗಳಿಂದ ಸಮೇತ ನಾಗಿ ಗಾಧಿತನಯನ ಸಂದರ್ಶನಕೋಸ್ಕರ ಹೊರಟನು, ಆ ಕಾಲದಲ್ಲಿ ವಿ ಶ್ವಾಮಿತ್ರರ ಒಬ್ಬ ಸಿಷ್ಯನನ್ನು ಜನಕಮಹಾರಾಜನು ಕಂಡು, ವಂದನೆಮಾಡಿ ದನು. ಆ ಶಿಷ್ಯನೂ ಕೂಡ ಮಹಾರಾಜನನ್ನು ಏಕಾಂತದಲ್ಲಿ ಕರೆದುಕೊಂಡು ಹೋಗಿ ತಮ್ಮ ಗುರುಗಳ ನಿರೂಪವನ್ನೂ ಸವಿಸ್ತಾರವಾಗಿ ಹೇಳಲುದ್ಯುಕ್ತನಾ ದನು—“ಓ ಜನಕಮಹಾರಾಜನೇ, ನಮ್ಮ ಗುರುಗಳು ದಶರಥಮಹಾರಾಜನ ಮಕ್ಕ ಳಾದ ರಾಮ-ಲಕ್ಷ್ಮಣರಿಬ್ಬರನ್ನು ಜೊತೆಗೆ ಕರೆತಂದಿರುವರು. ಅವರು ಬಹು ಪ ರಾಕ್ರಮಿಗಳು. ಆ ರಾಜಕುಮಾರರನ್ನು ನೀನು ಸತ್ಕಾರಪೂರ್ವಕ ನಗರ ಪ್ರ ವೇಶ ಮಾಡಿಸಬೇಕು. ನಿನ್ನಲ್ಲಿರುವ ಹರಧನುಸ್ಸನ್ನು ಇವರಲ್ಲಿ ದೊಡ್ಡವನಾದ ಶ್ರೀ ರಾಮನು ಆಯಾಸವಿಲ್ಲದೆ ಮುರಿಯುವನು. ಈ ವಿಷಯವು ಗುಪ್ತವಾಗಿ ರಲಿ” ಎಂದು ನುಡಿದು ಜನಕಮಹಾರಾಜನ ಅಜ್ಞೆಯನ್ನು ಪಡೆದು ಗುರುಗಳ ಸನ್ನಿಧಿ ಗೆ ಪ್ರಯಾಣ ಮಾಡಿದನು.

ಇತ್ತ ವಿದೇಹಾಧಿಪತಿಯು ಚತುರಂಗ ಸೇನೆಯೊಡನೆ, ವಿಶ್ವಾಮಿತ್ರರು ವಾಸ ಮಾಡಿರುವ ಉಪವನಕ್ಕೆ ಪ್ರಯಾಣಮಾಡಿ, ಋಷಿಗಳನ್ನೂ ರಾಜಪುತ್ರರನ್ನೂ ಯಥಾಯೋಗ್ಯ ಸನ್ಮಾನದಿಂದ ಸಂತೋಷಗೊಳಿಸಿ, ರಾಮ-ಲಕ್ಷ್ಮಣರನ್ನು ಆನೆಯ ಮೇಲೆ ಕುಳ್ಳಿರಿಸಿ, ಮಹದುತ್ಸವದಿಂದ ಪುರಪ್ರವೇಶ ಮಾಡಿಸಿದನು. ಮಿಥಿಲಾನ ಗರದಲ್ಲಿರುವ ಜನರು ಅಮೌಲ್ಯಗಳಾದ ವಸ್ತ್ರಾಭರಣಗಳಿಂದ ಭೂಷಿತರಾದ ರಾ ಮ-ಲಕ್ಷ್ಮಣರನ್ನು ನೋಡಿ,—“ಈ ಬಾಲಕರು ಯಾವ ರಾಜನ ಮಕ್ಕಳಿರಬಹುದು? ಬಹು ಸುಂದರರಾಗಿರುವರು. ಈ ದೊಡ್ಡವರನು ನಮ್ಮ ರಾಜಪುತ್ರಿಯಾದ ಸೀ ತೆಗೆ ಅನುರೂಪನಾಗಿರುವನು, ಎರಡನೇ ಕುವರನು ಊರ್ಮಿಳೆಗೆ ಪತಿಯಾದರೆ, ನಮಗೆ ಬಹಳ ಸಂತೋಷಕರ” ಎಂದು ಮಾತುಗಳನ್ನಾಡುತ್ತಿದ್ದರು. ಅಲ್ಲಿ ಸ್ವಯಂ ವರಕ್ಕೆ ಬಂದ ರಾಜರು ಈ ಮಹಾತೇಜಸ್ವಿಗಳಾದ ರಾಮ-ಲಕ್ಷ್ಮಣರನ್ನೂ, ಅವರಿಗೆ ಜನಕ ಮಹಾರಾಜನು ಮಾಡುತ್ತಿರುವ ಸತ್ಕಾರಗಳನ್ನೂ ನೋಡಿ, ನಮಗೆ ಖಂಡಿತವಾಗಿಯೂ ಸೀತಾದೇವಿಯು ಲಾಭವಾಗಲಾರದು, ಎಂದು ಮನಸ್ಸಿ ನಲ್ಲಿ ಬಹುವಿಧವಾಗಿ ನೈರಾಶ್ಯವನ್ನು ಹೊಂದಿದರು. ಮುಂದೆ ರಾಮ-ಲಕ್ಷ್ಮಣರು ಕುಳಿತಿರುವ ಆನೆಯು ವಿದೇಹರಾಜನ ಸಭಾಮಂಟಪದ ಬಳಿಗೆ ಬಂದು ಸೇರಿತು. ಅಲ್ಲಿ ರಾಮ-ಲಕ್ಷ್ಮಣರು ಆನೆಯಿಂದ ಇಳಿದು ಸಭಾಪ್ರವೇಶ ಮಾಡಿದರು. ಆ ಕಾ ಲದಲ್ಲಿ ನಾನಾವಿಧವಾದ ವಾದ್ಯಗಳು ಧ್ವನಿಮಾಡಿದವು ಪುಷ್ಪಗಳ ಮಳೆಯು

ಸುರಿಯಿತು. ರಾಮ-ಲಕ್ಷ್ಮಣರು ಸಭಾಮಂಟಪದಲ್ಲಿ ಗುರುಗಳಾದ ವಿಶ್ವಾಮಿತ್ರರ ಸನ್ನಿಧಿಯಲ್ಲಿ ಕುಳಿತರು.

ಪಾರ್ವತಿಯೇ, ಕೇಳು. ಜನಕಮಹಾರಾಜನ ಬಳಿಯಲ್ಲಿರುವ ಆ ಧನುಸ್ಸು ನನ್ನದು. ಪರಶುರಾಮನು ನನ್ನಲ್ಲಿ ಧನುರ್ವಿದ್ಯೆಯನ್ನು ಕಲಿತನಷ್ಟೆ. ಆಗ ಅದನ್ನು ಬ್ರಾಹ್ಮಣಪುತ್ರನಿಗೆ ಕೊಟ್ಟೆನು. ಆ ನನ್ನ ಶಿಷ್ಯನಾದರೂ ಇದೇ ಧನುಸ್ಸಿನ ಸಹಾಯದಿಂದ ಇಪ್ಪತ್ತೊಂದು ಸಲ ಕ್ಷತ್ರಿಯರನ್ನು ಸೋಲಿಸಿ, ತಮ್ಮ ತಂದೆಯನ್ನು ಹಿಂಸೆಪಡಿಸಿದ ಕಾರ್ತವೀರ್ಯಾರ್ಜುನನನ್ನು ಇದರಿಂದಲೇ ನಾಶಪಡಿಸಿದನು. ಒಂದಾನೊಂದು ದಿವಸ ಪರಶುರಾಮನು ಈ ಧನುಸ್ಸನ್ನು ವಿದೇಹರಾಜನ ಮನೆಯ ಹೊರಭಾಗದಲ್ಲಿಟ್ಟು, ಕಾರ್ಯಾಂತರದಿಂದ ಜನಕಮಹಾರಾಜನೊಡನೆ ಮಾತನಾಡಲು ಒಳಗೆ ಹೋಗಿದ್ದನು. ಅಷ್ಟರೊಳಗೆ ಅಲ್ಲಿ ಆಡುತ್ತಿರುವ ಸೀತೆಯು ಆ ಧನುಸ್ಸನ್ನು ಕುದುರೆಯನ್ನಾಗಿ ಮಾಡಿಕೊಂಡು, ಅದರ ಮೇಲೆ ಕುಳಿತು ಬಾಲಲೀಲೆಗಳನ್ನು ಮಾಡುತ್ತಿದ್ದಳು. ಇದನ್ನೆಲ್ಲ ನೋಡಿದ ಪರಶುರಾಮನಿಗೆ ಈ ಕನ್ಯಾರತ್ನವು ಸಾಕ್ಷಾತ್ ಲಕ್ಷ್ಮಿಯೇ ಇರಬಹುದೆಂದು ತೋರಿತು. ಆಗ ಪರಶುರಾಮನು ಆ ಧನುಸ್ಸನ್ನು ಜನಕಮಹಾರಾಜನಿಗೆ ಸಮರ್ಪಿಸಿದನು. ಮತ್ತು 'ಎಲೈ ಮಹಾರಾಜನೇ, ಈ ಧನುಸ್ಸಿಗೆ ಹೆದೆಯನ್ನು ಏರಿಸಿ ಯಾರು ಬಗ್ಗಿಸುವರೋ, ಅಂಥಾ ಪರಾಕ್ರಮಿಗೆ ನಿನ್ನ ಕನ್ಯಾರತ್ನವನ್ನು ವಿವಾಹ ಮಾಡಿ ಕೊಡು' ಎಂದು ಹೇಳಿ ಪ್ರಯಾಣ ಮಾಡಿದನು. ಈಗ ವಿದೇಹರಾಜನು ಅದೇ ಧನುಸ್ಸನ್ನೇ ಪಣವಾಗಿ ಇಟ್ಟಿರುವನು. ಮಹಾವೀರರಾದ ರಾಜರು, ಮಹರ್ಷಿಗಳು, ಇವರುಗಳಿಂದ ನಿಬಿಡವಾದ ಸಭೆಗೆ ಆ ಧನುಸ್ಸನ್ನು ತರಲು ದೂತರಿಗೆ ಜನಕಮಹಾಜನು ಅಪ್ಪಣೆ ಮಾಡಿದನು. ಹಾಗೆಯೇ ದೂತರು ಅನೇಕ ಆನೆಗಳ ಸಹಾಯದಿಂದ ಆ ಧನುಸ್ಸನ್ನು ಶಸ್ತ್ರಗಳ ಮನೆಯಿಂದ ಹೊರಗೆ ತಂದು, ಸಭೆಯಲ್ಲಿರಿಸಿದರು. ಇಂಥ ಧನುಸ್ಸು ಸಭೆಗೆ ತಂದೊಡನೆ ಜನಕಮಹಾರಾಜನು ಎದ್ದು ನಿಂತು, ತನ್ನ ಕೈಯಿಂದ ಧನುಸ್ಸನ್ನು ತೋರಿಸಿ "ಓ ಸಭಾಸದರಾದ ರಾಜಾಧಿರಾಜರೇ, ಪರಾಕ್ರಮಿಗಳೇ, ಈ ಧನುಸ್ಸನ್ನು ಯಾರು ಹೆದೆಯನ್ನೇರಿಸಿ ಬಗ್ಗಿಸುವರೋ, ಅವರಿಗೆ ನನ್ನ ಕನ್ಯಾರತ್ನವಾದ ಸೀತೆಯನ್ನು ಕೊಟ್ಟು ವಿವಾಹ ಮಾಡುವೆನು. ಸತ್ಯ" ಎಂದು ಪ್ರತಿಜ್ಞೆಮಾಡಿ ಕುಳಿತುಕೊಂಡನು.

ಈ ವಿದೇಹಾಧಿಪನ ಮಾತುಗಳನ್ನು ಕೇಳಿದೊಡನೆ ಸಭೆಯು ಗೊಂಬೆಗಳಂತೆ ಸ್ತಬ್ಧವಾಯಿತು. ಕೆಲವು ರಾಜಪುತ್ರರ ಮುಖಗಳು ಬೆವರೇರಿದವು. ಗವಿಷ

ರಾದ ಕೆಲವು ರಾಜಕುಮಾರರು ಎದ್ದು ಬಂದು, ಧನುಸ್ಸನ್ನೆಲ್ಲಾಡಿಸಲಾರದೆ, ತಮ್ಮ 'ಕುಮಾರರೆಂಬ' ಹೆಸರನ್ನು ಸಾರ್ಥಕ ಮಾಡಿಕೊಂಡು, ನಾಚಿಕೆಯಿಂದ ಹಿಂತಿರುಗಿದರು. ಹೀಗೆ ಸಮಸ್ತರಾಜರೂ ಕಳೆಗುಂದಿದವರಾದರು. ಅನೇಕ ರಾಜರು ಈ ಅಪಮಾನವನ್ನನುಭವಿಸುವದಕ್ಕಿಂತ ಮರಣ ಹೊಂದುವದು ಲೇಸೆಂದು ಸುಮ್ಮನೆ ತಲೆಗಳನ್ನು ಬಗ್ಗಿಸಿ ಕುಳಿತುಕೊಂಡರು. ಅಷ್ಟರಲ್ಲಿ ಗರ್ವಿಷ್ಠನಾದ ರಾವಣನು ಎದ್ದು ಬಂದು, ಸಭಾಸನಗಿತ್ತು 'ಎಲೈ ಜನಕಮಹಾರಾಜನೇ, ಸಮಸ್ತ ದೇವತೆಗಳನ್ನೂ ಗೆದ್ದ, ಹಾಗು ಕೈಲಾಸಪರ್ವತವನ್ನು ಅಲ್ಲಾಡಿಸಿದ ನನ್ನ ಭುಜಬಲವನ್ನು ನೋಡು', ಎಂದು ಮಾತನಾಡಿ ಧನುಸ್ಸನ್ನು ಒಂದು ಭುಜದಿಂದ ಎತ್ತಲು ಪ್ರಯತ್ನ ಮಾಡಿದನು. ಆದರೆ ಅದು ನಿಷ್ಫಲವಾಯಿತು. ಮುಂದೆ ತನ್ನ ಭುಜಗಳಲ್ಲಿ ನಾಲ್ಕು, ಐದು ಈ ರೀತಿಯಾಗಿ ಒಂದೊಂದು ಹೆಚ್ಚು ಉಪಯೋಗಿಸಿದರೂ ಅದು ಸಾಧ್ಯವಾಗಲಿಲ್ಲ. ಕೊನೆಗೆ ಹತ್ತೊಂಬತ್ತು ಭುಜಗಳಿಂದ ಆ ಧನುಸ್ಸನ್ನು ಎತ್ತುವಾಗ ಅವನಿಗೆ ಬಹು ಶ್ರಮವಾಗುತ್ತ ಬಂತು. ಮುಂದೆ ಮತ್ತೊಂದು ಭುಜವನ್ನೂ ಅವುಗಳ ಸಹಾಯಕ್ಕಾಗಿ ಉಪಯೋಗಿಸಿದನು. ಅಷ್ಟರೊಳಗೆ ಆ ಧನುಸ್ಸು ಅವನ ಕೈಗಳಿಂದ ಜಾರಿ ಅವನ ಮೈ ಮೇಲೆ ಬಿತ್ತು. ಅಹಹ!!! ಆ ದುರಭಿಮಾನಿಯ ಹೃದಯದ ಮೇಲೆ ಪರ್ವತದಂತೆ ಬಿದ್ದ ಧನುಸ್ಸನ್ನು ನೋಡಿ ಸಭೆಯಲ್ಲಿ ಹಾ! ಹಾ! ಕಾರವು ಉಂಟಾಯಿತು. ರಾವಣನ ಮುಖಗಳೆಲ್ಲ ಬೆವರಿನಿಂದ ತುಂಬಿದವು. ಏಳುವದಕ್ಕೆ ಅಸಾಧ್ಯವಾಯಿತು. ಮುಂದೆ ರಾಕ್ಷಸಾಧಿಪನು ಕೈಕಾಲುಗಳನ್ನು ಬಡಿಯಲಾರಂಭಿಸಿದನು. ಆದರೂ ಪ್ರಯೋಜನವಾಗಲಿಲ್ಲ. ಇಷ್ಟಾಗಲು ರಾವಣನಿಗೆ ಭಯವುಂಟಾಯಿತು. ಮೈಯೊಳಗಿನ ಹೊಲಸುಗಳಿಂದ ವಸ್ತ್ರಗಳು ಮಲಿನವಾದವು. ಆಗಲಾದರೂ ಧನುಸ್ಸನ್ನು ಕೆಳಗಿಳಿಸಿ ಪ್ರಾಣದಾನ ಮಾಡಲು ಯಾರೂ ಮುಂದೆ ಬರಲಿಲ್ಲ. ಆಗ್ಗೆ ಜನಕಮಹಾರಾಜನು ಸಭೆಯ ಕಡೆಗೆ ನೋಡಿ 'ಇದೇನಾಶ್ಚರ್ಯ! ಭೂಮಿಯಲ್ಲಿ ಕ್ಷತ್ರಿಯರು ಯಾರೂ ಇಲ್ಲವೇ ಹ್ಯಾಗೆ" ಎಂದು ಮಾತನಾಡಿದನು.

ಈ ಮಾತನ್ನು ಕೇಳಿದೊಡನೆ ವಿಶ್ವಾಮಿತ್ರರು ಶ್ರೀರಾಮನನ್ನು ನೋಡಿ— "ರಾಮಚಂದ್ರಾ, ನಿನ್ನ ಸಮಕ್ಷಮಾಗಿ ಈ ಹತ್ತುತಲೆಗಳ ಪ್ರಾಣಿಗೆ ಇಂಥ ತೊಂದರೆಯುಂಟಾಗಬಾರದು. ಏಳು, ಪ್ರಾಣದಾನಮಾಡು. ಎಲ್ಲ ದಾನಗಳಿಗಿಂತಲೂ ಪ್ರಾಣದಾನವೇ ಶ್ರೇಷ್ಠವಾದದ್ದಲ್ಲವೆ!" ಹೀಗೆ ಮಾತನಾಡಲು, ಗುರುಗಳ ಈ ಮಾತುಗಳನ್ನು ಕೇಳಿ ದಶರಥನ ಜ್ಯೇಷ್ಠಪುತ್ರನಾದ ಶ್ರೀರಾಮನು

ತನ್ನ ಆಸನದಿಂದ ಎದ್ದುನಿಂತನು. ಬಳಿಕ ಆತನು ವಿಶ್ವಾಮಿತ್ರರ ಪಾದಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿ, ವಸ್ತ್ರವನ್ನು ಟೊಂಕಕ್ಕೆ ಸುತ್ತಿ, ಕಿರೀಟವೇ ಮೊದಲಾದ ಭೂಷಣಗಳನ್ನು ಸರಿಮಾಡಿಕೊಂಡು ಮೆಲ್ಲ ಮೆಲ್ಲನೇ ಧೈರ್ಯದಿಂದ ಧನುಸಿನ ಸಮೀಪಕ್ಕೆ ಬಂದನು. ಅತ್ಯಾಮಸುಂದರನಾದ ರಾಮನನ್ನು ನೋಡಿ ಕೆಲವು ಜನರು—"ರಾವಣನಿಗೂ ಅಪಾಯಕರವಾದ ಧನುಸಿನ ಕಡೆಗೇ ಈ ಹುಡುಗನು ಯಾಕೆ ಹೋಗುವನು? ನಿಶ್ಚಯವಾಗಿಯೂ ಈತನ ಆಯುಷ್ಯವು ಈ ದಿವಸಕ್ಕೆ ತೀರಿತು. ಹೀಗೆಮಾತನಾಡುವರು. ಕೆಲವರು ಧನುಸನ್ನು ನೋಡುವದಕ್ಕೆ ಈ ಕುಮಾರನು ಹೋಗುವನು ಎಂದರು. ಹೀಗೆ ಶ್ರೀ ರಾಮಚಂದ್ರನು ಧನುಸಿನ ಸಮೀಪಕ್ಕೆ ಹೋಗುವದರೊಳಗೆ ಅನೇಕರು ಅನೇಕ ಅಭಿಪ್ರಾಯಗಳನ್ನು ಮನಸಿನಲ್ಲಿ ತಂದರು. ಹೆಚ್ಚಾಗಿ ಹೇಳುವದರಿಂದೇನು? ಜನಕಮಹಾರಾಜನೂ ಕೂಡ ಈ ಧನುಸನ್ನು ಬಾಲಕನಾದ ರಾಮನು ಯಾವರೀತಿಯಿಂದ ಸ್ವೀಕಾರ ಮಾಡ್ಯಾನು? ನಾವೇನಾದರೂ ನಡುವೆ ಮಾತಾಡಲು ಅವಕಾಶವೇ ಇಲ್ಲ. ಗುರುಗಳಾದ ವಿಶ್ವಾಮಿತ್ರರ ಆಜ್ಞೆಯು ಕ್ರೂರವಾದದ್ದು" ಎಂದು ಮನಸಿನಲ್ಲಿ ಆಲೋಚಿಸಲಾರಂಭಿಸಿದನು.

ಇತ್ತ ಪರದೆಯ ಹಿಂದಿನಿಂದ ರಂಧ್ರಗಳಲ್ಲಿ ಸಭೆಯ ವಿಷಯಗಳನ್ನೆಲ್ಲಾ ನೋಡುತ್ತಿರುವ ರಾಜಸ್ತ್ರೀಯರು—"ಶಂಭೋ, ಶಂಕರಾ, ನಾರಾಯಣಾ, ಈ ಮಗುವಿಗೆ ಯಾವ ತೊಂದರೆಯೂ ಆಗದಂತೆ ಕಾಪಾಡುವ ಭಾರವು ನಿನ್ನನ್ನು ಹೊಂದಿರುವದು" ಎಂದು ಪ್ರಾರ್ಥನೆ ಮಾಡಲಾರಂಭಿಸಿದರು. ರಾಜಪುತ್ರಿಯಾದ ಸೀತಾದೇವಿಯು ಕಾಮನಂತೆ ಸುಂದರನಾಗಿದ್ದ ಶ್ರೀ ರಾಮಚಂದ್ರನನ್ನು ನೋಡಲು ಎದ್ದು ನಿಲ್ಲುವಳು. ಮುಂದೆ ತನ್ನ ತಂದೆಯ ಪ್ರತಿಜ್ಞೆಯು ಸ್ಮರಣೆಗೆ ಬಂದೊಡನೆ, ರಾಹುಗ್ರಸ್ತನಾದ ಚಂದ್ರನಂತೆ ಯೋಚನೆಗಳಿಂದ ಕಳೆಗುಂದುವಳು. ದ್ವೇಷಿಯಾದ ನಮ್ಮ ತಂದೆಯು ಇಂಥಾಪಣವನ್ನು ಯಾಕೆಮಾಡಿದ್ದಾನು? ಅಹೋ, ಈ ಮನೋಹರಸ್ವರೂಪವುಳ್ಳ ಸುಕುಮಾರನೆಲ್ಲಿ, ಮತ್ತು ಈ ಪರ್ವತದಂತೆ ಕಠಿಣವಾದ ಧನುಸೆಲ್ಲಿ? ದೀನದಯಾಳೋ, ಶಂಭೋ, ಈಗ ನಾನು ಮಾಡುವ ಉಪಾಯವೇನು? ಪ್ರಭೋ, ನನ್ನ ಮನೋರಥವನ್ನು ನೀನೇನು ಮಾಡುವೆಯೋ ತಿಳಿಯದು. ನಾನಂತು ಈ ಹೃದಯಂಗಮಸ್ವರೂಪವಾದ ರಾಮನನ್ನು ಹೊರತಾಗಿ ಮತ್ತೊಬ್ಬರನ್ನು ಸ್ವಪ್ನದಲ್ಲಾದರೂ ನೋಡಲಾರೆನು. ಇಷ್ಟರ ಮೇಲೆ ನನ್ನ ತಂದೆಯು ಬಲಾತ್ಕಾರ ಮಾಡಿ ಮತ್ತೊಬ್ಬರಿಗೆ ವಿವಾಹಮಾಡಿ ಕೊಟ್ಟದ್ದೇ ಆದರೆ

ನಿಶ್ಚಯವಾಗಿಯೂ ನಾನು ಉಪ್ಪರಿಗೆಯ ಕೊನೆಯಿಂದ ಬಿದ್ದು ಪ್ರಾಣಗಳನ್ನು ಬಿಡುವೆನು. ಹೇ ಬ್ರಹ್ಮನೇ, ಎಲೇ ದುರ್ಗೆಯೇ, ಎಲೇ ಸಾವಿತ್ರಿಯೇ, ಅಮ್ಮಾ ಸರಸ್ವತಿಯೇ ನಿಮ್ಮೆಲ್ಲರಿಗೂ ಕೈಜೋಡಿಸಿ ಪ್ರಾರ್ಥನೆ ಮಾಡುವೆನು. ಈ ಧನುಸು ನನ್ನ ಪ್ರಾಣಪ್ರಿಯನಿಗೆ ಪುಷ್ಪಗಳಿಗಿಂತಲೂ ಹಗುರಾಗುವಂತೆ ಮಾಡಿರಿ. ನೀವೆಲ್ಲ ಈ ಸುಕುಮಾರನಿಗೆ ಸಹಾಯಮಾಡಿರಿ. ಈ ಸುಕುಮಾರನು ಧನುಸನ್ನು ಮುರಿದು ನನ್ನ ಪಾಣಿಗ್ರಹಣ ಮಾಡಿದರೆ ಮುನಿಗಳಂತೆ ಹದಿನಾಲ್ಕು ವರ್ಷಗಳ ವರೆಗೆ ಅರಣ್ಯವಾಸವನ್ನು ಮಾಡುವೆನು"

ಈ ರೀತಿಯಾಗಿ ಸೀತೆಯು ಬಹು ವಿಧವಾಗಿ ಹರಿಕೆಗಳನ್ನು ಮನಸಿನಲ್ಲಿ ನಿಶ್ಚಯಿಸಿದಳು. ಹೀಗೆ ಅಂತಃಪುರದ ವನಿತೆಯರೂ ನಾನಾವಿಧವಾದ ಪಣಗಳನ್ನು ಮಾಡಲು ಪ್ರಾರಂಭಿಸಿದರು. ಇಂಥ ಜನರ ಮಾತುಗಳನ್ನೆಲ್ಲ ಕೇಳುತ್ತಲೇ ಶ್ರೀ ರಾಮನು ಧನುಸಿನ ಸಮೀಪಕ್ಕೆ ಹೋದನು. ಅಲ್ಲಿ ಶ್ರೀ ರಾಮನು ಸ್ವಲ್ಪ ನಕ್ಕವನಾಗಿ, ಧನುಸಿಗೆ ನಮಸ್ಕರಿಸಿ, ಪ್ರದಕ್ಷಿಣೆ ಮಾಡಿದನು. ಮನಸಿನಲ್ಲಿ ಗುರುಗಳಾದ ವಸಿಷ್ಠರನ್ನೂ, ದಶರಥನನ್ನೂ, ಕೌಸಲ್ಯೆಯನ್ನೂ ಧ್ಯಾನಮಾಡಿ, ದಕ್ಷಿಣ ಹಸ್ತದಿಂದ ಧನುಸನ್ನು ಎತ್ತಿ ವಾಮಹಸ್ತದಿಂದ ಅದಕ್ಕೆ ಮೌರ್ವೀಬಂಧನ ಮಾಡಿ ಬಗ್ಗಿಸಿದನು. ಆಕ್ಷಣದಲ್ಲಿಯೇ ಸಮಸ್ತ ವಾದ್ಯಗಳೂ ಭೋರ್ಗರೆದವು, ಪುಷ್ಪಗಳ ಮಳೆಯು ಸುರಿಯಿತು. ಆ ಕಾಲದಲ್ಲಿ ದೇವದುಂದುಭಿಗಳು ಮೊಳಗಿದವು. ಸಭೆಯಲ್ಲಿ "ಭಲಾ ಭಲಾ" ಇತ್ಯಾದಿ ವೀರವಾದ್ಯಗಳು ಉಂಟಾದವು. ಮುಂದೆ ಹಳೆಯದಾದ ಆ ಶಿವಧನಸು ಶ್ರೀ ರಾಮನ ಬಾಹುಬಲದಿಂದ ಮೂರು ತುಂಡಾಗಿ ಬಿತ್ತು. ಆಗ ಧನುಸಿನಿಂದ ನೂರಾರು ಸಿಡಿಲುಗಳ ಧ್ವನಿಯಂತೆ ಭಯಂಕರವಾದ ಧ್ವನಿಯು ಉತ್ಪನ್ನವಾಯಿತು. ಆಶಬ್ದದಿಂದ ಭೂಮಿಯು ನಡಗಿತು. ಸಾಗರವು ಉಕ್ಕೇರಿತು, ವನದಲ್ಲಿರುವ ಕ್ರೂರ ಜಂತುಗಳು ಭಯದಿಂದ ಕೂಗಲಾರಂಭಿಸಿದವು.

ಎದೆಯ ಮೇಲಿಂದ ಧನುಸನ್ನು ತೆಗೆದೊಡನೆ ರಾವಣನು ಸಚೇತನನಾದನು. ಇನ್ನು ಸ್ವಲ್ಪ ಹೊತ್ತು ನಿಂತರೆ, ಮತ್ತೂ ಧನುಸು ನನ್ನ ಮೇಲೆ ಎಲ್ಲಿ ಬೀಳುವದೋ ಎಂಬ ಭಯದಿಂದ ಶೀಘ್ರವಾಗಿ ಆಚೆಗೆ ಓಡಿ ಹೋದನು. ಆ ಕಾಲದಲ್ಲಿ ಆತನ ವಸ್ತ್ರಗಳು ಬಹು ಮಲಿನವಾಗಿದ್ದವು ಕೆಲವು ಕಿರೀಟಗಳು ಕೆಳಗೆ ಬಿದ್ದಿದ್ದವು, ಮುತ್ತಿನ ಸರಗಳು ಹರಿದುಹೋಗಿದ್ದವು. ಕೈಕಾಲುಗಳಲ್ಲಿ ತ್ರಾಣವೇ ಇರಲಿಲ್ಲ. ಹೀಗೆ ಜನಕಮಹಾರಾಜನ ಸಭೆಯಲ್ಲಿ ತನಗಾದ ಅಪಮಾನವನ್ನು ಸಹಿಸಲಾರದೆ, ಸ್ವಲ್ಪ ಹೊತ್ತೂ ನಿಲ್ಲದೆ ತನ್ನ ನಗರಿಗೆ ಪ್ರಯಾಣ

ಮಾಡಿದನು. ಶ್ರೀ ರಾಮಚಂದ್ರನು ಧನುಸ್ಸನ್ನು ಭಂಗವಡಿಸಿದುದರಿಂದ ಸೀತಾ
ದೇವಿಯು ಹೃದಯದಲ್ಲುಂಟಾಗ ಆನಂದಕ್ಕೆ ಯಾವದೂ ಸರಿಬಾರದು. ಅಂತಃ
ಪುರದ ವನಿತೆಯರು ಶ್ರೀ ರಾಮನ ಮೇಲೆ ಹೂ ಮಳೆ ಸುರಿಸಿದರು. ಬಂದ ಜನ
ಗಳು ಸ್ತೋತ್ರ ಮಾಡಿದರು. ಶ್ರೇಷ್ಠರಾದ ಬ್ರಹ್ಮರ್ಷಿಗಳು ಆ ರಾಜಕುಮಾರನಾದ
ರಾಮನಿಗೆ ಆಶೀರ್ವಾದ ಮಾಡಿದರು.

ಶ್ರೀ ರಾಮಚಂದ್ರನ ಅಸದೃಶವಾದ ಈ ಪರಾಕ್ರಮವನ್ನು ನೋಡಿ, ಜನಕ
ಭೂಪತಿಯು ಆನಂದಯುಕ್ತನಾಗಿ ತನ್ನ ಮಗಳಾದ ಸೀತಾದೇವಿಯನ್ನು ಸರ್ವಾಭ
ರಣಗಳಿಂದ ಭೂಷಿತಳಾದ ಆನೆಯ ಮೇಲೆ ಕುಳ್ಳಿರಿಸಿಕೊಂಡು, ಶೀಘ್ರವಾಗಿ ಸಭಾ
ಮಂಟಪಕ್ಕೆ ಕರೆತರುವಂತೆ ಮಂತ್ರಿಗಳಿಗೆ ಅಪ್ಪಣೆಮಾಡಿದನು. ಬಳಿಕ ಮಂತ್ರಿಯು
ಅಂತಃಪುರವನ್ನು ಪ್ರವೇಶಿಸಿ, ಸೀತಾದೇವಿಗೆ ನಮಸ್ಕರಿಸಿ, “ಹೇ ಸೀತೆ, ನೀನೇ
ಧನ್ಯಳು. ನೀನೇ ಜಗದ್ವಂದ್ಯಳು. ಹೇ ಜನಕಕುಮಾರಿಕೆ, ಈ ದಿವಸ
ಪ್ರೀತಿಯ ಅರಗಿಳಿಯಾದ ನಿನ್ನನ್ನು ದಶರಥ ಕುಮಾರನಾದ ಶ್ರೀ ರಾಮಚಂದ್ರನಿಗೆ
ಸಮರ್ಪಿಸಿ, ನಿನ್ನ ತಂದೆಯು ಕೃತಾರ್ಥನಾಗಬೇಕೆಂದಿರುವನು. ಆದ ಕಾರಣ
ನೀನು ಇಲ್ಲಿ ನಿಂತಿರುವ ಆನೆಯ ಮೇಲೆ ಕುಳಿತು, ತಡಮಾಡದೆ ಸಭಾಮಂಟಪ
ವನ್ನು ಪ್ರವೇಶಿಸು. ನಾನು ಜನಕಮಹಾರಾಜರ ಆಜ್ಞೆಯಂತೆ ನಿನ್ನ ಸನ್ನಿಧಿಗೆ
ಬಂದಿರುವೆನು” ಎಂದು ವಿಜ್ಞಾಪಿಸಿದನು. ಆಗ ಸೀತಾದೇವಿಯು ಸಭೆಗೆ ಹೊರ
ಡಲು ಸಿದ್ಧಳಾದಳು. ತಾಯಿಗೂ ಗುರುಹಿರಿಯರಿಗೂ ನಮಸ್ಕರಿಸಿ, ಬಾಗಿಲಲ್ಲಿ
ನಿಂತಿರುವ ಆನೆಯ ಬಳಿಗೆ ಬಂದಳು. ಆಗ ಅನೇಕ ಸಖಿಯರು ಜೊತೆಗೆ ಬಂದರು.
ಅವರಲ್ಲಿ ಒಬ್ಬ ಸಖಿಯನ್ನು ಜೊತೆಗೆ ಕರೆದುಕೊಂಡು, ಜನಕನಂದನೆಯು ಅಂಬಾ
ರಿಯನ್ನು ಹತ್ತಿದಳು. ಅಷ್ಟರಲ್ಲಿ ಆ ಆನೆಯ ಸುತ್ತಲೂ ಸೇನಾಜನಗಳು ಕಾವಲಿ
ಗಾಗಿ ಸಿದ್ಧರಾದರು.

ಸೀತಾದೇವಿಯನ್ನು ನೋಡಬೇಕೆಂದು ಜನಗಳ ತರಂಗಗಳು ನೆರೆದಿದ್ದವು.
ಅರಮನೆಯಿಂದ ಸಭಾಮಂಟಪದ ವರೆಗೂ ಸೀತೆಯ ಮೇಲೆ ಹೂಗಳನ್ನು ಪ್ರಜೆ
ಗಳು ಎಡೆಬಿಡದೆ ವರ್ಷಿಸಿದರು. ಆ ಕಾಲದಲ್ಲಿ ಅಂಬಾರಿಯೊಲ್ಲಿದ್ದ ಸಖಿಗೆ ಸೀತಾ
ದೇವಿಯ ಮೇಲೆ ಬೀಳುವ ಹೂಗಳನ್ನು ತಡೆಯುವದೊಂದೇ ಕೆಲಸವಾಗಿತ್ತು.
ಆ ಸಖಿಯು ಸೀತೆಯ ಕೈಗೆ ನವರತ್ನಗಳ ಮಾಲಿಕೆಯನ್ನು ಕೊಟ್ಟು, ಸ್ವ-
ಯಂವರ ಕಾಲದಲ್ಲಿ ಶ್ರೀ ರಾಮಚಂದ್ರನಿಗೆ ಕೊರಳೊಳಗೆ ಹಾಕುವ ರೀತಿಯ
ನ್ನು ತಿಳಿಸುತ್ತಿದ್ದಳು. ಸಭಾಮಂಟಪದ ಬಾಗಿಲಲ್ಲಿ ಆನೆಯು ನಿಂತ ಕೂಡಲೆ,

ಸೀತೆಯು ಮೆಲ್ಲಗೆ ಆನೆಯಿಂದ ಇಳಿದು, ಕೈಯಲ್ಲಿ ಸುವರ್ಣ ಮಾಲಿಕೆಯನ್ನು ಧರಿಸಿ, ಪ್ರಾಣಪ್ರಿಯನಾದ ಶ್ರೀ ರಾಮನ ಕಡೆಗೆ ಪಾದಚಾರಿಯಾಗಿ ನಡೆದಳು. ಬಳಿಕ ಸೀತೆಯು ಪತಿಯ ಸನ್ನಿಧಿಯಲ್ಲಿ ನಿಂತು, ನಾಚಿಕೆಯಿಂದ ಶಿರಸ್ಸನ್ನು ಬಗ್ಗಿಸಿ, ಕಡೆಗಣ್ಣಿನ ನೋಟಗಳಿಂದ ಪತಿಯ ಮುಖಕಮಲಗಳನ್ನು ನೋಡುತ್ತ ಕಂಠದಲ್ಲಿ ಮಾಲಿಕೆಯನ್ನು ಹಾಕಿದಳು. ಮತ್ತು ಪಾದಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕಾರವನ್ನು ಮಾಡಿದಳು. ಆ ಪತಿವ್ರತಾಶಿರೋಮಣಿಯು ನಾಚಿಕೆಯಿಂದ ಮುಖಕಮಲವನ್ನು ಬಗ್ಗಿಸಿ ಕೆಲವು ನಿಮಿಷಗಳ ವರೆಗೆ ಪತಿಯ ಎದುರಿಗೆ ನಿಂತಿದ್ದಳು. ಅಷ್ಟರೊಳಗೆ ಎಲ್ಲ ಕಡೆಗಳಲ್ಲೂ ಜಯ ಜಯ ಶಬ್ದಗಳು ಘೋರ್ಗರೆದವು. ಶ್ರೀ ರಾಮನೂ ಸೀತೆಯನ್ನು ನೋಡಿ, ನನಗೆ ಅನುರೂಪಳಾದ ಪತ್ನಿಯು ದೊರೆತಳೆಂದು ಸಂತೋಷಪಟ್ಟನು. ಬಳಿಕ ಶ್ರೀ ರಾಮಚಂದ್ರನನ್ನೂ , ಸೀತಾದೇವಿಯನ್ನೂ ಆಶೀರ್ವದಿಸುವದಕ್ಕಾಗಿ ವಿಶ್ವಾಮಿತ್ರ-ಮುನಿಗಳು ಅವರ ಸಮೀಪಕ್ಕೆ ಬಂದರು. ಆ ಮಹರ್ಷಿಗಳನ್ನು ನೋಡಿದ ಕೂಡಲೆ ಶ್ರೀ ರಾಮನು ಅವರ ಪಾದಗಳಿಗೆ ವಂದನೆ ಮಾಡಿದನು. ಆಗ ವಿಶ್ವಾಮಿತ್ರರು ಸೀತಾ-ರಾಮರನ್ನು ಆಶೀರ್ವದಿಸಿ, 'ಶ್ರೇಷ್ಠನಾದ ಪತಿಯನ್ನು ಪಡೆದೆ' ಎಂದು ಸೀತಾದೇವಿಯನ್ನು ಅಭಿನಂದಿಸಿದರು.

ಇಂಥ ಆನಂದಕರನಾದ ಪ್ರಸಂಗವನ್ನು ನೋಡಿ ಜನಕನಿಗೆ ಬಹಳ ಸಂತೋಷವಾಯಿತು. ಜನಕಭೂಪತಿಯು, ವಿಶ್ವಾಮಿತ್ರರಿಗೆ ನಮಸ್ಕರಿಸಿ, 'ಮಹರ್ಷಿಗಳೇ, ತಮ್ಮ ಕೃಪೆಯಿಂದ ನನ್ನ ವಂಶವು ಧನ್ಯವಾಯಿತು . ನಾನು ಕೃತಕೃತ್ಯನಾದೆನು. ಇಂಥ ಪರಾಕ್ರಮಿಯಾದ ಅಳಿಯನು ತಮ್ಮ ಸಹಾಯದಿಂದಲೇ ದೊರೆತನು. ತಮ್ಮ ದಯವಿಲ್ಲದಿದ್ದರೆ ದಶರಥಮಹಾರಾಜನ ಬಾಂಧವ್ಯವು ನನಗೆಲ್ಲಿಯದು ' ಎಂದು ಹೇಳಿ ಮತ್ತೆ ನಮಸ್ಕಾರ ಮಾಡಿದನು. ಇತ್ತ ಸಭಾಸದರಾದ ರಾಜರು ಚಂದ್ರಮುಖಿಯಾದ ಸೀತೆಯನ್ನು ನೋಡಿ ಖಿನ್ನರಾಗಿ ತಮ್ಮ ದುರ್ದೈವಗಳನ್ನು ನಿಂದಿಸಲಾರಂಭಿಸಿದರು. ಕೆಲವರು-ಇಂಥ ಕನ್ಯಾಮಣಿಯು ನಮಗೆ ಒದಗಲಿಲ್ಲವೆಂಬ ದುಃಖದಿಂದ ಮೂರ್ಛಿತರಾದರು. ಈ ರಾಜಕುಮಾರರನ್ನು ನೋಡಿ ಜನಕಮಹಾರಾಜನು ಅತಿ ವಿನಯದಿಂದ "ಭೋ ರಾಜಶಿರೋಮಣಿಗಳಿರಾ, ಈ ಸ್ವಯಂವರದಲ್ಲಿ ಜಯಶಾಲಿಯಾದ ಶ್ರೀ ರಾಮನಿಗೆ ನನ್ನ ಮಗಳಾದ ಸೀತಾದೇವಿಯನ್ನು ಕೊಟ್ಟು ವಿವಾಹ ಮಾಡುವದು ನಿಮಗೆಲ್ಲರಿಗೂ ತಿಳಿದಿರುವದಷ್ಟೆ ! ಆ ವಿವಾಹವು ಈಗಲೇ ನಡಿಸಲು ನಿಶ್ಚಯ ಮಾಡಿರುವೆವು. ತಾವುಗಳಾದರೂ ಆ

ಸಮಾರಂಭವನ್ನು ಪೂರ್ಣಮಾಡಿಸಿ, ಅನಂತರ ತಮ್ಮ ನಗರಗಳಿಗೆ ಪ್ರಯಾಣವಾ ಡಬೇಕು. ಈ ನನ್ನ ವಿಜ್ಞಾಪನೆಯನ್ನು ತಾವು ಉದಾಸ ಮಾಡಬಾರದು. ಮತ್ತು ಸ್ವಯಂವರದಲ್ಲಿ ನಮಗೆ ಅಪಜಯವಾಯಿತೆಂದು ಖಿನ್ನರಾಗಬಾರದು, ಜಯಾಪಜ ಯಗಳು ಯಾರಿಗೂ ಸ್ವತಂತ್ರವಲ್ಲ." ಎಂದು ಪ್ರಾರ್ಥನೆ ಮಾಡಿದನು. ಆಗ ಸ ಮಸ್ತ ರಾಜರೂ ಜನಕರಾಜನ ಈ ಮಾತುಗಳನ್ನು ಕೇಳಿ, ತಮ್ಮ ಮನಸ್ಸಿನಲ್ಲಿ— ಈಗ ರಾಮಚಂದ್ರನೊಡನೆ ಯುದ್ಧ ಮಾಡಿದರೆ, ನಮಗೆ ಯಾರಿಗೂ ಜಯವಾಗಲಾ ರದು. ಪ್ರಾಣಹಾನಿಯಾದರೂ ಆಗಬಹುದು. ಆದಕಾರಣ, ಜನಕಭೂಪತಿಯ ವಿನಂತಿಯಂತೆ ವಿವಾಹಕಾಲದಲ್ಲಿ ಇಲ್ಲಿಯೇ ಇರಲು ಅಂಗೀಕರಿಸಿ, ಮುಂದೆ ಯೋ ಚನೆಮಾಡಿ ಕೆಲಸ ನಡಿಸತಕ್ಕದ್ದು' ಎಂದು ಯೋಚಿಸಿ, ವಿವಾಹಮಹೋತ್ಸವಕ್ಕೆ ತಾವೆಲ್ಲರೂ ನಿಲ್ಲುವಂತೆ ನಂಬಿಗೆಯನ್ನಿತ್ತರು. ಆಗಿನ ಸಭೆಯು ಮುಗಿದನಂತರ ಸಮಸ್ತರೂ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು.

ಯಾವ ದಿವಸ ಶ್ರೀ ರಾಮನು ಶಿವಧನುರ್ಭಂಗ ಮಾಡಿದನೋ, ಅದೇ ದಿವಸ ವೇ ವಿಶ್ವಾಮಿತ್ರರ ಅಪ್ಪಣೆಯಂತೆ ದಶರಥಮಹಾರಾಜನಿಗೆ ಈ ಮಂಗಳವಾರ್ತೆಯ ನ್ನು ತಿಳಿಸಿ, ವಿವಾಹ ಮುಹೂರ್ತಕ್ಕೆ ಸಪರಿವಾರರಾಗಿ ದಯಮಾಡಿಸಲು ಪತ್ರ ಬ ರೆದು ಜನಕಮಹಾರಾಜನು ತನ್ನ ಮಂತ್ರಿಗಳನ್ನು ಅಯೋಧ್ಯೆಗೆ ಕಳುಹಿಸಿದನು. ಆ ಮಂತ್ರಿಗಳು ರಾಜನ ಅಪ್ಪಣೆಯಂತೆ ಅಯೋಧ್ಯೆಗೆ ಹೋಗಿ ಸಮಸ್ತ ವೃತ್ತಾಂತ ವನ್ನೂ ತಿಳಿಸಿದರು. ಇಂಥಾ ಮಗನ ಪರಾಕ್ರಮನ್ನು ಕೇಳಿದ ದಶರಥನ ಆನಂದ ಕ್ಕೆ ಸ್ಥಳವಿಲ್ಲದಂತಾಯಿತು. ಕುಲಗುರುಗಳಾದ ವಸಿಷ್ಠರ ಆಜ್ಞೆಯಂತೆ ಮರುದಿವಸ ಅಲ್ಲಿಂದ ಹೊರಡಲು ನಿಶ್ಚಯ ಮಾಡಿದನು. ಅನಂತರ ಆ ದಿವಸ ಅರುಣೋದಯ ಕ್ಕೆ ಸರಿಯಾಗಿ ಪಟ್ಟದ ಮಹಿಷಿಯರು, ಮಕ್ಕಳು, ಸ್ನೇಹಿತರು, ಬಂಧುಗಳು, ಚ ತುರಂಗಸೇನೆಗಳು ಇವುಗಳಿಂದ ಕೂಡಿದವನಾಗಿ ದಶರಥನು ವಿದೇಹನಗರಕ್ಕೆ ಪ್ರ ಯಾಣ ಬೆಳಸಿದನು. ದಶರಥಮಹಾರಾಜನು ಪರಿವಾರಸಹಿತ ನಗರದ ಸಮೀಪಕ್ಕೆ ಬಂದಿರುವನೆಂಬ ವರ್ತಮಾನವನ್ನು ಕೇಳಿ ಜನಕಮಹಾರಾಜನು ಬಹು ಸಂತೋಷ ದಿಂದ ರಾಜಮರ್ಯಾದೆಯಂತೆ ಇದಿರುಗೊಂಡು ಕರೆಯಲು ಪರಿವಾರ ಸಮೇತ ನಾಗಿ ಹೊರಟನು. ಜನಕಮಹಾರಾಜನ ಜೊತೆಗೆ, ರಾಮ, ಲಕ್ಷ್ಮಣ, ವಿಶ್ವಾ ಮಿತ್ರ ಇವರೂ ಹೊರಟರು.

ದಶರಥಮಹಾರಾಜನನ್ನು ಕಂಡೊಡನೆ ವಿದೇಹಭೂಪತಿಯು ನಮಸ್ಕರಿಸಿ, ಕುಶಲಪ್ರಶ್ನೆಗಳನ್ನು ಮಾಡಿದನು. ಭರತ-ಶತ್ರುಘ್ನರನ್ನು ನೋಡಿ ಅತನಿಗೆ ಆಶ್ಚ

ಯವಾಯಿತು. ಆಗ ಜನಕರಾಜನು 'ರಾಮ-ಲಕ್ಷ್ಮಣರಂತೆ ಪ್ರಕಾಶಮಾನರಾದ ಈ ಬಾಲಕರು ಯಾರೆ'ಂದು ವಿಶ್ವಾಮಿತ್ರರನ್ನು ಕೇಳಿದನು. ಈ ಮಾತುಗಳನ್ನು ಕೇಳಿ ವಿಶ್ವಾಮಿತ್ರರು—ಜನಕಮಹಾರಾಜನೇ, ಇವರಿಬ್ಬರು ಬಾಲಕರು ಕೈಕೇಯಿಯ ಮಕ್ಕಳು. ಇವರಿಗೆ ಭರತ-ಶತ್ರುಘ್ನರೆಂದು ಹೆಸರು. ಇವರು ವಿದ್ಯೆಯಲ್ಲಿ ಮತ್ತು ವಿನಯದಲ್ಲಿ ರಾಮ-ಲಕ್ಷ್ಮಣರಿಗೆ ಸಮಾನರು, ಎಂದು ಹೇಳಿದರು. ಆಗ ವಿದೇಹಾಧಿಪನು "ಸ್ವಾಮಿ, ಬಹು ಸಂತೋಷವಾಯಿತು. ನನ್ನ ಮಗಳಾದ ಅಯೋನಿಜಳಾದ ಸೀತೆಯನ್ನಂತು ರಾಮನಿಗೆ, ಊರ್ಮಿಳೆಯನ್ನು ಲಕ್ಷ್ಮಣನಿಗೆ ಕೊಡುವದು ನಿಶ್ಚಯವಾಗಿದೆಯಷ್ಟೆ. ನನ್ನ ತಮ್ಮ ಕುಶಧ್ವಜನ ಮಕ್ಕಳಾದ ಮಾಂಡವಿ, ಶ್ರುತಕೀರ್ತಿಯರೆಂಬವರನ್ನು ದಶರಥನ ಈ ಇಬ್ಬರು ಮಕ್ಕಳಿಗೆ ಕೊಡಬೇಕೆಂದು ಇಚ್ಛೆಯುಂಟಾಗಿರುವದು. ಹೇ ಮುನಿಶ್ರೇಷ್ಠರೇ, ತಾವು ಈ ನನ್ನ ಸಂಕಲ್ಪವನ್ನು ನೆರವೇರಿಸುವಂತೆ ದಶರಥಮಹಾರಾಜರಿಗೆ ತಿಳಿಸಬೇಕು." ಎಂದು ಪ್ರಾರ್ಥನೆ ಮಾಡಿದನು. ಈ ಮಾತುಗಳನ್ನೆಲ್ಲ ದಶರಥನು ಕೇಳುತ್ತಿದ್ದನು. ಜನಕಮಹಾರಾಜನ ಪ್ರಾರ್ಥನೆಯನ್ನು ವಿಶ್ವಾಮಿತ್ರರ ಮುಖದಿಂದ ಕೇಳಿ, ಆ ನಾಲ್ಕು ಜನ ಕನ್ಯೆಯರನ್ನೂ ತನ್ನ ಮಕ್ಕಳಿಗೆ ವಿವಾಹಮಾಡಿಕೊಳ್ಳಲು ಒಡಂಬಟ್ಟನು. ಮುಂದೆ ದಶರಥಮಹಾರಾಜನು ಜನಕನ ಪುರೋಹಿತರಾದ ಶತಾನಂದರನ್ನು ಕುರಿತು—"ಸ್ವಾಮೀ, ಜಾನಕಿಯು ಅಯೋನಿಸಂಭವಳೆಂದು ಹೇಳಿದಿರಲ್ಲ, ಆ ವಿಚಾರವನ್ನು ನನಗೆ ತಿಳಿಸಬೇಕು." ಎಂದು ಪ್ರಶ್ನೆ ಮಾಡಿದನು.

ಆಗ ಅಹಲ್ಯಾಪುತ್ರರಾದ ಶತಾನಂದರು ದಶರಥನನ್ನು ಕುರಿತು—ಮಹಾರಾಜನೇ, ಕೇಳು. ಪೂರ್ವದಲ್ಲಿ ಪದ್ಮಾಕ್ಷನೆಂಬ ಶ್ರೇಷ್ಠನಾದ ಭೂಪತಿಯು ಇದ್ದನು. ಆತನು ಒಂದಾನೊಂದು ದಿವಸ ಮನಸ್ಸಿನಲ್ಲಿ—ಸರ್ವಪ್ರಪಂಚದ ಜನರೂ ಲಕ್ಷ್ಮಿಯನ್ನು ಹೊಂದಬೇಕೆಂದು ಬಹಳ ಪ್ರಯಾಸಪಡುವರು. ಅಂಥ ಲಕ್ಷ್ಮಿಯನ್ನು ಘೋರವಾದ ತಪಸ್ಸಿನಿಂದ ಸಂತೋಷಗೊಳಿಸಿ, ನನ್ನ ಮಗಳನ್ನಾಗಿ ಮಾಡಿಕೊಂಡರೆ, ಆ ಲೋಕಮಾತೆಯು ನನ್ನ ತೊಡೆಯ ಮೇಲೆ ಯಾವಾಗಲೂ ಬಾಲಲೀಲೆಗಳನ್ನಾಡುತ್ತಿರುವಳು." ಎಂದು ಯೋಚಿಸಿ, ಕ್ರೂರವಾದ ತಪಸ್ಸನ್ನು ನಡೆಸಿದನು. ಆದರಿಂದ ಭಕ್ತವತ್ಸಲಳಾದ ಲಕ್ಷ್ಮಿಯು ಪ್ರಸನ್ನಳಾಗಿ, "ಎಲೋ ರಾಜನೇ ನನ್ನನ್ನು ಕುರಿತು ನೀನು ಯಾಕೆ ಇಷ್ಟು ಕಠಿಣವಾದ ತಪಸ್ಸು ಮಾಡಿದೆ? ನಿನಗೆ ಬೇಕಾದ ಫಲವಾವುದು." ಎಂದು ಪ್ರಶ್ನೆ ಮಾಡಲು, ರಾಜನು, ಮಹಾದೇವಿಯೇ, ನೀನು ಮಗಳಾಗಬೇಕು, ಎಂದು ಪ್ರಾರ್ಥಿಸಿದನು. ಆಗ ಲಕ್ಷ್ಮಿ

ಯು 'ರಾಜವರ್ಯನೇ, ನಾನು ಸ್ವತಂತ್ರಳಲ್ಲ ವಿಷ್ಣುವಿನ ಅಪ್ಪಣೆಯಾದರೆ, ನಾನು ನಿನ್ನ ಮಗಳಾಗುವೆನು. ಇದ್ದರಿಂದ ವಿಷ್ಣುವನ್ನು ಕುರಿತು ತಪಸ್ಸು ಮಾಡು' ಎಂದು ಹೇಳಿ ಅಂರ್ಹಿತಳಾದಳು.

ಮುಂದೆ ಪದ್ಮಾಕ್ಷನೂ ದೃಢಭಕ್ತಿಯಿಂದ ನಾರಾಯಣನನ್ನು ಕುರಿತು ತಪಸ್ಸು ಮಾಡಿದನು. ಕೆಲವುಕಾಲದಮೇಲೆ ನಾರಾಯಣನೂ ಪ್ರಸನ್ನನಾದನು. ಆಗ ಪದ್ಮಾಕ್ಷನು, ಮಹಾವಿಷ್ಣುವೇ, ನನಗೆ ಲಕ್ಷ್ಮಿಯು ಮಗಳಾಗಬೇಕೆಂದು ಬಹಳ ಆಶೆ ಇದೆ. ಅದುಮಾತ್ರ ನಿನ್ನ ದಯದಿಂದ ಪೂರ್ಣವಾಗಬೇಕು. ಭಕ್ತಾಭಿಮಾನಿಯಾದ ನೀನು ನನ್ನನ್ನು ಉದಾಸೀನಮಾಡಬಾರದು, ಎಂದು ಬೇಡಿಕೊಂಡನು. ನಾರಾಯಣನಾದರೂ ಆತನ ತಪಸ್ಸಿಗೆ ಮೆಚ್ಚಿ, ಮಾದಳದಹಣ್ಣನ್ನುಕೊಟ್ಟು ಅದೃಶ್ಯನಾದನು. ಆಫಲವು ಕೈಗೆ ಬಂದೊಡನೆ ಪದ್ಮಾಕ್ಷನಿಗೆ ಬಹು ಸಂತೋಷವಾಯಿತು. ಮತ್ತು ಆ ಹಣ್ಣಿನಲ್ಲಿರವದೇನೋ, ನೋಡಬೇಕೆಂಬ ಕುತೂಹಲದಿಂದ ಫಲವನ್ನು ಒಡೆದನು. ಅದರಲ್ಲಿ ದಿವ್ಯಲಾವಣ್ಯವತಿಯಾದ ಕನ್ಯಾರತ್ನವು ಕಾಣಿಸಿತು. ಒಳಿಕ ರಾಜನು ಪರಮಸಂತೋಷಗೊಂಡು, ಲಕ್ಷ್ಮಿಯೇ ನನಗೆ ಮಗಳಾದಳೆಂದು ಭಾವಿಸಿ ಬಹುವಿಶ್ವಾಸದಿಂದ ಕಾಪಾಡುತ್ತಿದ್ದನು. ಆಕನ್ಯೆಯಾದರೂ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಹೊಂದುತ್ತಿದ್ದಳು. ಮುಂದೆ ಮಗಳು ಪ್ರಬುದ್ಧಳಾದದ್ದನ್ನು ನೋಡಿ ಪದ್ಮಾಕ್ಷನು ಸ್ವಯಂವರ ವಿಧಿಯಿಂದ ಮಗಳಿಗೆ ವಿವಾಹ ಮಾಡಬೇಕೆಂದು ನಿಶ್ಚಯಿಸಿದನು. ಮತ್ತು ಸ್ವಯಂವರ ಕಾಲದಲ್ಲಿ ಮಹಾಕ್ರತುವನ್ನು ನಡಿಸಲಪೇಕ್ಷಿಸಿದನು. ಈ ಎರಡು ಕಾರ್ಯಗಳಿಗೋಸ್ಕರ ಭೂಮಂಡಲದ ಸಮಸ್ತ ರಾಜರನ್ನೂ ಕರೆಸಿದನು. ಆತನ ವಚನದಂತೆ ಸಮಸ್ತ ರಾಜರೂ, ಬ್ರಾಹ್ಮಣರೂ, ದೇವತೆಗಳೂ ಅಲ್ಲಿಗೆ ದಯಮಾಡಿಸಿದರು. ಆ ಸ್ವಯಂವರ ಮಂಟಪದಲ್ಲಿ ಸಮಸ್ತ ರಾಜರೂ ನೆರೆದಿರಲು, ಪದ್ಮಾಕ್ಷನು ಸಭೆಯುಕಡೆಗೆ ನೋಡಿ-"ಯಾವ ಮಹಾತ್ಮನು ತನ್ನ ದೇವರನ್ನು ಆಕಾಶದ ನೀಲವರ್ಣದಿಂದ ಲಿಪ್ತವಾದದ್ದನ್ನಾಗಿ ಪ್ರಕಟಮಾಡುವನೋ, ಆತನಿಗೆ ಈ ನನ್ನ ಕುಮಾರಿಯನ್ನು ಪಾಣಿಗ್ರಹಣ ಮಾಡಿಕೊಡುವೆನು." ಎಂದು ಪ್ರತಿಜ್ಞೆಮಾಡಿದನು.

ಈ ಅಸಾಧ್ಯವಾದ ಪಣವು ಯಾರಿಂದಲೂ ಸಾಧಿಸದಾಯಿತು. ಮುಂದೆ ಸಮಸ್ತ ರಾಜರೂ ಆ ಕನ್ಯೆಯ ಸೌಂದರ್ಯಕ್ಕೆ ಬೆರಗಾಗಿ ಆಕೆಯನ್ನು ಅಪಹರಿಸಿ ಒಯ್ಯಬೇಕೆಂದು ನಿಶ್ಚಯ ಮಾಡಿದರು. ಇದನ್ನು ಕೇಳಿ ಪದ್ಮಾಕ್ಷಗೆ ಕೋಪ ಬಂತು. ಆ ಮಹಾವೀರನು ಸಮಸ್ತ ರಾಜರೊಡನೆ ಭಯಂಕರವಾದ ಯುದ್ಧ

ಮಾಡಿ, ಅನೇಕ ರಾಜರನ್ನು ನಾಶಮಾಡಿ ತಾನೂ ಯುದ್ಧದಲ್ಲಿ ಮಡಿದನು. ಬಳಿಕ ಮಿಕ್ಕ ರಾಜಕುಮಾರರು ಆ ಪದ್ಮಾಕ್ಷನ ಮಗಳನ್ನು ಅಪಹರಿಸಲುದ್ಯುಕ್ತರಾದರು. ಆಗ ಆ ತರುಣಿಯು ಅಪಮಾನವನ್ನು ಸಹಿಸಲಾರದೆ ಅದೇ ಯಜ್ಞಕುಂಡವನ್ನು ಹಾರಿದಳು ಆ ರಾಜಕುಮಾರರು ಅಗ್ನಿಯನ್ನು ಶೋಧಮಾಡಿ ಅಲ್ಲಿಯೂ ಸಿಕ್ಕದಿರಲು, ರೋಷದಿಂದ ಆ ಪದ್ಮಾಕ್ಷನ ನಗರವನ್ನೇ ನಾಶಮಾಡಿದರು. ಈ ರೀತಿಯಾಗಿ ಲಕ್ಷ್ಮಿಯ ಸಂಪರ್ಕದಿಂದ ಪದ್ಮಾಕ್ಷನೂ, ಅವನ ನಗರವೂ ನಾಮಶೇಷವಾಯಿತು. ಆದಕಾರಣವೇ ಜ್ಞಾನಿಗಳು ಲಕ್ಷ್ಮಿಯನ್ನು ತೃಣಕ್ಕಿಂತಲೂ ತುಚ್ಛವೆಂದು ತಿಳಿಯುವರು.

ಈ ಪ್ರಕಾರ ಪದ್ಮಾಕ್ಷನನಗರವನ್ನು ಹಾಳು ಮಾಡಿದ ಸಮಸ್ತ ರಾಜರೂ ತಮ್ಮ ದೇಶಗಳಿಗೆ ಹೋದ ಬಳಿಕ, ಒಂದಾನೊಂದು ಕಾಲದಲ್ಲಿ ಮಹಾಲಕ್ಷ್ಮಿಯು ಯಜ್ಞಕುಂಡಲದಿಂದ ಹೊರಗೆ ಬಂದು ಕುಳಿತಿದ್ದಳು. ಆಗ ಪುಷ್ಪಕವಿಮಾನದಲ್ಲಿ ಕುಳಿತು ಭೂಲೋಕವನ್ನು ಜಯಿಸಲು, ರಾವಣನು ಲಂಕೆಯಿಂದ ಹೊರಟು ಆಕಾಶ ಮಾರ್ಗದಲ್ಲಿ ಬರುತಿದ್ದನು. ಆರಾಕ್ಷಸೇಶ್ವರನಿಗೆ ಈ ಕನ್ಯೆಯು ದೃಗ್ಗೋಚರಳಾದಳು. ಮತ್ತು ಅವನು ಸಮೀಪಕ್ಕೆ ಬರುವದರೊಳಗೆ ಮಹಾಲಕ್ಷ್ಮಿಯು ಯಜ್ಞಕುಂಡವನ್ನು ಪ್ರವೇಶಿಸಿದಳು. ಆಗ ರಾವಣನು "ಎಲೈ ಸುಂದರಿಯೇ, ಪೂರ್ವದಲ್ಲಿ ನಿನಗೋಸ್ಕರ ಅನೇಕರು ಮರಣಹೊಂದಿದರು. ಈ ದಿವಸ ನಾನು ನಿನ್ನ ವಾಸಸ್ಥಾನವನ್ನು ನೋಡಿದೆನು. ಈಗ ನಿನ್ನನ್ನು ಎಂದಿಗೂ ಬಿಡೆನು" ಎಂದು ನುಡಿದು ಅಗ್ನಿಯನ್ನು ಶೋಧಿಸಲಾರಂಭಿಸಿದನು. ಆದರೆ ಅದರಲ್ಲಿ ಐದು ಶ್ರೇಷ್ಠ ರತ್ನಗಳ ಹೊರತು ಮತ್ತೇನೂ ಸಿಕ್ಕಲಿಲ್ಲ. ಆಗ ರಾವಣನು ಆ ರತ್ನಗಳನ್ನು ಒಂದು ಪೆಟ್ಟಿಗೆಯಲ್ಲಿ ಭದ್ರವಾಗಿರಿಸಿ, ವಿಮಾನವನ್ನೇರಿ ಲಂಕೆಗೆ ಪ್ರಯಾಣಮಾಡಿ ರತ್ನಗಳ ಆ ಪೆಟ್ಟಿಗೆಯನ್ನು ದೇವತಾಗೃಹದಲ್ಲಿ ಇಟ್ಟನು.

ಮುಂದೆ ಭೋಜನವಾದ ಬಳಿಕ, ಪತ್ನಿಯಾದ ಮಂಡೋದರಿಯೊಡನೆ ಸರಸವಚನಗಳನ್ನಾಡುತ್ತ, "ಈ ದಿವಸ ಅಮೌಲ್ಯಗಳಾದ ಐದು ರತ್ನಗಳನ್ನು ತಂದಿರುವೆನು, ಅವುಗಳನ್ನು ನೋಡಬೇಕೆಂಬ ಆಶೆನಿನಗಿದ್ದರೆ, ಅವು ದೇವರ ಮನೆಯಲ್ಲಿರುವವು. ಬೇಕಾದರೆ ಹೋಗಿ ನೋಡು" ಎಂದು ನುಡಿದನು. ಸ್ತ್ರೀ ಸ್ವಭಾವವನ್ನನುಸರಿಸಿ ಮಂಡೋದರಿಗೂ ಅವುಗಳನ್ನು ನೋಡಬೇಕೆಂದು ಆಶೆ ಹುಟ್ಟಿತು. ಆಗ ಮಂಡೋದರಿಯು ದೇವಾಗಾರಕ್ಕೆ ಹೋದಳು. ರತ್ನಗಳನ್ನು ಪತಿಯ ಸನ್ನಿಧಿಯಲ್ಲೇ ನೋಡಬೇಕೆಂಬ ಇಚ್ಛೆ ಆಕೆಗೆ ಹುಟ್ಟಿತು. ಆತರುಣಿಯು ಪೆಟ್ಟಿಗೆ

ಯನ್ನು ಹೊರಗೆ ತರಲು ಯತ್ನಿಸಿದಳು. ಅದು ಆ ಅಬಲೆಗೆ ಎತ್ತಲು ಸಾಧ್ಯವಿಲ್ಲ ದಾಯಿತು. ಬಳಿಕ ನಾಚಿಕೆಯಿಂದ ಮಂಡೋದರಿಯು ನಡೆದ ಸಂಗತಿಯನ್ನು ತನ್ನ ಪತಿಗೆ ತಿಳಿಸಿದಳು. ಅದನ್ನು ಕೇಳಿ ರಾವಣನು ಪತ್ನಿಯ ಅಶಕ್ತತೆಯನ್ನು ಹೀ ಯಾಳಿಸುತ್ತ, ತಾನೇ ದೇವಾಗಾರಕ್ಕೆ ಬಂದನು. ಆದರೆ ಆ ಪೆಟ್ಟಿಗೆಯು ರಾವಣನ ಇಪ್ಪತ್ತು ಭುಜಗಳಿಂದಲೂ ಎತ್ತಲಸಾಧ್ಯವಾಯಿತು. ಇದನ್ನು ನೋಡಿದ ರಾವ ಣನ ಕೋಪವು ಮಿತಿಮೀರಿತು. ಬಳಿಕ ಆತನು ತನ್ನ ಕೈಯಲ್ಲಿರುವ ಆಯುಧ ದಿಂದ ಆ ಪೆಟ್ಟಿಗೆಯನ್ನು ಒಡೆದನು. ಒಳಗೆ ನೋಡುವಷ್ಟರಲ್ಲಿ ಪ್ರಕಾಶಮಾನಳಾದ ಒಬ್ಬ ಕನ್ಯೆಯು ಕಾಣಿಸಿದಳು.

ಆ ಕನ್ಯೆಯನ್ನು ನೋಡಿದೊಡನೆ ಸಮಸ್ತರ ಕಣ್ಣುಗಳೂ ತೆಗೆಯದಂತೆ ಆ ದವು. ಈ ಕೌತುಕವನ್ನು ನೋಡಲು ರಾವಣನ ಸಮಸ್ತ ಬಂಧುಗಳೂ ಬಂದು ಸೇರಿದರು. ಆಗ ರಾವಣನು ಸರ್ವಬಂಧುಗಳ ಸಮಕ್ಷದಲ್ಲಿ ಮಂಡೋದರಿಯನ್ನು ನೋಡಿ—"ಎಲೈ ಪ್ರಿಯಳೇ ಈ ಕನ್ಯೆಗೋಸ್ಕರ ಅನೇಕರಾಜರು ಮರಣಹೊಂದಿ ದರು. ಇವಳು ಹುಟ್ಟಿದ ನಗರವು ನಿರ್ಮೂಲವಾಯಿತು. ಈಕೆಯು ನಮ್ಮ ನಗರದಲ್ಲಿದ್ದರೆ ನಮ್ಮ ವಂಶಕ್ಕೆ ಶ್ರೇಯಸ್ಸಾಗಲಾರದು" ಎಂದು ಹೇಳಿದನು; ಮತ್ತು ತನ್ನ ಮಂತ್ರಿಯನ್ನು ಕುರಿತು—"ಭೋ ಸಚಿವಶ್ರೇಷ್ಠನೇ, ಈ ಕನ್ಯೆಯ ನ್ನು ಪೆಟ್ಟಿಗೆಯ ಸಹಿತ ನಿರ್ಜನವಾದ ದೂರದೇಶಕ್ಕೆ ತೆಗೆದುಕೊಂಡು ಹೋಗಿ ಬಿ ಟ್ಟುಬರತಕ್ಕದ್ದು. ಸಾವಕಾಶ ಮಾಡಬೇಡ." ಎಂದು ಅಪ್ಪಣೆಮಾಡಿದನು. ರಾಕ್ಷ ರ ಸೇನೆಯು ಸಿದ್ಧವಾಯಿತು. ಪುಷ್ಪಕವಿಮಾನವು ಎದುರಿಗೆ ಬಂದು ನಿಂತಿತು. ತ ಸಮಂತ್ರಿಗಳು ಪೆಟ್ಟಿಗೆಯೊಡನೆ ಈ ಕನ್ಯೆಯನ್ನು ಪುಷ್ಪಕವಿಮಾನದಲ್ಲಿಟ್ಟು ಆಕಾ ಮಾರ್ಗಕ್ಕೆ ನಡೆದರು. ಆಗ ಮಂಡೋದರಿಯು ಈ ಕನ್ಯೆಯನ್ನು ಭೂಮಿಯಲ್ಲಿ ಹೂಳಿರೆಂದು ಆಜ್ಞಾಪಿಸಿದಳು. ಆ ಪುಷ್ಪಕವಿಮಾನವು ಮುಂದಕ್ಕೆಮೆಲ್ಲನೆ ನಡೆಯುತ್ತಿ ರಲು, ಆ ಕನ್ಯೆಯು—"ರಾಕ್ಷಸಾಧಿಪನೇ, ಎಲೋ ರಾವಣನೇ, ನಾನು ಈಗ ಹೋಗುವೆನೆಂದು ನೀನು ಸಂತೋಷಪಡಲು, ಕೆಲಸವಿಲ್ಲ. ಮುಂದೆ ನಾನೇ ಇಲ್ಲಿಗೆ ಬಂದು, ರಾಕ್ಷಸರ ಕುಲವನ್ನು ನಿರ್ಮೂಲ ಮಾಡಿಸಿ, ನಿನ್ನ ನಗರವನ್ನು ಧ್ವಂಸ ಮಾಡಿಸಿ, ನಿನ್ನ ಶಿರಸ್ಸುಗಳನ್ನು ಚೆಂಡಾಡಿಸಿ ಹೋಗುವೆನು. ಬಳಿಕ ಮತ್ತೊಂದು ಸಲ ಇಲ್ಲಿಗೆ ಬಂದು, ನಿಕುಂಭನ ಮಗನಾದ ಪೌಂಡ್ರನನ್ನೂ, ಶತಮುಖ ರಾವ ಣನನ್ನೂ ನಾಶಮಾಡುವೆನು. ನಾಲ್ಕನೇ ಸಲ ಬಂದಾಗ್ಯೆ ಕುಂಭಕರ್ಣನ ಮಗ ನಾದ ಮೂಲಕಾಸುರನನ್ನು ನಾಶಮಾಡಿಸುವೆನು." ಎಂದು ನುಡಿದಳು. ಈ

ಪ್ರಕಾಶವಾದ ಮಾತುಗಳನ್ನು ಕೇಳಿ, ರಾವಣನು ಅತಿಕೋಪಗೊಂಡು, ತನ್ನ ಹಸ್ತ ದಲ್ಲಿರುವ ಖಡ್ಗದಿಂದ ಆ ಕನ್ಯೆಯ ಶಿರಸ್ಸನ್ನು ಛೇದಿಸಲು ಯತ್ನಿಸಿದನು. ಆಗ ಆಪ್ತರಿಂದ ಬೋಧಿತನಾದ ರಾವಣನು ಅಂಥ ಕಾರ್ಯವನ್ನು ತೊರೆದು ಹಿಂತಿರುಗಿದನು. ಮುಂದೆ ರಾಕ್ಷಸರು ಆ ಕನ್ಯೆಯನ್ನು ಕರೆದುಕೊಂಡು ಬಹುದೂರ ಪ್ರಯಾಣಮಾಡಿ, ಈ ಮಿಥಿಲಾದೇಶಕ್ಕೆ ತಂದು ಭೂಮಿಯಲ್ಲಿ ಗೋಪ್ಯವಾಗಿಟ್ಟು ಲಂಕೆಗೆ ಪ್ರಯಾಣ ಮಾಡಿದರು.

ಮುಂದೆ ಈ ಜನಕಮಹಾರಾಜನು ಸೂರ್ಯಗ್ರಹಣ ಕಾಲದಲ್ಲಿ ಒಬ್ಬ ಬ್ರಾಹ್ಮಣನಿಗೆ ಆ ಭೂಮಿಯನ್ನು ದಾನಮಾಡಿದನು. ಆ ಬ್ರಾಹ್ಮಣನು ಸುಮುಹೂರ್ತದಲ್ಲಿ ಅದನ್ನು ಒಬ್ಬ ಶೂದ್ರನ ಕೈಯಿಂದ ಉಳಿಸಲಾರಂಭಿಸಿದನು. ಆಗ ಆ ಭೂಮಿಯಲ್ಲಿ ಒಂದು ಪೆಟ್ಟಿಗೆಯು ಸಿಕ್ಕಿತು. ಈ ಭೂಮಿಲ್ಲಿರುವ ಪೆಟ್ಟಿಗೆಯು, ನ್ಯಾಯವಾಗಿ ರಾಜನಿಗೆ ಸಲ್ಲತಕ್ಕದ್ದೆಂದು ಯೋಚಿಸಿ, ಬ್ರಾಹ್ಮಣನು ಅದನ್ನು ತೆಗೆದುಕೊಂಡು ರಾಜನ ಸಭೆಗೆ ಬಂದನು, ಮತ್ತು "ಭೂಪತಿಯೇ, ನೀನು ಕೊಟ್ಟ ಭೂಮಿಯಲ್ಲಿ ಇದು ಸಿಕ್ಕಿತಾದ್ದರಿಂದ ಈ ಪದಾರ್ಥವು ನಿನಗೇ ಸೇರತಕ್ಕದ್ದು" ಹೀಗೆ ಹೇಳಿ ಪೆಟ್ಟಿಗೆಯನ್ನು ಜನಕಮಹಾರಾಜನಿಗೆ ಒಪ್ಪಿಸಿದನು, ಇದನ್ನು ನೋಡಿ ರಾಜನು—ಈ ಪದಾರ್ಥವು ಸರ್ವಥಾ ನನ್ನದಲ್ಲ. ನಿಮಗೆ ದಾನವಾಗಿ ಕೊಟ್ಟಬಳಿಕ ಸರ್ವಸ್ವವೂ ನಿಮ್ಮದೇ ಆಗಿರುವದು, ಎಂದನು. ಈ ಮಾತುಗಳನ್ನು ಕೇಳಿ ಬ್ರಾಹ್ಮಣನು—ಎಂದಿಗೂ ಇದು ನನಗೆ ಸೇರತಕ್ಕದ್ದಲ್ಲ. ನೀನು ನನಗೆ ಭೂಮಿಯಮಟ್ಟಿಗೆ ದಾನಕೊಟ್ಟಿಯೆ ಹೊರ್ತು ಮತ್ತೇನೂ ಕೊಡಲಿಲ್ಲ" ಎಂದನು. ಈ ಮಾತುಗಳನ್ನು ಕೇಳಿದ ಸಭಾಸದರು—"ಮಹಾಸ್ವಾಮೀ, ವೃಥಾಮಾತುಗಳಿಂದೇನು ಸಾಧ್ಯವಿರುವದು ? ಇದರಲ್ಲಿ ಇರುವ ಪದಾರ್ಥವೇನು? ನೋಡಿರಿ" ಹೀಗೆಂದರು. ಈ ಮಾತು ಇಬ್ಬರಿಗೂ ಸಮ್ಮತವಾಯಿತು. ಬಳಿಕ ರಾಜನು ಆ ಪೆಟ್ಟಿಗೆಯನ್ನು ತೆರೆದು ನೋಡುವಂತೆ ದೂತರಿಗೆ ಆಜ್ಞಾಪಿಸಿದನು.

ಅಪ್ಪಣೆಯಂತೆ ದೂತನು ನೋಡಲು, ಪೂರ್ಣಚಂದ್ರನಂತೆ ಮುಖವುಳ್ಳ ದಿವ್ಯಸ್ತ್ರೀಯರೂಪವು ಕಾಣಿಸಿತು. ಈ ಅದ್‌ಭುತವನ್ನು ನೋಡಿ, ರಾಜನಿಗೆ ಪರಮಾಶ್ಚರ್ಯವಾಯಿತು. ಈ ಜನಕಮಹಾರಾಜನಿಗೂ ಮಕ್ಕಳಿಲ್ಲದ್ದರಿಂದ ಆ ಕನ್ಯೆಯನ್ನು ರಕ್ಷಣೆ ಮಾಡಲು ಪರಮಸಂತೋಷದಿಂದ ಸ್ವೀಕರಿಸಿದನು. ಆಗ ಬ್ರಾಹ್ಮಣನೂ ಬಹಳ ಆನಂದದಿಂದ ಮನೆಗೆ ನಡೆದನು. ಈ ಕೌತುಕದಿಂದ ಮಿಥಿಲಾನಗರವೇ ಬೆರಗಾಯಿತು. ಜನಕನು ಆ ಕನ್ಯೆಯನ್ನು ತನ್ನ ಮಗಳೆಂದು ಭಾವಿಸಿ, ಜಾತಕರ್ಮಾದಿಗಳನ್ನು

ಬಹಳ ಸಂಭ್ರಮದಿಂದ ನೆರವೇರಿಸಿದನು. ಈ ಕನ್ಯೆಯು ಮೊದಲು ಮಾತುಲುಂಗ ಫಲದಿಂದ ಹುಟ್ಟಿದವಳಾದ್ದರಿಂದ 'ಮಾತುಲುಂಗೀ' ಯೆಂತಲೂ, ಅಗ್ನಿಗರ್ಭದಿಂದ ಉತ್ಪನ್ನಳಾದ್ದರಿಂದ 'ಅಗ್ನಿಗರ್ಭಾ' ಎಂತಲೂ, ರತ್ನಗಳ ಮಧ್ಯದಲ್ಲಿದ್ದುದರಿಂದ 'ರತ್ನಾವತೀ' ಎಂತಲೂ, ಭೂಮಿಯಿಂದ ಹುಟ್ಟಿದವಳಾದ್ದರಿಂದ 'ಭೂಮಿಜಾ' ಎಂತಲೂ, ಜನಕಮಹಾರಾಜನಿಂದ ರಕ್ಷಿತಳಾದಕಾರಣ 'ಜಾನಕೀ' ಎಂತಲೂ ಅನೇಕ ಹೆಸರುಗಳನ್ನು ಹೊಂದಿರುವಳು. ರಾಮಚಂದ್ರನ ವರ್ಣವು ಮೇಘದಂತೆ ಕಪ್ಪಾದ್ದರಿಂದ ಪದ್ಮಾಕ್ಷಮಹಾರಾಜನ ವಚನವೂ ಈಗ ಸತ್ಯವಾಯಿತು" ಎಂದು ಶತಾನಂದನು ದಶರಥನನ್ನು ಕುರಿತು ಹೇಳಿದನು. ಜನಕಭೂಪತಿಯು ಭರತ-ಶತ್ರುಘ್ನರಿಗೆ ಸಂಪ್ರದಾಯದಂತೆ ಸಮಸ್ತ ಉಪಚಾರಗಳನ್ನೂ ನಡೆಸಿದನು. ಇಷ್ಟ ರೊಳಗೆ ಮಿಕ್ಕ ದಶರಥಾನುಯಾಯಿಗಳಾದ ರಾಜಮಂಡಲಿಯವರು ಬಿಡಾರಗಳಿಗೆ ಬಂದಿದ್ದರು. ದಶರಥನೇ ಮೊದಲಾದ ರಾಜಶ್ರೇಷ್ಠರು ಬಿಡಾರಗಳಿಗೆ ಬಂದ ಕೂಡಲೆ, ರಾಮ-ಲಕ್ಷ್ಮಣರು ಹಿರಿಯರಿಗೆಲ್ಲ ನಮಸ್ಕಾರಮಾಡಿದರು.

ಜನಕಮಹಾರಾಜನು ಜ್ಯೋತಿಶ್ಶಾಸ್ತ್ರಜ್ಞರನ್ನು ಕರೆಸಿ, ಶ್ರೇಷ್ಠವಾದ ವಿವಾಹ ಮುಹೂರ್ತವನ್ನು ನೋಡಿಸಿದನು. ಆ ದಿನ ತನ್ನ ನಾಲ್ವರು ಹೆಣ್ಣುಮಕ್ಕಳ ಪಾಣಿಗ್ರಹಣ ಮಂಗಳವನ್ನು ನಿಶ್ಚಯಮಾಡಿದನು. ನಾಲ್ಕು ಪ್ರತ್ಯೇಕ ವೇದಿಗಳನ್ನು, ಮಂಟಪಗಳನ್ನು ಸಿದ್ಧಪಡಿಸಿದನು. ಆ ಮಂಟಪಗಳಿಗೆ ತೋರಣಗಳನ್ನು ಕಟ್ಟಿಸಿದನು. ರತ್ನಗಳಿಂದ ಆ ಮಂಟಪಗಳನ್ನು ಅಲಂಕರಿಸಿದನು. ಬಳಿಕ ತನ್ನ ಮಂತ್ರಿಗಳಿಗೆ ಪಟ್ಟಣ ಶೃಂಗಾರ ಮಾಡಿಸುವಂತೆ ಆಜ್ಞಾಪಿಸಿದನು. ಆಗಲೇ ನಗರದಲ್ಲೆಲ್ಲಿ ನೋಡಿದರೂ ಚಿತ್ರ ವಿಚಿತ್ರಗಳಾದ ಮಂಟಪಗಳೂ, ನವರತ್ನದ ತೋರಣಗಳಿಂದ ಪ್ರಕಾಶಮಾನಗಳಾದ ಬೀದಿಗಳೂ ಕಂಗೊಳಿಸಿದವು. ಪನ್ನೀರು ಮೊದಲಾದ ಸುಗಂಧ ಜಲಗಳಿಂದ ಸಿಂಪಡಿಸಿದ ಭೂಮಿಯು ತನ್ನ 'ಗಂಧವತೀ' ಎಂಬ ಹೆಸರನ್ನು ಸಾರಿ ಹೇಳುವಂತೆ ಕಾಣುತ್ತಿತ್ತು. ರಾಜಧಾನಿಯ ಮಾರ್ಗಗಳೆಲ್ಲಾ ಸುಗಂಧವುಳ್ಳ ಪುಷ್ಪಗಳಿಂದ ನಿಬಿಡಗಳಾಗಿದ್ದವು. ರಾಜಬೀದಿಗಳಲ್ಲಿ ಪತಾಕೆಗಳು ಕಂಗೊಳಿಸುತ್ತಿದ್ದವು. ಈ ರೀತಿ ಪಟ್ಟಣಶೃಂಗಾರವಾಗುತ್ತಿರಲು, ಸುಮುಹೂರ್ತದಲ್ಲಿ ಶ್ರೀ ರಾಮನೇ ಮೊದಲಾದವರಿಗೂ, ಸೀತಾದೇವಿಯೇ ಮೊದಲಾದ ವಧೂಜನರಿಗೂ ತೈಲಾಭ್ಯಂಜನಪೂರ್ವಕವಾಗಿ ಮಂಗಳಸ್ನಾನ ವಾಯಿತು. ಉಭಯಪಕ್ಷದ ಜನಗಳೂ ಶ್ಲಾಘ್ಯವಾದ ವಸ್ತ್ರಗಳಿಂದಲೂ ಅಮೌಲ್ಯವಾದ ಆಭರಣಗಳಿಂದಲೂ ಶೋಭಿಸಿದರು. ದಶರಥಮಹಾರಾಜನೂ ತನ್ನ

ಸಮಸ್ತ ಆಹ್ನಿಕ ಕೃತ್ಯಗಳನ್ನು ಮುಗಿಸಿಕೊಂಡು, ಕುಲಪುರೋಹಿತರಾದ ವಸಿಷ್ಠರ ಅಪ್ಪಣೆಯಂತೆ, ಗ್ರಾಮಾಚಾರ, ಕುಲಾಚಾರ, ವೃದ್ಧಾಚಾರ, ಇವುಗಳನ್ನೆಲ್ಲ ಮುಗಿಸಿಕೊಂಡು, ತನ್ನ ಪರಾಕ್ರಮಿಗಳಾದ ಮಕ್ಕಳೊಡನೆ ಜನಕಮಹಾರಾಜನ ವಿವಾಹ ಮಂಟಪದ ಕಡೆಗೆ ಹೊರಟನು. ಆ ಕಾಲದಲ್ಲಿ ವಾದ್ಯಗಳು ಘೋರ್ಗರೆದವು. ದುಂದುಭಿಗಳ ಧ್ವನಿಯು ಅತಿ ಗಂಭೀರವಾಗಿತ್ತು. ಶ್ರೀ ರಾಮಾದಿಗಳ ಮೇಲೆ ಪುರಸ್ತ್ರೀಯರು ಪುಷ್ಪಗಳನ್ನೆರಚಿದರು. ಇತ್ತ ಜನಕಮಹಾರಾಜನೂ ತಮ್ಮಲ್ಲಿ ನಡೆಯತಕ್ಕ ಸಮಸ್ತ ಮಂಗಳ ಕಾರ್ಯಗಳನ್ನೂ ಮುಗಿಸಿಕೊಂಡು, ರಾಜವೈಭವದಿಂದ ಕೂಡಿದವನಾಗಿ, ದಶರಥನೇ ಮೊದಲಾದವರನ್ನು ವಿವಾಹಮಂಟಪಕ್ಕೆ ಕರೆತರಲು ಬಹಳ ಸಂಭ್ರಮದಿಂದ ಹೊರಟನು. ಮಧ್ಯಮಾರ್ಗದಲ್ಲಿ ಉಭಯಪಕ್ಷದವರ ಸಂದರ್ಶನವಾದನಂತರ ಎಲ್ಲರೂ ವಿವಾಹಮಂಟಪದ ಕಡೆಗೆ ತೆರಳಿದರು.

ಆ ಸಮಾರಂಭವು ಜನಗಳಿಗೆ ಪರಮಹರ್ಷಕರವಾಗಿತ್ತು. ಮುಂದೆ ಎಲ್ಲರೂ ವಿವಾಹಮಂಟಪಕ್ಕೆ ಸೇರಿದ ಬಳಿಕ, ಜನಕಮಹಾರಾಜನು ವಿವಾಹಮಂಟಪದಲ್ಲಿ ಶ್ರೀ ರಾಮಚಂದ್ರ-ಲಕ್ಷ್ಮಣ-ಭರತ-ಶತ್ರುಘ್ನರುಗಳನ್ನು ಶ್ರೇಷ್ಠಗಳಾದ ಸಿಂಹಾಸನಗಳ ಮೇಲೆ ಕುಳ್ಳಿರಿಸಿ, ವರಪೂಜೆಯನ್ನು ಸಾಂಗವಾಗಿ ನೆರವೇರಿಸಿ, ಶ್ರೀ ರಾಮನೇ ಮೊದಲಾದವರಿಗೆ ದಿವ್ಯಾಭರಣಗಳನ್ನೂ ಅಮೌಲ್ಯವಾದ ವಸ್ತ್ರಗಳನ್ನೂ ಸಮರ್ಪಿಸಿದನು. ಆಭರಣಗಳನ್ನೂ, ವಸ್ತ್ರಗಳನ್ನೂ ಧರಿಸಿದ ಶ್ರೀ ರಾಮಾದಿಗಳು ಶರತ್ಕಾಲದ ಪೂರ್ಣಿಮೆಯ ಚಂದ್ರನಂತೆ ಪ್ರಕಾಶಿಸಿದರು. ಬಳಿಕ ಮಧುಪರ್ಕ ಮೊದಲಾದ ವಿವಾಹಾಂಗಗಳು ನೆರವೇರಿದವು. ಅನಂತರ ದಶರಥಮಹಾರಾಜನೂ ತನ್ನ ಸೊಸೆಯರಿಗೆ ಅಸದೃಶಗಳಾದ ವಸ್ತ್ರಗಳನ್ನೂ ದಿವ್ಯಾಭರಣಗಳನ್ನೂ ಪ್ರತ್ಯೇಕವಾಗಿ ಕೊಟ್ಟು ಸಂತೋಷಗೊಳಿಸಿದನು. ಮುಂದೆ ಶುಭಮುಹೂರ್ತದಲ್ಲಿ, ಅಗ್ನಿ ಮತ್ತು ದೇವಬ್ರಾಹ್ಮಣರು ಸಾಕ್ಷಿಗಳಾಗಿರಲು, ಆ ವಧೂವರರ ಪಾಣಿಗ್ರಹಣ ಮಹೋತ್ಸವವು ನಡೆಯಿತು. ಆ ಕಾಲದಲ್ಲಿ ಸಮಸ್ತ ಲೋಕಗಳಿಗೂ ಹರ್ಷವಾಯಿತು. ಆಕಾಶದಲ್ಲಿ ಇಂದ್ರಾದಿದೇವತೆಗಳು ವಿಮಾನಾರೂಢರಾಗಿ ಪರಮಸಂತೋಷದಿಂದ ಆ ಉತ್ಸವವನ್ನು ನೋಡುತ್ತಿದ್ದರು. ವಿದ್ಯಾಧರರು ವಧೂವರರ ಮೇಲೆ ಪುಷ್ಪವರ್ಷಣಮಾಡಿದರು. ನಾರದಾದಿ ಮಹರ್ಷಿಗಳು ಆಶೀರ್ವದಿಸಿದರು. ಅನಂತರದಲ್ಲಿ ಲಾಜಾಹೋಮ, ಸಪ್ತಪದಿ ಮೊದಲಾದ ಮಂಗಳಕಾರ್ಯಗಳು ಸಾಂಗೋಪಾಂಗವಾಗಿ ನೆರವೇರಿದವು.

ಇವೆಲ್ಲಾ ಮುಗಿದ ಬಳಿಕ ಶ್ರೀರಾಮಾದಿಗಳು ತಮ್ಮ ತಮ್ಮ ಪತ್ನಿಯರೊಡನೆ ಕೌಸಲ್ಯೆಯೇ ಮೊದಲಾದ ರಾಜಪತ್ನಿಯರ ಹಿಂದೆ ಭೋಜನಶಾಲೆಯನ್ನು ಪ್ರವೇಶಮಾಡಿದರು. ಅಲ್ಲಿಪಾರ್ವತೀ-ಪರಮೇಶ್ವರರ ಪೂಜೆಯಾದನಂತರ ತಮ್ಮ ತಮ್ಮ ಪತ್ನಿಯರೊಡಗೂಡಿ ಪರಮಾನಂದದಿಂದ ಭೋಜನಮಾಡಿದರು. ದಶರಥ ಮಹಾರಾಜನೂ ಕೂಡ ಮುನಿಗಳು, ಋಷಿಗಳು, ಸ್ನೇಹಿತರು, ಮಂತ್ರಿಗಳು, ಬ್ರಾಹ್ಮಣರು ಇವರುಗಳೊಡನೆ ಉಚಿತವಾದ ಆಸನದಲ್ಲಿ ಕುಳಿತು ಜನಕ ಮಹಾರಾಜನ ಮನೆಯಲ್ಲಿ ಭೋಜನಮಾಡಿದನು. ಕೌಸಲ್ಯೆಯೇಮೊದಲಾದ ವರಪಕ್ಷದಜನರಿಗೆ(ಬೀಗಿತ್ತಿಯರಿಗೆ) ಜನಕಮಹಾರಾಜನ ಕಡೆಯ ತರುಣಿಯರ ಉಪಚಾರವಂತೂ ಹೇಳಲೇತೀರದು. ಈವಿಧವಾದ ಅನೇಕ ಉತ್ಸವಗಳಲ್ಲಿ ನಾಲ್ಕು ದಿವಸಗಳನ್ನು ಉಭಯಪಕ್ಷದವರೂ ನಾಲ್ಕು ಘಳಿಗೆಗಳಂತೆ ಕಳೆದರು. ಬಳಿಕ ಐದನೇದಿವಸ ಜನಕಮಹಾರಾಜನು ಅಳಿಯಂದಿರಿಗೆ ಆನೆ, ಒಂಟೆ, ಕುದುರೆ ರಥ, ಕಾಲಾಳು, ಆಭರಣಗಳು, ವಸ್ತ್ರಗಳು, ಆಯುಧಗಳು ಇವೇ ಮೊದಲಾದ ಸಮಸ್ತಪದಾರ್ಥಗಳನ್ನು ಯಥೇಷ್ಟವಾಗಿ ಸಮರ್ಪಿಸಿ ಸಂತೋಷಗೊಳಿಸಿದನು. ಮತ್ತು ದಶರಥಮಹಾರಾಜನಿಗೂ, ಕೌಸಲ್ಯೆ ಮೊದಲಾದ ಸ್ತ್ರೀವರ್ಗದವರಿಗೂ ವಸ್ತ್ರಾಭರಣಗಳನ್ನು ಸಮರ್ಪಿಸಿದನು. ಬಹಳ ಹೇಳುವದೇನು? ದಶರಥನ ಕಡೆಯ ಸಮಸ್ತ ಜನರ ಇಷ್ಟಾರ್ಥವನ್ನೂ ಪೂರ್ಣಮಾಡಿದನು.

ಇದನ್ನು ನೋಡಿ ದಶರಥಮಹಾರಾಜನು ಆಶ್ಚರ್ಯಗೊಂಡನು. ಮುಂದೆ ಜನಕಮಹಾರಾಜನ ಕೋರಿಕೆಯಂತೆ ಒಂದುತಿಂಗಳವರೆಗೂ ವಿದೇಹನಗರದಲ್ಲೇ ಸಪರಿವಾರವಾಗಿ ವಾಸಮಾಡಲು, ದಶರಥಮಹಾರಾಜನು ನಿಶ್ಚಯಮಾಡಿದನು. ಮಿಕ್ಕ ವಿಶ್ವಾಮಿತ್ರರೇ ಮೊದಲಾದ ಬ್ರಾಹ್ಮಣರೂ, ವಿವಾಹಕ್ಕೋಸ್ಕರ ಬಂದಸಮಸ್ತ ರಾಜರೂ ಪರಮಹರ್ಷದಿಂದ ಜನಕಮಹಾರಾಜನೇ ಮೊದಲಾದ ಸಮಸ್ತರ ಅಪ್ಪಣೆಯನ್ನು ಪಡೆದು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಬಳಿಕ ಜನಕಮಹಾರಾಜನು ಶ್ರೀ ರಾಮನೇ ಮೊದಲಾದ ಅಳಿಯಂದಿರೊಡನೆ ಕೂಡಿ ವಿನೋದದಿಂದ ಒಂದು ತಿಂಗಳನ್ನು ಒಂದುದಿವಸದಂತೆ ಕಳೆದನು. ಮುಂದೆ ದಶರಥಾದಿಗಳು ಹೊರಡುವ ಸನ್ನಾಹವನ್ನುಸಿದ್ಧಮಾಡಿ ಜನಕ ಮಹಾರಾಜನು ತನ್ನ ಸೀತಾದೇವಿಯೇ ಮೊದಲಾದ ಪುತ್ರಿಯರನ್ನು ಕಳುಹಿಸಿಕೊಡುವದೇ ಯೋಗ್ಯವೆಂದು ನಿಶ್ಚಯಮಾಡಿದನು.

ಪ್ರಯಾಣಕಾಲದಲ್ಲಿ ಎಲ್ಲರಿಗೂ ಬಹಳ ವ್ಯಸನವಾಯಿತು. ಸೀತೆಯೇ ಮೊ

ದಲಾದ ರಾಜಪುತ್ರಿಯರು ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಯಾವಾಗ ತಂದೆಯ ಪಾದಗಳಿಗೆ ನಮಸ್ಕಾರಮಾಡಿದರೋ, ಆಗಲೇ ಅಂತಃಪುರದ ಸಮಸ್ತಸ್ತ್ರೀಯರ ಕಣ್ಣುಗಳಿಂದಲೂ ನೀರು ಥಟಥಟನೆ ಬೀಳಲಾರಂಭವಾಯಿತು ಜನಕಮಹಾರಾಜನಿಗೂ, ಆ ಚಿಕ್ಕಮಕ್ಕಳನ್ನು ಬಿಟ್ಟಿರುವದು ಅಸಾಧ್ಯವಾಗಿತೋರಿತು. ಆದರೂ ಬ್ರಹ್ಮನಿಷ್ಠನಾದ ಜನಕಭೂಪತಿಯು ದುಃಖವನ್ನು ವಹಿಸದೆ ತನ್ನ ಮಕ್ಕಳಿಗೆ ಸಮಯಾನುಗುಣವಾಗಿ ಸಮಾಧಾನಗಳನ್ನು ಹೇಳಿ ನೀವು ಪಾತಿವ್ರತ್ಯವನ್ನ ಮಾತ್ರ ನಿಮ್ಮ ಪ್ರಾಣಗಳಿಗಿಂತಲೂ ಹೆಚ್ಚೆಂದು ತಿಳಿದು ಕಾಪಾಡಿಕೊಳ್ಳಿರಿ. ಯಾರಿಗೂ ಯಾವಾಗಲೂ ವಿರೋಧವಾಗಿ ನಡೆಯಬೇಡಿರಿ. ಯಾರ ಮೇಲೂ ನಿರ್ದಯಮಾಡಬೇಡಿರಿ. ನನ್ನಲ್ಲಿ ನಿಮಗಿರುವ ವಿಶ್ವಾಸವನ್ನೆ ನೀವು ಎಲ್ಲರಲ್ಲಿಯೂ ಇಡಿರಿ. ಕೋಪಕಾಲದಲ್ಲಿ ಸಮಾಧಾನವನ್ನೇ ತಾಳಿರಿ., ಎಂದು ನೀತಿ ಬೋಧನೆ ಮಾಡಿದನು. ಜನಕಮಹಾರಾಜನು ದಶರಥನೊಡನೆ ಬಹುದೂರ ಪ್ರಯಾಣಬೆಳಸಿದನು. ಕೊನೆಗೆ ದಶರಥನಿಂದ ಅಪ್ಪಣೆ ಪಡೆದು ವಿದೇಹನಗರಕ್ಕೆ ಹಿಂತಿರುಗಲುದ್ಯುಕ್ತನಾದನು. ಆ ಕಾಲದಲ್ಲಿ ಮೊದಲು ಶ್ರೀ ರಾಮಾದಿಗಳನ್ನು ನೋಡುತ್ತ ಕೈಜೋಡಿಸಿಕೊಂಡು ಗದ್ಗದಿತವಾದ ಕಂಠದಿಂದ ದಶರಥನನ್ನು ಕುರಿತು "ರಾಜಾಧಿರಾಜ-ಪ್ರಿಯಮಿತ್ರನೆ, ನನ್ನ ಪಂಚಪ್ರಾಣಗಳಂತೆ ಈ ಮಕ್ಕಳನ್ನು ಹ್ಯಾಗೆ ನಾನುಕಾಪಾಡಿದೆನೋ ತಾವೂಕೂಡ ಈ ಅಬಲೆಯರನ್ನು ಮುಂದೆ ಹಾಗೆಯೇ ಕಾಪಾಡುವಿರೆಂದು ದೃಢವಾಗಿ ನಂಬಿರುವೆನು" ಎಂದು ಪ್ರಾರ್ಥನೆ ಮಾಡಿದನು. ಆಗ ಜನಕಮಹಾರಾಜನ ನೇತ್ರಗಳು ನೀರಿನಿಂದ ತುಂಬಿದವು. ಬಳಿಕ ಜನಕಮಹಾರಾಜನು ದಶರಥನಿಗೆ ನಮಸ್ಕರಿಸಿ, ಶ್ರೀ ರಾಮ-ಸೀತೆ ಮೊದಲಾದ ಅಳಿಯಂದಿರನ್ನೂ, ಮಕ್ಕಳನ್ನೂ ಮತ್ತೆ ಮತ್ತೆ ಹಿಂತಿರುಗಿ ನೋಡುತ್ತ ಮಿಥಿಲಾನಗರಕ್ಕೆ ಪ್ರಯಾಣಮಾಡಿದನು.

ಬಳಿಕ ದಶರಥ ಮಹಾರಾಜನು ಪರಿವಾರ ಸಮೇತನಾಗಿ ಅಯೋಧ್ಯೆಗೆ ಶೀಘ್ರವಾಗಿ ಪ್ರಯಾಣ ಬೆಳಸಿದನು. ಆದರೆ ಮಿಥಿಲಾನಗರದಿಂದ ಮೂರು ಗಾವುದದೂರ ಪ್ರಯಾಣ ಮಾಡುತ್ತಿರಲು ದಾರಿಯಲ್ಲಿ ಉತ್ಪಾದಗಳೂ ಭಯಂಕರಗಳಾದ ಅಪಶಕುನಗಳೂ ಉಂಟಾದವು. ಇವುಗಳನ್ನು ನೋಡಿ ದಶರಥನಿಗೆ ಬಹಳ ಭೀತಿಯಾಯಿತು. ಆತನು ಗುರುಗಳಾದ ವಸಿಷ್ಠರನ್ನು ನಮಸ್ಕರಿಸಿ, ಆವಿಷಯದಲ್ಲಿ ಪ್ರಶ್ನೆಮಾಡಿದನು. ಆಗ ವಸಿಷ್ಠರು ಮಹಾರಾಜನೇ, ನಿನಗೆ ಈಗ ಮಹತ್ತರವಾದ ವಿಪತ್ತು ಪ್ರಾಪ್ತವಾಗುವದು ಆದರೆ ಅದು ಶೀಘ್ರವಾಗಿಯೇ ನಿವಾ

ರಣೆಯನ್ನು ಹೊಂದುವದು ಎಂದು ಹೇಳಿದರು. ಅಷ್ಟರಲ್ಲಿ ಎದುರಿಗೆ ಪರುಶುರಾಮನು ಬರುತ್ತಿದ್ದನು. ಆವನ ಮೇಘಶ್ಯಾಮವಾದ ಶರೀರ, ದೀರ್ಘವಾದ ಭುಜಗಳು, ಕೆಂಪಾದ ಕಣ್ಣುಗಳು, ಜೀರ್ಣವಾದ ಜಟಿಗಳು ಇವುಗಳನ್ನು ಕಂಡೊಡನೆ ದಶರಥನಿಗೆ ಎಚ್ಚರಿಕೆತಪ್ಪಿತು. ಅದೇ ಕಾಲದಲ್ಲಿ ತನ್ನ ಬಳಿಗೆ ಬರುತ್ತಿರುವ ಪರಶುರಾಮನನ್ನು ನೋಡಿ, ದಶರಥನು ದೀರ್ಘದಂಡದಂತೆ ನಮಸ್ಕಾರ ಮಾಡಿದನು. ಮತ್ತು ಅರ್ಘ್ಯ-ಪಾದ್ಯಾದಿಗಳಿಂದ ಆತನನ್ನು ಪೂಜಿಸಿ, ತನ್ನ ಪುತ್ರನ ಪ್ರಾಣದಾನವನ್ನು ಕೊಡೆಂದು ಬೇಡಿಕೊಂಡನು.

ಪರಶುರಾಮನು ದಶರಥನ ಆ ಮಾತುಗಳನ್ನು ಕೇಳಲೇ ಇಲ್ಲ. ಆ ಋಷಿಪುತ್ರನು ವೇಗದಿಂದ ರಾಮನ ಎದುರಿಗೆ ಬಂದು ನಿಂತನು. ಬಳಿಕ ಆತನು ರಾಮನನ್ನು ಕುರಿತು, "ಎಲೋ ಕ್ಷತ್ರಿಯಾಧಮನೇ, ನೀನು ರಾಮನೆಂಬ ನನ್ನ ಹೆಸರನ್ನು ಧರಿಸಿ, ಭೂಮಿಯಲ್ಲೆಲ್ಲ ಸಂಚಾರ ಮಾಡುತ್ತಿರುವೆಯಾ ! ಬಹು ಸಂತೋಷ. ನನ್ನೊಡನೆ ಈಗ ಯುದ್ಧಮಾಡಲು ಸಿದ್ಧನಾಗು. ನೀನು .ಕ್ಷತ್ರಿಯರ ವಂಶದಲ್ಲೇ ಹುಟ್ಟಿದವನಾದರೆ, ನನ್ನ ಈ ಮಾತಿಗೆ ಎಂದಿಗೂ ವಿಮುಖನಾಗಲಾರೆ. ಎಲೋ ಮೂರ್ಖನೇ, ಹಳೇದಾದ ಶಿವಧನುಸ್ಸನ್ನು ಮುರಿದೆನೆಂದು ವೃಥಾಗರ್ವಪಡಬೇಡ. ಇಗೋ ಈ ನನ್ನ ವೈಷ್ಣವ ಧನುಸ್ಸಿಗೆ ಗುಣಾರೋಪಣ ಮಾಡು. ಆಗ ನಿನ್ನನ್ನು ನಾನು ಯೋಗ್ಯನಾದ ಕ್ಷತ್ರಿಯನೆಂದು ಕರಿದೇನು"! ಹೀಗೆಂದು ವೀರನಾದ ಶ್ರೀರಾಮನನ್ನು ಮುಂದಕ್ಕೆ ಬಿಡದೆ ದಾರಿಯಲ್ಲೇ ತಡೆದು, ಎಲಾ ರಾಮಾ, ನೀನು ನನ್ನ ವಚನದಂತೆ ಈ ಧನುಸ್ಸನ್ನು ಬಗ್ಗಿಸದಿದ್ದರೆ, ಇಲ್ಲೇ ನಿನ್ನ ಸಮಸ್ತ ಪರಿವಾರವನ್ನೂ ನಾಶ ಮಾಡುವೆನು, ಎಂದು ಗರ್ಜಿಸಿದನು. ಇಂಥ ಕಠೋರವಾದ ವಚನಗಳನ್ನು ಕೇಳಿ, ಶ್ರೀ ರಾಮನು, "ಸ್ವಾಮೀ, ನಾನು ಸೂರ್ಯವಂಶದಲ್ಲಿಯ ಒಬ್ಬನು, ತಾವು ಪರಮಗುಣಶಾಲಿಗಳು-ತಪಸ್ವಿಗಳು. ಹೀಗಿರಲು, ನನಗೂ ತಮಗೂ ಹ್ಯಾಗೆ ಸಾಮ್ಯವಾದೀತು! ಅದಲ್ಲದೆ, ಗೋವುಗಳು, ಬ್ರಾಹ್ಮಣರು, ದೇವತೆಗಳು, ಸ್ತ್ರೀಯರು, ಮಕ್ಕಳು ಇವರ ವಿಷಯಗಳಲ್ಲಿ ನಮ್ಮ ವಂಶದವರು ಎಂದಿಗೂ ಬಾಣವನ್ನು ಕೈಯಲ್ಲಿ ಹಿಡಿಯುವವರಲ್ಲ. ನಾನು ನನ್ನ ಸಮಸ್ತ ಪ್ರಾಣಗಳನ್ನೂ ತಮ್ಮ ಚರಣಗಳಲ್ಲಿ ಒಪ್ಪಿಸಿರುವೆನು. ತಮಗೆ ಇಷ್ಟವಿದ್ದರೆ ಸಂತೋಷದಿಂದ ಹೊಡೆಯಬಹುದು. ಆದರೆ ನಾನು ಬ್ರಾಹ್ಮಣನನ್ನು ನಾಶಮಾಡುವದಕ್ಕಾಗಿ ಎಂದಿಗೂ ಶಸ್ತ್ರವನ್ನು ಧರಿಸಲಾರೆನು." ಎಂದು ಪ್ರಾರ್ಥಿಸಿದನು.

ಶ್ರೀ ರಾಮನ ಈ ಮಾತುಗಳನ್ನು ಕೇಳಿ, ಪರಶುರಾಮನಿಗೆ ಪ್ರಚಂಡವಾದ

ಕೋಪ ಬಂತು. ಆಗ ಭೂದೇವಿಯು ಗದಗದನೆ ನಡುಗಲಾರಂಭಿಸಿದಳು. ಪರಶುರಾಮನಿಗೆ ಕೋಪಬಂದಿದೆಯೆಂದು ತಿಳಿದು, ದಾಶರಥಿಯು ಆತನ ಹಸ್ತದಲ್ಲಿರುವ ಧನುಸ್ಸನ್ನು ಶೀಘ್ರವಾಗಿ ತನ್ನ ಕೈಗೆ ಸೆಳೆದುಕೊಂಡನು. ಆಗ ಆ ಧನುಸ್ಸಿಗೆ ಮೌರ್ವಿಯನ್ನು ಕಟ್ಟಿ, ಶ್ರೀ ರಾಮನು ಬಾಣವನ್ನು ಜೋಡಿಸಿದನು. ಬಳಿಕ ರಘುನಾಥನು—"ಎಲೈ ವಿಪ್ರವರ್ಯನೇ, ಈ ಬಾಣವನ್ನು ಎಲ್ಲಿಗೆ ಬಿಡಲಿ" ಹೀಗೆಂದು ಕೇಳಲು, ಆ ಪ್ರಸಂಗವನ್ನು ನೋಡಿದೊಡನೆ ಪರಶುರಾಮನಿಗೆ ಆಶ್ಚರ್ಯವಾಯಿತು. ಆತನ ಮುಖವು ಬೆವರಿ ನೀರಾಯಿತು. ದೇಹವು ನಡುಗಲಾರಂಭಿಸಿತು. ಬಳಿಕ ಪರಶುರಾಮನು ಶ್ರೀ ರಾಮನ ಎದುರಾಗಿ ಕೈ ಜೋಡಿಸಿ ನಿಂತು—'ಭಕ್ತವತ್ಸಲನೇ, ಕೃಪಾನಿಧಿಯೇ, ಪತಿತಪಾವನನೇ, ತ್ರೈಲೋಕ್ಯನಾಥನೇ, ನಾರಾಯಣಾ, ಅವಿವೇಕಿಯಾದ ನನ್ನ ಅಪರಾಧವನ್ನು ಕ್ಷಮಿಸು. ನಾನು ನಿನ್ನ ಅಂಶವಾಗಿರುವೆನು. ಇದುವರೆಗೂ ನಾನು ಮಾಡಿದ ಮಹಾಕಾರ್ಯಗಳು ನಿನ್ನ ಕೃಪೆಯಿಂದಲೇ ಕೈಗೂಡಿದವು. ನಿನ್ನ ಕೃಪೆಯಿಂದ ಇದುವರೆಗೂ ನನಗೆ ಯಾವ ಸ್ಥಳದಲ್ಲೂ ಅಪಜಯವಾಗಲಿಲ್ಲ. ನಿನ್ನ ಅಪ್ಪಣೆಯಂತೆ ಸಮಸ್ತ ಕ್ಷತ್ರಿಯಾಧಮರನ್ನೂ ನಾಶಗೊಳಿಸಿ, ಭೂಭಾರವನ್ನು ಕಡಿ [illegible] ದರಿಂದ ನನಗೆ ಬಹಳ ಪಾಪವು ಸಂಘಟಿಸಿರುವದು. ಮತ್ತು [illegible] ಲೋಕಗಳನ್ನು ಹೊಂದಬೇಕೆಂದು ನಾನು ಬಹಳ ಸುಕೃತವನ್ನು ಸಂಪಾದಿಸಿರುವೆನು. ಈ ನಿನ್ನ ಬಾಣದಿಂದ, ಮುಂದೆ ನನ್ನನ್ನು ಹೊಂದಬೇಕೆಂದು ಕಾದಿರುವ ಪುಣ್ಯಪಾಪಗಳಿಂದುಂಟಾದ ಲೋಕಗಳನ್ನು ನಾಶಮಾಡಿ, ನನ್ನನ್ನು ನಿನ್ನ ಚರಣಗಳಲ್ಲಿ ಸೇರಿಸಿಕೊ." ಎಂದು ಸ್ತೋತ್ರಮಾಡಿ, ಶ್ರೀ ರಾಮನ ಚರಣಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿದನು. ಬಳಿಕ ಶ್ರೀ ರಾಮನು ಆತನಿಗೆ ಪ್ರಸನ್ನನಾಗಿ ಆತನ ಕೋರಿಕೆಯಂತೆ ಸಾಯುಜ್ಯಪದವಿಯನ್ನಿತ್ತು ಕಾಪಾಡಿದನು. ಆಗ ಪರಶುರಾಮನು ಶ್ರೀ ರಾಮನ ಅಪ್ಪಣೆಯನ್ನು ಪಡೆದು, ಹಿಮತ್ಪರ್ವತದಲ್ಲಿ ಯಾವಜ್ಜೀವವೂ ತಪಶ್ಚರಣ ಮಾಡಲು ತೆರಳಿದನು.

ಪರುಶುರಾಮನು ಹಿಂದಕ್ಕೆ ಹೋದದ್ದನ್ನು ನೋಡಿ, ದಶರಥನಿಗೆ ಪರಮ ಹರ್ಷವಾಯಿತು. ಆತನು—'ಈ ದಿವಸ ನನ್ನ ರಾಮನಿಗೆ ಪುನರ್ಜನ್ಮವಾಯಿತೆಂದು ಮತ್ತೆ ಮತ್ತೆ ಹೇಳುತ್ತಿದ್ದನು. ಆಗ ಸಮೀಪಕ್ಕೆ ಬಂದ ರಾಮನನ್ನು ಗಾಢಾಲಿಂಗನ ಮಾಡಿಕೊಂಡು, ದಶರಥನು ಆನಂದಾಶ್ರುಗಳನ್ನು ಸುರಿಸಿದನು. ಯಾವ ರಾವಣನಿಂದ ಸಮಸ್ತ ದೇವತೆಗಳೂ ನಿರ್ವೀರ್ಯರಾದರೋ, ಅಂಥ ರಾವಣನ

ಸ್ನು ಹತ್ತು ತಲೆಗಳ ಹುಳದಂತೆ ತಿಳಿದು ಸೆರೆಯಲ್ಲಿಟ್ಟಿದ್ದ ಕಾರ್ತವೀರ್ಯಾರ್ಜುನನನ್ನು ಯಾವ ಪರಶುರಾಮನು ಸಂಹಾರಮಾಡಿದನೋ, ಅಂಥ ಪರಶುರಾಮನು ಶ್ರೀ ರಾಮನಿಂದ ಅಪಜಯ ಹೊಂದಿದನು. ಇಂಥ ಶ್ರೀ ರಾಮಚಂದ್ರನ ಭುಜಬಲವು ಈ ಪ್ರಸಂಗದಿಂದ ಊಹಿಸಿದರೆ ತಿಳಿಯಬಹುದಾಗಿರುವದು. ಈ ಮಹಾ ವಿಪತ್ತಿನಿಂದ ಮುಕ್ತನಾದ ದಶರಥನು ಮುಂದೆ ಅಯೋಧ್ಯೆಯ ಕಡೆಗೆ ತೀವ್ರವಾಗಿ ಪ್ರಯಾಣ ಮಾಡಿದನು.

ದಶರಥಮಹಾರಾಜನು ಅಯೋಧ್ಯೆಯ ಸಮೀಪಕ್ಕೆ ಹೋದೊಡನೆ, ಮುಖ್ಯರಾದ ಕೆಲವರು ಮೊದಲು ಪುರಪ್ರವೇಶ ಮಾಡಿ, ಸುಮಂತ್ರನ ಸಹಾಯದಿಂದ ನಗರವನ್ನು ಶೃಂಗಾರಮಾಡಿಸಿದರು. ವಧೂವರರನ್ನು ನೋಡಬೇಕೆಂದು ಲಕ್ಷಾವಧಿ ಜನರು ಬೀದಿಗಳಲ್ಲಿ ನಿಂತಿದ್ದರು. ಆ ನಂತರ ಸುಮಂತ್ರನು ಎಲ್ಲ ಸೇನೆಯೊಡನೆ, ದಶರಥ-ಮಹಾರಾಜನೇ ಮೊದಲಾದ ಎಲ್ಲರನ್ನೂ ಎದಿರುಗೊಂಡು, ಯಥಾ-ಯೋಗ್ಯಮರ್ಯಾದೆಗಳಿಂದ ವಧೂವರರನ್ನು ಪಟ್ಟಣಪ್ರವೇಶ ಮಾಡಿಸಿದನು. ಆ ಕಾಲದಲ್ಲಿ ಅನೇಕ ವಾದ್ಯಗಳು ಮೊಳಗಿದವು. ಗಾಯಕರು ಹೃದ್ಯಸ್ವರಗಳಿಂದ ಗಾನಮಾಡಿದರು. ಆ ಪಟ್ಟಣದ ತರುಣೀಜನರು ವಧೂವರರಮೇಲೆ ಪುಷ್ಪವರ್ಷಣ ಮಾಡಿದರು. ಕೆಲವು ಕನ್ಯೆಯರು ಸೀತಾ-ರಾಮರೇ ಮೊದಲಾದ ನೂತನ ದಂಪತಿಗಳಿಗೆ ಆರತಿಗಳನ್ನೆತ್ತಿದರು. ಈ ರೀತಿ ನಾನಾವಿಜೃಂಭಣೆಗಳಿಂದ ಶ್ರೀ ರಾಮನು ಸಮಸ್ತ ಪುರಜನರಿಗೂ ದರ್ಶನ ಕೊಟ್ಟು, ಬಳಿಕ ದಶರಥನೇ ಮೊದಲಾದ ಎಲ್ಲ ಬಂಧುಗಳೊಡನೆ ಅಂತಃಪುರವನ್ನು ಪ್ರವೇಶಿಸಿದನು. ಆಗ ಸುಮಂತ್ರನು ಸಭಾಸದರಿಗೆಲ್ಲ ಯಥಾಯೋಗ್ಯಮರ್ಯಾದೆಗಳನ್ನು ಮಾಡಿದನು. ಬಳಿಕ ಸಮಸ್ತರೂ ಪರಮಾನಂದದಿಂದ ತಮ್ಮ ತಮ್ಮ ಗೃಹಗಳಿಗೆ ಹೊರಟರು. ಪಾರ್ವತಿಯೇ, ಕೇಳು. ನಾರಾಯಣನ ಅವತಾರಗಳು ಬಹಳವಾಗಿರುವವು. ಅವುಗಳಲ್ಲಿ ರಾಮ-ಕೃಷ್ಣಾವತಾರಗಳೆರಡೇ ಪೂರ್ಣಾವತಾರಗಳು. ಅವೆರಡರಲ್ಲಾದರೂ ರಾಮಾವತಾರವೇ ಶ್ರೇಷ್ಠವಾದದ್ದು. ಇಂಥ ಶ್ರೇಷ್ಠನಾದ ಶ್ರೀ ರಾಮನಿಗೂ, ಸೀತೆಗೂ ಈ ರೀತಿ ಸ್ವಯಂವರ ಮಹೋತ್ಸವವು ನಡೆಯಿತು.

## ೩ನೆಯ ಪ್ರಕರಣ.

### ದಶರಥ-ಮುದ್ಗಲರ ಸಂವಾದ.

ಶ್ರೀ ಶಂಭುವು ಪಾರ್ವತಿಯನ್ನು ಕುರಿತು— ಪ್ರಿಯಳೇ, ಸೀತಾಸಮೇತನಾದ ಶ್ರೀ ರಾಮನು ಅಯೋಧ್ಯೆಯಲ್ಲಿ ನಾನಾಭೋಗಗಳನ್ನು ಅನುಭವಿಸುತ್ತ ಆನಂದ ದಿಂದ ವಾಸವಾಡಿದನು. ಆತನು ತಾಯಿತಂದೆಗಳ ಸೇವೆಯನ್ನು ಭಕ್ತಿಯಿಂದ ಮಾಡುತ್ತಿದ್ದನು. ಹೀಗೆ ಕೆಲವು ಕಾಲ ಕಳೆಯುತ್ತಿರಲು, ದೀಪಾವಳಿಯಹಬ್ಬವು ಪ್ರಾಪ್ತವಾಯಿತು. ಆಗ ಜನಕಮಹಾರಾಜನು ದಶರಥನನ್ನೂ, ರಾಮನೇ ಮೊದ ಲಾದ ಅಳಿಯಂದಿರನ್ನೂ ಕರೆತರಲು, ತನ್ನ ಮಂತ್ರಿಯನ್ನು ಸೇನಾಸಮೇತವಾಗಿ ಅಯೋಧ್ಯೆಗೆ ಕಳುಹಿಸಿದನು. ಆ ಮಂತ್ರಿಯು ಖಂಡಿತವಾಗಿ ಬರಬೇಕೆಂದು ದಶರಥಾದಿಗಳಿಗೆ ಬಹಳ ಆಗ್ರಹಮಾಡಿದನು. ಆಗ ದಶರಥಮಹಾರಾಜನು ರಾಮ ನೇ ಮೊದಲಾದ ಮಕ್ಕಳಿಂದಲೂ, ಸೀತೆಯೇ ಮುಂತಾದ ಸೊಸೆಂದಿರಿಂದಲೂ, ಕೌಸಲ್ಯಾದಿ ಪತ್ನಿಯರಿಂದಲೂ, ಬಂಧುಜನಗಳಿಂದಲೂ ಕೂಡಿ, ಮಿಥಿಲಾನಗ ರಕ್ಕೆ ಪ್ರಯಾಣಮಾಡಿದನು. ಜೊತೆಗೆ ಚತುರಂಗ ಸೇನೆಯೂ, ಪುರವಾಸಿಗಳೂ ಹೊರಟರು. ದಶರಥಮಹಾರಾಜನು ಗೊತ್ತಾದ ದಿವಸಕ್ಕೆ ಸರಿಯಾಗಿ ಮಿಥಿಲಾ ನಗರವನ್ನು ಸೇರಿದನು. ಆಗ ಜನಕಮಹಾರಾಜನು ಅವರನ್ನು ಎದುರುಗೊಂಡು ರಾಜವೈಭವಗಳಿಂದ ಸನ್ಮಾನ ಮಾಡಿ, ಪುರಪ್ರವೇಶ ಮಾಡಿಸಿದನು. ಬಳಿಕ ಹದಿನಾರು ದಿವಸಗಳ ವರೆಗೂ ಎಲ್ಲರೂ ಪರಮಾನಂದದಿಂದ ಅಲ್ಲೇ ವಾಸವಾಗಿ ದ್ದರು. ಸೀತಾದೇವಿಯೇ ಮೊದಲಾದ ಹೆಣ್ಣುಮಕ್ಕಳಿಗೆ ತವರುಮನೆಗೆ ಬಂದೆ ವೆಂಬ ಸಂತೋಷವು ಮಿತಿಮೀರಿತ್ತು. ಹೀಗೆ ವಿಜೃಂಭಣೆಯಿಂದ ದೀಪಾವಳಿಯ ಮಹೋತ್ಸವವೆಲ್ಲ ಸಾಂಗವಾಗಿ ನಡೆದ ಬಳಿಕ ದಶರಥಮಹಾರಾಜನು ಅಯೋ ಧ್ಯೆಗೆ ಹೊರಡಲು ಸಿದ್ಧನಾದನು. ಆಗ ಜನಕನು ಅಯೋಧ್ಯೆಯಿಂದ ಬಂದ ಎಲ್ಲ ಬೀಗರನ್ನು ಯೋಗ್ಯವಾದ ವಸ್ತ್ರಾಭರಣಗಳಿಂದ ಸಂತೋಷಗೊಳಿಸಿ, ಸೀತೆ ಯೇ ಮೊದಲಾದ ಮಕ್ಕಳ ಇಷ್ಟಾರ್ಥಗಳನ್ನು ಪೂರ್ಣಮಾಡಿದನು. ಸಮಸ್ತರೂ ಪ್ರೀತಿ ಸಂಭ್ರಮದಿಂದ ಸುಮುಹೂರ್ತದಲ್ಲಿ ಅಯೋಧ್ಯೆಗೆ ಪ್ರಯಾಣಬೆಳೆಸಿದರು,

ದಶರಥಮಹಾರಾಜನೂ ಜನಕಮಹಾರಾಜನೂ ಪರಸ್ಪರ ಮಾತುಗಳನ್ನಾಡುತ್ತ ಮೆಲ್ಲಮೆಲ್ಲಗೆ ಮುಂದುಗಡೆನಡೆದರು. ಹಿಂದೆ ಸಮಸ್ತ ಪರಿವಾರದವರೂ ಹೊರಟರು. ಅಷ್ಟರಲ್ಲಿ ದಶರಥಮಹಾರಾಜನು, ಮೇರೆ ತಪ್ಪಿದ ಸಮುದ್ರದಂತೆ ಬರುತ್ತಿರುವ ಸೇನೆಯನ್ನು ಕಂಡನು. ಹೀಗೆ ಅಕಸ್ಮಿಕವಾಗಿ ಬರುತ್ತಿರುವ ಸೇನೆಯನ್ನು ನೋಡಿ ದಶರಥ-ಜನಕರಿಬ್ಬರೂ ಗಾಬರಿಯಾದರು. ಹಿಂದಕ್ಕೆ ಸೀತಾಸ್ವಯಂವರ ಕಾಲದಲ್ಲಿ ಪರಾಜಿತರಾದ ರಾಜರು ಎಲ್ಲರೂ ಒಟ್ಟುಗೂಡಿ, ಶ್ರೀ ರಾಮನ ಮಾನಭಂಗ ಮಾಡಲು ಬರುತ್ತಿರುವರೆಂದು ಅವರು ನಿರ್ಧರಿಸಿದರು. ಅದರೆ ಮುಂದೆ ಏನು ಮಾಡಬೇಕೆಂಬದು ಅವರಿಗೆ ತೋಚದಾಯಿತು. ಈ ವರ್ತಮಾನವು ಶ್ರೀರಾಮನಿಗೆ ತಿಳಿದಕೂಡಲೆ, ಆತನು ಲಕ್ಷ್ಮಣನೊಡನೆ ತಂದೆಯ ಬಳಿಗೆ ಬಂದು "ತಂದೆಯೇ, ತಾವು ಸ್ವಲ್ಪವಾದರೂ ಈ ವಿಷಯದಲ್ಲಿ ಯೋಚನೆ ಮಾಡಬಾರದು. ನಾನು ನಿಮ್ಮ ಎದುರಿಗೆ ಇವರೆಲ್ಲರನ್ನೂ ಸೋಲಿಸುವೆನು ಆದರೆ ನೀವೆಲ್ಲರೂ ಇಲ್ಲೇ ಇರಬೇಕು" ಎಂದು ಪ್ರಾರ್ಥಿಸಿ ತಂದೆಯ ಅಪ್ಪಣೆಯನ್ನು ಪಡೆದು, ಆತನ ರಥದಲ್ಲಿ ಕುಳಿತು, ಬಹಳ ವೇಗದಿಂದ ಶತ್ರುಗಳಿಗೆ ಎದುರಾದನು. ಆತನ ಹಿಂದೆ ಲಕ್ಷ್ಮಣ, ಭರತ, ಶತ್ರುಘ್ನರು ಬೇರೆ ಬೇರೆ ರಥಗಳನ್ನೇರಿ ಶತ್ರುಗಳಿಗೆ ಅಭಿಮುಖವಾಗಿ ಹೊರಟರು. ಆಗ ಸೈನಿಕರು ಬಹಳ ಭಯಂಕರವಾದ ಯುದ್ಧಮಾಡಿದರು. ಆ ಶತ್ರುರಾಜರು ಮೊದಲು ಭರತನ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಕಾದಿದರು. ಭರತನು ಅವರ ಅಸ್ತ್ರಗಳಿಂದ ಖಿನ್ನನಾಗಿ ರಥದಲ್ಲಿ ಮೂರ್ಛಿತನಾದನು. ಮುಂದೆ ಶತ್ರುಗಳು ಲಕ್ಷ್ಮಣನನ್ನೂ ಶತ್ರುಘ್ನನನ್ನೂ ಯುದ್ಧದಲ್ಲಿ ಮೂರ್ಛೆಗೊಳಿಸಿ, ಬಳಿಕ ಎಲ್ಲರು ಒಟ್ಟುಗೂಡಿ ರಾಮನ ರಥವನ್ನು ಮುತ್ತಿದರು. ಆಗ ರಾಮನು ಅನೇಕ ದಿವ್ಯಾಸ್ತ್ರಗಳ ಸಹಾಯದಿಂದ ಸಮಸ್ತ ಸೈನ್ಯಗಳನ್ನು ಒಣಗಿದ ಎಲೆಗಳಂತೆ ಕೆಳಗುದುರಿಸಿ, ಶತ್ರುಗಳ ಗರ್ವವನ್ನು ಅಡಗಿಸಿಬಿಟ್ಟನು. ಬಳಿಕ ಶೂರನಾದ ದಾಶರಥಿಯು ಲಕ್ಷ್ಮಣನೇ ಮೊದಲಾದ ತಮ್ಮಂದಿರನ್ನು ನೋಡಲು, ಎಲ್ಲರೂ ಮೂರ್ಛಿತರಾಗಿದ್ದರು. ಅನೇಕ ಶೈತ್ಯೋಪಚಾರಗಳಿಂದ ಲಕ್ಷ್ಮಣ-ಶತ್ರುಘ್ನರು ಎಚ್ಚತ್ತರು. ಭರತನಿಗೆ ಎಷ್ಟುಹೊತ್ತಾದರೂ ಎಚ್ಚರವಾಗಲೇ ಇಲ್ಲ ಈ ವಿಷಯದಲ್ಲಿ ಶ್ರೀ ರಾಮನು ಬಹಳ ಉಪಾಯಗಳನ್ನು ಮಾಡಿದನು. ಅವೆಲ್ಲಾ ಪ್ರಯೋಜನವಿಲ್ಲದಂತಾದವು. ದಶರಥನೇ ಮೊದಲಾದ ಸಮಸ್ತ ಮಂಡಲಿಗೂ ಶ್ರೀ ರಾಮನಿಗಾದ ವಿಜಯದಿಂದ ಪರಮಸಂತೋಷವೂ ಭರತನ ಸ್ಥಿತಿಯಿಂದ ದುಃಖವೂ ಉತ್ಪನ್ನವಾಗಿ ಅವರು ಖಿನ್ನರಾದರು. ಎಲ್ಲರೂ ಭರತನು

ಬದುಕುವದಿಲ್ಲವೆಂದು ತಿಳಿದರು.

ಅನಂತರ ಶ್ರೀರಾಮನು ಲಕ್ಷ್ಮಣನನ್ನು ಕುರಿತು—"ಎಲೈ ಸೌಮಿತ್ರಿಯೇ, ಇಲ್ಲಿಗೆ ಸ್ವಲ್ಪ ದೂರದಲ್ಲಿ ಮುದ್ಗಲ ಮಹರ್ಷಿಗಳ ಆಶ್ರಮವಿರುವದು. ಅಲ್ಲಿಗೆ ಹೋಗಿ ಸಂಜೀವಿನಿಯೇ ಮೊದಲಾದ ಮಹೌಷಧಗಳನ್ನು ತೆಗೆದುಕೊಂಡು ಬಾ. ಅದರಿಂದ ನಮ್ಮ ತಮ್ಮನು ಎಚ್ಚರಗೊಳ್ಳುವನು." ಎಂದು ಹೇಳಿದನು. ಲಕ್ಷ್ಮಣನು ಒಡನೇ ರಥವನ್ನೇರಿ ಮುದ್ಗಲ ಮಹರ್ಷಿಗಳ ಆಶ್ರಮಕ್ಕೆ ಪ್ರಯಾಣ ಮಾಡಿದನು. ಅಲ್ಲಿ ವನವಾಸಿಗಳಾದ ಮುನಿಪುತ್ರರು—"ಎಲೈ ನೃಪಶ್ರೇಷ್ಠನೇ, ನಮ್ಮ ಗುರುಗಳು ಸಮಾಧಿನಿಷ್ಠರಾಗಿರುವರು. ಅವರು ಬಹಿರ್ಮುಖರಾದ ಬಳಿಕ ಅವರ ಅಪ್ಪಣೆಯನ್ನು ಪಡೆದು ಬೇಕಾದ ಲತೆಗಳನ್ನು ತೆಗೆದುಕೊಂಡು ಹೋಗು. ಅವರು ಮಾತನಾಡುವವರೆಗೂ ಒಂದು ಲತೆಯನ್ನಾದರೂ ಮುಟ್ಟಬೇಡ' ಎಂದು ಹೇಳಿದರು. ಈ ವಿಷಯವನ್ನು ಲಕ್ಷ್ಮಣನು ತನ್ನ ಅಣ್ಣನಿಗೆ ಹಿಂತಿರುಗಿ ಬಂದು ಅರಿಕೆ ಮಾಡಿಕೊಂಡನು. ಅದನ್ನು ಕೇಳಿ ಶ್ರೀರಾಮನು 'ಎಲೈ ತಮ್ಮನೇ, ಇಷ್ಟೇಕೆ ನಿಧಾನ ಮಾಡಿದೆ? ಆದದ್ದಾಯಿತು. ಈಗಲಾದರೂ ಹೋಗಿ ಮುನಿಪುತ್ರರನ್ನು ಲಕ್ಷ್ಯ ಮಾಡದೆ ಶೀಘ್ರವಾಗಿ ಆ ಮೂಲಿಕೆಗಳನ್ನು ತೆಗೆದುಕೊಂಡು ಬಾ. ಆ ಮುನಿಯು ಕೋಪ ಮಾಡ್ಯಾನೆಂದು ಸ್ವಲ್ಪವಾದರೂ ಮನಸ್ಸಿನಲ್ಲಿ ಸಂದೇಹ ತರಬೇಡ. ನೀನು ಅಲ್ಲಿಂದ ಬರುವಾಗ ಮಾತ್ರ ನಿನ್ನ ಹೆಸರನ್ನು ಆ ಮುನಿತನಯರ ಮುಂದೆ ಹೇಳಿಬಾ' ಎಂದನು. ಒಡನೆ ಲಕ್ಷ್ಮಣನು ಆ ವನಕ್ಕೆ ಹೋಗಿ ಮುನಿಪುತ್ರರನ್ನು ಗಣನೆಗೆ ತರದೆ ಸಂಜೀವಿನೀಲತೆಯನ್ನು ತೆಗೆದುಕೊಂಡು, ಮುನಿಕುಮಾರರಿಗೆ ತನ್ನ ಹೆಸರನ್ನು ತಿಳಿಸಿ ಶೀಘ್ರವಾಗಿ ಶ್ರೀರಾಮನಿರುವ ಸ್ಥಳಕ್ಕೆ ಬಂದನು. ಶ್ರೀರಾಮನು ಆ ಸಂಜೀವಿನೀಲತೆಯನ್ನು ಭರತನಿಗೆ ಪ್ರಯೋಗಿಸಲು, ಕೂಡಲೆ ನಿದ್ರೆಯಿಂದ ಎದ್ದಂತೆ ಭರತನು ಎದ್ದು ಕುಳಿತನು. ಅದನ್ನು ನೋಡಿ ಎಲ್ಲರೂ ಬಹಳ ಸಂತೋಷದಿಂದ ಶ್ರೀರಾಮನನ್ನು ಸ್ತೋತ್ರ ಮಾಡಿದರು.

ಇತ್ತ ವನದಲ್ಲಿ ವಟುಗಳು 'ಹಾ ಹಾ' ಕಾರಮಾಡುತ್ತ ಮುದ್ಗಲಮುನಿಗಳ ಬಳಿಗೆ ಬಂದು ಎಲ್ಲ ವರ್ತಮಾನಗಳನ್ನು ವಿಜ್ಞಾಪನ ಮಾಡಿಕೊಂಡರು. ಆಗ ಮುದ್ಗಲರು—"ಎಲೈ ವಟುಗಳಿರಾ, ಲಕ್ಷ್ಮಣನೆಂಬುವವನು ಯಾರು? ಅವನು ಎಲ್ಲಿಂದ ಬಂದನು; ಇಲ್ಲಿ ಸಂಜೀವಿನೀಲತೆ ಇದೆ ಎಂದು ಅವನಿಗೆ ಹೇಗೆ ಗೊತ್ತಾಯಿತು; ಯಾವ ವಿಷಯವೂ ನಮಗೆ ಚನ್ನಾಗಿ ತಿಳಿಯಲಿಲ್ಲ. ನಿಮ್ಮಲ್ಲಿ ಕೆಲವರು ಈಗಲೇ ಹೊರಟು, ಆ ವಿಚಾರವನ್ನು ಸಮಗ್ರವಾಗಿ ತಿಳಿದುಕೊಂಡು ಜಾಗ್ರತೆ

ಯಾಗಿ ಬರಬೇಕು” ಎಂದು ಹೇಳಿದರು. ಗುರುಗಳ ಅಪ್ಪಣೆಯಾದಕೂಡಲೆ ಆ ವಟುಗಳು ಶೀಘ್ರವಾಗಿ ದಶರಥಮಹಾರಾಜನ ಬಳಿಗೆ ನಡೆದರು. ಅಲ್ಲಿ ನಡೆದ ಸಮಸ್ತ ಸಮಾಚಾರಗಳನ್ನು ವಿಚಾರಿಸಿಕೊಂಡು ಅವರು ದಶರಥಮಹಾರಾಜನೊಡ ನೆ ಗುರುಗಳಾದ ಮುದ್ಗಲ ಮಹರ್ಷಿಗಳ ಸನ್ನಿಧಿಗೆಬಂದರು. ರಾಜನೊಡನೆ ಆತ ನ ಸಮಸ್ತ ಪತ್ನಿಯರೂ, ಪುತ್ರರೂ, ಮಹರ್ಷಿದರ್ಶನಕ್ಕಾಗಿ ಪ್ರಯಾಣಮಾಡಿದ್ದರು. ದಶರಥಮಹಾರಾಜನು ಮುದ್ಗಲಮಹರ್ಷಿಗಳ ದರ್ಶನವಾದಬಳಿಕ, ತನ್ನ ಸಮಸ್ತ ವೃ ತ್ತಾಂತವನನ್ನು ತಿಳಿಸಿದನು. ಋಷಿಪತ್ನಿಯು, ಮಹಾರಾಜನ ಕೃತಿಣಿಯರನ್ನು ಯೋ ಗ್ಯವಾದ ಉಪಚಾರಗಳಿಂದ ಸತ್ಕರಿಸಿದಳು.

ಮುದ್ಗಲಮಹರ್ಷಿಗಳು ತಂದೆಯನ್ನನುಸರಿಸಿ ಬಂದ ಶ್ರೀ ರಾಮಚಂದ್ರನನ್ನು ನೋಡಿ ಬಹಳ ಹರ್ಷಗೊಂಡರು. ವತ್ಸ, ಈ ದಿವಸವೇ, ಸುದಿನವೆಂತಲೂ, ನಾವೇ ಧನ್ಯರೆಂತಲೂ ತಿಳಿದರು. ಅವರು ದಶರಥನನ್ನು ನೋಡಿ ‘ಭೋ, ‘ಭೋ, ದಶರಥ ಮಹರಾಜನೇ, ನಿನ್ನ ಉಪಕಾರಗಳಿಗೆ ನಾವು ಎಷ್ಟು ಜನ್ಮ ಕೃತಜ್ಞರಾದರೂ ತೀರದು. ಇಂಥ ನಾರಾಯಣ ಸಗುಣಮೂರ್ತಿಯಾದ ಶ್ರೀ ರಾಮನ ದರ್ಶನವು ನಮಗೆ ನಿನ್ನ ಸಹಾಯದಿಂದಲೇ ದೊರಕಿತು. ಈತನು ಯೋಗಿಗಳ ಮನಸ್ಸುಗಳಿಂದ ತಿಳಿಯಲಸಾಧ್ಯನು. ಇಂಥಾ ಮಗನನ್ನು ಪಡೆದ ನಿನ್ನ ಸುಕೃತವನ್ನು ಎಷ್ಟೆಂದು ಹೇಳಲಿ? ಹೇ ರಾಜನೇ, ಈ ಶ್ರೀಮದ್ಭಕ್ತವತ್ಸಲನು ದುಷ್ಟರನ್ನು ನಿಗ್ರಹಿಸಲಿ ಕ್ಕೂ ಸಾಧುಜನರನ್ನು ಪರಿಪಾಲಿಸಲಿಕ್ಕೂ ನಿನ್ನ ಕುಲದಲ್ಲಿ ಅವತಾರ ಮಾಡಿರುವ ನು. ಈ ಮಹಾನುಭಾವನು ಹನ್ನೊಂದುಸಾವಿರ ವರ್ಷಗಳ ವರೆಗೂ ಅಯೋಧ್ಯೆಯಲ್ಲಿ ರಾಜ್ಯಭಾರಮಾಡುವನು. ಈ ನಿನ್ನ ಮಗನಿಗೆ ಇಬ್ಬರುಮಕ್ಕಳಾಗುವರು. ಅವ ರಲ್ಲಿ ಪ್ರತಿಒಬ್ಬನಿಗೂ ಇಬ್ಬರು ಪತ್ನಿಯರಾಗುವರು. ಹಾಗೂ ಶ್ರೀ ರಾಮಾದಿಗ ಳಿಗೆ ಹನ್ನೆರಡು ಜನ ಪೌತ್ರಿಯರೂ (ಹೆಣ್ಣುಮೊಮ್ಮಕ್ಕಳು) ಇಪ್ಪತ್ತುನಾಲ್ಕುಜ ನಪೌತ್ರರೂ (ಗಂಡುಮೊಮ್ಮಕ್ಕಳು) ಉಂಟಾಗುವರು. ಮಹಾರಾಜನೇ, ನಿನ್ನ ಮಕ್ಕಳಿಗೆಬಹಳಮಂದಿ ಪ್ರಪೌತ್ರರು (ಮರಿಮಕ್ಕಳು) ಆಗುವರು. ಆದರೆ ಈ ತೇಜ ಸ್ವಿಗಳಾದ ನಿನ್ನ ಇಬ್ಬರು ಮಕ್ಕಳು ಕೆಲವು ಕಾಲಗಳನಂತರ ಹದಿನಾಲ್ಕು ವರ್ಷ ಗಳವರೆಗೆ ದಂಡಕಾರಣ್ಯದಲ್ಲಿ ವೃಂದೆಯ ಶಾಪದಿಂದ ಬಹಳ ದುಃಖಗಳನ್ನನುಭವಿ ಸಬೇಕಾಗುವದು.

ಈ ಮಾತುಗಳನ್ನು ಕೇಳಿದ ದಶರಥನು—ಮಹರ್ಷಿಗಳೇ, ವೃಂದೆ ಎಂಬುವಳು ಯಾರು, ಆಕೆಯು ಇವರಿಗೆ ಯಾತಕ್ಕೆ ಶಾಪಕೊಟ್ಟಳು. ಈ ವಿಷಯವನ್ನು ನನಗೆ

ಸವಿಸ್ತಾರವಾಗಿ ಹೇಳಿರಿ" ಎಂದನು. ಆಗ ಮುದ್ಗಲಮಹರ್ಷಿಗಳು: "ಭೋ ದಶರಥಸುತ, ಕೇಳು. ಪೂರ್ವದಲ್ಲಿ ಶಂಕರನಿಗೂ ಜಾಲಂಧರನಿಗೂ ಘೋರವಾದ ಯುದ್ಧವಾಯಿತು. ಆಗ ಜಾಲಂಧರನ ಪತ್ನಿಯು ಪರಮ ಪತಿವ್ರತೆಯಾದ್ದರಿಂದ ಅವನಿಗೆ ಅಪಜಯ ಉಂಟಾಗಲಿಲ್ಲ. ಬಳಿಕ ಶಂಕರನು ಈ ವಿಷಯವನ್ನು ವಿಷ್ಣುವಿಗೆ ತಿಳುಹಿದನು. ಅನಂತರ ಒಂದು ದಿವಸ ಜಾಲಂಧರನ ಪತ್ನಿಗೆ ತನ್ನ ಪತಿಯು ಕೋಣವನ್ನು ಹತ್ತಿಕೊಂಡಂತೆಯೂ, ಶಿರಹೀನನಾದಂತೆಯೂ, ದಕ್ಷಿಣದಿಕ್ಕಿಗೆ ಹೋದಂತೆಯೂ ಸ್ವಪ್ನವಾಯಿತು. ಈ ದುಸ್ವಪ್ನವನ್ನು ನೋಡಿ ಆ ಪತಿವ್ರತೆಯು ಬಹಳ ಗಾಬರಿಯಾದಳು. ಆಕೆಗೆ ನಿದ್ರೆ ಬರದಂತಾಯಿತು. ಮುಂದೆ ಆ ತರುಣಿಯು ತನ್ನ ಇಬ್ಬರು ಸಖಿಯರನ್ನು ಕರೆದುಕೊಂಡು ಅಂತಃಪುರದ ಮೇಲುಪ್ಪರಿಗೆಯ ಮೇಲೆ ಹೋದಳು ಅಲ್ಲಿ ಸಮಾಧಾನವಾಗಲಿಲ್ಲ. ಹಾಗೆಯೇ ಸಖಿಯರೊಡನೆ ಆಕೆಯು ಉಪವನಕ್ಕೆ ತೆರಳಿದಳು. ಅಲ್ಲಿ ಅವರು ಸಂಚಾರ ಮಾಡುತ್ತಿರಲು, ಇಬ್ಬರು ಘೋರರೂಪದ ರಾಕ್ಷಸರು ಕಾಣಿಸಿದರು. ಅವರನ್ನು ನೋಡಿ ಹೆದರಿಕೊಂಡು, ಎಲ್ಲರೂ ಬೇರೆ ಬೇರೆ ಕಡೆಗೆ ಓಡಿಹೋದರು. ಅವರಲ್ಲಿ ಈ ಪತಿವ್ರತೆಯನ್ನೇ ಹಿಂಬಾಲಿಸಿ ಆ ರಾಕ್ಷಸರು ಓಡಲಾರಂಭಿಸಿದರು. ಆ ಪತಿವ್ರತೆಯು ಓಡುವ ದಾರಿಯಲ್ಲಿ ಶಿಷ್ಯಸಮೇತನಾದ ಒಬ್ಬ ತಪಸ್ವಿಯು ಕಾಣಿಸಿದನು. ಆಕೆಯು ಆ ತಪಸ್ವಿಯ ಬಳಿಗೆ ಹೋಗಿ, ನಮಸ್ಕರಿಸಿ ನನ್ನನ್ನು ಕಾಪಾಡೆಂದು ಬೇಡಿಕೊಂಡಳು. ಆಗ ಆ ತಪಸ್ವಿಯು ಆ ಪತಿವ್ರತೆಯನ್ನು ಸಮಾಧಾನಪಡಿಸಿ, ತನ್ನ ಕ್ರೂರದೃಷ್ಟಿಯಿಂದ ರಾಕ್ಷಸರನ್ನು ನೋಡಲು, ಅವರು ಅಲ್ಲಿ ನಿಂತಹಾಗೆಯೇ, ಉರಿದು ಬೂದಿಯಾದರು. ಅದನ್ನು ನೋಡಿ ಆ ಪತಿವ್ರತೆಯು ತಪಸ್ವಿಯಲ್ಲಿ ವಿಶ್ವಾಸವನ್ನು ಹೊಂದಿದಳು. ಮತ್ತು ಶಂಕರನ ಸಂಗಡ ಯುದ್ಧಮಾಡುತ್ತಿರುವ ನನ್ನ ಪತಿಯ ಯೋಗಕ್ಷೇಮವನ್ನು ದಯವಿಟ್ಟು ತಿಳಿಸಿರಿ, ಎಂದು ಪ್ರಶ್ನೆಮಾಡಿದಳು. ಆಗ ತಪಸ್ವಿಯು ಮೇಲೆ ನೋಡುವಷ್ಟರಲ್ಲಿ ಎರಡು ಕಪಿಗಳು ಬಂದುನಿಂತವು. ಆ ವಾನರರು ತಪಸ್ವಿಯ ಹುಬ್ಬಿನಸನ್ನೆಯನ್ನು ತಿಳಿದು, ಆಕಾಶಕ್ಕೆ ಹಾರಿ ಸ್ವಲ್ಪಹೊತ್ತಿನಮೇಲೆ ಜಾಲಂಧರನ ಶರೀರವನ್ನೂ, ಶಿರಸ್ಸನ್ನೂ ಆತನ ಎದುರಿಗೆ ತಂದಿಟ್ಟರು. ಇದನ್ನು ನೋಡಿದೊಡನೆ ಆ ಪತಿವ್ರತೆಯು ಮೂರ್ಛೆಹೊಂದಿದಳು. ಆ ತಪಸ್ವಿಯು ಕಮಂಡಲೂದಕವನ್ನು ಪ್ರೋಕ್ಷಿಸಿ ಆ ತರುಣಿಗೆ ಎಚ್ಚರಿಕೆಯಾಗುವಂತೆ ಮಾಡಿದನು. ಆ ಪತಿವ್ರತೆಯು ಪ್ರಲಾಪಮಾಡುತ್ತ, ನನ್ನ ಪತಿಯನ್ನು ಬದುಕಿಸಿಕೊಡಿರೆಂದು ತಪಸ್ವಿಯನ್ನು ಪ್ರಾರ್ಥಿಸಿದಳು. ಈಶ್ವರನಿಂದ ಮೃತನಾದ ಈತನು ಸರ್ವಥಾ ಬದು

ಕಠಾರನೆಂದು ಬಹಳ ಹೇಳಿದನು. ಆದರೂ ಆ ಸ್ತ್ರೀಯು ಕೇಳಲಿಲ್ಲ. ಕೊನೆಗೆ ಆ ಪತಿವ್ರತೆಯ ಮನೋರಥವನ್ನು ಸಿದ್ಧಗೊಳಿಸಿ, ತಪಸ್ವಿಯು ಅಂತರ್ಹಿತನಾದನು.

ಮುನಿಯ ಕೃಪೆಯಿಂದ ಎದ್ದು ಕುಳಿತಿರುವ ಪತಿಯನ್ನು ಆ ತರುಣಿಯು ಆಲಿಂಗನಮಾಡಿದಳು. ಹೀಗೆಯೇ ಅನೇಕ ದಿವಸಗಳವರೆಗೆ ಅಲ್ಲೇ ವಿಹಾರಮಾಡುತ್ತ ಆ ದಂಪತಿಗಳು ವಾಸವಾಗಿದ್ದರು. ಒಂದು ದಿವಸ ರತಿಕಾಲದಲ್ಲಿ ಜಾಲಂಧರನ ಪತ್ನಿಯಾದ ವೃಂದೆಯು ತನ್ನ ಪತಿಯನ್ನು ಕಾಣಲಿಲ್ಲ. ಆಕೆಯು ಚತುರ್ಭುಜನಾದ ವಿಷ್ಣುವನ್ನು ನೋಡಿದಳು. ಆಗಲೆ ವೃಂದೆಗೆ ಬಹಳ ಕೋಪಬಂತು. ಆಗ ಆ ಮಹಾಪತಿವ್ರತೆಯಾದ ವೃಂದೆಯು ಹರಿಯನ್ನು ಕುರಿತು—“ಎಲೋ, ನಾರಾಯಣನೇ, ನೀನು ಬಹಳ ನಿಂದ್ಯನು. ಸ್ವಲ್ಪವಾದರೂ ಜ್ಞಾನವಿಲ್ಲದೆ ನೀನು ಪರಸ್ತ್ರೀಗಮನವನ್ನು ಹೇಗೆ ಮಾಡಿದೆ! ನಿನ್ನ ಕಳ್ಳತನವೆಲ್ಲ ನನಗೆ ತಿಳಿಯಿತು. ಆ ತಪಸ್ವಿಯೂ, ರಾಕ್ಷಸರೂ, ಕಪಿಗಳೂ, ಶಿಷ್ಯನೂ ಎಲ್ಲಾ ನೀನೇ ಅಲ್ಲವೆ! ಒಳ್ಳೇದಾಯಿತು. ನಿನ್ನ ಕರ್ಮದ ಫಲವನ್ನು ನೀನೇ ಅನುಭವಿಸು. ನೀನು ಯಾವ ರಾಕ್ಷಸರಿಂದ ನನ್ನನ್ನು ಮೋಸಗೊಳಿಸಿದೆಯೋ, ಅವರೇ ನಿನ್ನ ಪತ್ನಿಯನ್ನು ಕದ್ದೊಯ್ಯಲಿ. ನೀನು ನನ್ನ ಪತಿಯಂತೆ ಪತ್ನೀಶೋಕವನ್ನನುಭವಿಸು. ಆ ವಾನರರೇ ನಿನಗೆ ಅರಣ್ಯದಲ್ಲಿ ಸ್ನೇಹಿತರಾಗಿ ಸಹಾಯಮಾಡಲಿ,” ಎಂದು ಶಪಿಸಿ, ತಾನು ಅಗ್ನಿಪ್ರವೇಶಮಾಡಿ ದೇಹವನ್ನು ಬಿಟ್ಟಳು. ಬಳಿಕ ಶಂಕರನು ಜಾಲಂಧರನ ವಧಮಾಡಿದನು. ಆದ ಕಾರಣ ಈಗ ರಾವಣ–ಕುಂಭಕರ್ಣರೆಂಬ ಇಬ್ಬರು ಬಲಿಷ್ಠರಾದ ರಾಕ್ಷಸರಿರುವರು. ಅವರು ಲಂಕೆಯಲ್ಲಿ ರಾಜ್ಯಭಾರ ಮಾಡುತ್ತಿರುವರು. ಆ ದೈತ್ಯರು ನಿನ್ನ ಹಿರಿಯ ಸೊಸೆಯಾದ ಸೀತೆಯನ್ನು ಕದ್ದೊಯ್ಯುವರು. ಮುಂದೆ ರಾಮನಿಗೆ ಸುಗ್ರೀವನೇ ಮೊದಲಾದ ವಾನರರ ಸ್ನೇಹವು ಉಂಟಾಗುವದು. ಅನಂತರ ಈ ಲೋಕಾಭಿರಾಮನಾದ ನಿನ್ನ ಈ ಮಗನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ರಾವಣಾದಿಗಳನ್ನು ನಾಶಮಾಡಿ, ಅಯೋಧ್ಯೆಗೆಬಂದು, ಬಹು ದಿವಸಗಳವರೆಗೆ ರಾಜ್ಯವನ್ನು ರಕ್ಷಿಸುವನು. ಮಹಾರಾಜನೇ, ನಾನು ಹೇಳಿದ ಈ ಮಾತುಗಳೆಲ್ಲ ಗುಪ್ತವಾಗಿರಲಿ, ಎಂದು ಹೇಳಿದರು.

ಶ್ರೀರಾಮನ ಈ ಭಾವೀಚರಿತ್ರೆಯನ್ನು ಕೇಳಿದ ದಶರಥಮಹಾರಾಜನಿಗೆ ಬಹಳ ಹರ್ಷವಾಯಿತು. ಆತನು ಮಹರ್ಷಿಗಳೇ, ನಾನು ಪೂರ್ವಜನ್ಮದಲ್ಲಿ ಯಾರು! ನನಗೆ ಶ್ರೀಹರಿಯು ಮಗನಾಗಲು ಕಾರಣವೇನು? ಇದೆಲ್ಲವನ್ನೂ ನನ್ನ ಮೇಲೆ ದಯಪಾಲಿಸಿ ಹೇಳಬೇಕು.” ಎಂದು ಪ್ರಾರ್ಥಿಸಿದನು. ಅದಕ್ಕೆ ಮುದ್ಗಲ

ಋಷಿರ್ಷಿಗಳು-- "ದಶರಥನೇ, ಸಮಾಧಾನ ಚಿತ್ತದಿಂದ ಕೇಳು. ಪೂರ್ವದಲ್ಲಿ ಸಹ್ಯಾದ್ರಿಯ ಪ್ರಾಂತದಲ್ಲಿರುವ ಕರವೀರಪುರದಲ್ಲಿ ಶ್ರೇಷ್ಠವಾದ ಒಬ್ಬ ಬ್ರಾಹ್ಮಣನಿದ್ದನು. ಆತನಿಗೆ ಧರ್ಮದತ್ತನೆಂದು ಹೆಸರು ಆತನು ಬಹಳ ಪಂಡಿತನಾಗಿದ್ದನು. ಯವಾಗಲೂ ಆತನು ದ್ವಾದಶಾಕ್ಷರೀಮಂತ್ರವನ್ನು ಜಪ ಮಾಡುವನು. ಹೀಗಿರಲು, ಕಾರ್ತಿಕ ಮಾಸದಲ್ಲಿ ಹರಿಭಜನ ಮಾಡಬೇಕೆಂದು ಆತನು ಯೋಚಿಸಿ, ರಾತ್ರಿಯ ಸಮಯದಲ್ಲಿ ಭಜನಮಂದಿರಕ್ಕೆ ಹೊರಟನು. ಆಗ ಆತನ ಕೈಯಲ್ಲಿ ಹರಿಪೂಜೆಯ ಸಮಸ್ತ ದ್ರವ್ಯಗಳೂ ಇದ್ದವು. ಹೋಗ ಹೋಗುತ್ತ ಆತನ ಯೆದುರಿಗೆ ಒಂದು ಹೆಣ್ಣು ಪಿಶಾಚವು ಭಯಂಕರವಾದ ವೇಷವನ್ನು ಧರಿಸಿ ಬಂದು ನಿಂತಿತು. ಆದನ್ನು ನೋಡಿ ಬ್ರಾಹ್ಮಣನಿಗೆ ಬಹಳಕೋಪ ಬಂತು ಬಳಿಕ ಆತನು ನಾರಾಯಣ ಮಂತ್ರವನ್ನು ಜಪಿಸುತ್ತ ತುಳಸೀಪತ್ರದಿಂದ ಕೂಡಿದ ಉದಕವನ್ನು ಅದರ ಮೈಮೇಲೆ ಯಸೆದನು.ಆದರಿಂದ ಆ ಪಿಶಾಚಕ್ಕೆ ಪೂರ್ವಜನ್ಮದ ಸ್ಮೃತಿಯುಂಟಾಯಿತು. ಅದು ಪರಮ ಭಕ್ತಿಯಿಂದ ಆ ಬ್ರಾಹ್ಮಣನ ಪಾದಗಳ ಮೇಲೆ ಬಿದ್ದು ಹೊರಳಾಡುತ್ತ ಬ್ರಾಹ್ಮಣನನ್ನು ಕುರಿತು, ಆಯಲೈ, ಬ್ರಾಹ್ಮಣ ಶ್ರೇಷ್ಠನೇ, ನನಗೆ ಪೂರ್ವಜನ್ಮದ ಪಾಪಕರ್ಮಗಳಿಂದ ಇಂಥ ದುರ್ದಶೆಯು ಪ್ರಾಪ್ತವಾಗಿದೆ. ಮುಂದೆ ನಾನು ಹೇಗೆ ಉದ್ಧಾರವಾಗಬೇಕು" ಯಂದು ಪ್ರಶ್ನೆ ಮಾಡಿದಳು. ಆಗ ಆ ಬ್ರಾಹ್ಮಣೋತ್ತಮನು 'ಯಲೇ ತರುಣಿಯೇ, ನೀನು ಯಾವ ಕರ್ಮದ ಸಂಬಂಧದಿಂದ ಇಂಥ ಹೀನ ದೆಶೆಯನ್ನು ಹೊಂದಿದೆ. ಯಂದು ಕೇಳಿದನು.

ಆದಕ್ಕೆ ಆ ಕಲಹಾ ಎಂಬ ಸ್ತ್ರೀಯು ಬ್ರಾಹ್ಮಣನನ್ನು ಕುರಿತು—ದ್ವಿಜಶ್ರೇಷ್ಠನೇ, ಕೇಳು ಪೂರ್ವದಲ್ಲಿ ಸೌರಾಷ್ಟ್ರದೇಶದಲ್ಲಿ ಭಿಕ್ಷುವೆಂಬ ಒಬ್ಬ ಬ್ರಾಹ್ಮಣನಿದ್ದನು, ಆತನಿಗೆ ನಾನು ಹೆಂಡತಿಯಾಗಿದ್ದೆನು. ನನಗೆ ಆಗ "ಕಲಹಾ" ಯಂಬ ಹೆಸರು ಇತ್ತು. ನಾನು ಬಹಳ ಧೂರ್ತಳಾಗಿದ್ದೆನು. ನಾನು ನನ್ನ ಪತಿಗೆ ಒಂದು ಮಾತಿನಿಂದಾದರೂ ಸುಖವನ್ನುಂಟು ಮಾಡಿದವಳಲ್ಲ. ಆತನಿಗೆ ಒಂದುದಿವಸವಾದರೂ ಮಿಷ್ಟಾನ್ನವನ್ನು ಹಾಕಲಿಲ್ಲ. ಒಂದು ಕ್ಷಣವಾದರೂ ಆತನೊಡನೆ ನಗುತ್ತಿರಲಿಲ್ಲ. ನಾನು ಯಾವಾಗಲೂ ಮಿಷ್ಟಾನ್ನವನ್ನೇ ಭೋಜನ ಮಾಡುತ್ತಿದ್ದೆನು. ಆತನಿಗೆ ಹಳಸಿದ ಮತ್ತು ಹೊತ್ತಿದ ಅನ್ನವನ್ನು ನಾನೇ ಭೋಜನಕ್ಕೆ ಹಾಕುತ್ತಿದ್ದೆನು. ಪತಿಯ ಮಾತಿಗೆ ಯಾವಾಗಲೂ ವಿರುದ್ಧವಾಗಿಯೇ ನಡೆಯುತ್ತಿದ್ದೆನು. ಒಂದು ದಿವಸ ಆ ನನ್ನ ಪತಿಯು, ನನ್ನ ದುರ್ನಡತೆಗಳನ್ನು ತನ್ನ ಒಬ್ಬ ಧನ-

ರ್ಶನಾದ ಸ್ನೇಹಿತನಿಗೆ ಹೇಳಿದನು. ಆ ಮಿತ್ರನು ನನ್ನ ಪತಿಗೆ ಒಂದು ಒಳ್ಳೇ ಯು ಕ್ತಿಯನ್ನು ಹೇಳಿಕೊಟ್ಟನು. ಆ ಯುಕ್ತಿಯಿಂದ ನನ್ನ ಗಂಡನಿಗೆ ಸ್ವಲ್ಪ ಅನುಕೂ ಲ ಕಂಡಿತು. ಒಂದು ದಿನ ಆತನು ನನ್ನನ್ನು ನೋಡಿ—"ನನ್ನ ಸ್ನೇಹಿತರಲ್ಲಿ ಕೆಲ ವರು ದುಷ್ಟರಿದ್ದಾರೆ. ಅವರನ್ನು ಈ ದಿನ ಊಟಕ್ಕೆ ಕರೆಯುವದಿಲ್ಲ" ಎಂದನು. ಆ ಮಾತನ್ನು ಕೇಳಿದೊಡನೇ ನಾನು, ಆತನ ಆ ಸ್ನೇಹಿತರನ್ನೆಲ್ಲ ಕರೆದು ಎಲ್ಲರಿಗೂ ಮೃಷ್ಟಾನ್ನಭೋಜನ ಮಾಡಿಸಿ ಕಳುಹಿದೆನು. ಪತಿಯು 'ಈ ದಿವಸ ದರ್ಶವಾಗಿದೆ. ಅವರೂ ಯಾವ ಬ್ರಾಹ್ಮಣರನ್ನೂ ಕರೆಯುವದೇ ಇಲ್ಲ' ಎಂದನು. ನಾನು ಪ್ರತಿಮನೆಗೂ ಹೋಗಿ ಬ್ರಾಹ್ಮಣರನ್ನು ಕರೆದು ಭೋಜನ ಮಾಡಿಸಿದೆನು. ಮುಖ್ಯ ವಾಗಿ ಪತಿಯು ಯಾವ ಯಾವ ಕಾರ್ಯಗಳನ್ನು ಮಾಡಬೇಡ ಎನ್ನುವನೋ, ಆ ಆ ಕೆಲಸಗಳನ್ನು ನಾನು ಅವಶ್ಯವಾಗಿ ಮಾಡಿಯೇ ಬಿಡುತ್ತಿದ್ದೆನು. ಒಂದು ದಿ ವಸ ನಮ್ಮ ಮಾವನ ಶ್ರಾದ್ಧ ಬಂತು. ನನ್ನ ಪತಿಯು—ಹಿರಿಯರ ಶ್ರಾದ್ಧವು ಈ ದಿವಸ ನೋಡತಕ್ಕದ್ದು. ಅದನ್ನು ನಾಳೆಯೇ ಮಾಡುವೆನು. ಒಳ್ಳೇ ಯೋಗ್ಯ ರಾದ ಬ್ರಾಹ್ಮಣರನ್ನು ಕರೆಯುವದೇ ಇಲ್ಲ. ಈ ವರ್ಷ ಬ್ರಾಹ್ಮಣರ ಜೊತೆಗೇ ಭೋಜನ ಮಾಡುವೆನು" ಎಂದನು. ನಾನು ಅದಕ್ಕೆ ವಿರುದ್ಧವಾಗಿ, 'ಈ ದಿನವೇ ಶ್ರಾದ್ಧವನ್ನು ಮಾಡಬೇಕು, ಒಳ್ಳೇ ಬ್ರಾಹ್ಮಣರನ್ನೇ ಕರೆಯಬೇಕು. ಬ್ರಾಹ್ಮಣರ ಭೋಜನವಾದನಂತರವೇ ತಾವು ಭೋಜನಮಾಡಬೇಕು' ಎಂದು ಹೇಳಿ, ಎಲ್ಲ ಕಾರ್ಯಗಳನ್ನೂ ಸಾಂಗವಾಗಿ ನಡೆಸಿದೆನು. ಕೊನೆಗೆ ಪತಿಯು ಮರವಿನಿಂದ ಈ ಪಿಂಡಗಳನ್ನು ಗಂಗೆಯಲ್ಲಿ ಬಿಸಾಟೆಂದನು. ಆ ಕೂಡಲೆ ನಾನು ಪಿಂಡಗಳನ್ನು ಯಂಜಲಿನ ಗುಂಡಿಯಲ್ಲಿ ಬಿಸುಟೆದೆನು. ಇದನ್ನು ನೋಡಿ ಪತಿಗೆ ಬಹಳ ಬೇಜಾ ರಾಯಿತು. ಬಳಿಕ ಆತನು ಮತ್ತೊಂದು ವಿವಾಹ ಮಾಡಿಕೊಳ್ಳಲು ಯೋಚಿಸಿದ ನು. ಇದು ನನಗೆ ತಡೆಯಲಿಲ್ಲ. ಆಗ ನಾನು ವಿಷವನ್ನು ಕುಡಿದು ಪ್ರಾಣಗಳನ್ನು ಬಿಟ್ಟೆನು. ಮುಂದೆ ನನ್ನನ್ನು ಯಮಪುರಿಗೆ ಕರೆದುಕೊಂಡು ಹೋದರು. ಅಲ್ಲಿ ನನ್ನ ವಿಚಾರಣೆಯು ನಡೆಯಿತು. ಆವಾಗ ಅಲ್ಲಿಯವರು—'ಯಮಪಟ್ಟಣವು ನಿರ್ಮಾಣವಾದಾಗಿನಿಂದ ಇಂಥ ಅಪರಾಧಿಯನ್ನು ನಾವು ಯಾರೂ ನೋಡಿರಲಿಲ್ಲ' ಯಂಬುವ ಮಾತು ಯಲ್ಲರ ಬಾಯಿಂದಲೂ ಬಂತು. ಬಳಿಕ ಚಿತ್ರಗುಪ್ತನು ನನ್ನ ಕ ರ್ಮಾನುಗುಣವಾಗಿ, ಮೊದಲು ನನ್ನನ್ನು ವಿಷ್ಠೆಯ ಹುಳಗಳ ಜಾತಿಗೆ ಸೂಕಿದನು. ಬಳಿಕ ಬೆಕ್ಕಾದೆನು. ಆ ಮೇಲೆ ನಾಯಿಯಾದೆನು. ಈಗ ಇಂಥ ಭಯಂಕರವಾದ ರೂಪವು ನನಗೆ ಬಂದಿರುವದು. ಇದರಲ್ಲಿಯ ಕಷ್ಟಗಳನ್ನು ಬಾಯಿಂದ ಹೇಳಲು

ಸಾಧ್ಯವಿಲ್ಲ. ಎಲೈ ಬ್ರಾಹ್ಮಣನೇ, ನನ್ನನ್ನು ಕಾಪಾಡು. ನಿನ್ನ ಕೈಯೊಳಗಿನ ಉದಕವನ್ನು ನಾನು ಮುಟ್ಟುವದರಿಂದ ನನಗೆ ಹಿಂದಿನ ಜನ್ಮದ ವಿಷಯುಗಳೆಲ್ಲ ಈಗ ನಡೆದಂತೆ ತೋರುತ್ತಿರುವವು. ದಯಾನಿಧಿಯೇ, ಬ್ರಾಹ್ಮಣೋತ್ತಮನೇ, ನನ್ನನ್ನು ಹೇಗಾದರೂ ಮಾಡಿ ಈ ಕ್ರೂರಜಾತಿಯಿಂದ ಉದ್ಧಾರಮಾಡು" ಯಂದು ಮತ್ತೆ ಮತ್ತೆ ಪ್ರಾರ್ಥಿಸಿದಳು. ಧರ್ಮದತ್ತನೂ 'ಈ ಕಲಹೆಯು ಈ ಜನ್ಮದಿಂದ ಹ್ಯಾಗೆ ಮುಕ್ತಳಾದಾಳು' ಯಂದು ಯೋಚಿಸುತ್ತಿದ್ದನು.

ಧರ್ಮದತ್ತನು ಆ ಕಲಹೆಯನ್ನು ಕುರಿತು "ಯಲೈ ತರುಣಿಯೇ, ತೀರ್ಥ ಯಾತ್ರೆಗಳು, ದಾನ-ಯಜ್ಞ-ತಪಸ್ಸುಗಳು ಇವುಗಳಿಂದ ಪಾಪನಾಶವಾಗುವದು. ಆದರೆ ನೀನು ಪಿಶಾಚಿಜನ್ಮದಲ್ಲಿರುವದರಿಂದ ಯಾವ ಈ ಅಧಿಕಾರಗಳೂ ನಿನಗಿಲ್ಲ. ನಿನ್ನ ದುಃಖವನ್ನು ನೋಡಿ ನನಗೆ ಬಹಳ ವ್ಯಸನವಾಗುವದು. ನಿನ್ನನ್ನು ಈ ದುಃಖದಿಂದ ಬಿಡಿಸಿದ ವಿನಹ ನನ್ನ ಮನಸ್ಸು ಸಮಾಧಾನ ಹೊಂದುವದಿಲ್ಲ. ನಿನ್ನ ಪಾಪರಾಶಿಯು ಬಹಳ ದೊಡ್ಡದು. ಅದು ಬಹಳ ದಿವಸಗಳಿಗೆ ಸವೆಯಬೇಕು. ಅಷ್ಟು ಕಾಲಹರಣವನ್ನು ನನ್ನ ಮನಸ್ಸು ತಡೆಯಲಾರದು. ಯಲೈ ಸ್ತ್ರೀಯೇ, ನಾನು ಬಹು ವರ್ಷಗಳಿಂದಲೂ ಕಾರ್ತಿಕ ವ್ರತವನ್ನು ನಿಯಮದಿಂದ ನಡಿಸಿಕೊಂಡು ಬಂದಿರುವೆನು. ಇದಕ್ಕಿಂತ ಶ್ರೇಷ್ಠವಾದ ವ್ರತವಾವದೂ ಇಲ್ಲ. ಇದರಿಂದ ನನಗೆ ಬಂದ ಪುಣ್ಯದಲ್ಲಿ ಅರ್ಧವನ್ನು ನಿನಗೆ ಕೊಡುವೆನು." ಯಂದು ತನ್ನ ಕೈಯಲ್ಲಿರುವ ತುಲಸೀಪತ್ರವನ್ನು ನೀರಿನೊಡನೆ ಆ ತರುಣಿಯ ಕೈಯಲ್ಲಿ ಹಾಕಿದನು. ಒಡನೆ ಆ ತರುಣಿಯು ದಿವ್ಯಸುಂದರವಾದ ಶರೀರವನ್ನು ಹೊಂದಿದಳು. ಆಕೆಗೆ ಬಹಳ ಸಂತೋಷವಾಯಿತು. ಮತ್ತು ಧರ್ಮದತ್ತನ ಪಾದಗಳನ್ನುಹಿಡಿದು ನಾನಾ ವಿಧವಾಗಿ ಸ್ತೋತ್ರಮಾಡಿದಳು. ಇಷ್ಟರಲ್ಲಿ ಆಕಾಶದಿಂದ ವಿಮಾನವು ಬಂತು. ಮತ್ತು ವಿಷ್ಣುದೂತರು ಆ ತರುಣಿಗೆ ನಮಸ್ಕರಿಸಿ, ವಿಷ್ಣುವಿನ ಅಪ್ಪಣೆಯನ್ನು ತಿಳಿಸಿ, ಆಕೆಯನ್ನು ವಿಮಾನದಲ್ಲಿ ಕುಳ್ಳಿರಿಸಿದರು. ಮತ್ತು ವಿಷ್ಣುದೂತರು ಧರ್ಮದತ್ತನನ್ನು ನೋಡಿ 'ಯಲೈ ಬ್ರಾಹ್ಮಣನೇ; ನೀನು ಮಾಡುವ ವಿಷ್ಣುವ್ರತದ ಮಹಿಮೆಯನ್ನು ನೋಡು! ಇದೇ ಪುಣ್ಯದಿಂದ ಯಷ್ಟೋ ಜನರು ಕೃತಕೃತ್ಯರಾಗಿ ವೈಕುಂಠದಲ್ಲಿ ವಾಸವಾಗಿರುವರು. ನೀನಾದರೂ ಮರಣಪರ್ಯಂತವೂ ಈ ವ್ರತವನ್ನು ತಪ್ಪದೆ ನಡೆಸು. ಅಂತಕಾಲದಲ್ಲಿ ನಾವೇ ಬಂದು ನಿನ್ನನ್ನು ವೈಕುಂಠಕ್ಕೆ ಕರೆದುಕೊಂಡು ಹೋಗುವೆವು. ಅಲ್ಲಿ ನೀನು ಅನೇಕ ಸಹಸ್ರವರ್ಷಗಳ ವರೆಗೂ ವಾಸವಾಗಿದ್ದು, ಮುಂದೆ ಸೂರ್ಯವಂಶದಲ್ಲಿ ರಾಜನಾಗಿ ಅವತರಿಸುವೆ. ಆ ಕಾಲ

ದಲ್ಲಿ ಈಗ ನಿನಗಿರುವ ಇಬ್ಬರು ಪತ್ನಿಯರು ಮಗಧ, ಕೋಸಲ ದೇಶಗಳ ರಾಜರ ಮಕ್ಕಳಾಗಿ ಹುಟ್ಟಿ, ನಿನ್ನನ್ನು ಹೊಂದುವರು. ಮತ್ತು ಯಾವ ತರುಣಿಯನ್ನು ನಿನ್ನ ಅರ್ಧ ಪುಣ್ಯದಿಂದ ಉದ್ಧರಿಸಿದೆಯೋ, ಈಕೆಯೇ ಮುಂದೆ ಕೈಕೇಯಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ನಿನ್ನ ಪಾಣಿಗ್ರಹಣ ಮಾಡುವಳು. ಮತ್ತು ನಿನ್ನ ಉದರದಲ್ಲಿ ಶ್ರೀಮನ್ನಾರಾಯಣನೇ ಮುಂದೆ ಅವತಾರ ಮಾಡುವನು.” ಎಂದು ಹೇಳಿ, ಆ ತರುಣಿಯನ್ನು ಕರೆದುಕೊಂಡು ಸ್ವಸ್ಥಾನಕ್ಕೆ ತೆರಳಿದರು. ಎಲೈ ದಶರಥನೇ, ನಿನ್ನ ಪೂರ್ವಜನ್ಮದ ಇತಿಹಾಸವು ಹೀಗಿರುವದು. ನಿನ್ನ ಮಗನಾದ ರಾಮನೇ ಶ್ರೀ ಮಹಾವಿಷ್ಣುವು; ಲಕ್ಷ್ಮಣನೇ ಆದಿಶೇಷನು; ಭರತ-ಶತ್ರುಘ್ನರು ಮಹಾವಿಷ್ಣುವಿನ ಶಂಖ-ಚಕ್ರಗಳು. ಬಹಳ ಗೋಪ್ಯವಾದ ಈ ವಿಷಯವನ್ನು ನಿನಗೆ ತಿಳುಹಿರುವೆನು. ಪ್ರಕಟಮಾಡಲಾಗದು. ಎಂದು ದಶರಥಮಹಾರಾಜನಿಗೆ ಹೇಳಿ ಪ್ರಯಾಣಮಾಡಲು ಅನುಜ್ಞೆಮಾಡಿದರು ಮಹಾರಾಜನೂ ಋಷಿಗಳ ಆಶೀರ್ವಚನವನ್ನು ಹೊಂದಿ ಪುತ್ರ-ಮಿತ್ರರಿಂದೊಡಗೂಡಿ ಅಯೋಧ್ಯೆಯನ್ನು ಸೇರಿದನು.

ಬಳಿಕ ಅಯೋಧ್ಯೆಯಲ್ಲಿ ಶ್ರೀ ರಾಮಾದಿಗಳು ತಾಯಿ-ತಂದೆಗಳ ಸೇವೆಯನ್ನು ನಿಯಮದಿಂದ ನಡೆಸುತ್ತಾ, ತಮ್ಮ ತಮ್ಮ ಪತ್ನಿಯರೊಡನೆ ಪರಮ ಸುಖವನ್ನನುಭವಿಸುತ್ತಿದ್ದರು. ಅಪ್ರಬುದ್ಧರಾಗಿದ್ದರೂ ನೀತಿವಂತರೂ, ಕುಶಲರೂ ಆಗಿರುವ ಮಕ್ಕಳನ್ನು ನೋಡಿ ದಶರಥಮಹಾರಾಜನು ಬಹಳ ಹರ್ಷಹೊಂದಿದನು. ಶ್ರೀ ರಾಮನು ಅನೇಕ ರಾಜಕಾರ್ಯಗಳನ್ನು ತಂದೆಯ ಅಪ್ಪಣೆಯಂತೆ ತಾನೇ ನಡೆಸುವನು. ಈ ರೀತಿಯಾಗಿ ಕೆಲವು ಕಾಲಕಳೆಯಲು, ದಶರಥನು ತನ್ನ ಜ್ಯೇಷ್ಠಪುತ್ರನಾದ ಶ್ರೀ ರಾಮನನ್ನು ಏಕಾಂತಸ್ಥಾನಕ್ಕೆ ಕರೆಸಿದನು. ಅಪ್ಪಣೆಯಂತೆ ಬಂದ ಅತಿವಿನೀತನಾದ ರಾಮಚಂದ್ರನನ್ನು ನೋಡಿ, ದಶರಥನು—“ಎಲೈ ರಾಮಚಂದ್ರನೇ, ನೀನು ವೈಕುಂಠವಾಸಿಯಾದ ನಾರಾಯಣನಾಗಿರುವೆ. ಅವಿವೇಕಿಗಳಾದ ಜನರು ನಿನ್ನನ್ನು ನನ್ನ ಉದರದಲ್ಲಿ ಹುಟ್ಟಿರುವನೆಂದು ಹೇಳುವರು. ನಾಶರಹಿತನಾದ ನಿನಗೆ ಉತ್ಪತ್ತಿ ಎಲ್ಲಿಯದು? ಅಜ್ಞಾನಿಯಾದ ಈ ನನಗೆ ನಿನ್ನ ಸ್ವರೂಪವನ್ನು ತಿಳಿಸುವವನಾಗು” ಎಂದು ಪ್ರಶ್ನೆಮಾಡಿದನು.

ಆಗ ಶ್ರೀ ರಾಮನು—“ತಂದೆಯೇ, ತಮಗೆ ಈಗ ಶ್ರೇಷ್ಠವಾದ ಜ್ಞಾನಮಾರ್ಗವನ್ನು ಹೇಳುವೆನು. ಸಾವಧಾನಮನಸ್ಕರಾಗಿ ಕೇಳಬೇಕು. ನಮ್ಮ ತಾಯಿಯರೂ ಕೂಡ ಸಮಾಧಾನಚಿತ್ತರಾಗಿ ಕೇಳತಕ್ಕದ್ದು. ನನ್ನ ಮಾಯೆಯಿಂದ ನಿರ್ಮಿತವಾದ ಈ ಜಗವು ನಾಶಹೊಂದತಕ್ಕದ್ದು. ಯಾವ ವಸ್ತುವನ್ನು ನಾವು ಕಲ್ಪಿಸುವ

ವೆಷ್ಟೋ, ಅದು ನಾಶ ಹೊಂದುವದೇ ಹೊರತು ಯಾವಾಗಲೂ ಇರತಕ್ಕದ್ದಲ್ಲವೆಂಬದು ಎಲ್ಲರಿಗೂ ತಿಳಿದ ವಿಷಯವೇ ಅಲ್ಲವೆ? ನೋಡಿರಿ, ಒಂದು ಹಗ್ಗವನ್ನು ನೋಡಿ ಅದಕ್ಕೆ ಸರ್ಪವೆಂದು ಹೆಸರಿಟ್ಟರೆ, ಎಷ್ಟುಹೊತ್ತಿನ ವರೆಗೂ ಅದು ಸರ್ಪವಾಗಿದ್ದೀತು? ಹಗ್ಗವೆಂದು ತಿಳಿದಮೇಲೆ ಅದು ಹಾವಾದೀತೇ ಹ್ಯಾಗೆ? ಅದರಂತೆಯೇ ಅಜ್ಞಾನದಿಂದ ಭಾಸಮಾನವಾದ ಈ ಜಗತ್ತನ್ನು ವಿವೇಕದಿಂದ ವಿಚಾರಿಸಲು, ನಿಜಸ್ವರೂಪವು ಗೊತ್ತಾಗುವದು. ಆ ಮೇಲೆ ಮೋಹವು ಹ್ಯಾಗೆ ಉಳಿಯಬೇಕು? ಎಂದಿಗೂ ಉಳಿಯಲಾರದು. ಈ ಸಮಸ್ತ ಜಗತ್ತುಗಳೂ ಸಾಕ್ಷಾತ್ಪರಬ್ರಹ್ಮನಲ್ಲಿ ಭಾಸಮಾನವಾಗಿವೆ. ಅಧಿಷ್ಠಾನವು ಯಾವಾಗಲೂ ಸತ್ಯವೆಂದೇ ಹೇಳಬೇಕು. ಹಗ್ಗದಲ್ಲಿ ಭಾಸಮಾನವಾದ ಹಾವಿಗೆ ಹಗ್ಗವೇ ಅಧಿಷ್ಠಾನವಲ್ಲವೇ? ಅದು ಹೇಗೆ ಸತ್ಯವೋ, ಅದರಂತೆಯೇ ಜಗತ್ತಿಗೆ ಆಧಾರವಾದ ಬ್ರಹ್ಮನೂ ಸತ್ಯವಾದ ವಸ್ತು. ಆತನು ನಿತ್ಯನು, ಯಾವಾಗಲೂ ಪರಿಶುದ್ಧನು, ಸ್ವತಂತ್ರನು, ಸ್ವಯಂಪ್ರಕಾಶನು. ಅಂಥಾ ಪರಬ್ರಹ್ಮನೇ ಬ್ರಹ್ಮ-ವಿಷ್ಣು-ಮಹೇಶ್ವರ ರೂಪಗಳಿಂದ ಸೃಷ್ಟಿ-ಸ್ಥಿತಿ-ಲಯಗಳನ್ನು ನಡೆಸುತ್ತಾನೆ. ಆತನೇ ಸಚ್ಚಿದಾನಂದ ರೂಪನು. ಆತನ ಸತ್ವದಿಂದಲೇ ನಾವೆಲ್ಲರೂ ವ್ಯವಹಾರ ಮಾಡುವೆವು. ಆ ಪ್ರಭುವಿನ ಮಾಯೆಯೇ ಜಗತ್ತನ್ನೆಲ್ಲಾ ವ್ಯಾಪಿಸುವದು. ಸದ್ಗುರು ಕೃಪೆಯಿಂದ ಆತ್ಮಜ್ಞಾನವಾಯಿತೆಂದರೆ, ಸಮಸ್ತ ಬಂಧನಗಳೂ ದೂರವಾಗುವವು. ಅಂಥಾ ಜ್ಞಾನಿಯಾದ ಪುರುಷನಿಗೆ ಜಗತ್ತಿನಲ್ಲಿ ತಿಳಿಯತಕ್ಕ ಬೇರೆ ವಿಷಯಗಳು ಯಾವವೂ ಉಳಿಯುವದಿಲ್ಲ. ಪ್ರಾಣಿಗಳು ಅನೇಕ ಜನ್ಮಗಳನ್ನು ಹೊಂದಿದರೂ ಅವರು ಪ್ರಕೃತಿಗುಣಗಳಿಂದ ಬದ್ಧರಾಗಿ ನಿಜ ಸ್ವರೂಪವನ್ನು ತಿಳಿಯಲಾರರು. ಅದ್ದರಿಂದ ಮೊದಲು ಸದ್ಗುರುವಿಗೆ ಶರಣುಹೋಗಬೇಕು. ಆತನೇ ಮುಮುಕ್ಷುಗಳಿಗೆ ಜ್ಞಾನಪ್ರದನು. ಆತನ ಬೋಧದಿಂದ ಚಿತ್ತಶುದ್ಧಿಯಾದ ಬಳಿಕ ಆತ್ಮಜ್ಞಾನವು ತಾನೇ ವ್ಯಕ್ತವಾಗುವದು. ಒಂದು ಸಾರೆ ಹೀಗೆ ಜ್ಞಾನವಾಯಿತೆಂದರೆ, ಮುಂದೆ ಯಾವಾಗಲೂ ಅದಕ್ಕೆ ಬಾಧಕವಿಲ್ಲ. ಸತ್ಯ, ಜ್ಞಾನ, ಕ್ಷಮಾ, ಧೈರ್ಯ, ಭೂತದಯೆ, ಇಂದ್ರಿಯನಿಗ್ರಹ, ಭಗವದ್ಭಕ್ತಿ ಇವುಗಳು ಶರೀರದಲ್ಲಿ ಹೆಚ್ಚಿದಂತೆ ಆತ್ಮಜ್ಞಾನವು ದೃಢವಾಗುತ್ತದೆ. ಅದಕಾರಣ ಈ ಗುಣಗಳನ್ನು ನಾವು ಅತ್ಯಾದರದಿಂದ ಸ್ವೀಕಾರ ಮಾಡಬೇಕು. ಮತ್ತು ಚೌರ್ಯ, ದ್ಯೂತ, ಪರದೂಷಣೆ, ಮತ್ಸರ, ದಂಭ, ಕ್ರೌರ್ಯ, ಪರಹಿಂಸೆ, ಲೋಭ, ನಿಂದ್ಯವಾದ ಆಚರಣೆ, ವೇದದ್ವೇಷ, ಸತ್ಪುರುಷರ ತಿರಸ್ಕಾರ, ಕ್ಷುಲ್ಲಕತನ, ಇವೇ ಮೊದಲಾದ ತಾಮಸ ವೃತ್ತಿಗಳನ್ನು

ತ್ಯಾಗಮಾಡಬೇಕು. ಸಂಕಟಕಾಲದಲ್ಲಿ ಧೈರ್ಯವನ್ನು ಹೊಂದಬೇಕು. ಧೈರ್ಯದಿಂದಲೇ ಸಮಸ್ತಕಾರ್ಯಗಳು ಪೂರ್ಣವಾಗುವವು. ತಂದೆಯೇ, ನಿನ್ನ ಪೂರ್ವಜನ್ಮದ ತಪಸ್ಸಿಗೆ ಮೆಚ್ಚಿ, ಈಗ ನಿಮ್ಮ ಮಗನಾಗಿ ನಾನು ಅವತರಿಸಿರುವೆನು. ನನ್ನ ಈ ನಿಜಸ್ವರೂಪವನ್ನು ಯಾರಿಗೂ ತಿಳಿಸಬಾರದು" ಎಂದು ಹೇಳಿದನು.

ಬಳಿಕ ದಶರಥಮಹಾರಾಜನು ಮಗನಾದ ಶ್ರೀ ರಾಮಚಂದ್ರನ ಪಾದಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿದನು. ಇದು ಶ್ರೀರಾಮನಿಗೆ ಸಹನವಾಗಲಿಲ್ಲ. ಆಗ ರಾಮನು ತಂದೆಯನ್ನು ನೋಡಿ "ಪೂಜ್ಯರಾದ ಅಪ್ಪಾಜಿಯವರೆ, ತಾವು ನಮಸ್ಕಾರಮಾಡುವದು ನನಗೆ ಶ್ರೇಯಸ್ಕರವಲ್ಲ. ನಾನು ಈಗ ಮಾನುಷಿಯ ಗುಣಗಳಿಂದ ಕೂಡಿ ಶರೀರ ಧಾರಣ ಮಾಡಿರುವೆನು. ಈ ಶರೀರವು ಈಗ ಬಾಲ್ಯವಾಗಿದೆ. ತಾವು ನನಗೆ ವಂದ್ಯರು. ಆದ್ದರಿಂದ ತಾವು ನನಗೆ ನಮಸ್ಕಾರಮಾಡಬಾರದು" ಎಂದು ಅತಿ ವಿನಯದಿಂದ ಪ್ರಾರ್ಥನೆ ಮಾಡಿದನು. ಈ ಮಾತುಗಳನ್ನು ಕೇಳಿ ಕೌಸಲ್ಯೆಯೇ ಮೊದಲಾದ ಸಮಸ್ತರಿಗೂ ಪರಮಹರ್ಷವಾಯಿತು. ಅವರು ರಾಮನಲ್ಲಿರುವ ಪಿತೃಭಕ್ತಿಯನ್ನು ಕೊಂಡಾಡಿದರು. ಮುಂದೆ ಕೆಲವು ದಿವಸಗಳ ವರೆಗೆ ತಮ್ಮಂದಿರೊಡನೆ ಶ್ರೀರಾಮನು ಪರಮ ಸೌಖ್ಯವನ್ನನುಭವಿಸಿದನು. ಆ ಕಾಲದಲ್ಲಿ ಭೂಮಂಡಲವೆಲ್ಲವೂ ಮಳೆ—ಬೆಳೆಗಳಿಂದ ಪೂರ್ಣತೆಯನ್ನು ಹೊಂದಿತು.

---

## ೧೨ನೆಯ ಪ್ರಕರಣ.

---

### ವನವಾಸ.

ಈರೀತಿ ಶ್ರೀರಾಮನು ಅಯೋಧ್ಯೆಯಲ್ಲಿ ಸೀತಾಸಮೇತನಾಗಿ ರಾಜಸುಖವನ್ನನುಭವಿಸುತ್ತಿರಲು, ಒಂದಾನೊಂದು ದಿವಸ ನಾರದರು ಶ್ರೀರಾಮನನ್ನು ಕಾಣಲು ಆಕಾಶಮಾರ್ಗದಿಂದ ಬಂದರು. ಆ ದಿವಸ ರವಿವಾರವಾಗಿತ್ತು. ಶ್ರೀ ರಾಮನು ಆದೇ ಸೂರ್ಯೋಪಾಸನೆ ಮಾಡಿ, ವಿಶ್ರಾಂತಿಗಾಗಿ ಕುಳಿತಿದ್ದನು. ಎದುರಾಗಿ ಬರುತ್ತಿರುವ ಭಗವದ್ಭಕ್ತ ಶಿರೋಮಣಿಗಳಾದ ನಾರದಮಹರ್ಷಿಗಳನ್ನು ನೋಡಿ

ಆತನು ಥಟ್ಟನೆ ಎದ್ದು, ಎದುರಾಗಿ ಹೋಗಿ ನಮಸ್ಕರಿಸಿ, ಅವನನ್ನು ಒಳಗೆ ಕರೆ ತಂದು ಉಚಿತವಾದ ಆಸನದಲ್ಲಿ ಕುಳ್ಳಿರಿಸಿದನು. ಮತ್ತು ಅರ್ಘ್ಯಪಾದ್ಯಾದಿ ಪೂಜಾ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು, ನಾರದನನ್ನು ಪೂಜಿಸಿ ಕೈ ಜೋಡಿಸಿಕೊಂಡು, "ಮಹನೀಯರೇ, ತಮ್ಮ ದರ್ಶನವಾದ ದಿವಸವೇ ಉತ್ತಮವಾದದ್ದು. ಈದಿವಸ ನನ್ನ ಉಪಾಸ್ಯದೇವತೆಯೇ ನನಗೆ ಪ್ರಸನ್ನವಾದಂತಾಯಿತು. ತಾವು ಇಷ್ಟು ದೂರ ಸೇವಕನಲ್ಲಿಗೆ ದಯಮಾಡಿಸಿದ ಕಾರಣವೇನು" ಎಂದನು. ಆಗ ನಾರದರು "ರಾಮಚಂದ್ರನೇ, ನಿನಗೆ ಕೆಲವು ಗುಟ್ಟಿನಮಾತುಗಳನ್ನು ಹೇಳಬೇಕಾಗಿದೆ. ಸಾವಧಾನವಾಗಿ ಕೇಳು" ಎಂದು ಹೇಳಿದರು. ಬಳಿಕ ಶ್ರೀರಾಮನು ನಾರದನನ್ನು ಏಕಾಂತಾಗಾರಕ್ಕೆ ಕರೆದುಕೊಂಡು ಹೋದನು. ಅಲ್ಲಿ ಉಚಿತವಾದ ಆಸನಗಳಲ್ಲಿ ಇಬ್ಬರೂ ಕುಳಿತರು. ಬಳಿಕ ನಾರದರು ಶ್ರೀ ರಾಮನನ್ನು ಕುರಿತು "ಎಲೈ ನಾರಾಯಣನೇ, ಜಗಜ್ಜೀವನನೇ, ನೀನು ದೇವತೆಗಳ ಹಾಗೂ ಭೂದೇವಿಯ ಕಷ್ಟಗಳನ್ನು ನಿವಾರಣೆಮಾಡುವದಕ್ಕಲ್ಲವೇ ಇಲ್ಲಿ ಅವತಾರಮಾಡಿದ್ದು? ಅಂಥ ಉದ್ದೇಶವನ್ನು ಮರೆತು, ಇದೇನು ಮಾಡುತ್ತ ಕುಳಿತಿರುವೆ? ವಿಷಯಲೋಲುಪನಾಗಿ ನರಪಶುಗಳಂತೆ ಸ್ತಬ್ಧನಾಗಿರುವೆಯಲ್ಲ! ವಿಷಯಸಂಸರ್ಗವು ಬಹಳಕೆಟ್ಟದ್ದಲ್ಲವೆ? ಏಳು. ಇನ್ನು ತಡಮಾಡಬೇಡ. ರಾವಣನ ಪೀಡೆಯು ದೇವತೆಗಳಿಗೆ ಸಹಿಸದಂತಾಗಿರುವದು. ನಿನ್ನ ಕರ್ತವ್ಯವನ್ನು ನೆರವೇರಿಸಿ ಭಕ್ತವತ್ಸಲನೆಂಬ ಹೆಸರನ್ನು ಕಾಪಾಡಿಕೋ" ಎಂದು ಮಾತನಾಡಿದನು. ಬಳಿಕ ಶ್ರೀ ರಾಮನು "ಇನ್ನು ಸ್ವಲ್ಪದಿವಸಗಳಲ್ಲೇ ದಂಡಕಾರಣ್ಯಕ್ಕೆ ಹೊರಡತಕ್ಕವನಾಗಿದ್ದೇನೆ, ಯಾರೂ ಭಯಪಡಬಾರದು. ನಾನು ಆ ಉದ್ದೇಶವನ್ನು ಎಂದಿಗೂ ಮರೆತಿಲ್ಲ. ಈ ನನ್ನ ವಚನಗಳನ್ನು ಸಮಸ್ತದೇವತೆಗಳಿಗೂ ತಿಳಿಸಿರಿ" ಎಂದು ನಾರದರಿಗೆ ಅರಿಕೆ ಮಾಡಿದನು. ಅನಂತರ ನಾರದರು ಶ್ರೀರಾಮನ ಅಪ್ಪಣೆಯನ್ನು ಹೊಂದಿ, ಪರಮ ಸಂತೋಷದಿಂದ ಹರಿನಾಮ ಗಾಯನ ಮಾಡುತ್ತ ಪ್ರಯಾಣ ಮಾಡಿದರು.

ಅಷ್ಟರಲ್ಲಿ ಕೇಕಯರಾಜನ ದೂತರು ಭರತ—ಶತ್ರುಘ್ನರನ್ನು ಕರಿಯಲೋಸುಗ ಅಯೋಧ್ಯೆಗೆ ಬಂದರು. ಆಗ ಭರತನೂ ತಂದೆಯ ಅನುಮತಿಯನ್ನು ಪಡೆದು, ಶತ್ರುಘ್ನನೊಡನೆ ಸೋದರಮಾವನ ಪಟ್ಟಣಕ್ಕೆ ಪ್ರಯಾಣ ಮಾಡಿದನು. ಹಿಂದೆ ದಶರಥನು ಒಂದಾನೊಂದು ದಿವಸ ಮಂತ್ರಿ—ಪುರೋಹಿತರಿಂದೊಡಗೂಡಿ ಕುಳಿತಿರುವಾಗ "ಜ್ಯೇಷ್ಠಪುತ್ರನಾದ ಶ್ರೀರಾಮನಿಗೆ ರಾಜ್ಯಾಭಿಷೇಕ ಮಾಡಬೇಕು" ಎಂಬ ವಿಚಾರವನ್ನು ತೆಗೆದನು. ಆಗ ಸುಮಂತ್ರನೇ ಮೊದಲಾದ ಮಂತ್ರಿಗಳೂ,

ಪ್ರಜೆಗಳೂ ಆ ಮಾತಿಗೆ ತಮ್ಮ ಸಮ್ಮತಿಯನ್ನಿತ್ತರು. ಬಳಿಕ ಕುಲಪುರೋಹಿತರಾದ ವಸಿಷ್ಠರು ನಾಳಿನದಿವಸವೇ ಶ್ರೇಷ್ಠವಾದ ಮುಹೂರ್ತವಿರುವದೆಂದು ದಶರಥಮಹಾರಾಜನಿಗೆ ತಿಳುಹಿದರು ಅನಂತರ ಮಹಾರಾಜನ ಅಪ್ಪಣೆಯಂತೆ ರಾಜ್ಯಾಭಿಷೇಕದ ಸಮಸ್ತ ಸಂಭಾರಗಳನ್ನೂ ಸಿದ್ಧಪಡಿಸುವ ಪ್ರಯತ್ನ ನಡೆಯಿತು. ಈ ವರ್ತಮಾನವು ಶ್ರೀ ರಾಮನಿಗೆ ಆ ದಿವಸ ರಾತ್ರಿ ತಿಳಿಯಿತು. ಶ್ರೀ ರಾಮನು ಏಕಾಂತಗೃಹದಲ್ಲಿ ಸೀತಾದೇವಿಯನ್ನು ಕುರಿತು "ಜಾನಕಿಯೇ, ನಾಳಿನ ದಿವಸ ನನಗೆ ರಾಜ್ಯಾಭಿಷೇಕವನ್ನು ಮಾಡಲು ನನ್ನ ತಂದೆಯು ನಿಶ್ಚಯಿಸಿರುವನು. ಆದರೆ ಆ ಕೆಲಸವು ನಡೆಯುವದಿಲ್ಲ. ಕೈಕೇಯಿಯ ನಿರ್ಬಂಧದಿಂದ ದಶರಥಮಹಾರಾಜನು ಹದಿನಾಲ್ಕು ವರ್ಷಗಳ ವರೆಗೂ ವನವಾಸಮಾಡುವಂತೆ ನನಗೆ ಅಪ್ಪಣೆ ಮಾಡುವನು. ನಾನು ವನವಾಸವನ್ನು ಮುಗಿಸಿಕೊಂಡು ಬರುವ ವರೆಗೂ ನೀನು ಇಲ್ಲಿಯೇ ಗುರುಹಿರಿಯರನ್ನನುಸರಿಸಿಕೊಂಡು ವಾಸಮಾಡು" ಎಂದನು.

ಈ ಮಾತುಗಳನ್ನು ಕೇಳಿ, ಜಾನಕಿಯು "ರಘುನಾಥನೇ, ನಿನ್ನನ್ನು ಬಿಟ್ಟು ನಾನು ಒಂದು ಗಳಿಗೆಯಾದರೂ ಇಲ್ಲಿ ವಾಸಮಾಡಲಾರೆನು. ನಿನ್ನ ಜೊತೆಯಲ್ಲಿರುವದೇ ನನಗೆ ಪ್ರಿಯಕರವು. ನನಗೆ ನೀನಿಲ್ಲದ ಅರಮನೆಯು ಅರಣ್ಯದಂತೆ ಕಾಣುವದು. ಪತಿವ್ರತೆಯರಿಗೆ ಪತಿಸೇವೆಯೇ ಪರಮಪಾವನವು. ಅದಲ್ಲದೆ ನನ್ನ ವಿವಾಹಕಾಲದಲ್ಲಿ ನೀನೇ ನನಗೆ ಪತಿಯಾದರೆ, ಹದಿನಾಲ್ಕು ವರ್ಷಗಳು ಋಷಿಗಳಂತೆ ವನವಾಸಮಾಡುವೆನೆಂದು ದೇವತೆಗಳಿಗೆ ಬೇಡಿಕೊಂಡಿರುವೆನು. ಒಬ್ಬ ಮಹನೀಯರು ನನ್ನ ಹಸ್ತವನ್ನು ನೋಡಿ, ನೀನು ಹದಿನಾಲ್ಕು ವರ್ಷಗಳು ವನವಾಸ ಮಾಡಬೇಕಾದ ಸಂದರ್ಭವಿರುವದೆಂದು ಹೇಳಿರುವರು. ನಾನು ತಂದೆಯ ಮನೆಯಲ್ಲಿರುವಾಗ ವಾಲ್ಮೀಕಿಗಳಿಂದ ರಚಿತವಾದ ರಾಮಾಯಣದಲ್ಲಿ ಸೀತೆಯು ರಾಮನೊಡನೆ ಹದಿನಾಲ್ಕುವರ್ಷಗಳು ವನವಾಸ ಮಾಡುವಳೆಂದು ಓದಿದಂತೆ ಜ್ಞಾಪಕವಿದೆ. ಪ್ರಭೋ, ಖಂಡಿತ ನನ್ನನ್ನು ಬಿಟ್ಟು ಅರಣ್ಯಕ್ಕೆ ತಾವು ಪ್ರಯಾಣಮಾಡಲಾಗದು. ನಿಶ್ಚಯವಾಗಿ ಕರೆದುಕೊಂಡು ಹೋಗುವೆನೆಂದು ವಾಗ್ದಾನ ಕೊಡಿರಿ. ಇಲ್ಲವಾದರೆ ನಾನು ಪ್ರಾಣಗಳನ್ನಿಟ್ಟುಕೊಂಡಿರುವದಿಲ್ಲ" ಎಂದಳು. ಜಾನಕಿಯ ಈ ಮಾತುಗಳನ್ನು ಕೇಳಿ ಶ್ರೀ ರಾಮನು ಪರಮಹರ್ಷದಿಂದ ಸೀತಾದೇವಿಗೆ 'ನಿನ್ನನ್ನು ಅರಣ್ಯಕ್ಕೆ ಕರೆದುಕೊಂಡು ಹೋಗುವೆನು' ಎಂದು ಅಭಯವನ್ನಿತ್ತನು.

ಬೆಳಗಾಗಲು, ಶ್ರೀ ರಾಮನ ಪಟ್ಟಾಭಿಷೇಕವು ಮುಹೂರ್ತಕ್ಕೆ ಸರಿಯಾಗಿ ಆಗಬೇಕೆಂದು ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನೇ ಮಾಡುವದರಲ್ಲಿ ತೊಡಗಿ

ದವು. ಅಭಿಷೇಕ ಸಾಮಗ್ರಿಗಳು ಸಿದ್ಧವಾದವು. ವಸಿಷ್ಠರೂ ಉಳಿದ ಋತ್ವಿಜರೂ ಪಟ್ಟಾಭಿಷೇಕ ಮುಹೂರ್ತವನ್ನು ನಿರೀಕ್ಷಿಸುತ್ತಿದ್ದರು. ಅಷ್ಟರಲ್ಲಿ ಮಹಾವಿಷ್ಣುವಿನ ಅಪ್ಪಣೆಯಂತೆ ಅಲ್ಲಿ ಅವತರಿಸಿದ್ದ ಮಂಥರೆಯು ನನ್ನ ಕರ್ತವ್ಯದ ಸಮಯವು ಒದಗಿತೆಂದು ಕೈಕೇಯಿಗೆ ದುರ್ಬೋಧನೆಗಳನ್ನು ತುಂಬಿದಳು. ಆದರೂ ಕೈಕೇಯಿಯು—'ಮಂಥರೆಯೇ, ನನಗೆ ಭರತನಿಗಿಂತಲೂ ರಾಮನಲ್ಲಿಯೇ ಬಹಳ ವಿಶ್ವಾಸವಿರುವದು. ಈ ಮಂಗಳ ಕಾರ್ಯಗಳಲ್ಲಿ ನಾನೇಕೆ ತೊಂದರೆ ಕೊಡಲಿ' ಎಂದಳು. ಆ ಮಾತನ್ನು ಕೇಳಿ, ಮಂಥರೆಯು, "ಸಖಿಯೇ, ನಿನಗೇನು ತಿಳಿಯುವದು! ಇನ್ನೂ ಹುಡಿಗಿ. ನಿನ್ನಂತೆಯೇ ಲೋಕವೆಲ್ಲ ಇರುವದೆಂದು ತಿಳಿದಿರುವೆ. ಮುಂದೆ ನೀನು ಕಡ್ಡಿಯು ಕಸಕ್ಕಿಂತಲೂ ಕಡೆಯಾಗುವೆ. ರಾಮನಿಗೆ ಪಟ್ಟಾಭಿಷೇಕವಾದರೆ ಕೌಸಲ್ಯೆಯೇ ರಾಜಮಾತಾಯಿ. ಸೀತಾದೇವಿಯೇ ಪಟ್ಟದ ರಾಣಿ. ಅವರು ನಿನ್ನನ್ನು ಲಕ್ಷ್ಯಮಾಡುವರೇ ? ಎಂದಿಗೂ ಇಲ್ಲ. ದಶರಥನು ನನ್ನಲ್ಲಿ ಪರಮ ವಿಶ್ವಾಸವುಳ್ಳವನೆಂದು ತಿಳಿದಿರುವೆಯೋ! ಹಾಗೆ ಎಂದಿಗೂ ತಿಳಿಯಬೇಡ. ಈಗಲೇ ನೋಡು. ನಿನ್ನಲ್ಲಿ ದಶರಥನಿಗಿರುವ ಪ್ರೇಮವು ಮಿಕ್ಕ ಇಬ್ಬರು ಪತ್ನಿಯರಲ್ಲಿಲ್ಲ. ನೀನು ಎಲ್ಲರಿಗಿಂತಲೂ ಸೌಂದರ್ಯವತಿಯೂ, ನವಯೌವನಸಂಪನ್ನಳೂ ಆದ್ದರಿಂದಲೇ ಅಲ್ಲವೇ ದಶರಥನು ಇಷ್ಟು ವಿಶ್ವಾಸಮಾಡುವದು? ಮುಂದೆ ಬರಬರುತ್ತ ನಿನಗೆ ವಯಸ್ಸು ಹೆಚ್ಚುವದೇ ಹೊರತು ಕಡಿಮೆಯಾಗದು. ಆಗ ಎಂದಿಗೂ ದಶರಥನು ನಿನ್ನಲ್ಲಿ ಇಷ್ಟು ವಿಶ್ವಾಸವನ್ನಿಡಲಾರನು. ಅದಕ್ಕೆ ಕೌಸಲ್ಯಾ-ಸುಮಿತ್ರೆಯರೇ ಸಾಕ್ಷಿಯಾಗಿರುವರು. ಎಲೈ ಮುಗ್ಧೆಯೇ, ವಿಚಾರಮಾಡು. ಮೋಸ ಹೋಗಬೇಡ. ಅದೇ ನೀನು ರಾಜಮಾತೆಯಾದೆಯೆಂದರೆ, ಎಲ್ಲರೂ ನಿನ್ನ ದಾಸಾನುದಾಸರಾಗುವರು. ನೀನು ಈಗ ನನ್ನ ಮಾತಗಳನ್ನು ಕೇಳದಿದ್ದರೆ, ಖಂಡಿತ ನಿನ್ನ ಪರಿಣಾಮವು ಬಹಳ ಶೋಚನಿಯವಾಗುವದು. ಈ ನನ್ನ ಮಾತನ್ನು ಸೆರಗಿನಲ್ಲಿ ಗಂಟುಹಾಕಿಕೊಂಡು ನೆನಪಿನಲ್ಲಿಡು" ಎಂದು ಕ್ರೂರರೀತಿಯಿಂದ ಕೈಕೇಯಿಯನ್ನು ಬೋಧಿಸಿದಳು. ಕೈಕೇಯಿಗಾದರೂ ಕಾಲಾನುಗುಣವಾಗಿ ಹಾಗೆಯೇ ಮಾಡಬೇಕೆಂದು ತೋಚಿತು. ಆಗ ರಾಜಪತ್ನಿಯಾದ ಕೈಕೇಯಿಯು ಮಂಥರೆಗೆ—"ಮಂಥರೆಯೇ, ನೀನು ಹೇಳುವ ಮಾತುಗಳು ಯುಕ್ತವಾದವುಗಳೇ ಸರಿ. ಆದರೆ ದಶರಥಮಹಾರಾಜನು ಈ ಮಾತುಗಳನ್ನು ಹ್ಯಾಗೆ ನೆರವೇರಿಸುವನೋ ತಿಳಿಯದು," ಎಂದಳು. ಬಳಿಕ ಮಂಥರೆಯು—"ಪ್ರಿಯಸಖೀ, ದೇವಾಸುರರ ಯುದ್ಧದಲ್ಲಿ ಪತಿಯು ಎರಡು ವರಗಳನ್ನು ನನಗೆ ಕೊಟ್ಟಿರುವನೆಂದು

ಹೇಳುತ್ತಿದ್ದೆಯಲ್ಲ! ಅದನ್ನು ಮರೆತೆಯಾ ಹ್ಯಾಗೆ? ಎಂದು ನೆನಪು ಮಾಡಿಕೊಟ್ಟಳು.

ಮಂಥರೆಯ ಈ ಮಾತು ಕೈಕೇಯಿಗೂ ಸರಿಯಾದ ಉಪಾಯವೆಂದು ತೋರಿತು. ಬಳಿಕ ಕೈಕೇಯಿಯು ದಶರಥನ ಸನ್ನಿಧಿಗೆ ಹೋಗಿ 'ಮಹಾರಾಜನೇ, ಪೂರ್ವದಲ್ಲಿ ನನಗೆ ಎರಡು ವರಗಳನ್ನು ಕೊಡುತ್ತೇನೆಂದು ಹೇಳಿದ್ದೆಯಷ್ಟೇ. ಅವುಗಳಲ್ಲಿ ಒಂದರಿಂದ ಭರತನಿಗೆ ರಾಜ್ಯಾಭಿಷೇಕ ಮಾಡು. ಮತ್ತೊಂದರ ಸಲುವಾಗಿ ಶ್ರೀ ರಾಮನನ್ನು ಹದಿನಾಲ್ಕು ವರ್ಷಗಳ ವರೆಗೆ ಅರಣ್ಯದಲ್ಲಿ ವಾಸಮಾಡುವಂತೆ ಆಜ್ಞಾಪಿಸು," ಎಂದಳು. ಈ ಮಾತುಗಳನ್ನು ಕೇಳಿ ದಶರಥನು ಮೂರ್ಛಿತನಾದನು. ಆ ಕಾಲಕ್ಕೆ ಸರಿಯಾಗಿಯೇ ಶ್ರೀ ರಾಮನು ತಂದೆಯ ದರ್ಶನಕ್ಕಾಗಿ ಬಂದನು. ಆತನು ತಂದೆಯ ಈ ಸ್ಥಿತಿಯನ್ನು ನೋಡಿ, ಕಾರಣವೇನೆಂದು ತಾಯಿಯಾದ ಕೈಕೇಯಿಯನ್ನು ಕೇಳಿದನು. ಆಗ ಕೈಕೇಯಿಯು ನಡೆದ ಸಂಗತಿಯನ್ನು ತಿಳುಹಿದಳು. ಈ ವಾರ್ತೆಯನ್ನು ಕೇಳಿ ಶ್ರೀ ರಾಮನಿಗೆ ಮನಸ್ಸಿನಲ್ಲಿ ಪರಮ ಹರ್ಷವಾಯಿತು. ಬಳಿಕ ಸ್ವಲ್ಪ ಚೇತರಿಸಿಕೊಂಡು ಕುಳಿತುಕೊಂಡ ತಂದೆಗೆ ನಮಸ್ಕರಿಸಿ, ಆತನು—"ತಂದೆಯೇ, ಅಪ್ಪಣೆಯಾದರೆ ಹದಿನಾಲ್ಕು ವರ್ಷಗಳು ವನವಾಸ ಮಾಡಲು ಸಿದ್ಧನಾಗಿರುವೆನು," ಎಂದು, ಶೀಘ್ರವಾಗಿ ತಂದೆಯ ಅಪ್ಪಣೆಯನ್ನೂ ಪಡೆದು, ಸೀತಾದೇವಿಯೊಡನೆ ದಂಡಕಾರಣ್ಯಕ್ಕೆ ಹೊರಟನು. ಆಗ ಲಕ್ಷ್ಮಣನೂ ಜೊತೆಗೆ ಹೊರಡಲು ನಿಶ್ಚಯವಾಯಿತು. ಆ ಕಾಲದಲ್ಲಿ ಕೈಕೇಯಿಯು ರಾಮ-ಲಕ್ಷ್ಮಣ-ಸೀತೆಯರಿಗೆ ನಾರಿನ ವಸ್ತ್ರಗಳನ್ನು ಕೊಟ್ಟಳು. ಅವರು ಅವುಗಳನ್ನು ಧರಿಸಿ, ರೇಶಿಮೆಯ ವಸ್ತ್ರಗಳನ್ನು ಅಲ್ಲಿಯೇ ಬಿಟ್ಟರು. ಶ್ರೀ ರಾಮನು ಪ್ರಯಾಣಕಾಲದಲ್ಲಿ ಅನೇಕ ದಾನ-ಧರ್ಮಗಳನ್ನು ಮಾಡಿದನು. ಶ್ರೀ ರಾಮನು ವನವಾಸಕ್ಕೆ ಹೊರಡುವನೆಂದು ಕೇಳಿ, ಅಯೋಧ್ಯೆಯೇ ದುಃಖಮಾಡಲಾರಂಭಿಸಿತು. ಶ್ರೀ ರಾಮನು ತಾಯಿ-ತಂದೆಗಳಿಗೂ, ಬಂಧುವರ್ಗದವರಿಗೂ ನಮಸ್ಕರಿಸಿ ಹೊರಡಲು ಸಿದ್ಧನಾದನು. ಸೀತಾ-ಲಕ್ಷ್ಮಣರೂ ಆತನ ಹಿಂದೆಯೇ ಹೊರಟು ನಿಂತರು. ಕೂಡಲೆ ಸುಮಂತ್ರನು ರಥವನ್ನು ಸಿದ್ಧಮಾಡಿದ್ದನು. ಶ್ರೀ ರಾಮನು ತಂದೆ-ತಾಯಿಗಳು, ಬಂಧುಗಳು, ಪುರಜನರು, ಇವರುಗಳನ್ನು ಕುರಿತು:—"ಇನ್ನು ಹದಿನಾಲ್ಕು ವರ್ಷಗಳು ತುಂಬಿದೊಡನೆ ತಮ್ಮ ಬಳಿಗೆ ಬರುವೆನು. ಈಗ ತಾವೆಲ್ಲರೂ ಅಪ್ಪಣೆ ಕೊಡಿರಿ," ಎಂದು ಪ್ರಾರ್ಥನೆ ಮಾಡಿ, ಸಮಾಧಾನಪಡಿಸುತ್ತಾ ರಥವನ್ನು ಹತ್ತಿದನು. ಸೀತಾ-ಲಕ್ಷ್ಮಣರೂ ರಥಾರೋಹಣ ಮಾಡಿ

ದರು. ಮುಂದೆ ಸುಮಂತ್ರನು ಸಾರಥಿಯಾಗಿ ಕುಳಿತನು. ಬಳಿಕ ರಥವು ವಾಯು ವಿನಂತೆ ವೇಗವಾಗಿ ನಡೆಯಿತು. ಆ ದಿವಸ ಮಾಘಶುದ್ಧ ಪಂಚಮಿಯಾಗಿತ್ತು. ಮುಂದೆ ಅವರು ಸಾಯಂಕಾಲಕ್ಕೆ ಗಂಗಾತೀರದಲ್ಲಿರುವ ಶೃಂಗಬೇರಪೆಂಬ ಪಟ್ಟಣಕ್ಕೆ ತಲ್ಪಿದರು. ಅಲ್ಲಿ ಗುಹನೆಂಬ ರಾಜನಿದ್ದನು. ಆತನು ಶ್ರೀ ರಾಮಾದಿಗಳನ್ನು ಭಕ್ತಿಯಿಂದ ತನ್ನಲ್ಲೇ ಇರಿಸಿಕೊಂಡು, ಬಹುಪ್ರೀತಿಯಿಂದ ಆತಿಥ್ಯಮಾಡಿದನು. ಪ್ರಾತಃಕಾಲದಲ್ಲಿ ಶ್ರೀ ರಾಮನು ಸುಮಂತ್ರನಿಗೆ ಅಲ್ಲಿಂದಲೇ ಅಪ್ಪಣೆಕೊಟ್ಟ. ಸೀತಾ-ಲಕ್ಷ್ಮಣರೊಡನೆ ನಾವೆಯನ್ನೇರಿ ಗಂಗಾನದಿಯನ್ನು ದಾಟಿದನು. ರಾಮಾಜ್ಞೆಯಿಂದ ಗುಹನು ಹಿಂತಿರುಗಿದನು.

ಮುಂದೆ ರಾಮಾದಿಗಳು ಭರದ್ವಾಜ ಮಹರ್ಷಿಗಳ ಆಶ್ರಮಕ್ಕೆ ತೆರಳಿದರು. ಆ ಮುನಿಗಳು ಲಕ್ಷ್ಮಣ ಸಮೇತರಾದ ಸೀತಾ-ರಾಮರನ್ನು ನೋಡಿ, ಪರಮ ಹರ್ಷದಿಂದ ಸತ್ಕರಿಸಿದರು. ಬಳಿಕ ಶ್ರೀ ರಾಮಾದಿಗಳು ಅವರ ಅನುಜ್ಞೆಯನ್ನು ಪಡೆದು ಮುಂದೆ ಯಮುನಾನದಿಯನ್ನು ದಾಟಿ, ಅಲ್ಲಿ ತಪಸ್ಸು ಮಾಡುತ್ತಿದ್ದ ವಾಲ್ಮೀಕಿ ಮಹರ್ಷಿಗಳನ್ನು ನೋಡಿ ಅವರಲ್ಲಿ ಒಂದು ದಿವಸ ಆತಿಥ್ಯವನ್ನು ಸ್ವೀಕರಿಸಿ, ಮುಂದಕ್ಕೆ ಪ್ರಯಾಣ ಮಾಡಿದರು. ದಾರಿಯಲ್ಲಿ ಬಹು ಮನೋಹರವಾದ ಚಿತ್ರಕೂಟ ಪರ್ವತವು ಅವರಿಗೆ ಹತ್ತಿತು. ಶ್ರೀ ರಾಮನು ಅದರ ಪಶ್ಚಿಮ ಭಾಗದಲ್ಲಿ ಒಂದು ಪರ್ಣಶಾಲೆಯನ್ನು ರಚಿಸುವಂತೆ ಲಕ್ಷ್ಮಣನಿಗೆ ಅಪ್ಪಣೆಮಾಡಿದನು. ಭ್ರಾತೃವತ್ಸಲನಾದ ಲಕ್ಷ್ಮಣನು ಕೂಡಲೆ ಅದನ್ನು ನಿರ್ಮಾಣಮಾಡಿದನು. ಶ್ರೀ ರಾಮನು ಆ ಪರ್ಣಶಾಲೆಯಲ್ಲಿ ಗೃಹಶಾಂತಿಯೇ ಮೊದಲಾದ ಸಮಸ್ತ ವೇದೋಕ್ತ ವಿಧಿಗಳನ್ನು ಆಶ್ರಮವಾಸಿಗಳ ಸಹಾಯದಿಂದ ನೆರವೇರಿಸಿ, ಸೀತಾಸಮೇತನಾಗಿ ಬಹಳ ಆನಂದದಿಂದ ವಾಸಮಾಡಿದನು. ಪ್ರತಿದಿನವೂ ಲಕ್ಷ್ಮಣನು ಆ ವನದಲ್ಲಿರುವ ರುಚಿಕರವಾದ ಕಂದ-ಮೂಲಗಳನ್ನು ತರುವನು. ಅವುಗಳನ್ನು ಸೀತಾದೇವಿಯು ಶ್ರೀ ರಾಮನಿಗೆ ಸಮರ್ಪಿಸಿ, ಮಿಕ್ಕವುಗಳನ್ನು ತಾನೂ ಭಕ್ಷಣ ಮಾಡುವಳು.

ಹೀಗಿರಲು, ಒಂದು ದಿನ ಶ್ರೀ ರಾಮನು ಸೀತೆಯ ತೊಡೆಯ ಮೇಲೆ ಮಲಗಿ ನಿದ್ರೆ ಮಾಡುತ್ತಿದ್ದನು. ಆ ಕಾಲದಲ್ಲಿ ಕಾಕಾಸುರನು ಅಲ್ಲಿಗೆ ಬಂದು, ತನ್ನ ಕೊಕ್ಕಿನಿಂದ ಸೀತೆಯ ಸ್ತನಗಳನ್ನು ಕುಕ್ಕಲಾರಂಭಿಸಿದನು. ಆದರೂ ಸೀತಾದೇವಿಯು ಪತಿಗೆ ನಿದ್ರಾಭಂಗವಾಗುವದೆಂಬ ಭೀತಿಯಿಂದ ಹಾಗೆಯೇ ಕುಳಿತಿದ್ದಳು. ಸ್ತನಗಳಿಂದ ರಕ್ತ ಸುರಿಯಲಾರಂಭಿಸಿತು. ಆದರಿಂದ ಶ್ರೀ ರಾಮನು ಎಚ್ಚತ್ತು ಘಾತುಕನಾದ ರಾಕ್ಷಸನನ್ನು ವಧ ಮಾಡಲು, ಹತ್ತಿರ ಬಿದ್ದಿರುವ ದರ್ಭೆಯನ್ನು ಬ್ರಹ್ಮ

ಮಂತ್ರದಿಂದ ಅಭಿಮಂತ್ರಿಸಿ ಪ್ರಯೋಗಿಸಿದನು. ಅದು ಆ ರಾಕ್ಷಸನನ್ನು ಎಲ್ಲಿಗೆ ಹೋದರೂ ಬಿಡಲಿಲ್ಲ. ಕೊನೆಗೆ ಆ ಕಾಕಾಸುರನು ಶ್ರೀ ರಾಮನಿಗೇ ಶರಣು ಬಂದನು. ದಯಾನಿಧಿಯಾದ ರಾಮಚಂದ್ರನು ಆತನ ಅಪರಾಧವನ್ನು ಕ್ಷಮಿಸಿ ಕಾಪಾಡಿದನು. ಈ ರೀತಿಯಾಗಿ ಅನೇಕ ವಿಲಾಸಗಳನ್ನು ಅನುಭವಿಸುತ್ತ ಸೀತಾ-ರಾಮರು ಆನಂದದಿಂದ ಕಾಲಕಳೆದರು.

ಇತ್ತ ಸುಮಂತ್ರನು ಅಯೋಧ್ಯೆಯನ್ನು ಪ್ರವೇಶಿಸಿದನು. ಆತನ ಬರಿಯದಾದ ರಥವನ್ನು ನೋಡಿ, ಸಮಸ್ತರೂ ವಿಹ್ವಲರಾದರು. 'ಶ್ರೀರಾಮನು ಗಂಗಾನದಿಯನ್ನು ದಾಟಿ ಮುಂದೆ ತೆರಳಿದನು, ಎಂಬದನ್ನು ಸುಮಂತ್ರನ ಮುಖದಿಂದ ಕೇಳಿ, ದಶರಥನು, ಪರಮ ದುಃಖಿತನಾದನು. ಮತ್ತು ಆ ಕಾಲದಲ್ಲಿ ವೃದ್ಧರಾದ ವೈಶ್ಯ ದಂಪತಿಗಳ ಮಾತುಗಳನ್ನು ಸ್ಮರಣೆಗೆ ತಂದು, 'ರಾಮ ರಾಮ' ಎಂದು ಸ್ಮರಣೆ ಮಾಡುತ್ತ ದೇಹ ಬಿಟ್ಟನು. ಆಗ ಭರತನೂ, ಶತ್ರುಘ್ನನೂ ಊರಲ್ಲಿರಲಿಲ್ಲ. ಅವರನ್ನು ಕರೆತರಲು, ಮುಖ್ಯರಾದ ಇಬ್ಬರು ಮಂತ್ರಿಗಳನ್ನು ಕಳುಹಿಸಿದರು. ಗುರುಗಳಾದ ವಸಿಷ್ಠರು, ಅವರು ಬರುವವರೆಗೂ ದಶರಥನ ಶವವನ್ನು ತೈಲಭಾಂಡದಲ್ಲಿರಿಸಿ, ಜೋಪಾನ ಮಾಡಿದರು. ಈ ಮಂತ್ರಿಗಳು ಭರತಶತ್ರುಘ್ನರಲ್ಲಿಗೆ ಹೋದೊಡನೆ, ಅವರೂ ಗಾಬರಿಯಿಂದ ಆಕ್ಷಣವೇ ಹೊರಟು ಅಯೋಧ್ಯೆಗೆ ಬಂದರು. ಅಲ್ಲಿ ಶ್ರೀ ರಾಮ-ಸೀತಾ-ಲಕ್ಷ್ಮಣರು ವನವಾಸಕ್ಕೆ ಹೋದರೆಂದು ಕೇಳಿ, ತಂದೆಯ ಮರಣಹೊಂದಿದ ದುಃಖವು ಭರತ-ಶತ್ರುಘ್ನರಿಗೆ ಇಮ್ಮಡಿಯಾಯಿತು.

ಮುಂದೆ ಅವರಿಬ್ಬರೂ ತಂದೆಯ ಉತ್ತರ-ಕ್ರಿಯೆಗಳನ್ನು ಯಥಾಸಾಂಗವಾಗಿ ನೆರವೇರಿಸಿ, ಮರುದಿವಸವೇ ಶ್ರೀ ರಾಮನ ದರ್ಶನಕ್ಕೆ ಹೊರಡಲು ಸಿದ್ಧರಾದರು. ಆಗ ಕೈಕೆಯಿಯೇ ಮೊದಲಾದ ತಾಯಿಯರೂ, ವಸಿಷ್ಠ, ಸುಮಂತ್ರನೇ ಮೊದಲಾದವರೆಲ್ಲರೂ ಭರತನಿಗೆ ಪಟ್ಟಾಭಿಷಿಕ್ತನಾಗೆಂದು ಬಹಳ ಆಗ್ರಹ ಮಾಡಿದರು. ಆದರೂ ಆತನು ಒಡಂಬಡಲಿಲ್ಲ. ಬಳಿಕ ಆ ಭರತನು, ಶತ್ರುಘ್ನ-ವಸಿಷ್ಠರು-ಸುಮಂತ್ರ-ಕೌಶಲ್ಯೆ ಇವರೇ ಮೊದಲಾದ ಸಮಸ್ತ ಪ್ರಜೆಗಳಿಂದೊಡಗೂಡಿ ಶ್ರೀ ರಾಮನ ದರ್ಶನ ಪಡೆಯಲು ಗಂಗೋತ್ತರಕ್ಕೆ ಹೊರಟನು. ಅಲ್ಲಿ ವಿಚಾರಿಸಲು, ಮುಂದಕ್ಕೆ ಪ್ರಯಾಣ ಮಾಡಿದರೆಂದು ಗೊತ್ತಾಯಿತು. ಬಳಿಕ ಭರತನು ಭರದ್ವಾಜಾಶ್ರಮಕ್ಕೆ ಹೋಗಿ, ಅಲ್ಲಿ ಆತಿಥ್ಯವನ್ನು ಸ್ವೀಕರಿಸಿ, ಶ್ರೀ ರಾಮನಿರುವ ಆಶ್ರಮದ ದಾರಿಯನ್ನನುಸರಿಸಿ ನಡೆದನು. ಮುಂದೆ ಶ್ರೀ ರಾಮಚಂದ್ರನ ಆಶ್ರಮವನ್ನು ನೋಡಿ, ಭರತನು ಪಾದಚಾರಿಯಾಗಿ ಪ್ರಯಾಣಮಾಡಿ, ಶ್ರೀ ರಾಮನ ಪಾದಗಳ

ಗೆ ನಮಸ್ಕರಿಸಿದನು. ಶ್ರೀ ರಾಮನೂ ಭರತನನ್ನಾಲಂಗಿಸಿ, ತಂದೆಯ ವಿಯೋಗವನ್ನು ಕೇಳಿ, ಪರಮದುಃಖಗೊಂಡನು. ಅನಂತರ ಗಂಗಾನದಿಯಲ್ಲಿ ಆತನ ಉತ್ತರಕ್ರಿಯೆಗಳನ್ನೆಲ್ಲಾ ಶ್ರೀರಾಮನು ಲಕ್ಷ್ಮಣನೊಡನೆ ನೆರವೇರಿಸಿದನು. ಆಗ ವಸಿಷ್ಠರೇ ಮೊದಲಾದ ಸಮಸ್ತರೂ ಶ್ರೀರಾಮನನ್ನು ಅಯೋಧ್ಯೆಗೆ ಬರುವಂತೆ ಪ್ರಾರ್ಥಿಸಿದರು. ಆದರೂ ಶ್ರೀ ರಾಮನು ಆ ಮಾತನ್ನು ಲಕ್ಷ್ಯಗೆ ತರಲಿಲ್ಲ. ಬಳಿಕ ಭರತನು ಪ್ರಾಯೋಪವೇಶನ ಮಾಡುವೆನೆಂದು ಹಟಹಿಡಿದನು. ಆಗ ಕುಲಗುರುಗಳಾದ ವಸಿಷ್ಠರು ಶ್ರೀ ರಾಮನ ಮುಖ್ಯೋದ್ದೇಶವನ್ನು ಆತನಿಗೆ ತಿಳಿಯಪಡಿಸಿದರು.

ಅದಕ್ಕೆ ಭರತನು—"ಹಾಗಾದರೆ ನಾನು ಸಿಂಹಾಸನಾರೋಹಣ ಮಾಡುವದಿಲ್ಲ. ಹದಿನಾಲ್ಕು ವರ್ಷಗಳವರೆಗೂ ಶ್ರೀ ರಾಮನ ಪಾದುಕೆಗಳನ್ನೇ ಸಿಂಹಾಸನದ ಮೇಲಿರಿಸಿ, ನಾನು ಆತನ ದಾಸನಾಗಿ ಸೇವೆ ಮಾಡುವೆನು. ಹದಿನಾಲ್ಕು ವರ್ಷಗಳು ಮುಗಿದ ಮರುದಿವಸ ಶ್ರೀ ರಾಮನು ನನಗೆ ದರ್ಶನ ಕೊಡದಿದ್ದರೆ, ಅದೇ ದಿವಸವೇ ಅಗ್ನಿಪ್ರವೇಶಮಾಡುವೆನು." ಎಂದು ಪ್ರತಿಜ್ಞೆಮಾಡಿದನು. ಮತ್ತು ಅದೇ ರೀತಿ ಶ್ರೀ ರಾಮನಿಂದ ವಚನವನ್ನು ಪಡೆದು, ಆತನ ಸುವರ್ಣದ ಪಾದುಕೆಗಳನ್ನು ಶಿರಸಿನಲ್ಲಿ ಧರಿಸಿ, ಅಯೋಧ್ಯೆಗೆ ಪ್ರಯಾಣ ಮಾಡಿದನು. ಶ್ರೀ ರಾಮನು. ಕೌಸಲ್ಯೆಯೇ ಮೊದಲಾದ ತಾಯಿಯರಿಗೆ ಸಮಾಧಾನಗೊಳಿಸಿದನು. ಮತ್ತು ಬಹಳ ಶಿಷ್ಟಳಾದ ಕೈಕೆಯಿಗೆ ತನ್ನ ನಿಜಸ್ವರೂಪವನ್ನೂ, ಮುಖ್ಯ ಕಾರ್ಯವನ್ನೂ ಬೋಧಿಸಿ, ಸಮಸ್ತರನ್ನೂ ಅಯೋಧ್ಯೆಗೆ ಪ್ರಯಾಣ ಮಾಡುವಂತೆ ಅಪ್ಪಣೆಮಾಡಿದನು. ಭರತನು ಸಮಸ್ತ ಸೈನ್ಯದೊಡನೆ ಅಯೋಧ್ಯೆಯನ್ನು ಸೇರಿ, ಶ್ರೀ ರಾಮನ ಪಾದುಕೆಗಳನ್ನು ಸಿಂಹಾಸನದ ಮೇಲಿರಿಸಿ, ತಾನು ಅವರ ಸೇವೆಮಾಡುತ್ತ, ರಾಜ್ಯದಲ್ಲಿ ನಡೆದ ಸಂಗತಿಯನ್ನು ಅಲ್ಲಿ ಅರಿಕೆ ಮಾಡುತ್ತ, ನಂದಿಗ್ರಾಮದಲ್ಲಿ ಕಂದಮೂಲಾದಿಗಳನ್ನು ಭಕ್ಷಿಸುತ್ತ ವಾಸಮಾಡಿದ್ದನು.

ಚಿತ್ರಕೂಟದ ಬಳಿಯಲ್ಲಿ ಶ್ರೀ ರಾಮನು ಇರುವ ವಿಷಯವು ಅಯೋಧ್ಯೆಯಲ್ಲಿ ಸರ್ವರಿಗೂ ತಿಳಿಯಿತು. ಅಲ್ಲಿಗೆ ಜನಗಳ ಸಂಚಾರವು ತೆರಪಿಲ್ಲದೆ ನಡೆದಿತ್ತು. ಬಳಿಕ ಶ್ರೀ ರಾಮನು ಇಲ್ಲಿರುವದು ಯುಕ್ತವಲ್ಲೆಂದು ತಿಳಿದು ಮುಂದೆ ಪ್ರಯಾಣ ಬೆಳಸಿದನು. ಆತನು ಸೀತಾ-ಲಕ್ಷ್ಮಣರೊಡನೆ ಅತ್ರಿಮಹರ್ಷಿಗಳ ಆಶ್ರಮವನ್ನು ಹೊಂದಿದನು. ಆ ಮಹರ್ಷಿಗಳು ಶ್ರೀ ರಾಮನು ಪತ್ನೀಸಮೇತನಾಗಿ ಬಂದನೆಂದು ಪರಮ ಹರ್ಷದಿಂದ ತಮ್ಮ ಆಶ್ರಮದಲ್ಲಿ ಆತಿಥ್ಯವನ್ನು ನಡೆಸಿದರು. ಆ ಋಷಿಪತ್ನಿಯಾದ ಅನಸೂಯೆಯು, ಸೀತಾದೇವಿಯನ್ನು ಪರಮವಿಶ್ವಾಸದಿಂದ

ಕಂಡಳು. ಮತ್ತು ಆ ಋಷಿಪತ್ನಿಯು ಸೀತಾದೇವಿಗೆ ಎರಡು ವಸ್ತ್ರದ ಜತೆಗಳನ್ನು ಕೊಟ್ಟು, ಪರಮಪತಿವ್ರತೆಯಾಗೆಂದು ಹರಸಿದಳು. ಅಲ್ಲಿ ಶ್ರೀ ರಾಮನು ಮೂರು ದಿವಸಗಳವರೆಗೆ ವಾಸಮಾಡಿದನು. ಅನಂತರ ಋಷಿಗಳ ಅಪ್ಪಣೆಯನ್ನು ಹೊಂದಿ ಆ ಮೂರು ಜನಗಳೂ ಮುಂದಕ್ಕೆ ಪ್ರಯಾಣ ಮಾಡಿದರು. ಈ ರೀತಿಯಾಗಿ ಶ್ರೀ ರಾಮಾದಿಗಳ ಮೊದಲನೇ ವರ್ಷದ ವನವಾಸವು ಕಳೆಯಿತು. ಈ ವರ್ಷದಲ್ಲಿ ಯಾವ ತೊಂದರೆಗಳೂ ಸಂಭವಿಸಲಿಲ್ಲ.

## ೫ ನೆಯ ಪ್ರಕರಣ.

### ಸೀತಾಪಹರಣ.

ಪರಮೇಶ್ವರನು ಹೇಳುವನು. 'ಹೇ ಪಾರ್ವತಿಯೇ, ರಾಮ-ಲಕ್ಷ್ಮಣರು ತಮ್ಮ ಧನುಸ್ಸುಗಳನ್ನು ಸಿದ್ಧಪಡಿಸಿಕೊಂಡು, ಮುಂದೆ ರಾಮನೂ, ಮಧ್ಯೆ ಸೀತೆಯೂ, ಹಿಂಭಾಗದಲ್ಲಿ ಲಕ್ಷ್ಮಣನೂ ಈ ರೀತಿಯಾಗಿ ದಂಡಕಾರಣ್ಯದಲ್ಲಿ ಪ್ರಯಾಣಮಾಡಿದರು. ದಾರಿಯಲ್ಲಿ ಮನೋಹರವಾದ ಒಂದು ಸರೋವರವಿತ್ತು. ಅಲ್ಲಿ ಶ್ರೀ ರಾಮನು ಸ್ವಲ್ಪ ಹೊತ್ತು ನಿಂತು, ಸ್ನಾನಾಹ್ನಿಕಾದಿಗಳನ್ನು ಮುಗಿಸಿಕೊಂಡನು. ಅಷ್ಟರೊಳಗೆ ಲಕ್ಷ್ಮಣನು ತೆಗೆದುಕೊಂಡು ಬಂದ ಕಂದಮೂಲಗಳನ್ನು ಎಲ್ಲರೂ ತಿಂದು, ಮುಂದಕ್ಕೆ ಪ್ರಯಾಣಬೆಳೆಸಿದರು. ಕೆಲವು ದೂರ ಹೋದಬಳಿಕ ಒಂದು ಕಡೆ ಸ್ವಲ್ಪ ವಿಶ್ರಾಂತಿಗಾಗಿ ಎಲ್ಲರೂ ಕುಳಿತರು. ಆ ಸ್ಥಳಕ್ಕೆ ಭಯಂಕರವಾದ ರೂಪವುಳ್ಳ ವಿರಾಧನೆಂಬ ರಾಕ್ಷಸನು ಬಂದನು. ಅತನು ಹುಲಿಗಳನ್ನೂ, ಸಿಂಹಗಳನ್ನೂ ಹಿಡಿದು ತಿನ್ನುತ್ತಿದ್ದನು. ಇವನನ್ನು ನೋಡಿ ಸೀತೆಯು ಭಯಗೊಂಡಳು. ಶ್ರೀ ರಾಮನು ಲಕ್ಷ್ಮಣನಿಗೆ ಸೀತೆಯನ್ನು ಕಾಪಾಡಿಕೊಂಡಿರುವಂತೆ ಹೇಳಿ, ತಾನು ಆ ರಾಕ್ಷಸನನ್ನು ನಾಶಮಾಡಲು ಹೊರಟನು. ಆ ರಾಕ್ಷಸನೂ ಶ್ರೀ ರಾಮನನ್ನು ತಿನ್ನಲೋಸುಗ ಬರುತ್ತಿದ್ದನು. ಅವನ ಮೇಲೆ ಶ್ರೀ ರಾಮನು ತೀಕ್ಷ್ಣವಾದ ಬಾಣವನ್ನು ಪ್ರಯೋಗಿಸಿದನು. ಅದನ್ನು ಲಕ್ಷ್ಯಮಾಡದೆ ಶ್ರೀ ರಾಮನನ್ನು ಹಿಡಿಯಬೇಕೆಂದು ಬಾಹುಗಳನ್ನು ಚಪ್ಪರಿಸಿಕೊಂಡು ವಿರಾಧನು ಬರುತ್ತಿದ್ದನು. ಇಂಗಿತಜ್ಞನಾದ ಶ್ರೀ ರಾಮನು ಅತನ ಕೈಗಳನ್ನು ಕತ್ತರಿಸಿದನು. ಬಳಿಕ ಆ ರಾಕ್ಷಸನು

ದ್ಯೈವ ರೀತಿ ಬೀಳಲುದ್ಯುಕ್ತನಾದನು. ಮುಂದೆ ರಾಮನು ಅವನ ತೊಡೆಗಳನ್ನು ಕಡಿದನು. ಬಳಿಕ ಆ ದೈತ್ಯನು ಚೆಂಡಿನಂತೆ ಪುಟಿದು ಬರಲಾರಂಭಿಸಿದನು. ಆಗ ಶ್ರೀ ರಾಮನು ಅರ್ಧಚಂದ್ರಾಕಾರವಾದ ಬಾಣದಿಂದ ಅವನ ಶಿರಸ್ಸನ್ನು ಛೇದಿಸಿದನು. ಆಗ ಅವನ ಶರೀರದಿಂದ ತೇಜಃಪುಂಜಗಳಿಂದ ಪ್ರಕಾಶಿತನಾದ ಒಬ್ಬ ದಿವ್ಯಪುರುಷನು ಬಂದು, ಶ್ರೀರಾಮನ ಚರಣಗಳಿಗೆ ಎರಗಿದನು. ಮತ್ತು ತನ್ನ ಪೂರ್ವವೃತ್ತಾಂತವನ್ನು ಶ್ರೀ ರಾಮನಿಗೆ ತಿಳಿಸಿ, ತಾನು ಸ್ವರ್ಗವನ್ನು ಹೊಂದಿದನು.

ಬಳಿಕ ಶ್ರೀ ರಾಮನು ಶರಭಂಗರ ಆಶ್ರಮಕ್ಕೆ ತೆರಳಿದನು. ಅಲ್ಲಿ ಆ ಮಹರ್ಷಿಗಳು ಸೀತಾ-ರಾಮ-ಲಕ್ಷ್ಮಣರುಗಳಿಗೆ ಆತ್ಯಾದರದಿಂದ ಆತಿಥ್ಯ ಮಾಡಿದರು. ಮತ್ತು ತಮ್ಮ ತಪಶ್ಶಕ್ತಿಯನ್ನು ಶ್ರೀ ರಾಮನಿಗೆ ಸಮರ್ಪಿಸಿ, ಕಡೆಗೆ ವೈಕುಂಠದಿಂದ ಬಂದ ವಿಮಾನದಲ್ಲಿ ಕುಳಿತು ಪ್ರಯಾಣಮಾಡಿದರು. ಮುಂದೆ ಶ್ರೀ ರಾಮನು ಸುತೀಕ್ಷ್ಣಮಹರ್ಷಿಗಳ ಆಶ್ರಮಕ್ಕೆ ಹೊರಟನು. ಅಲ್ಲಿ ಅವರು ಬಹಳ ಸತ್ಕಾರ ಮಾಡಿದರು. ಶ್ರೀ ರಾಮನು ಬಂದಿರುವನೆಂಬ ವರ್ತಮಾನವನ್ನು ಕೇಳಿ, ಸುತ್ತಲಿರುವ ಎಲ್ಲ ಮುನಿಗಳೂ ಅಲ್ಲಿಗೆ ಬಂದು ಸೇರಿದರು. ಸಮಸ್ತರೂ ರಾಮ-ಲಕ್ಷ್ಮಣ-ಸೀತೆಯರನ್ನು ಆಶೀರ್ವದಿಸಿದರು. ಸೀತಾ-ರಾಮ-ಲಕ್ಷ್ಮಣರು ಕೆಲವು ಸ್ಥಳಗಳಲ್ಲಿ ಒಂದು ದಿವಸ. ಕೆಲವುಗಳಲ್ಲಿ ಒಂದುತಿಂಗಳು, ಕೆಲವುಗಳಲ್ಲಿ ಎರಡುತಿಂಗಳು, ಕೆಲವುಗಳಲ್ಲಿ ಒಂಬತ್ತುತಿಂಗಳು ಹೀಗೆಯೇ ವಾಸಮಾಡಿ, ವನವಾಸದ ಒಂಬತ್ತು ವರ್ಷಗಳನ್ನು ಕಳೆದರು. ಮುಂದೆ ಶ್ರೀ ರಾಮಾದಿಗಳು ಅಗಸ್ತ್ಯಾಶ್ರಮಕ್ಕೆ ಹೊರಟರು. ಆಶ್ರಮಕ್ಕೆ ಬಂದ ರಾಮಾದಿಗಳನ್ನು ನೋಡಿ, ಮಹರ್ಷಿಗಳಿಗೆ ಬಹಳ ಸಂತೋಷವಾಯಿತು. ಅಲ್ಲಿ ಅವರು ಎರಡುದಿವಸಗಳ ವರೆಗೂ ಇದ್ದರು. ಪ್ರಯಾಣಕಾಲದಲ್ಲಿ ಅಗಸ್ತ್ಯರು ಇಂದ್ರನಿಂದ ಕಳುಹಿಸಲ್ಪಟ್ಟ ದಿವ್ಯಾಸ್ತ್ರಗಳನ್ನೂ, ಅಕ್ಷಯಬಾಣಗಳನ್ನೂ, ಶ್ರೇಷ್ಠವಾದ ಎರಡುಧನುಸ್ಸುಗಳನ್ನೂ ಶ್ರೀ ರಾಮ-ಲಕ್ಷ್ಮಣರಿಗೆ ಸಮರ್ಪಿಸಿದರು. ಬಳಿಕ ಶ್ರೀ ರಾಮನು ಅವರ ಆಶೀರ್ವಚನವನ್ನು ಪಡೆದು, ಗೌತಮೀ ನದಿಯ ಉತ್ತರತೀರದಲ್ಲಿರುವ 'ಪಂಚವಟೀ' ಎಂಬ ಕ್ಷೇತ್ರದಲ್ಲಿ ಸೀತಾಸಮೇತನಾಗಿ ವಾಸಮಾಡಿದನು.

ಪಂಚವಟಿಯಲ್ಲಿ ಶೂರ್ಪನಖಿ ಎಂಬ ರಾವಣನ ತಂಗಿಯ ಮಗನಾದ ಸಾಂಬನು ಬ್ರಹ್ಮನನ್ನು ಕುರಿತು ತಪಸ್ಸು ಮಾಡುತ್ತಿದ್ದನು. ಆತನ ತಪಸ್ಸಿಗೆ ಬ್ರಹ್ಮನು ಪ್ರಸನ್ನನಾಗಿ ಒಂದು ಖಡ್ಗವನ್ನು ಕೊಟ್ಟನು. ಅದನ್ನು ಸಾಂಬನು ನೋಡಲೇ ಇಲ್ಲ. ಮುಂದೆ [illegible] ಲಕ್ಷ್ಮಣನಿಗೆ ಆ

ಖಡ್ಗವು ಸಿಕ್ಕಿತು. ಅದನ್ನು ತೆಗೆದುಕೊಂಡು ಲಕ್ಷ್ಮಣನು ವನದಲ್ಲಿರುವ ಸಮಸ್ತ ದುಷ್ಟ ಪ್ರಾಣಿಗಳನ್ನೂ ಸಂಹಾರ ಮಾಡಿದನು. ಆ ವೇಗದಲ್ಲಿ ತಪಸ್ವಿಯಾದ ಸಾಂಬನನ್ನೂ ಕೊಂದನು. ಬಳಿಕ ಭೂಮಿಯಲ್ಲಿ ಬಿದ್ದ ಬ್ರಾಹ್ಮಣವೇಷವನ್ನು ಧರಿಸಿದ ಸಾಂಬನನ್ನು ನೋಡಿ, ಲಕ್ಷ್ಮಣನಿಗೆ 'ಬ್ರಹ್ಮಹತ್ಯ ಮಾಡಿದೆನೆಂ'ದು ಅನು ತಾಪವಾಯಿತು. ಈ ವಿಷಯವನ್ನು ಶ್ರೀರಾಮನಿಗೆ ತಿಳುಹಿದನು. ಆತನು— 'ಎಲೈ ತಮ್ಮನೇ, ನೀನು ಯಾರನ್ನು ಕೊಂದೆಯೋ ಅವನು ಬ್ರಾಹ್ಮಣನಲ್ಲ. ರಾಕ್ಷಸನಿರುವನು. ಆದರಿಂದ ನಿನಗೇನೂ ಪಾಪವು ಸಂಭವಿಸುವದಿಲ್ಲ'ವೆಂದು ಸಮಾಧಾನಪಡಿಸಿದನು. ಬಳಿಕ ಆ ಸಾಂಬನ ತಾಯಿಯಾದ ಶೂರ್ಪನಖಿಯು ಶ್ರೀರಾಮನ ಸೌಂದರ್ಯಕ್ಕೆ ಬೆರಗಾಗಿ, 'ಇವನನ್ನು ವಿವಾಹ ಮಾಡಿಕೊಳ್ಳಬೇಕು, ಎಂದು ಯೋಚಿಸಿ, ತನ್ನ ರಾಕ್ಷಸಿ ಮಾಯೆಯಿಂದ ಸುಂದರ ವೇಷವನ್ನು ಧರಿಸಿ ಶ್ರೀರಾಮನ ಬಳಿಗೆ ಬಂದಳು. ಆಗ ರಾಮಚಂದ್ರನಾದರೂ ಇವಳ ಅಭಿಪ್ರಾಯವನ್ನು ತಿಳಿದು—ಎಲೈ, ತರುಣಿಯೇ, ನನಗೆ ಇಕೋ, ಪತ್ನಿಯು ಜೊತೆಯಲ್ಲಿರುವಳು. ಅಲ್ಲಿ ನೋಡು, ಕುಟೀರದ ಹೊರಗೆ ಕುಳಿತಿರುವ ನನ್ನ ತಮ್ಮನಾದ ಲಕ್ಷ್ಮಣನು ನನಗಿಂತಲೂ ಸುಂದರನಾಗಿರುವನು. ಅವನಿಗೆ ಹೆಂಡರಿಲ್ಲ. ನೀನು ಅವನನ್ನು ವರಿಸು," ಎಂದನು.

ಈ ಮಾತುಗಳನ್ನು ಕೇಳಿ, ಶೂರ್ಪನಖಿಯು ಲಕ್ಷ್ಮಣನ ಬಳಿಗೆ ಬಂದಳು. ಆತನೂ ಕೂಡ "ಎಲೈ ಕನ್ಯಾಮಣಿಯೇ, ನೀನು ಪರಮ ಸೌಂದರ್ಯವತಿಯಾಗಿರುವೆ. ಮತ್ತು ಶ್ರೇಷ್ಠವಾದ ವಂಶದಲ್ಲಿ ಹುಟ್ಟಿದವಳಂತೆ ಕಾಣುತ್ತೀ. ಇಂಥ ನೀನು ಈ ಮಹಾರಾಜನ ಸೇವಕನಾದ ನನ್ನ ಪಾಣಿಗ್ರಹಣ ಮಾಡಿದೆಯಾದರೆ, ನೀನೂ ಆತನಿಗೆ ದಾಸಿಯಾಗಬೇಕಾಗುವದು. ಇದು ನಿನಗೆ ಉಚಿತವಲ್ಲ. ಹೋಗು, ಆತನನ್ನೇ ಆಶ್ರಯಿಸು" ಎಂದನು. ಶೂರ್ಪನಖಿಗೂ ಲಕ್ಷ್ಮಣನ ಮಾತು ಯುಕ್ತವೆಂದು ತೋರಿತು. ಆ ನಂತರ ಆ ರಾಕ್ಷಸಿಯು ಶ್ರೀರಾಮನನ್ನು ಬಹುವಿಧವಾಗಿ ಪ್ರಾರ್ಥಿಸಿಕೊಂಡಳು. ಆದರೂ ಆತನು ಒಪ್ಪಲಿಲ್ಲ. ಕೊನೆಗೆ ಶೂರ್ಪನಖಿಯು ಸೀತಾದೇವಿಯನ್ನು ಭಕ್ಷಿಸಲು ಪ್ರಯತ್ನಪಟ್ಟಳು. ಬಳಿಕ ಶ್ರೀರಾಮನು 'ಈ ರಾಕ್ಷಸಿಗೆ ಕೋಪಬಂದಿದೆ' ಎಂದು ತಿಳಿದು, ಎಲೈ ಕನ್ಯಾಮಣಿಯೇ, ಕೋಪಮಾಡಬೇಡ. ಇಗೋ ಈ ಶಸ್ತ್ರವನ್ನು ತೆಗೆದುಕೊಂಡು ಹೋಗಿ ಲಕ್ಷ್ಮಣನಿಗೆ ಕೊಡು. ಅನಂತರ ನಿನ್ನ ಇಷ್ಟಾರ್ಥವು ಕೈಗೂಡುವದು, ಎಂದನು.

ಈ ರಾಮನ ಮಾತುಗಳನ್ನು ಕೇಳಿ, ಅವಿವೇಕಿಯಾದ ರಾಕ್ಷಸಿಯು ಆ ಶಸ್ತ್ರವನ್ನು ಲಕ್ಷ್ಮಣನಿಗೆ ತಂದುಕೊಟ್ಟಳು. ಚತುರನಾದ ಲಕ್ಷ್ಮಣನು ಅಣ್ಣನ ಮನೋಗತವನ್ನು ತಿಳಿದು, ಆ ಶೂರ್ಪನಖಿಯ ಮೂಗು, ಮೊಲೆಗಳು, ಸ್ತನಗಳು, ಕಿವಿ ಇವುಗಳನ್ನು ಅದೇ ಶಸ್ತ್ರದಿಂದಲೇ ಛೇದಿಸಿದನು. ಅಷ್ಟರಲ್ಲಿ ಆ ರಾಕ್ಷಸಿಯು ತನ್ನ ನಿಜಸ್ವರೂಪವನ್ನು ಧರಿಸಿ, 'ಹಾ ಹಾ' ಎಂದು ಧ್ವನಿಮಾಡುತ್ತ ತನ್ನ ಬಂಧುಗಳಾದ ಖರನೇ ಮೊದಲಾದ ರಾಕ್ಷಸರ ಕಡೆಗೆ ಓಡಿದಳು. ಬಳಿಕ ಜನಸ್ಥಾನವಾಸಿಗಳಾದ ಆ ರಾಕ್ಷಸರು ಶೂರ್ಪನಖಿಯ ಮುಖದಿಂದ ಎಲ್ಲ ಸಮಾಚಾರಗಳನ್ನು ಕೇಳಿ, —'ನಮ್ಮ ತಂಗಿಯಾದ ಶೂರ್ಪನಖಿಗೆ ಅವಮಾನಮಾಡಿದ ಆ ದುಷ್ಟರನ್ನು ಶಾಸನಮಾಡಬೇಕು' ಎಂದು ಸಂಕಲ್ಪಮಾಡಿ, ಅಲ್ಲಿಂದ ಸೇನಾಸಮೇತ ಹೊರಟರು. ಅಂಥಾ ರಾಕ್ಷಸರ ಬಲವನ್ನು ನೋಡಿ, ಶ್ರೀ ರಾಮನು—'ಸೀತೆಯನ್ನು ಯಾವ ಅಪಾಯವೂ ಬರದಂತೆ ಕಾಪಾಡಿಕೊಂಡಿರು' ಎಂದು ಲಕ್ಷ್ಮಣನಿಗೆ ಆಜ್ಞೆ ಮಾಡಿ ತಾನು ಆ ರಾಕ್ಷಸರೊಡನೆ ಯುದ್ಧಮಾಡಲು ತೆರಳಿದನು.

ಶ್ರೀರಾಮನಿಗೂ ರಾಕ್ಷಸರಿಗೂ ಘೋರವಾದ ಯುದ್ಧ ನಡೆಯಿತು. ಬಳಿಕ ರಾಮಚಂದ್ರನು ತನ್ನ ಅಪ್ರಮೇಯವಾದ ಭುಜಬಲದಿಂದ ಖರ, ದೂಷಣ, ತ್ರಿಶಿರರನ್ನೂ ಹದಿನಾಲ್ಕುಸಾವಿರ ಸೇನೆಯನ್ನೂ ನಿರ್ಮೂಲನಮಾಡಿದನು. ಆದೇ ಸ್ಥಳಕ್ಕೆ ತ್ರ್ಯಂಬಕ ಕ್ಷೇತ್ರವೆಂಬ ಹೆಸರುಬಂತು. ಇಂಥ ಭಯಂಕರವಾದ ಯುದ್ಧವನ್ನು ನೋಡಿ ಸೀತಾದೇವಿಗೆ ಪರಮಾಶ್ಚರ್ಯವಾಯಿತು. ಒಂದು ದಿವಸ ಶ್ರೀ ರಾಮನು ಸೀತೆಯೊಡನೆ ಏಕಾಂತಸ್ಥಾನದಲ್ಲಿರುವಾಗ ಜಾನಕಿಯನ್ನು ಕುರಿತು—'ಎಲೈ ವಿದೇಹನಂದನಿಯೇ, ನೀನು ಮುಂದೆ ಮೂರುವಿಧವಾದ ರೂಪಗಳನ್ನು ಧರಿಸಿ, ರಾಜಸರೂಪದಿಂದ ಅಗ್ನಿಯಲ್ಲಿ ವಾಸಮಾಡು, ಸಾತ್ವಿಕವಾದ ಆಕಾರವನ್ನು ಹೊಂದಿ ನನ್ನ ಮೇಲೆ ಯಾವಾಗಲೂ ಕುಳಿತಿರು. ತಾಮಸರೂಪದಿಂದ ಈ ನಮ್ಮ ಆಶ್ರಮದಲ್ಲಿರು. ಇನ್ನು ಸ್ವಲ್ಪ ದಿವಸಗಳಲ್ಲಿ ನಿನಗೆ ಬಹಳ ಕಷ್ಟವು ಪ್ರಾಪ್ತವಾಗುವ ಯೋಗವಿರುವದು" ಎಂದನು. ಆ ಮಾತುಗಳನ್ನು ಕೇಳಿ ಪತಿವ್ರತಾ ಶಿರೋಮಣಿಯಾದ ಸೀತೆಯು ಶ್ರೀ ರಾಮನ ಅಪ್ಪಣೆಯಂತೆ ಅದೇ ಕಾಲದಲ್ಲಿಯೇ ರೂಪಗಳನ್ನು ಧರಿಸಿ ಆಯಾಯ ಸ್ಥಳಗಳಲ್ಲಿ ವಾಸಮಾಡಿದಳು.

ಇತ್ತಲಾ ಶೂರ್ಪನಖಿಯು ಯುದ್ಧದಲ್ಲಿ ತನ್ನ ಕಡೆಯವರೆಲ್ಲರೂ ಹತರಾದದ್ದನ್ನು ನೋಡಿ, ಅತಿಮುಳಿಸಿನಿಂದ ಅಣ್ಣನಾದ ರಾವಣನ ಬಳಿಗೆ ಬಂದಳು. ಸಮೀಪಕ್ಕೆ ಬಂದ ತಂಗಿಯನ್ನು ನೋಡಿ ರಾವಣನು ಬಹಳ ವ್ಯಥೆಗೊಂಡು—ತಂಗಿ

ಯೆ, ನಿನಗೆ ಹೀಗೆ ಅವಮಾನ ಮಾಡಿದವನು ಯಾರು ,ಎಂದನು. ಆಗಶೂರ್ಪ ನಖೆಯು ಕಣ್ಣಿನಲ್ಲಿನೀರು ಸುರಿಸುತ್ತ, ಲಕ್ಷ್ಮಣನಿಂದ ತನಗಾದ ಅವಮರ್ಯಾದೆ ಯನ್ನು ಹಾಗು ರಾಮನಿಂದ ಹತರಾದ ದೂಷಣನೇ ಮೊದಲಾದಸಮಸ್ತ ರಾಕ್ಷ ಸರ ಸಂಕಟವನ್ನೂ ತಿಳುಹಿದಳು . ಆಗ ರಾವಣನು—ಇಂಥ ದುಷ್ಟರನ್ನು ಈಗಲೇ ಸಂಹರಿಸುವೆನು, ಎಂದು ತನ್ನ ತಂಗಿಯ ಎದುರಾಗಿಯೆ ಪ್ರತಿಜ್ಞೆ ಮಾಡಿದನು, ಬ ಳಿಕ ರಾಕ್ಷಸಾಧಿಪನು ಮಾಯಾವಿಯಾದ ಮಾರೀಚನ ಬಳಿಗೆ ಬಂದನು. ಆತನಿಗೆ ರಾವಣನು ಶ್ರೀರಾಮನ ವೃತ್ತಾಂತವನ್ನು ಸವಿಸ್ತಾರವಾಗಿ ತಿಳುಹಿಸಲು, ಮಾರೀ ಚನು ವಿಶ್ವಾಮಿತ್ರರ ಯಜ್ಞದಲ್ಲಿ ಶ್ರೀರಾಮನಿಂದ ತನಗಾದ ಪರಾಭವವನ್ನು ರಾ ವಣನಿಗೆ ಅರಿಕೆಮಾಡಿಕೊಂಡು, ಶ್ರೀರಾಮನೊಡನೆ ನೀನು ವಿರೋಧ ಮಾಡಬೇಡ ವೆಂದು ಬಹು ವಿಧವಾಗಿ ರಾವಣನಿಗೆ ಬುದ್ಧಿ ಹೇಳಿದನು. ಆದರೂ ರಾವಣನು, ಕೇಳಲಿಲ್ಲ. ಮುಂದೆ ಮಾರೀಚನು ರಾವಣನ ನಿರ್ಬಂಧವನ್ನು ತಡೆಯಲಾರದೆ ‹ಆ ಜಗನ್ನಾಯಕನಾದ ಶ್ರೀರಾಮನಿಂದ ನನಗೆ ಮರಣವಾದರೂ ಲೇಸು› ಎಂದು ಭಾವಿಸಿ, ರಾವಣನಿಗೆ ಸಹಾಯಮಾಡಲು ಒಪ್ಪಿಕೊಂಡನು.

ಬಳಿಕ ಮಾಯಾಬಲದಿಂದ ಮಾರೀಚನು ಸುವರ್ಣದ ಜಿಗರೆಯ ರೂಪವನ್ನು ಹೊಂದಿ, ಶ್ರೀ ರಾಮನ ಕುಟೀರದ ಬಳಿಯಲ್ಲಿ ಸಂಚಾರ ಮಾಡತೊಡಗಿದನು. ಅಂಥ ಅಪೂರ್ವವಾದ ಮೃಗವನ್ನು ಜಾನಕಿಯು ನೋಡಿ, ಈ ಮೃಗವನ್ನು ನನಗೆ ತಂದುಕೊಡಿರೆಂದು, ಶ್ರೀ ರಾಮನನ್ನು ಪ್ರಾರ್ಥಿಸಿದಳು. ರಘುನಾಥನೂ ಕೂಡ ಪರ್ಣಶಾಲೆಯ ಬಳಿಯಲ್ಲಿ ಜಾಗರೂಕತೆಯಿಂದ ಇರುವಂತೆ ಲಕ್ಷ್ಮಣನಿಗಾಜ್ಞಾಪಿಸಿ, ತಾನು ಆ ಮೃಗವನ್ನನುಸರಿಸಿ ಹೊರಟನು. ಅದು ಶ್ರೀ ರಾಮನನ್ನು ದೊಡ್ಡ ಅರಣ್ಯದ ವರೆಗೂ ಓಡಿಸಿಕೊಂಡುಬಂತು. ಆದರೂ ಕೈಗೆಸಿಕ್ಕಲಿಲ್ಲ. ರಾಮಚಂದ್ರ ನು ಇನ್ನು ಮುಂದೆ ಹೋಗಬಾರದೆಂದು ತಿಳಿದು ತನ್ನ ಒಂದೇ ಬಾಣದಿಂದ ಆ ಮೃಗ ವನ್ನು ಸೀಳಿದನು. ಅದು ಮರಣಹೊಂದುವಾಗ "ಹಾ, ಲಕ್ಷ್ಮಣಾ, ಹಾ, ಸೀತೆ," ಈ ರೀತಿ ಶ್ರೀ ರಾಮನ ಧ್ವನಿಯಂತೆ ಒದರಿ ಮರಣಹೊಂದಿತು. ಆ ಮಾತುಗಳನ್ನು ಕೇಳಿ ಸೀತೆಯು ಹೆದರಿದಳು. ಮತ್ತು ಲಕ್ಷ್ಮಣನಿಗೆ ಶೀಘ್ರ ಹೋಗಿ ನೋಡಿಕೊಂ ಡು ಬರುವಂತೆ ಆಜ್ಞಾಪಿಸಿದಳು. ಲಕ್ಷ್ಮಣನಿಗಾದರೆ ಇದು ಮಾಯಾವಿಗಳಾದ ರಾಕ್ಷಸರ ಕೃತ್ಯವೆಂದು ಗೊತ್ತಿತ್ತು. ಆಗ ಲಕ್ಷ್ಮಣನು, ತಾಯೇ, ಇಷ್ಟುಗಾಬ ರಿಯಾಕೆ, ಶ್ರೀ ರಾಮನ ರೋಮವನ್ನು ಮುಟ್ಟುವ ಯೋಗ್ಯತೆಯುಳ್ಳವನೂ ಯಾವಲ್ಲಿ ರುವನು ? ಇದೆಲ್ಲ ರಾಕ್ಷಸರ ಮೋಸವಲ್ಲವೆ! ಸ್ವಲ್ಪ ಸಿಹಾನಿಸು, ಶ್ರೀ ರಾಮ

ಸು. ಇಲ್ಲಿಗೆ ಬಂದು ನಿನ್ನನ್ನು ಸಂತೋಷಗೊಳಿಸುವನು, ಎಂದನು. ಆದರೂ ಸೀತಾದೇವಿಗೆ ನಿಧಾನವಾಗಲಿಲ್ಲ. ಆ ದುಃಖ-ಕಾಲದಲ್ಲಿ ಸೀತೆಯು ಲಕ್ಷ್ಮಣನಿಗೆ ಅನೇಕ ಅಪವಾದಕರಗಳಾದ ಮಾತುಗಳನ್ನಾಡಿದಳು, ಇವುಗಳನ್ನೆಲ್ಲಾ ಕೇಳಿ ಲಕ್ಷ್ಮಣನು ಖಿನ್ನನಾದನು, ಮತ್ತು ತಾಯೀ, ತಾವು ಈ ರೀತಿ ದುಷ್ಟಮಾತುಗಳನ್ನಾಡಬಾರದು. ಇದರ ಫಲವನ್ನು ಇನ್ನು ಸ್ವಲ್ಪದಿವಸದಲ್ಲಿ ತಾವೇ ಅನುಬವಿಸ ಬೇಕಾಗುವದು. ಆದರೂ ಚಿಂತೆಯಿಲ್ಲ. ನಾನು ವನದಿಂದ ಪುನಃ ಬರುವವರೆಗೂ ಈ ಗೆರೆಯನ್ನು ದಾಟಿ ಈಚೆಗೆ ಖಂಡಿತವಾಗಿಯೂ ಬರಬೇಡೆಂದು ಹೇಳಿ, ಸೀತೆಯ ಸುತ್ತಲೂ ತನ್ನ ಧನುಸ್ಸಿನಿಂದ ಒಂದು ಗೆರೆಯನ್ನು ಕೊರೆದು, ರಾಮನನ್ನು ಕರೆ ತರಲು ತಾನು ಪ್ರಯಾಣ ಮಾಡಿದನು.

ಪರ್ಣಶಾಲೆಯಲ್ಲಿ ಸೀತೆಯು ಒಬ್ಬಳೇ ಇರುವಳೆಂದು ತಿಳಿದು ರಾವಣನು ಯತಿಯ ರೂಪವನ್ನು ಧರಿಸಿ, ಅಲ್ಲಿಗೆ ಬಂದನು. ಅತಿಥಿಯನ್ನು ನೋಡಿ, ಸೀತೆಯು ಬಹಳ ವಿಶ್ವಾಸದಿಂದ ಕುಟೀರದಲ್ಲಿದ್ದ ಕಂದಮೂಲಾದಿಗಳನ್ನು ಯತಿಗೆ ಸಮರ್ಪಿಸುವದಕ್ಕೆ ಬಂದಳು. ಆಗ ಲಕ್ಷ್ಮಣನು ಹಾಕಿದ್ದ ಗೆರೆಯನ್ನು ದಾಟಲಿಲ್ಲ. ಅದನ್ನು ನೋಡಿ ಯತಿಯು— ಈ ಗೆರೆಯಿಂದ ಹೊರಗೆ ಬಂದು ಬಿಕ್ಷಾ ಹಾಕಿದರೆ ಸ್ವೀಕಾರಮಾಡುವೆನು. ಇಲ್ಲವಾದರೆ ಇಕೋ ಹೊರಡುವೆನು. ಎಂದು ಮುಂದೆ ಹೊರಟಂತೆ ನಟಿಸಿದನು, ಬಳಿಕ ಜಾನಕಿಯು, 'ಮನೆಗೆ ಬಂದ ಅತಿಥಿಯು ಭಿಕ್ಷೆಯನ್ನು ಸ್ವೀಕಾರಮಾಡದೆ ಹಾಗೆಯೇ ಹಿಂತಿರುಗಿದನೆಂದರೆ ಶ್ರೀರಾಮನು ಕೋಪ ಮಾಡಿಕೊಳ್ಳುವನೆಂಬ ಭಯದಿಂದ ಗೆರೆಯನ್ನು ದಾಟಿ ಈಚೆಗೆ ಬಂದಳು. ಆಕ್ಷಣದಲ್ಲಿ ರಾವಣನು ತನ್ನ ನಿಜ ಸ್ವರೂಪವನ್ನು ಧರಿಸಿ, ಸೀತೆಯನ್ನು ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡು ಲಂಕಾಪುರಕ್ಕೆ ಅತಿ ತೀವ್ರದಿಂದ ಪ್ರಯಾಣ ಮಾಡಿದನು. ಆಗ ಸೀತಾದೇವಿಯು— 'ಹಾ ರಾಮ, ಹಾ ಲಕ್ಷ್ಮಣ', ಎಂದು ಗಟ್ಟಿಯಾಗಿ ಒದರುತ್ತ ಅಳಲಾರಂಭಿಸಿದಳು. ಆದರೂ ರಾಮ-ಲಕ್ಷ್ಮಣರಿಗೆ ಈ ಧ್ವನಿಯು ಕೇಳಿಸಲಿಲ್ಲ, ಮುಂದೆ ಸ್ವಲ್ಪದೂರ ಪ್ರಯಾಣ ಮಾಡಿದಬಳಿಕ, ಜಟಾಯುವೆಂಬ ಮಹಾತ್ಮನು ಸೀತೆಯ ರೋದನವನ್ನು ಕೇಳಿ ಒಡನೇ ಬಂದು ರಾವಣನ ರಥವನ್ನು ತಡೆದನು. ಅವರಿಬ್ಬರಿಗೂ ಬಹಳ ಹೊತ್ತಿನವರೆಗೆ ಯುದ್ಧ ನಡೆಯಿತು ಆ ಯುದ್ಧದಲ್ಲಿ ಜಟಾಯುವು ತನ್ನ ರೆಕ್ಕೆಗಳ ಹೊಡತ ಗಳಿಂದ ರಾವಣನ ರಥದ ಅಚ್ಚನ್ನು ಚೂರು ಚೂರು ಮಾಡಿದನು, ಆಗ ರಾವಣನು ತನ್ನ ಖಡ್ಗದಿಂದ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿ ಭೂಮಿಗೆ ಕೆಡಹಿದನು. ಹೊಸದಾದ ಮತ್ತೊಂದು ರಥದಲ್ಲಿ

ಸೀತೆಯನ್ನು ಕುಳ್ಳಿರಿಸಿಕೊಂಡು ರಾಕ್ಷಸಾಧಿಪನು ಬಹು ವೇಗದಿಂದ ತೆರಳಿದನು. ಸೀತಾದೇವಿಯು ಮುಂದೆ ನನಗೆ ಯಾರೂ ರಕ್ಷಕರಿಲ್ಲವೆಂದು ತಿಳಿದು, ಋಷ್ಯಮೂಕಪರ್ವತದಲ್ಲಿ ಸುಗ್ರೀವನೇ ಮೊದಲಾದ ವಾನರಶ್ರೇಷ್ಠರನ್ನು ಕಂಡು, ತನ್ನ ಕೈಲಿದ್ದ ಆಭರಣಗಳನ್ನು ಒಂದು ವಸ್ತ್ರದ ಸೆರಗಿನಲ್ಲಿ ಕಟ್ಟಿ ಅವರ ಸಮೀಪದಲ್ಲಿ ಎಸೆದಳು. ಇತ್ತ ರಾವಣನು ಸೀತೆಯನ್ನು ಲಂಕೆಗೆ ತೆಗೆದುಕೊಂಡು ಹೋಗಿ, ಅಶೋಕವನದಲ್ಲಿಟ್ಟನು. ಮತ್ತು 'ನನ್ನ ವಶಳಾಗು, ನಿನಗೆ ಯಾವ ಐಶ್ವರ್ಯಗಳಿಗೂ ಕೊರತೆ ಇಲ್ಲ' ಎಂದು ಬಹುವಿಧವಾಗಿ ಸೀತೆಯನ್ನು ಪ್ರಾರ್ಥಿಸಿದನು. ಆದರೂ ಸೀತೆಯು ಒಂದು ಮಾತನ್ನಾದರೂ ಆಡಲಿಲ್ಲ. ಬಳಿಕ ರಾಕ್ಷಸೇಶ್ವರನು ಜಾನಕಿಯ ಕಾವಲಿಗಾಗಿ ಹದಿನಾಲ್ಕು ಸಾವಿರ ರಾಕ್ಷಸಿಯರನ್ನು ನಿಯಮಿಸಿದನು. ಆ ಕಾಲದಲ್ಲಿ ಬ್ರಹ್ಮನ ಅಪ್ಪಣೆಯಂತೆ, ದೇವೇಂದ್ರನು ಸೀತೆಗೆ ಒಂದು ವರ್ಷದ ವರೆಗೂ ಹಸಿವೆ ಬಾಯಾರಿಕೆಗಳಾಗದಂತೆ ಮಾಡುವ ಪಾಯಸವನ್ನು ಗುಪ್ತರೀತಿಯಿಂದ ತಂದುಕೊಟ್ಟನು. ಆದರಿಂದ ಸೀತೆಯು ಆ ಯಾವ ದುಃಖಗಳಿಗೂ ಗುರಿಯಾಗಲಿಲ್ಲ.

ಇತ್ತ ಶ್ರೀರಾಮನು ಆಶ್ರಮಕ್ಕೆ ಅಭಿಮುಖನಾಗಿ ಬರುತ್ತಿದ್ದನು. ದಾರಿಯಲ್ಲಿ ಲಕ್ಷ್ಮಣನನ್ನು ನೋಡಿ,—ತಮ್ಮಾ, ಸೀತೆ ಎಲ್ಲಿರುವಳು? ಎಂದು ಗಾಬರಿಯಿಂದ ಪ್ರಶ್ನೆಮಾಡಿದನು. ಆಗ ಲಕ್ಷ್ಮಣನು ನಡೆದ ವೃತ್ತಾಂತವನ್ನೆಲ್ಲ ಸವಿಸ್ತಾರವಾಗಿ ಹೇಳಿದನು. ಇದನ್ನು ಕೇಳಿ ಸೀತೆಯ ವಿಷಯವಾಗಿ ರಾಮನಿಗೆ ಬಹಳ ಯೋಚನೆಯಾಯಿತು. ಆತನು ಆಶ್ರಮದಲ್ಲಿ ಸೀತೆಯು ಇರಲಾರಳೆಂದು ಊಹಿಸಿದನು. ಆಶ್ರಮಕ್ಕೆ ಬಂದು ನೋಡುವಷ್ಟರಲ್ಲಿ ಅದು ಸತ್ಯವಾಗಿತ್ತು. ಅವರು ವನವನ್ನೆಲ್ಲ ಸೀತೆಯನ್ನು ಬಹಳ ಶೋಧಮಾಡಿದರು. ಆದರೂ ಉಪಯೋಗವಾಗಲಿಲ್ಲ. ಆಗ ರಾಮ-ಲಕ್ಷ್ಮಣರಿಗೆ ದುಃಖವಾಯಿತೆಂದು ಬೇರೆ ಹೇಳಬೇಕೆ? ಬಳಿಕ ಅವರಿಬ್ಬರು ದಕ್ಷಿಣದಿಕ್ಕನ್ನನುಸರಿಸಿ, ಸೀತೆಯನ್ನು ಹುಡುಕುತ್ತ ಹೊರಟರು. ದಾರಿಯಲ್ಲಿ ಜಟಾಯುವನ್ನು ನೋಡಿದರು. ಆ ವೃದ್ಧರಾಜನು ಕಂಠಗತಪ್ರಾಣನಾಗಿ ರಾಮಸ್ಮರಣೆ ಮಾಡುತ್ತ ಬಿದ್ದಿದ್ದನು. ಆತನಿಂದ ಸೀತಾದೇವಿಯ ಸಮಾಚಾರವೆಲ್ಲ ರಾಮ-ಲಕ್ಷ್ಮಣರಿಗೆ ತಿಳಿಯಿತು. ಬಳಿಕ ಜಟಾಯುವು ಪರಲೋಕವನ್ನೈದಿದನು. ಆಗ ರಾಮ-ಲಕ್ಷ್ಮಣರು ಆತನಿಗೆ ಉತ್ತರಕ್ರಿಯೆಗಳನ್ನು ಮಾಡಿದರು. ಮರಣಕಾಲದಲ್ಲಿ ದಶರಥನಿಗೂ ದುರ್ಲಭವಾದ ಶ್ರೀರಾಮನ ದರ್ಶನವು ಆ ಮಹಾತ್ಮನಿಗೆ ಸಿಕ್ಕಿತು. ಆಹಾ! ! ಆತನೇನು ಧನ್ಯನೋ? ತಿಳಿಯದು.

ಬಳಿಕ ಶ್ರೀರಾಮನು 'ಹಾ ಸೀತೆ, ಹಾ ಸೀತೆ' ಎಂದು ಪ್ರಲಾಪಮಾಡುತ್ತ ಅರ

ಣ್ಯದಲ್ಲಿ ವೃಕ್ಷಗಳನ್ನೂ, ಪಾಷಾಣಗಳನ್ನೂ ಆಲಿಂಗಿಸುವದಕ್ಕಾರಂಭಿಸಿದನು. ಎಲೈ ಪಾರ್ವತಿಯೆ, ಆಗ ನೀನು ಆತನನ್ನು ಪರೀಕ್ಷಿಸಬೇಕೆಂದು ಸೀತೆಯ ರೂಪವನ್ನು ಧರಿಸಿ, ಅಲ್ಲಿಗೆ ಹೋಗಿರಲಿಲ್ಲವೇ? ಅಂಥಾ ನಿನ್ನನ್ನು ನೋಡಿ ಶ್ರೀ ರಾಮನು—'ಹೇ ಪಾರ್ವತಿ, ನಿನಗೆ ವಂದನೆ ಮಾಡುವೆನು' ಎಂದು ಹೇಳಲಿಲ್ಲವೇ? ಇದು ನಿನಗೆ ಜ್ಞಾಪಕವಿರಬಹುದು. ಇರಲಿ, ಬಳಿಕ ಕಬಂಧನೆಂಬ ರಾಕ್ಷಸನು ಅವರಿಬ್ಬರನ್ನೂ ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ದಕ್ಷಿಣದಿಕ್ಕಿಗೆ ಪ್ರಯಾಣಮಾಡಿದನು. ಆಗ ಲಕ್ಷ್ಮಣನು ತನ್ನ ಖಡ್ಗದಿಂದ ಅವನ ಶಿರಸ್ಸನ್ನು ಛೇದಿಸಲು ಪ್ರಯತ್ನಪಟ್ಟನು. ಅದನ್ನು ನೋಡಿ ಶ್ರೀ ರಾಮನು—ಮಗು, ಸುಮ್ಮನಿರು. ಈಗ ಹೊಡೆಯಬೇಡ. ನಾವೂ ದಕ್ಷಿಣದಿಕ್ಕಿಗೆ ಹೋಗಬೇಕೆಂದಿರುವೆವು. ಅನಾಯಾಸವಾಗಿ ನಮ್ಮ ಕಾಲುನಡಿಗೆಯ ಧಾವತಿಯು ತಪ್ಪಿದಂತಾಯಿತು. ಎಂದು ಹೇಳಿದನು. ಮುಂದೆ ಕಬಂಧನು ಬಹಳ ದೂರ ಪ್ರಯಾಣಮಾಡಿದನು. ಅಲ್ಲಿ ಶ್ರೀ ರಾಮನ ಅಪ್ಪಣೆಯನ್ನು ಪಡೆದು ಲಕ್ಷ್ಮಣನು ಅವನ ಶಿರಸ್ಸನ್ನು ಚಂಡಾಡಿದನು. ಆ ಕ್ಷಣದಲ್ಲಿ ಆ ದೇಹದಿಂದ ದಿವ್ಯಸುಂದರರೂಪವು ಪ್ರಕಟವಾಯಿತು. ಆ ಕಬಂಧದೈತ್ಯನು ತನ್ನ ವೃತ್ತಾಂತವನ್ನು ರಾಮ-ಲಕ್ಷ್ಮಣರಿಗೆ ತಿಳುಹಿ, ತನ್ನ ಲೋಕಗಳಿಗೆ ಪ್ರಯಾಣಮಾಡಿದನು. ಬಳಿಕ ರಾಮ-ಲಕ್ಷ್ಮಣರು ಶಬರಿಯ ಆಶ್ರಮಕ್ಕೆ ಹೋಗಿ, ಆಕೆಯು ಪರಮಭಕ್ತಿಯಿಂದ [illegible] ಫಲಗಳನ್ನು ಅತ್ಯಾದರದಿಂದ ಸ್ವೀಕರಿಸಿ, ಆ ಪುಣ್ಯವತಿಯಾದ ಭಕ್ತಳಿಗೆ ವೈಕುಂಠಲೋಕಕ್ಕೆ ಪ್ರಯಾಣಮಾಡುವಂತೆ ಅಪ್ಪಣೆ ಮಾಡಿದರು. ಮತ್ತು ಶಬರಿಯ ಮಾತಿನಂತೆ ದಾರಿಯಲ್ಲಿ ಸುಗ್ರೀವನೇ ಮೊದಲಾದ ವಾನರಶ್ರೇಷ್ಠರು ವಾಸಮಾಡುವ ಋಷ್ಯಮೂಕಪರ್ವತವನ್ನು ಕಂಡರು.

## ೭ ನೆಯ ಪ್ರಕರಣ.

ವಾಲಿಯ ಸಂಹಾರವೂ, ಸೀತೆಯ ಶೋಧಾರಂಭವೂ.

ಶಂಕರನು ಮಾತನಾಡುತ್ತಾನೆ—ಪಾರ್ವತಿಯೇ, ಶ್ರೀ ರಾಮನು ತಮ್ಮನೊಡನೆ ಋಷ್ಯಮೂಕಪರ್ವತದ ಕಡೆಗೆ ಪ್ರಯಾಣಮಾಡಿದನು. ಅವನು ಭಯಂಕರವಾ

ದ ಅರಣ್ಯದಲ್ಲಿ ಸಂಚಾರ ಮಾಡುತ್ತಿದ್ದುದರಿಂದ ಯಾವಾಗಲೂ ಧನಸ್ಸನ್ನು ಕೈಯಲ್ಲಿ ಹಿಡಿದಿರುತ್ತಿದ್ದರು. ಋಷ್ಯಮೂಕ ಪರ್ವತದ ಮೇಲೆ ನಿಂತಿರುವ ಸುಗ್ರೀವನು ರಾಮ-ಲಕ್ಷ್ಮಣರನ್ನು ನೋಡಿ—'ನಮ್ಮನ್ನು ನಾಶಮಾಡುವದಕ್ಕಾಗಿ ಅಣ್ಣನಾದ ವಾಲಿಯೇನಾದರೂ ಇವರನ್ನು ಕಳುಹಿಸಿರಬಹುದೋ, ಎಂದು ಯೋಚಿಸಿದನು ಮತ್ತು ಇವರ ವಿಷಯವನ್ನು ವಿಚಾರಿಸಬೇಕೆಂದು ಆಂಜನೇಯನನ್ನು ರಾಮ-ಲಕ್ಷ್ಮಣರ ಬಳಿಗೆ ಕಳುಹಿಸಿದನು. ಆಂಜನೇಯನಾದರೂ ಬ್ರಹ್ಮಚಾರಿಯ ವೇಷವನ್ನು ಧರಿಸಿ ಶ್ರೀ ರಾಮನಬಳಿಗೆ ಬಂದು, ಆತನಪೂರ್ವವೃತ್ತಾಂತವನ್ನೆಲ್ಲಾ ವಿಚಾರಿಸಿದನು, ಇವರ ಸಂಭಾಷಣೆಗಳನ್ನೆಲ್ಲಾ ಕೇಳಿ ಲಕ್ಷ್ಮಣನು—'ಅಣ್ಣಾ, ಈತನನ್ನು ನೋಡಿದರೆ, ಪೂರ್ವದಲ್ಲಿ ನಮಗೆ ಶಬರಿಯು ಹೇಳಿದಂತೆ, ಸುಗ್ರೀವನ ಸ್ನೇಹಮಾಡಲೋಸುಗ ಬಂದಿರುವ ಮಹಾತ್ಮನಂತೆ ತೋರುವನು.' ಎಂದನು. ಲಕ್ಷ್ಮಣನ ಈ ಮಾತುಗಳನ್ನು ಕೇಳಿ, ಆಂಜನೇಯನಿಗೆ ಪರಮ ಹರ್ಷವಾಯಿತು. ಕೂಡಲೆ ಆತನು ತನ್ನ ನಿಜಸ್ವರೂಪವನ್ನು ಹೊಂದಿ, ರಾಮ—ಲಕ್ಷ್ಮಣರಿಗೆ ನಮಸ್ಕರಿಸಿ,—ಸ್ವಾಮಿ, ನಮ್ಮ ಪ್ರಭುವಾದ ಸುಗ್ರೀವನು ತಮ್ಮನ್ನು ನೋಡಬೇಕೆಂದಿರುವನು. ದಯಮಾಡಿಸಬೇಕು.' ಎಂದು ಪ್ರಾರ್ಥನೆ ಮಾಡಿದನು. ಬಳಿಕ ಅವರ ಅನುಮತಿಯನ್ನು ಪಡೆದು, ಮಾರುತಿಯು ರಾಮ-ಲಕ್ಷ್ಮಣರಿಬ್ಬರನ್ನೂ ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು, ಸುಗ್ರೀವನ ಬಳಿಗೆ ಕರೆತಂದನು.

ಅನಂತರ ಆಂಜನೇಯನು ಸುಗ್ರೀವನಿಗೆ ರಾಮ-ಲಕ್ಷ್ಮಣರ ಗೂಢತತ್ವವನ್ನು ತಿಳುಹಿದನು. ಸುಗ್ರೀವನಿಗೂ ರಾಮ-ಲಕ್ಷ್ಮಣರಿಗೂ ಅಗ್ನಿಸಾಕ್ಷಿಯಾಗಿ ಸ್ನೇಹವಾದಬಳಿಕ, ಪರಸ್ಪರರು ಸಹಾಯಮಾಡಲು ಪ್ರತಿಜ್ಞೆ ಮಾಡಿದರು. ಸುಗ್ರೀವನು ಲಕ್ಷ್ಮಣನ ಮುಖದಿಂದ ಶ್ರೀ ರಾಮನ ಸಮಸ್ತ ವೃತ್ತಾಂತವನ್ನೂ ವಿಶದವಾಗಿ ವಿಚಾರಿಸಿ, ತನ್ನ ಸಮಾಚಾರವನ್ನು ಶ್ರೀ ರಾಮನಿಗೆ ಹೇಳಲಾರಂಭಿಸಿದನು,—'ಓ ದಶರಥಪುತ್ರನೇ, ಕೇಳು. ನಾವು ಅಣ್ಣ-ತಮ್ಮಂದಿರು ಇಬ್ಬರಿರುವೆವು, ನಮ್ಮ ಅಣ್ಣನ ಹೆಸರು ವಾಲಿ. ಆತನು ಈಗ ಕಿಷ್ಕಿಂಧಾನಗರದಲ್ಲಿ ರಾಜ್ಯಭಾರಮಾಡುತ್ತಿರುವನು. ಒಂದಾನೊಂದು ಕಾಲದಲ್ಲಿ ಮಯನೆಂಬ ಶಿಲ್ಪಿಯ ಮಗನಾದ ದುರ್ಮದನು ಕಿಷ್ಕಿಂಧೆಗೆ ಬಂದನು. ಮತ್ತು ಆತನು ನಮ್ಮ ಅಣ್ಣನನ್ನು ಯುದ್ಧಮಾಡಲು ಕರೆದನು. ಆಗ ಪರಾಕ್ರಮಿಯಾದ ನಮ್ಮ ಅಣ್ಣನು ಯುದ್ಧದಲ್ಲಿ ಒಂದು ಮುಷ್ಟಿಪ್ರಹಾರಮಾಡಿದೊಡನೆ ಆ ದುರ್ಮದನು ಸಮೀಪದಲ್ಲಿರುವ ಒಂದು ಗುಹೆಯೊಳಗೆ ಓಡಿಹೋದನು. ಬಳಿಕ ವಾಲಿಯೂ ಕೂಡ ಬಹು ರೋಷದಿಂದ ಆ

ನೂ ಅವನನ್ನು ಹಿಂಬಾಲಿಸಿದನು. ಆಗ ಅಣ್ಣನಾದ ವಾಲಿಯು—"ನಾನು ತಿರುಗಿ ಬರುವವರೆಗೂ ಗುಹೆಯ ಬಾಗಿಲಲ್ಲೇ ಕಾದುಕೊಂಡಿರು," ಎಂದು ನನಗೆ ಅಪ್ಪಣೆ ಮಾಡಿದ್ದನು. ಅದರಂತೆ ನಾನು ಒಂದು ತಿಂಗಳ ವರೆಗೆ ಬಾಗಿಲಲ್ಲೇ ಕಾದಿದ್ದೆನು. ಆದರೂ ನಮ್ಮ ಅಣ್ಣನು ಬರಲಿಲ್ಲ. ಮುಂದೆ ಒಂದು ದಿವಸ ಆ ಗುಹೆಯಿಂದ ಒಂದು ರಕ್ತದ ಪ್ರವಾಹವು ಹೊರಗೆ ಬಂತು. ಅದನ್ನು ನೋಡಿ ಮಂತ್ರಿಶ್ರೇಷ್ಠರು—'ಆ ರಾಕ್ಷಸನು ವಾಲಿಯನ್ನು ಕೊಂದಿರಬಹುದು.' ಹೀಗೆಂದು ಯೋಚಿಸಿ, ಈ ನಗರಕ್ಕೆ ಆ ರಾಕ್ಷಸನ ಬಾಧೆಯಾಗಬಾರದೆಂದು ಗುಹೆಯ ಬಾಗಿಲಿಗೆ ದೊಡ್ಡ ದೊಡ್ಡ ಕಲ್ಲುಗಳನ್ನು ಮುಚ್ಚಿಸಿದರು. ಬಳಿಕ ಪ್ರಜೆಗಳೆಲ್ಲರೂ ನನ್ನನ್ನೇ ರಾಜನನ್ನಾಗಿ ಮಾಡಿದರು.

ಹೀಗೆ ಕೆಲವು ದಿವಸಗಳು ಕಳೆಯಲು, ವಾಲಿಯು ಆ ರಾಕ್ಷಸನನ್ನು ಸಂಹಾರಮಾಡಿ ಗುಹೆಯ ಬಾಗಿಲಿಗೆ ಬಂದನು. ಆಗ ನಾವು ಯಾರೂ ಅಲ್ಲಿ ಇರಲಿಲ್ಲ. ಬಾಗಿಲಿಗೆ ಹಾಕಿದ್ದ ಬಂಡೆಗಳನ್ನು ಉರುಳಿಸಿ ಹೊರಗೆ ಬಂದ ವಾಲಿಯು ನಾನು "ಕಿಷ್ಕಿಂಧಾಪಟ್ಟಣಕ್ಕೆ ರಾಜನಾಗಿರುವನೆಂಬ ವಾರ್ತೆಯನ್ನು ಕೇಳಿ ಬಹಳ ಕೋಪಗೊಂಡನು. ಆತನು ನನ್ನನ್ನು ಹೊಡೆದು ನಗರದಿಂದ ಹೊರಕ್ಕೆ ಓಡಿಸಿದನು. ಅಲ್ಲದೆ 'ಯಾರು ಸುಗ್ರೀವನಿಗೆ ಸಹಾಯಮಾಡುವರೋ, ಅವರನ್ನು ನಾನು ಎಂದಿಗೂ ಉಳಿಯಗೊಡಲಿಕ್ಕಿಲ್ಲ.' ಎಂದು ಪ್ರತಿಜ್ಞೆಮಾಡಿದನು. ನಾನಾದರೂ ಆತನಭಯದಿಂದ ಈ ಋಷ್ಯಮೂಕಪರ್ವತದಲ್ಲಿ ವಾಸಮಾಡಿರುವೆನು. ಈ ಪರ್ವತದ ಪಟ್ಟಿಗೆ ವಾಲಿಯ ಹೆದರಿಕೆ ಏನೂ ಇಲ್ಲ. ಇದಕ್ಕೆ ಕಾರಣವನ್ನು ಹೇಳುವೆನು, ರಾಮಚಂದ್ರನೇ ಕೇಳು. ಪೂರ್ವದಲ್ಲಿ ವಾಲಿಯ ಸಂಗಡ ಯುದ್ಧಮಾಡಬೇಕೆಂದು ಕೋಣನ ರೂಪವನ್ನು ಧರಿಸಿದ ದುಂದುಭಿ ಎಂಬ ರಾಕ್ಷಸನು ಕಿಷ್ಕಿಂಧೆಗೆ ಬಂದನು. ಅವನ ಸಂಗಡ ಬಲಿಷ್ಠನಾದ ವಾಲಿಯು ಯುದ್ಧಮಾಡಿ, ಅವನ ಕೊಂಬನ್ನು ಹಿಡಿದು ಬೀಸಿ ಎಸೆದನು. ಆ ರಾಕ್ಷಸನು ಈ ಮತಂಗ ಋಷಿಗಳ ಆಶ್ರಮದಲ್ಲಿ ಬಂದುಬಿದ್ದನು. ಅವನ ರಕ್ತದಿಂದ ಆಶ್ರಮವೆಲ್ಲ ದೂಷಿತವಾಯಿತು. ಇದನ್ನು ನೋಡಿ, ಮಹರ್ಷಿಗಳು 'ಎಲೋ ವಾನರನೇ, ನೀನು, ಇನ್ನು ಮೇಲೆ ಈ ಪ್ರಾಂತಕ್ಕೆ ಬಂದರೆ ನಿನ್ನ ಶಿರಸ್ಸು ಸಹಸ್ರ ಚೂರಾಗಲಿ, ಎಂದು ಶಪಿಸಿದರು. ಇದನ್ನು ತಿಳಿದು ಆತನು ಇಲ್ಲಿಗೆ ಬರುವದಿಲ್ಲ.

ಈ ಪ್ರಕಾರ ನುಡಿದ ಸುಗ್ರೀವನು ಮತ್ತೆ ರಾಮನನ್ನು ಕುರಿತು—ಶ್ರೀ ರಾಮನೇ, ಜಾನಕಿಯು ಇರುವ ಸ್ಥಳವು ನಮಗೆ ಗೊತ್ತುಂಟು. ಆಕೆಯನ್ನು ರಾವಣ

ನು ಕದ್ದೊಯ್ದಿರುವನು. ಅವನು ಲಂಕೆಗೆ ಹೋಗುವಾಗ ಇದೇ ಆಶ್ರಮದ ಬಳಿಯಲ್ಲೇ ಪ್ರಯಾಣಮಾಡಿದನು. ಆಗ ನನಗೆ ಈ ವಿಷಯವು ತಿಳಿದಿರಲಿಲ್ಲ. ಆದರೆ ಸೀತೆಯು ತನ್ನ ಕೆಲವು ಆಭರಣಗಳನ್ನು ಒಂದು ಬಟ್ಟೆಯಲ್ಲಿ ಕಟ್ಟಿ. ಇಲ್ಲಿ ಬಿಸುಟಿದಳು. ಆ ಆಭರಣಗಳನ್ನು ನೋಡು; ಹೀಗೆಂದು ಒಡವೆಯ ಗಂಟನ್ನು ತರಿಸಿ ಶ್ರೀ ರಾಮನ ಸಮೀಪದಲ್ಲಿರಿಸಿದನು. ಅವುಗಳನ್ನು ನೋಡಿ ಶ್ರೀ ರಾಮನಿಗೆ ಬಹಳ ದುಃಖವಾಯಿತು. ಆತನು ಆ ಒಡವೆಗಳನ್ನು ಲಕ್ಷ್ಮಣನಿಗೆ ತೋರಿಸಿ—ತಮ್ಮಾ, 'ಈ ಆಭರಣಗಳು ಸೀತೆಯುವಲ್ಲವೆ, ನೋಡು' ಎಂದನು. ಆಗ ರಾಮಚಂದ್ರನನ್ನು ಕುರಿತು, ಲಕ್ಷ್ಮಣನು 'ಅಣ್ಣಾ, ಈ ಆಭರಣಗಳ ಪರಿಚಯವೇ ನನಗಿಲ್ಲ. ನಾನು ಸೀತಾದೇವಿಯ ಪಾದಗಳನ್ನು ಹೊರತಾಗಿ ಮುಖವನ್ನು ಎಂದಿಗೂ ನೋಡಿದವನಲ್ಲ' ಎಂದನು. ಈ ವಚನಗಳನ್ನು ಕೇಳಿ ಶ್ರೀ ರಾಮನಿಗೆ ಬಹಳ ಸಂತೋಷವಾಯಿತು.

ಶ್ರೀ ರಾಮನು ಸೀತೆಯ ಆಭರಣಗಳನ್ನೆಲ್ಲ ಲಕ್ಷ್ಮಣನಿಗೆ ತೋರಿಸಿದನು. ಮತ್ತು ಸುಗ್ರೀವನಿಗೆ ತನ್ನ ಬಲದ ವಿಷಯದಲ್ಲಿ ಸಂಶಯಬರಬಾರದೆಂದು, ಆತನು ಅಲ್ಲಿ ಬಿದ್ದಿದ್ದ ದುಂದುಭಿಯ ದೇಹವನ್ನು ಎಡಗಾಲಿನ ಹೆಬ್ಬೆಟ್ಟಿನಿಂದ ಮುಟ್ಟಿದನು. ಅದು ಹತ್ತುಗಾವುದಗಳಿಂದ ಆಚೆಗೆ ಬಿತ್ತು. ಬಳಿಕ ಶ್ರೀ ರಾಮನು ಸಮೀಪದಲ್ಲಿ ಕಾಣುವ ಏಳು ತಾಲವೃಕ್ಷಗಳನ್ನು ಒಂದೇ ಬಾಣದಿಂದ ಹೊಡೆದು ಕೆಡಹಿದನು. ಅದನ್ನು ನೋಡಿ, ಈತನು ವಾಲಿಯನ್ನು ಕೊಲ್ಲುವನೆಂದು ಸುಗ್ರೀವನಿಗೆ ನಿಶ್ಚಯವಾಯಿತು. ಆತನು ಶ್ರೀ ರಾಮನನ್ನು ಕುರಿತು—ಪ್ರಭೋ, ನನಗೆ ಇದೊಂದು ಸಂಶಯವಿರುವದು. ಅದೇನೆಂದರೆ, ವಾಲಿಯಬಳಿಯಲ್ಲಿ ಒಂದು ಸ್ವರ್ಣಹಾರವಿರುವದು. ಅದನ್ನು ಇಂದ್ರನು ಆತನಿಗೆ ಕೊಟ್ಟಿರುವನು. ಆ ಸ್ವರ್ಣಮಾಲಿಕೆಯನ್ನು ಧರಿಸಿರುವಾಗ ನಿನಗೆ ಎದುರಾಗಿ ಬಂದ ಶತ್ರುವು ಸ್ತಬ್ಧವಾಗುವನು, ಎಂದು ಇಂದ್ರನು ವಾಲಿಗೆ ವರಕೊಟ್ಟಿರುವನು. ಅದನ್ನು ಹ್ಯಾಗೆ ಅಪಹಾರ ಮಾಡುವದು ? ಎಂದನು. ಬಳಿಕ ಶ್ರೀ ರಾಮನು ಒಂದು ಸರ್ಪದ ಸಹಾಯದಿಂದ ಆ ಮಾಲಿಕೆಯನ್ನು ವಾಲಿಯಲ್ಲಿಂದ ತರಿಸಿ, ದೇವೇಂದ್ರನಿಗೆ ತಿರುಗಿ ಕಳುಹಿಸಿದನು. ಇಷ್ಟಾದ ಬಳಿಕ ಸುಗ್ರೀವನು ರಾಮನ ಅಪ್ಪಣೆಯನ್ನು ಪಡೆದು ವಾಲಿಯೊಡನೆ ಯುದ್ಧಮಾಡಿದನು. ಆಗ ಶ್ರೀ ರಾಮನು ಧನುರ್ಧಾರಿಯಾಗಿದ್ದರೂ, ವಾಲಿ-ಸುಗ್ರೀವರಿಬ್ಬರೂ ಒಂದೇ ಹೋಲಿಕೆಯವರಾದ್ದರಿಂದ ವಾಲಿಯೆಂಬುವನು ಈತನೇ ಎಂದು ಗೊತ್ತಾಗಲೇ ಇಲ್ಲ. ಸುಗ್ರೀವನಿಗೆ ವಾಲಿಯೊಡನೆ ಯುದ್ಧಮಾಡಿ

ನಾಶವಾಯಿತು. ಆದರೂ ಶ್ರೀರಾಮನು ವಾಲಿಯನ್ನು ಕೊಲೆಯುತ್ತೀ ಇಲ್ಲ. ಇಷ್ಟಾದ ಮೇಲೆ ಸುಗ್ರೀವನು ಬಳಲಿ, ಹಿಂತಿರುಗಿ ರಾಮನ ಬಳಿಗೆ ಬಂದು, ಎಲೈ ರಾಮಚಂದ್ರನೇ ನನ್ನನ್ನು ವಾಲಿಯ ಕೈಯಿಂದ ಕೊಲ್ಲಿಸಬೇಕೆಂದು ಯೋಚಿಸಿರು ವೆಯಾ ಹ್ಯಾಗೆ ಎಂದು ದೀನಸ್ವರದಿಂದ ಪ್ರಶ್ನೆ ಮಾಡಿದನು. ಆಗ ಶ್ರೀರಾಮ ನು—"ಎಲೈ ಮಿತ್ರನೇ, ಎಂದಿಗೂ ನಾನು ಹಾಗೆ ಮಾಡತಕ್ಕವನಲ್ಲ. ಈ ದಿನ ಯುದ್ಧದಲ್ಲಿ ನಿಮ್ಮಿಬ್ಬರೊಳಗೆ ವಾಲಿಯ ಗುರುತೇ, ಅದೇ ತಿಳಿಯಲಿಲ್ಲ. ನಾಳೆ ನೀನು ಯುದ್ಧಕ್ಕೆ ಹೋಗುವಾಗ ಈ ಪುಷ್ಪಮಾಲಿಕೆಯನ್ನು ಧರಿಸಿಕೋ. ಬಳಿಕ ನಾನು ಖಂಡಿತವಾಗಿ ವಾಲಿಯನ್ನು ಸಂಹರಿಸುವೆನು" ಎಂದನು. ಅದೇ ಪ್ರಕಾರ ನಂತೆ ಸುಗ್ರೀವನು ಮರುದಿವಸವು ವಾಲಿಯೊಡನೆ ಯುದ್ಧಕ್ಕೆ ತೆರಳಿದನು. ಆ ದಿವಸ ಯುದ್ಧಕ್ಕೆ ಬರುವಾಗ್ಗೆ ವಾಲಿಗೆ ದುಶ್ಶಕುನಗಳಾದವು. ಆತನ ಪತ್ನಿಯು ಸರ್ವಥಾ ಹೋಗಲಾಗದೆಂದು ತಡೆದಳು. ಆಗ ವಾಲಿಯು—"ಎಲೈ ಸ್ತ್ರೀಯೇ, ನಿನಗೇನು ತಿಳಿಯುವದು. ಶ್ರೀರಾಮನು ಸಾಕ್ಷಾತ್ ನಾರಾಯಣನಲ್ಲವೇ? ಆತನ ಕೈಯಿಂದ ಮರಣವು ನನಗಾಯಿತೆಂದರೆ, ವೈಕುಂಠವು ಅಂಗೈಯಲ್ಲಿರುವದು. ನೋಡು ದೇವೇಂದ್ರನು ಕೊಟ್ಟ ಸುವರ್ಣಮಾಲಿಕೆಯು ಈ ದಿವಸ ಗುಪ್ತವಾ ಯಿತು. ಮತ್ತು ಸಪ್ತತಾಲಗಳನ್ನು ನಿನ್ನೆಯ ದಿವಸ ಶ್ರೀರಾಮನು ಒಂದೇ ಬಾಣದಿಂದ ಹೊಡೆದನಂತೆ. ಅಂದ ಮೇಲೆ ನಾನು ದೇಹ ಬಿಡುವ ಕಾಲವು ಸ ಮೀಪಿಸಿತು. ಎಲೈ ತಾರಾದೇವಿಯೇ, ನೀನು ನನ್ನ ಮರಣಾನಂತರ ಸುಗ್ರೀವ ನನ್ನು ಹೊಂದು. ಆತನ ಸೇವೆಯಲ್ಲಿ ದುರಂಧರಳಾಗು. ಅಂದರೆ ಆತನಿಗೆ ಅಪಕಾರಮಾಡಿದ್ದರಿಂದುಂಟಾದ ನನ್ನ ಪಾಪಗಳು ಪರಿಹಾರವಾಗುವವು." ಎಂದು ತಾರೆಗೆ ಒಪ್ಪಳೆ ಉಪದೇಶ ಮಾಡಿ ಯುದ್ಧಕ್ಕೆ ಸಿದ್ಧನಾದನು.

ಮೊದಲಿನಂತೆ ಸುಗ್ರೀವ-ವಾಲಿಗಳ ಯುದ್ಧವು ಬಹಳ ಘೋರವಾಗಿ ನಡೆ ಯಿತು. ಆ ಕಾಲದಲ್ಲಿ ಶ್ರೀರಾಮನು ತನ್ನ ಹದನವಾದ ಬಾಣದಿಂದ ವಾಲಿಯ ನ್ನು ಹೊಡೆದನು. ಕೂಡಲೆ ವಾಲಿಯು ಸಮರಾಂಗಣದಲ್ಲಿ ನಿಲ್ಲಲು ಶಕ್ತಿಸಾಲದೆ ಭೂಮಿಯನ್ನಾಶ್ರಯಿಸಿದನು. ಈ ವರ್ತಮಾನವನ್ನು ಕೇಳಿ, ತಾರಾದೇವಿಯು ಅತಿ ದುಃಖದಿಂದ ಸಮರಾಂಗಣಕ್ಕೆ ಬಂದು ವಿಲಾಪಮಾಡಲಾರಂಭಿಸಿದಳು. ವಾಲಿಯು ಪ್ರಾಣೋತ್ಕ್ರಮಣಕಾಲದಲ್ಲಿ ಶ್ರೀರಾಮನನ್ನು ಕುರಿತು—"ಎಲೈ ರಘುನಾಥನೇ ನೀನು ಕ್ಷತ್ರಿಯ ಧರ್ಮವನ್ನು ಬಿಟ್ಟು ಈ ದಿವಸ ನನ್ನನ್ನು ಸಂಹಾರ ಮಾಡಿದೆ. ನಾ ನು ನಿನಗೆ ಅಂಥ ಯಾವ ಅಪರಾಧವನ್ನು ಮಾಡಿದ್ದೆನು? ಪೂರ್ವಾದಿಲೋಕಗಳಲ್ಲಿ

ನಿನ್ನ ಚರಿತ್ರೆ ಇರುವವರೆಗೂ ನಿನ್ನ ಕೀರ್ತಿಯೂ ನಿನ್ನ ಅಪಕೀರ್ತಿಯೂ ಪ್ರಕಾಶಮಾನಗಳಾಗಿರುವವು. ಇಷ್ಟು ಕಷ್ಟ ಪಡುವವಕ್ಕಿಂತಲೂ ಮೊದಲೇ ನನಗೆ ತಿಳಿಸಿದ್ದರೆ, ನಿನ್ನ ಎದುರಿಗೆ ರಾವಣನನ್ನು ಕಳ್ಳನಂತೆ ಹಿಡಿದು ತಂದು ನಿಲ್ಲಿಸುತ್ತಿದ್ದೆನು. ಮುಖ್ಯ ನಿನ್ನ ಯೋಗ್ಯತೆಗೆ ಸರಿಯಾದ ಕೆಲಸವನ್ನೇನೂ ನೀನು ಮಾಡಲಿಲ್ಲ" ಎಂದನು.

ಈ ಮಾತುಗಳನ್ನು ಕೇಳಿ ಶ್ರೀರಾಮನು "ಎಲೈ ವಾಲಿಯೇ, ನೀನು ಸಜ್ಜನನಾದ ತಮ್ಮನನ್ನು ಪಟ್ಟಣದಿಂದ ಓಡಿಸಿ, ಅವನಿಗೆ ನಾನಾವಿಧವಾದ ವ್ಯಥೆಗಳನ್ನು ಕೊಟ್ಟು, ಅವನ ಪತ್ನಿಯನ್ನು ನಿನ್ನ ಬಳಿಯಲ್ಲಿ ಇರಿಸಿಕೊಂಡಿರುವಂತೆ ವರ್ತಮಾನವನ್ನು ಕೇಳಿ, ವಿಷಯಲೋಲುಪನಾದ ನಿನ್ನನ್ನು ಸಂಹರಿಸಿದೆನು. ನೀನು ಈ ದೋಷವನ್ನು ತಿಳಿಸಿಕೊಳ್ಳಲು ದ್ವಾಪರಯುಗದ ಕೊನೆಯಲ್ಲಿ ಭಿಲ್ಲನ ವೇಷದಿಂದ ಮರದ ಮೇಲೆ ಕುಳಿತು ಕೊಂಡಿದ್ದು, ನನ್ನ ಪಾದಕ್ಕೆ ಬಾಣವನ್ನು ಹೊಡೆದುಬಿಡು. ಈಗ ನೀನು ನನ್ನ ಕೈಯಿಂದ ಮೃತನಾದದ್ದರಿಂದ ವೈಕುಂಠದಲ್ಲಿ ನಿನಗೆ ವಾಸಸ್ಥಾನವು ದೊರೆಯಲಿ" ಎಂದು ವಾಲಿಯನ್ನು ಕುರಿತು ಮಾತನಾಡಿದನು. ಬಳಿಕ ವಾಲಿಯು ಶ್ರೀ ರಾಮನಿಗೆ ನಮಸ್ಕಾರಮಾಡಿ, ಮಗನಾದ ಅಂಗದನನ್ನು ಶ್ರೀ ರಾಮನಿಗೆ ಒಪ್ಪಿಸಿ, ಸುಗ್ರೀವನನ್ನು ಸಮಾಧಾನಗೊಳಿಸಿ, ತಾರಾದೇವಿಗೆ ಮತ್ತೆ ಬುದ್ಧಿವಾದ ಹೇಳಿ, ಶ್ರೀ ರಾಮನನ್ನು ನೋಡುತ್ತಾ ದೇಹತ್ಯಾಗಮಾಡಿದನು. ಬಳಿಕ ಶ್ರೀ ರಾಮನು ವಾಲಿಯ ಉತ್ತರಕ್ರಿಯೆಗಳನ್ನೆಲ್ಲಾ ಅಂಗದನ ಕಡೆಯಿಂದಲೇ ನಡೆಸಿದನು. ಅಷ್ಟರೊಳಗೆ ಮಳೆಗಾಲವು ಪ್ರಾಪ್ತವಾದ್ದರಿಂದ ಶ್ರೀ ರಾಮನು ಪ್ರಹರ್ಷಣಪರ್ವತದ ಶಿಖರದಲ್ಲಿರುವ ಗುಹೆಯಲ್ಲಿ ವಾಸಮಾಡಲು ನಿಶ್ಚಯಿಸಿದನು. ಅದರಂತೆಯೇ ನಾಲ್ಕು ತಿಂಗಳವರೆಗೆ ಆ ಗುಹೆಯಲ್ಲಿ ರಾಮ-ಲಕ್ಷ್ಮಣರು ಪರಮಹರ್ಷದಿಂದ ಕಾಲಕಳೆದರು. ಆ ಮಧ್ಯೆ ಒಂದು ದಿವಸ ಲಕ್ಷ್ಮಣನು ಸ್ನಾನಕ್ಕೋಸ್ಕರ ನದಿಗೆ ಹೋಗಿದ್ದನು. ಬರುವಾಗ ಶ್ರೀ ರಾಮನು ಸಾತ್ವಿಕ ಸೀತೆಯೊಡನೆ ಮಾತನಾಡುತ್ತಿರುವದನ್ನು ಕಂಡನು. ಲಕ್ಷ್ಮಣನು ಸೀತೆಗೆ ವಂದನೆಮಾಡಿದನು. ಆ ಕ್ಷಣದಲ್ಲಿಯೇ ಸೀತೆಯು ಶ್ರೀ ರಾಮನ ಅಂಕದಲ್ಲಿ ಲೀನಳಾದಳು. ಸಾತ್ವಿಕ ಸೀತೆಯೆಂಬದು ಸೀತೆಯ ಮೂರು ರೂಪಗಳಲ್ಲಿ ಒಂದು ರೂಪವೆಂದು ಹಿಂದೆ ಹೇಳಿರುತ್ತದೆ.

ಇತ್ತಲಾ ಸುಗ್ರೀವನು ವಿಷಯಾಸಕ್ತನಾಗಿ ಸ್ವಾಮಿಕಾರ್ಯಗಳನ್ನು ಮರೆತೇಬಿಟ್ಟನು. ಅಂಜನೇಯನು ಎಷ್ಟು ಬೋಧಿಸಿದರೂ ಪ್ರಯೋಜನವಾಗಲಿಲ್ಲ. ಬಳಿಕ ಶ್ರೀ ರಾಮನು—ಇದುವರೆಗೂ ಸುಗ್ರೀವನು ನಮ್ಮ ಕಡೆಗೆ ಬರಲಿಲ್ಲ. ಶೀಘ್ರವಾಗಿ ಕಿಷ್ಕಿಂಧೆಗೆ ಹೋಗಿ ನೋಡಿಕೊಂಡು ಬಾರೆಂದು ಲಕ್ಷ್ಮಣನಿಗೆ ಅಪ್ಪ

ಮಾಡಿದನು. ಲಕ್ಷ್ಮಣನು ಅಪ್ಪಣೆಯಂತೆ ಧನುಸ್ಸನ್ನು ಟೆಂಕರಿಸುತ್ತಾ ರಾಜಗೃಹದ ಬಳಿಗೆ ನಡೆದನು. ಲಕ್ಷ್ಮಣನ ಧ್ವನಿಯನ್ನು ಕೇಳಿ ಸುಗ್ರೀವನು ಹೆದರಿ, ಶ್ರೀ ರಾಮನನ್ನು ಕರೆತರಲು ಆಂಜನೇಯನನ್ನು ಕಳುಹಿಸಿದನು; ಮತ್ತು ಲಕ್ಷ್ಮಣನನ್ನು ಸಮಾಧಾನಪಡಿಸಲು ತಾರಾದೇವಿಗೆ ಅಪ್ಪಣೆಮಾಡಿದನು. ಆಗ ತಾರೆಯು ಲಕ್ಷ್ಮಣನಿಗೆ ಶರಣಾಗತಳಾಗಿ—"ಪ್ರಭೋ, ಕೋಪಮಾಡಲಾಗದು. ಸೈನ್ಯಗಳನ್ನೆಲ್ಲಾ ಸಿದ್ಧಮಾಡಿರುವರು. ರಾಮಕಾರ್ಯಕ್ಕೆ ಎಲ್ಲರೂ ಇಷ್ಟರಲ್ಲಿ ಹೊರಡುವರು"ಎಂದು ವಿನಯದಿಂದ ಪ್ರಾರ್ಥನೆಮಾಡಿ ಅಂತಃಪುರಕ್ಕೆ ಲಕ್ಷ್ಮಣನನ್ನು ಕರೆದುಕೊಂಡು ಹೋದಳು. ಸುಗ್ರೀವನು ಲಕ್ಷ್ಮಣನನ್ನು ನೋಡಿದೊಡನೆ ಸನ್ಮಾನಮಾಡಿದನು. ಆಗ ಲಕ್ಷ್ಮಣನು ಸುಗ್ರೀವನನ್ನು ನೋಡಿ—"ಎಲೈ ವಾನರಾಧಮನೇ, ರಾಮಕಾರ್ಯವನ್ನು ಮರೆತೆಯಾ ಹ್ಯಾಗೆ ? ನೀನು ಹೀಗೆಮಾಡಿದರೆ ಇಗೋ ಈಗಲೇ ನಿನ್ನನ್ನು ವಾಲಿಯ ಜೊತೆಗೆ ಕಳುಹಿಸುವೆನು." ಎಂದು ಗರ್ಜನೆಮಾಡಿದನು. ಈ ಮಾತುಗಳನ್ನು ಕೇಳಿ ಸುಗ್ರೀವನು ಗಡ ಗಡನೇ ನಡುಗಲಾರಂಭಿಸಿದನು. ಅಷ್ಟರಲ್ಲಿ ಶ್ರೀ ರಾಮನನ್ನು ಕರೆದುಕೊಂಡು ಆಂಜನೇಯನೂ ಅಂತಃಪುರವನ್ನು ಪ್ರವೇಶಿಸಿದನು. ಬಳಿಕ ಶ್ರೀರಾಮನು ಲಕ್ಷ್ಮಣನನ್ನು ಸಮಾಧಾನ ಗೊಳಿಸಿದನು. ಅನಂತರ ಸುಗ್ರೀವನು ರಾಮ-ಲಕ್ಷ್ಮಣರಿಬ್ಬರಿಗೂ ಸತ್ಕಾರಮಾಡಿದನು.

ಇಷ್ಟರಲ್ಲಿ ಸಮಸ್ತ ವಾನರ ಸೇನೆಯೂ ಕೂಡಿತು. ಬಳಿಕ ಸುಗ್ರೀವನು ನಾಲ್ಕುದಿಕ್ಕುಗಳಿಗೂ ಸೀತಾದೇವಿಯನ್ನು ಹುಡುಕಿಕೊಂಡು ಬರಲು, ವಾನರ ಶ್ರೇಷ್ಠರನ್ನು ಕಳುಹಿಸಿದನು. ಒಂದು ತಿಂಗಳೊಳಗಾಗಿ ಸೀತಾದೇವಿಯನ್ನು ಹುಡುಕಿಕೊಂಡು ಬರಬೇಕೆಂತಲೂ, ಹಾಗಿಲ್ಲದಿದ್ದರೆ ಎಲ್ಲರ ಶಿರಸ್ಸುಗಳನ್ನೂ ಛೇದಿಸುವೆನೆಂತಲೂ ಕ್ರೂರವಾದ ಶಾಸನ ಮಾಡಿದನು. ದಕ್ಷಿಣದಿಕ್ಕಿಗೆ ಆಂಜನೇಯನೇ ಮೊದಲಾದ ಯೂಥಪತಿಗಳು ಪ್ರಯಾಣಮಾಡಿದರು. ಶ್ರೀ ರಾಮನು ಆಂಜನೇಯನ ಕೈಯಲ್ಲಿ ತನ್ನ ಮುದ್ರಿಕೆಯ ಉಂಗುರವನ್ನು ಕೊಟ್ಟನು. ಬಳಿಕ ಸಮಸ್ತರೂ ಚತುರ್ದಿಕ್ಕುಗಳಿಗೂ ಪ್ರಯಾಣಮಾಡಿದರು. ಆ ವಾನರರು ಅನೇಕ ರಾಕ್ಷಸರನ್ನು ರಾವಣನೆಂದು ನಾಶಮಾಡಿದರು. ಅಂಗದನೇ ಮೊದಲಾದ ಸಮಸ್ತವಾನರರೂ ಸೀತೆಯನ್ನು ಹುಡುಕಲು ಗಿರಿಗಹ್ವರಗಳನ್ನೆಲ್ಲಾ ಸುತ್ತಿದರು. ಆದರೂ ಪ್ರಯೋಜನವಿಲ್ಲದಂತಾಯಿತು. ಅನೇಕರು ಸೀತೆಯು ಸಿಗಲಿಲ್ಲವೆಂದು ಹಿಂತಿರುಗಿ ಬಂದರು. ಆಂಜನೇಯನೇ ಮೊದಲಾದವರು ಹಾಗೇ ಸಂಚಾರ ಮಾಡುತ್ತಾ, ಒಂದು ಗವಿಯಿಂದ ಪಕ್ಷಿ ವಿದ್ಯಾಧರನು ಹೊರಗೆ ಬಂದದ್ದನ್ನು ನೋಡಿ, ಇಲ್ಲಿ

ವಿಶೇಷ ಸಂತೋಷದಿಂದ ಗಮನಿಸಿ, ಕೊಂದು ಹಾಕಲು ಅಪ್ಪಣೆ ಮಾಡಿದನು.

ಈ ರೀತಿ ರಾವಣನಿಗೆ ಅನರ್ಥಪರಂಪರೆಗಳು ಆರಂಭವಾದವು. ಆ ಕಪಿಯು ಮಾರುತಿಯನ್ನು ಹಿಡಿತರಲು ಶೂರರಾದ ಅನೇಕ ರಾಕ್ಷಸರನ್ನು ಕಳುಹಿಸಿದನು. ಆ ರಾಕ್ಷಸರುಗಳನ್ನೆಲ್ಲ ವಾಯುಸುತನು ತನ್ನ ಕೈಯಲ್ಲಿರುವ ಕೊಂಬೆಗಳಿಂದಲೇ ಯಮಪುರಿಗೆ ಕಳಿಸಿದನು. ಇದನ್ನು ಕೇಳಿ ರಾಕ್ಷಸಾಧಿಪನು ತನ್ನ ಮಗನಾದ ಅಕ್ಷಯನಿಗೆ, ಆ ದುಷ್ಟ ಕಪಿಯನ್ನು ಹಿಡಿತರುವಂತೆ ಅಪ್ಪಣೆಮಾಡಿ ಕಳುಹಿಸಿದನು. ಆದರೆ ಆತನೂ ಅಂಜನೇಯನ ಕೈಯಲ್ಲಿರುವ ಒಂದು ತೊಳೆಯ ಮರದ ಪೆಟ್ಟಿಗೆ ಗುರಿಯಾಗಿ ಹತನಾದನು. ಬಳಿಕ ರಾವಣನು ಗಾಬರಿಯಿಂದ ತನ್ನ ಮಂತ್ರಿಗಳನ್ನು ಕರೆಸಿ, ನಡೆದ ವರ್ತಮಾನವನ್ನು ತಿಳಿಸಿದನು. ಆಕ್ಷಣದಲ್ಲಿಯೇ ಅನೇಕರು ಶಸ್ತ್ರಾಸ್ತ್ರಗಳನ್ನು ಧರಿಸಿ ಯುದ್ಧಕ್ಕೆ ತೆರಳಿದರು. ಅವರೂ, ಅವರ ಅವ ಅಸ್ತ್ರಗಳೂ ಉಪಯೋಗಕ್ಕೆ ಬರಲಿಲ್ಲ. ಬಳಿಕ ಬ್ರಹ್ಮನ ಅನುಮತಿಯಂತೆ ಮಾರುತಿಯು ಇಂದ್ರಜಿತುವಿನ ಬ್ರಹ್ಮಾಸ್ತ್ರಕ್ಕೆ ಒಳಗಾದನು. ಆತನನ್ನು ರಾವಣನ ಸಭೆಗೆ ಹಿಡಿತಂದರು. ಬಳಿಕ ರಾವಣನು ತನ್ನ ಮಂತ್ರಿಗಳ ಕಡೆಯಿಂದ ಅಂಜನೇಯನ ವೃತ್ತಾಂತವನ್ನು ವಿಚಾರಿಸಿದನು. ಆಗ ಮಾರುತಿಯು ಶ್ರೀರಾಮನ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ಮತ್ತು ಆ ಜಗದೀಶನೊಡನೆ ಸ್ನೇಹಮಾಡಬೇಕೆಂದು ರಾವಣನಿಗೆ ಬಹಳ ವಿಧವಾಗಿ ಉಪದೇಶಮಾಡಿದನು. ಆದರೆ ರಾವಣನು ಆ ಯಾವ ಮಾತನ್ನು ಕೇಳಲೇ ಇಲ್ಲ. ಆತನು ಶ್ರೀರಾಮನನ್ನು ಬಹು ವಿಧವಾಗಿ ನಿಂದಿಸಿ ತನ್ನ ಹಿರಿಮೆಯನ್ನು ಹೊಗಳಿಕೊಂಡನು. ಮತ್ತು ನಿನಗೆ ಮರಣವು ಯಾವ ರೀತಿಯಿಂದ ಆಗುವದು? ಎಂದು ಅಂಜನೇಯನನ್ನು ಕೇಳಿದನು. ಆಗ ಮಾರುತಿಯು ನನಗೆ ಮರಣವೇ ಇಲ್ಲವೆಂದನು. ಆ ವಚನ ರಾವಣನಿಗೆ ಸರಿಬೀಳಲಿಲ್ಲ. ಇದನ್ನು ತಿಳಿದ ಅಂಜನೇಯನು "ಪುಚ್ಛವನ್ನು ದಹಿಸಿದರೆ, ನಾನು ಸಾಯುವೆನು" ಎಂದು ಹೇಳಿದನು. ರಾವಣನು ಅದರ ತೆರೆ ಒಪ್ಪಿಕೊಂಡು ಇವನ ಬಾಲವು ಸಾವಿನ್ನವಾದ ರೀತಿಯಿಂದ ಸುಡಲಿ ಎಂದು ತಿಳಿದು ಬಾಲಕ್ಕೆ ಅನೇಕ ಬಟ್ಟೆಗಳನ್ನು ಸುತ್ತಿ ಅದರ ಮೇಲೆ ಎಣ್ಣೆ-ತುಪ್ಪಗಳನ್ನು ಸುರಿಯುವಂತೆ ಅಪ್ಪಣೆಮಾಡಿದನು. ಬಳಿಕ ರಾಕ್ಷಸರು ವಸ್ತ್ರಗಳನ್ನು ಸುತ್ತಲಾರಂಭಿಸಿದರು.

ಲಂಕೆಯಲ್ಲಿರುವ ವಸ್ತ್ರಗಳೆಲ್ಲಾ ಮುಗಿದರೂ, ಹನುಮನ ಬಾಲಕ್ಕೆ ಬಟ್ಟೆಗಳು ಸಾಕಾಗಲಿಲ್ಲ. ಇನ್ನು ತುಪ್ಪ-ಎಣ್ಣೆಗಳ ಪಾಡೇನು! ಬಳಿಕ ಎಲ್ಲಾ ವಸ್ತ್ರಗಳು ತೀರಿದವೆಂದು ಕೇಳಿ, ರಾವಣನು ಅಂತಃಪುರಸ್ತ್ರೀಯರ ವಸ್ತ್ರಗಳನ್ನು ತರಿ

ಆಗ ನೀನು ಹರಿನಾಮಕೀರ್ತನ ಮಾಡು. ಆಗಲೇ ನಾರಾಯಣನು ಇಲ್ಲಿಗೆ ಬಂದು ನಿನ್ನನ್ನು ರಕ್ಷಿಸುವನು, ಎಂದು ಸಮಾಧಾನ ಮಾಡಿದರು. ಇದರಂತೆ ಬಂದಾನೊಂದು ದಿನ ಆ ಸರೋವರದಲ್ಲಿ ಅಪ್ಸರಸ್ತ್ರೀಯರಿಂದೊಡಗೂಡಿದ ಹೂಹೂ ಎಂಬ ಗಂಧರ್ವನು ಜಲಕ್ರೀಡೆಗಾಗಿ ಬಂದಿದ್ದನು. ಸರೋವರದಲ್ಲಿ ಸ್ನಾನಮಾಡುತ್ತಿರುವ ದೇವಲಮಹರ್ಷಿಗಳಿಗೆ ಆ ಗಂಧರ್ವನ ಕಾಲು ತಗಲಿತು. ಆಗ ದೇವಲಮಹರ್ಷಿಗಳು— 'ಎಲೈ ದುಷ್ಟನೇ, ನೀನು ಈ ಸರೋವರದಲ್ಲಿ ಮೊಸಳೆಯಾಗಿರು,' ಎಂದು ಶಪಿಸಿದರು. ಬಳಿಕ ಆ ಗಂಧರ್ವನಿಂದ ಪ್ರಾರ್ಥಿತರಾದ ಮಹರ್ಷಿಗಳು 'ಎಲೈ ಗಂಧರ್ವನೇ, ಶ್ರೀಮನ್ನಾರಾಯಣನು ನಿನ್ನನ್ನು ಉದ್ಧರಿಸುವನು,' ಎಂದು ಹೇಳಿ ತಮ್ಮ ಆಶ್ರಮಕ್ಕೆ ತೆರಳಿದರು. ಈ ರೀತಿಯಾಗಿ ಶಾಪಗ್ರಸ್ತರಾದ ನಕ್ರ ಗಜೇಂದ್ರರಿಬ್ಬರನ್ನೂ ಶ್ರೀಹರಿಯು ಉದ್ಧರಿಸಿ, ವೈಕುಂಠಕ್ಕೆ ಕರೆದೊಯ್ದನು.

ಒಂದು ದಿನ ಗರುಡನು ಹಸಿವೆಯಿಂದ ಪೀಡಿತನಾಗಿ ಶ್ರೀಹರಿಯನ್ನು ಪ್ರಾರ್ಥಿಸಿದನು. ಆಗ ನಾರಾಯಣನು 'ಎಲೈ ಭಕ್ತಶಿರೋಮಣಿಯೇ, ತ್ರಿಕೂಟಪರ್ವತದ ಶಿಖರದಲ್ಲಿ ನಕ್ರಗಜೇಂದ್ರರ ಶರೀರಗಳಿವೆ. ಅವುಗಳನ್ನು ಭಕ್ಷಿಸು,' ಎಂದನು. ಬಳಿಕ ಗರುಡನು ಸ್ವಾಮಿಯ ಆಜ್ಞೆಯಂತೆ ತ್ರಿಕೂಟಪರ್ವತಕ್ಕೆ ತೆರಳಿದನು. ಅಲ್ಲಿ ನಕ್ರಗಜೇಂದ್ರರ ದೇಹದ ಮೇಲೆ ಧತ್ರಭಂಗನೆಂಬ ಒಂದು ಹದ್ದು ಕುಳಿತಿತ್ತು. ಗರುಡನು ಅದನ್ನು ನಾಶಮಾಡಿ ಆ ಎರಡು ದೇಹಗಳನ್ನು ತೆಗೆದುಕೊಂಡು, ಶುದ್ಧವಾದ ಸ್ಥಳದಲ್ಲಿ ಕುಳಿತು ಭಕ್ಷಿಸಬೇಕೆಂದು ಯೋಚಿಸಿ, ಒಂದು ನೇರಿಲ ಮರದ ಮೇಲೆ ಕುಳಿತನು. ಆ ಮರದ ಕೊಂಬೆಯು ಆ ಭಾರವನ್ನು ತಡೆಯಲಾರದೆ ಮುರಿದು ಬಿತ್ತು. ಗರುಡನು ಅಲ್ಲಿ ತಪಸ್ಸು ಮಾಡುತ್ತಿರುವ ಅನೇಕ ಸಾವಿರ ಜನ ವಾಲಖಿಲ್ಯರನ್ನು ನೋಡಿದನು. ಈ ಕೃತ್ಯವನ್ನು ಅವರು ನೋಡಿದರೆ ನನಗೆ ಶಾಪ ಕೊಡುವರೆಂಬ ಭೀತಿಯಿಂದ ಆ ಕೊಂಬೆಯನ್ನು ಬಾಯಲ್ಲಿ ಕಚ್ಚಿಕೊಂಡು ಆತನು ಆಕಾಶದಲ್ಲಿ ಸಂಚರಿಸುತ್ತಿದ್ದನು. ಇಷ್ಟರಲ್ಲಿ ಆತನ ತಂದೆಯಾದ ಕಶ್ಯಪಮಹರ್ಷಿಯ ದರ್ಶನವಾಯಿತು. ಗರುಡನು ತಂದೆಗೆ ನಮಸ್ಕರಿಸಿ 'ಜನಕನೇ, ನಾನು ಭೋಜನ ಮಾಡಬೇಕಾಗಿದೆ, ನನಗೆ ಶುದ್ಧವಾದ ಸ್ಥಳವನ್ನು ತೋರಿಸು,' ಎಂದು ಪ್ರಾರ್ಥಿಸಿದನು. ಬಳಿಕ ತಂದೆಯಿಂದ 'ಲಂಕೆಗೆ ಹೋಗು,' ಎಂದು ಆಜ್ಞಪ್ತನಾಗಿ ಖಗಕುಲ ಗರುಡನು ಅಲ್ಲಿಗೆ ಪ್ರಯಾಣ ಮಾಡಿದನು. ಅಲ್ಲಿ ಆ ಕೊಂಬೆಯನ್ನು ತನ್ನ ಬೆನ್ನ ಮೇಲೆ ಇರಿಸಿಕೊಂಡು, ನಕ್ರ ಗಜೇಂದ್ರರ ದೇಹಗಳನ್ನು ಭಕ್ಷಿಸಿದನು. ಆ ದೇಹಗಳ ಎಲುಬುಗಳು ಭೂಮಿಯ ಮೇಲೆ ಮೂರು ಪರ್ವತದ ಶಿಖರಗಳಂತೆ ಬಿದ್ದವು.

ಒಬ್ಬ ಬ್ರಾಹ್ಮಣನ ಸಾಲಿಗ್ರಾಮಗಳನ್ನು ಪ್ರತಿನಿತ್ಯವೂ ಪ್ರವಾಹದಲ್ಲಿ ಎಸೆಯುತ್ತಿದ್ದನು. ಆಗ ಆ ಬ್ರಾಹ್ಮಣನು, 'ಎಲೈ ವಾನರನೇ, ನೀನು ಕೈಗಳಿಂದ ಮುಟ್ಟಿದ ಕಲ್ಲುಗಳು ನೀರಿನಲ್ಲಿ ತೇಲಲಿ, ಎಂದು ಶಾಪವನ್ನು ಕೊಟ್ಟಿದ್ದನು. ಸೇತುಬಂಧನ ಕಾಲದಲ್ಲಿ ಶ್ರೀರಾಮನು ಗಣಪತಿ, ನವಗ್ರಹಗಳೇ ಮೊದಲಾದ ದೇವತೆಗಳನ್ನು ಪೂಜಿಸಿದನು. ಮತ್ತು ಕಾಶಿಯಿಂದ ಒಂದು ಉತ್ತಮವಾದ ಶಿವಲಿಂಗವನ್ನು ತರುವಂತೆ ಮಾರುತಿಗೆ ಆಜ್ಞಾಪಿಸಿದನು. ಬಳಿಕ ಆಂಜನೇಯನು ಶ್ರೀರಾಮನ ಅಪ್ಪಣೆಯನ್ನು ಪಡೆದು, ಆಕಾಶಮಾರ್ಗದಿಂದ ಕಾಶೀಕ್ಷೇತ್ರಕ್ಕೆ ಪ್ರಯಾಣ ಮಾಡಿದನು. ಆತನು ಕಾಶಿಗೆ ಬಂದು, ನನಗೆ ನಮಸ್ಕರಿಸಿ, ಶ್ರೀರಾಮನ ಮನೋಗತವನ್ನು ತಿಳುಹಿದನು. ನಾನು ಆಗಲೇ ಶ್ರೀರಾಮನಿಗೊಂದೆಂತಲೂ ಮಾರುತಿಗೊಂದೆಂತಲೂ ಎರಡು ಶಿವಲಿಂಗಗಳನ್ನು ಮಾರುತಿಯ ಕೈಯಲ್ಲಿ ಕೊಟ್ಟೆನು. ಮತ್ತು 'ನಾನು ದಕ್ಷಿಣದಿಕ್ಕಿಗೆ ಬರುವೆನೆಂದು ಅಗಸ್ತ್ಯನಿಗೆ ವಚನ ಕೊಟ್ಟಿರುವಂತೆ ಈಗ ಶ್ರೀರಾಮನ ನೆವದಿಂದ ದಕ್ಷಿಣಕ್ಕೆ ಬರುವೆನು, ಎಂದು ಮಾರುತಿಗೆ ಹೇಳಿದೆನು.

ಈ ನನ್ನ ಮಾತುಗಳನ್ನು ಕೇಳಿ ಮಾರುತಿಯು "ಅಗಸ್ತ್ಯನ ವಿಷಯವನ್ನು ನನಗೆ ಸವಿಸ್ತಾರವಾಗಿ ಹೇಳಬೇಕು." ಎಂದು ಪ್ರಾರ್ಥಿಸಿದನು. ಬಳಿಕ ನಾನು ಮಾರುತಿಯನ್ನು ಕುರಿತು 'ಎಲೈ ಮಾರುತಿಯೇ, ಹಿಂದೆ ಒಂದಾನೊಂದು ಕಾಲದಲ್ಲಿ ನಾರದನು ನರ್ಮದಾನದಿಯಲ್ಲಿ ಸ್ನಾನಮಾಡಿ, ಓಂಕಾರೇಶ್ವರನ ಪೂಜೆಯನ್ನು ತೀರಿಸಿಕೊಂಡು, ಉತ್ತರದಿಕ್ಕಿಗೆ ಹೋದನು. ಆ ವಿಂಧ್ಯಾದ್ರಿಯು ನಾರದಮುನಿಗಳನ್ನು ನೋಡಿದನು. ಆ ಪರ್ವತಪ್ರದೇಶವು ಬಳಿಯಲ್ಲಿ ಬಹಳ ಮನೋಹರವಾಗಿತ್ತು. ವಿಂಧ್ಯಾದ್ರಿಯು ಆ ಮಹರ್ಷಿಗಳನ್ನು ನಮಸ್ಕರಿಸಿ, ಅವರನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ಬಳಿಕ ಆತನು ನಾರದಮಹರ್ಷಿಗಳ ಸನ್ನಿಧಿಯಲ್ಲಿ ಕೈಜೋಡಿಸಿ ನಿಂತು—ಮಹನೀಯರೇ. ಈ ದಿವಸ ನಾನು ಧನ್ಯನಾದೆನು. ಇದೇ ಸುದಿನವು. ನನ್ನ ಪುಣ್ಯಗಳೆಲ್ಲ. ಈ ದಿವಸ ಫಲಿಸಿದವು." ಎಂದು ಬಹುವಿಧವಾಗಿ ಪ್ರಾರ್ಥಿಸಿದನು. ನಾರದನು ಈ ವಿಧವಾದ ಮಾತುಗಳನ್ನು ಕೇಳಿ, ನಿಟ್ಟುಸಿರುಗಳನ್ನು ಬಿಡುತ್ತಾ ಸುಮ್ಮನೆ ಕುಳಿತನು. ಇದನ್ನೆಲ್ಲಾ ನೋಡಿ ವಿಂಧ್ಯಾದ್ರಿಯು 'ಇದೇನು ಮಹರ್ಷಿಗಳೇ. ಸುಮ್ಮನೆ ಕುಳಿತಿರುವಿರಿ! ನಾನು ಸರ್ವಸಮರ್ಥನಾಗಿರುವೆನು. ನನ್ನಿಂದಲೇ ಎಲ್ಲರೂ ಪೋಷಿತರಾಗುವರು. ನನ್ನ ಸಾಮರ್ಥ್ಯದಿಂದಲೇ ಭೂಮಿಯು ನಿಂತಿರುವದು." ಎಂದು ಪ್ರೌಢವಚನಗಳನ್ನಾಡಲಾರಂಭಿಸಿದನು. ಈ ಮಾತುಗಳನ್ನೆಲ್ಲಾ

ಕೇಳಿ ನಾರದನು ಮನಸ್ಸಿನಲ್ಲಿ 'ಈತನು ಲೋಕದಲ್ಲಿ ಎಲ್ಲಾ ಪದಾರ್ಥಗಳಿಗಿಂತಲೂ ತಾನು ಸಮರ್ಥನೆಂತಲೂ, ಗೌರವ ಶಾಲಿಯೆಂತಲೂ ಹೇಳುತ್ತಿರುವನು. ಈ ದಿವಸ ಇವನ ಬಲವನ್ನು ಪರೀಕ್ಷಿಸೋಣ' ಎಂದು ಯೋಚಿಸಿ, 'ಎಲೈ ಪರ್ವತಶ್ರೇಷ್ಠನೇ, ನೀನು ಹೇಳುವ ಮಾತುಗಳೆಲ್ಲ ಸತ್ಯವಾಗಿರುವವು. ಆದರೆ ನಿನ್ನನ್ನು ಮೇರುಪರ್ವತವು ಮಾತ್ರ ಹೀಯಾಳಿಸುತ್ತಿರುವದು. ಇದು ನನ್ನ ಜ್ಞಾಪಕಕ್ಕೆ ಬಂದದ್ದರಿಂದ ನಿಟ್ಟುಸಿರು ಬಿಟ್ಟೆನು. ಅಷ್ಟೇ ಹೊರತಾಗಿ ಮತ್ತೆ ಬೇರೆ ಏನೂ ಇಲ್ಲ. ನಾನು ವ್ಯಸನ ಪಟ್ಟುದರಿಂದ ಮಾಡುವದೇನು?" ಎಂದು ಹೇಳಿ ಮುಂದಕ್ಕೆ ತೆರಳಿದರು.

ಬಳಿಕ ವಿಂಧ್ಯಾದ್ರಿಯು,—ಮೇರುಪರ್ವತವು ನನಗಿಂತಲೂ ಯಾವ ಕಾರಣದಿಂದ ಶ್ರೇಷ್ಠವಾಗಿರಬಹುದು, ಎಂದು ಯೋಚಿಸಿ, ಸೂರ್ಯನು ತನ್ನ ಸುತ್ತಲೂ ಪ್ರದಕ್ಷಿಣೆಮಾಡುವನೆಂಬ ಅಹಂಕಾರದಿಂದ ಆ ಮೇರುವು ನನ್ನನ್ನು ಹೀಯಾಳಿಸುತ್ತಿರಬಹುದು. ಇರಲಿ, ಅದನ್ನು ಈ ದಿವಸ ತಪ್ಪಿಸುವೆನು. ಎಂದು ನಿಶ್ಚಯಿಸಿ ವಿಂಧ್ಯಪರ್ವತವು ಆಕಾಶಕ್ಕೆ ಬೆಳೆಯಲಾರಂಭಿಸಿ ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿ ಸ್ತಬ್ಧವಾಗಿ ನಿಂತಿತು. ಸೂರ್ಯನು ದಕ್ಷಿಣಭಾಗಕ್ಕೆ ಬರುವಷ್ಟರಲ್ಲಿ ಆತನ ಮಾರ್ಗವು ಮುಚ್ಚಿಹೋಗಿತ್ತು. ಆದಕಾರಣ ಆತನು ಸ್ಥಿರೀಸ್ಥಿತನಾದನು. ಈ ಪ್ರಕಾರ ಬಹಳ ದಿವಸಗಳು ಕಳೆದವು. ಪೂರ್ವ, ಮತ್ತು ಉತ್ತರ ದಿಕ್ಕಿನ ಜನರು ಸೂರ್ಯನ ತೀಕ್ಷ್ಣವಾದ ಕಿರಣಗಳಿಂದ ಸಂತಪ್ತರಾದರು. ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿರುವ ಜನರು ಯಾವಾಗಲೂ ನಿದ್ರೆಮಾಡಲಾರಂಭಿಸಿದರು. ಸಮಸ್ತ ವೈದಿಕ ಕರ್ಮಗಳೂ ಲುಪ್ತವಾದವು. ಅನಂತರ ಎಲ್ಲಾದೇವತೆಗಳೂ ಅಗಸ್ತ್ಯಋಷಿಗಳ ಸನ್ನಿಧಿಗೆ ಬಂದು ವಿಂಧ್ಯಾದ್ರಿಯ ಗುರುಗಳಾದ ಆ ಅಗಸ್ತ್ಯರನ್ನು ದಕ್ಷಿಣದಿಕ್ಕಿಗೆ ಪ್ರಯಾಣಮಾಡಲು ಪ್ರಾರ್ಥನೆಮಾಡಿದರು. ಆ ಮಹರ್ಷಿಗಳು ಈಶ್ವರನನ್ನು ಬಿಟ್ಟು ಎಂದಿಗೂ ದಕ್ಷಿಣದಿಕ್ಕಿಗೆ ಹೋಗುವದಿಲ್ಲವೆಂದು ಹಟಹಿಡಿದರು. ಆಗ ನಾನು 'ಮಹರ್ಷಿಗಳೆ, ತಾವು ಈಗಲೇ ದಕ್ಷಿಣಕ್ಕೆ ಪ್ರಯಾಣಮಾಡಿ, ಆ ನಿಮ್ಮ ಶಿಷ್ಯನಾದ ವಿಂಧ್ಯಾದ್ರಿಯನ್ನು ಮಾತಿನಿಂದ ಬಂಧನಮಾಡಿ, ಅದೇದಿಕ್ಕಿನಲ್ಲಿ ವಾಸವಾಗಿರಿ, ನಾನೂ ಇನ್ನು ಸ್ವಲ್ಪ ಕಾಲಗಳಲ್ಲಿ ಅಲ್ಲಿಗೆ ಬರುವೆನು, ಎಂದು ಸಮಾಧಾನ ಪಡಿಸಿ, ದಕ್ಷಿಣಕ್ಕೆ ಪ್ರಯಾಣ ಮಾಡಲು ಒಡಂಬಡಿಸಿದೆನು.

ಮಾರನೆಯೇ ಬಳಿಕ ಅಗಸ್ತ್ಯರು ತಮ್ಮ ಪತ್ನಿಯಾದ ಲೋಪಾಮುದ್ರೆಯೊಡನೆ ದಕ್ಷಿಣಕ್ಕೆ ತೆರಳಿದರು. ಸಪತ್ನೀಕರಾದ ಅಗಸ್ತ್ಯರನ್ನು ನೋಡಿ ವಿಂಧ್ಯಾದ್ರಿಯು ಥರಥರನೆ ನಡುಗಲಾರಂಭಿಸಿದನು. ಆತನು ಗುರುಗಳಾದ ಅಗಸ್ತ್ಯರ ಮುಂದೆ ಕೈಜೋ

ಬಿಸಿಕೊಂಡು ಬಹು ನಮ್ರ ವೃತ್ತಿಯಿಂದ ನಿಂತು—'ಭೋ ಗುರುವರ್ಯರೇ, ನಾನು ತಮ್ಮ ದಾಸನಿರುವೆನು. ಕಿಂಕರನಾದ ನನಗೆ ಏನು ಅಪ್ಪಣೆ ಕೊಡುವಿರಿ, ಎಂದು ಕೇಳಿದನು. ಈ ಮಾತುಗಳನ್ನಾಲಿಸಿ ಅಗಸ್ತ್ಯರು ಎಲೈ ಪರ್ವತಶಿರೋಮಣಿಯೇ, ನಿನ್ನ ಭಕ್ತಿಭಾವಗಳನ್ನು ನೋಡಿ ನಮಗೆ ಬಹಳ ಹರ್ಷವಾಯಿತು. ಆದರೆ ನಿನಗೊಂದು ಮಾತು ಹೇಳತಕ್ಕದ್ದಿದೆ. ನಾವು ಪುನಃ ಈ ಮಾರ್ಗವಾಗಿ ಬರುವ ವರೆಗೂ ನೀನು ಇದೇ ರೀತಿಯಲ್ಲಿ ನಮ್ರನಾಗಿರಬೇಕು, ಎಂದು ಹೇಳಿ ದಕ್ಷಿಣ ದಿಕ್ಕಿಗೆ ತೆರಳಿದನು. ಆ ಪರ್ವತವು ಗುರುಗಳು ಈ ದಿವಸ ಬಂದಾರು, ನಾಳೆ ಬಂದಾರು, ಎಂದು ಯೋಚಿಸುತ್ತ ಹಾಗೆಯೇ ನಮ್ರವಾಗಿರುವದು. ಇದುವರೆಗೂ ಆ ಮುನಿಯು ಉತ್ತರಕ್ಕೆ ಬರಲಿಲ್ಲ. ಸೂರ್ಯನ ರಥವು ಸುಯಂತ್ರಿತವಾಗಿ ಸಾಗಿದ್ದರಿಂದ ಸಮಸ್ತ ಲೋಕಗಳೂ ಸುಖವನ್ನು ಹೊಂದಿದವು. ಎಲೈ ಮಾರುತಿಯೇ, ಆ ಮುನಿವರ್ಯನು ದಂಡಕಾರಣ್ಯದಲ್ಲಿ ನನ್ನ ದಾರಿಯನ್ನು ಕಾದಿರುವನು. ಅದ್ದರಿಂದ ನಾನೂ ದಕ್ಷಿಣಕ್ಕೆ ಬರುವೆನು, ಎಂದು ಹೇಳಿ ಮಾರುತಿಗೆ ಪ್ರಯಾಣ ಮಾಡಲು ಅಪ್ಪಣೆ ಮಾಡಿದನು. ಆ ಕಪಿವರನಾದರೂ ಎರಡು ಲಿಂಗಗಳನ್ನೂ ಸ್ವೀಕರಿಸಿ, ಆಕಾಶಮಾರ್ಗದಿಂದ ಬಹುವೇಗವಾಗಿ ಪ್ರಯಾಣ ಮಾಡಿದನು.

ಇತ್ತ ಶ್ರೀರಾಮನು ಮಾರುತಿಯ ಅಭಿಮಾನವನ್ನು ಪೂರ್ಣವಾಗಿ ನಾಶಮಾಡಬೇಕೆಂದು ಯೋಚಿಸಿ, ಆಂಜನೇಯನು ಮುಹೂರ್ತಕ್ಕೆ ಸರಿಯಾಗಿ ಬರಲಿಲ್ಲವೆಂದು ಸುಗ್ರೀವನಿಗೆ ತಿಳುಹಿ, ಸಮುದ್ರತೀರದಲ್ಲಿ ಮಳಲು ಲಿಂಗವನ್ನು ಸ್ಥಾಪಿಸಿ ಪೂಜೆಮಾಡಿದನು. ಮತ್ತು ತನ್ನ ಕೌಸ್ತುಭವೆಂಬ ರತ್ನವನ್ನು ಸ್ಮರಿಸಿ, ಕೂಡಲೆ ಪ್ರಾಪ್ತವಾದ ಅದನ್ನು ರಾಮಲಿಂಗನಿಗೆ ಅಲಂಕಾರ ಮಾಡಿದನು. ಸಮಸ್ತ ಋಷಿಗಳೂ, ಬ್ರಾಹ್ಮಣರೂ ಅನ್ನದಾನ, ವಸ್ತ್ರದಾನಗಳಿಂದ ಸಂತೋಷಪಟ್ಟು, ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ದಾರಿಯಲ್ಲಿ ಈ ಬ್ರಾಹ್ಮಣರನ್ನು ನೋಡಿ, ಮಾರುತಿಯು 'ನಿಮಗೆ ಯಾರು ಇಷ್ಟು ಸತ್ಕಾರಮಾಡಿದರು' ಎಂದು ಕೇಳಿದನು. ಆಗ ವಿಪ್ರವರ್ಯರು 'ಎಲೈ ಮಾರುತಿಯೇ, ಶ್ರೀರಾಮನು ಸಮುದ್ರತೀರದಲ್ಲಿ ಶಿವಲಿಂಗ ಸ್ಥಾಪನೆ ಮಾಡಿದ ವಿಷಯವು ನಿನಗೆ ತಿಳಿಯದೆ ಹೇಗೆ,' ಎಂದು ಪ್ರಶ್ನೆಮಾಡಿದರು. ಇದನ್ನು ಕೇಳಿ ಮಾರುತಿಯು ಬಹಳ ಖಿನ್ನನಾಗಿ ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ಶ್ರೀರಾಮನ ಬಳಿಗೆ ಬಂದು, ತಾನು ತಂದ ಎರಡು ಶಿವಲಿಂಗಗಳನ್ನು ಶ್ರೀರಾಮನಿಗೆ ಸಮರ್ಪಿಸಿದನು. ಶ್ರೀರಾಮನು ಖಿನ್ನನಾಗಿ ನಿಂತಿರುವ ಮಾರುತಿಯ ಅಭಿಪ್ರಾಯವನ್ನು ತಿಳಿದು, ಎಲೈ ಮಾರುತಿಯೇ, ಯಾಕೆ ಯೋ

ಚನೆ ಮಾಡುವೆ. ಮುಹೂರ್ತ ಮೀರುವದೆಂದು ಮಳಲ ಲಿಂಗವನ್ನು ಪ್ರತಿಷ್ಠೆಮಾಡಿ ರುವೆನು. ಅದನ್ನು ನೀನು ವಿಸರ್ಜಿಸಿಮಾಡು. ಅನಂತರ ಅದೇ ಸ್ಥಾನದಲ್ಲಿ ನೀನು ತಂದಿರುವ ಶಿವಲಿಂಗವನ್ನು ಸ್ಥಾಪಿಸುವೆನು ಎಂದನು. ಆಗ ಮಾರುತಿಯು ತನ್ನ ಬಾಲವನ್ನು ಆ ಶಿವಲಿಂಗಕ್ಕೆ ಸುತ್ತಿ ಎಳೆಯಲಾರಂಭಿಸಿದನು. ಶಿವಲಿಂಗವು ಸ್ವಲ್ಪ ವಾದರೂ ಅಲ್ಲಾಡಲಿಲ್ಲ. ಕೊನೆಗೆ ಆಂಜನೇಯನ ಬಾಲವೇ ಹರಿಯಿತು. ಆತ ನು ಮೂರ್ಛಿತನಾದನು. ಸಮಸ್ತ ಕಪಿಗಳೂ ಹಾಸ್ಯಮಾಡಿದವು. ಆಗ ಶ್ರೀರಾ ಮನು ಮಾರುತಿಯನ್ನು ಸಮಾಧಾನಗೊಳಿಸಿ ಆತನು ತಂದ ಲಿಂಗವನ್ನು ಅಲ್ಲಿ ಸ್ಥಾಪನೆ ಮಾಡಿ, ಅದಕ್ಕೆ ವಿಶ್ವನಾಥನೆಂದು ಹೆಸರಿಟ್ಟನು. ಮತ್ತು ತನಗೋಸ್ಕರ ತಂದ ಲಿಂಗವನ್ನು ಮುಂದೆ ಕಾಲಾಂತರದಲ್ಲಿ ಸ್ಥಾಪಿಸುವೆನೆಂದು ಹೇಳಿ ಅದನ್ನು ರಾಮಲಿಂಗನ ಬಳಿಯಲ್ಲಿಯೇ ಇರಿಸಿದನು. ಅವಲ್ಲವೂ ಈಗ ರಾಮೇಶ್ವರದಲ್ಲಿ ಹಾಗೆಯೇ ಇರುವವು.

ಇದಲ್ಲದೆ ಶ್ರೀರಾಮನು ತನ್ನ ಅಂಶಗಳಿಂದ ತನ್ನ ಮೂರ್ತಿಯನ್ನು ಸ್ಥಾಪಿಸಿ ದನು. ಮಾರುತಿಯೂ, ಲಕ್ಷ್ಮಣನೂ ಹಾಗೆಯೇ ಅಲ್ಲಿ ತಮ್ಮ ಅಂಶಗಳಿಂದ ಸ್ಥಾಪಿ ತರಾಗಿರುವರು. ಮಾರುತಿಯು ಬಾಲದಿಂದ ರಾಮಲಿಂಗವನ್ನು ಸುತ್ತಿದ್ದನಾದ್ದರಿಂದ ಆ ಲಿಂಗವು ಅಗ್ರಭಾಗದಲ್ಲಿ ಕೃಶವಾಗಿರುವದು. ಆಗಿನಿಂದ ಮಾರುತಿಯ ಸಮಸ್ತ ಗರ್ವವೂ ನಷ್ಟವಾಯಿತು. ಪಾರ್ವತಿಯೇ, ಆಕಾಲದಲ್ಲಿ ನಾನು ಆ ಮಳಲಲಿಂಗ ದಿಂದ ಪ್ರಕಟನಾಗಿ ರಾಮನನ್ನು ಕುರಿತು - ಭೋ ಶ್ರೀರಾಮನೇ, ಪೂರ್ವವೃತ್ತಾಂ ತವನ್ನು ಸ್ವಲ್ಪ ಹೇಳುವೆನು ಕೇಳು. ಒಂದು ಕಾಲದಲ್ಲಿ ನಾನು ದರಿದ್ರ ಬ್ರಾಹ್ಮಣನ ವೇಷದಿಂದ ಭೂಮಿಯಲ್ಲಿ ಭಿಕ್ಷೆಬೇಡಲು ಬಂದೆನು. ಋಷಿಗಳ ಆ ಶ್ರಮಗಳಲ್ಲಿ ಭಿಕ್ಷೆಬೇಡುತ್ತಿರುವಂತೆ ಹಿಂದಕ್ಕೆ ಹೋಗುತ್ತಿದ್ದೆನು. ಆಗ ಒಬ್ಬ ಋಷಿ ಪತ್ನಿಯು ನನ್ನನ್ನು ನೋಡಿ ಮೋಹಿತಳಾದಳು. ಪತಿಯು ಬೇಡಬೇಡವೆಂದರೂ ಆಕೆಯು ನನ್ನ ಹಿಂದೆ ಬರಲಾರಂಭಿಸಿದಳು. ಆಗ ಕೋಪಗೊಂಡ ಮುನಿಯು ನನ್ನ ಸ್ವರೂಪವನ್ನು ತಿಳಿಯದೆ 'ಎಲೈ ನೀಚನೇ, ನೀನು ರತಿಸುಖಕ್ಕಾಗಿ ನಮ್ಮ ಪತ್ನಿಯನ್ನು ಮೋಹಗೊಳಿಸಿ ಒಯ್ಯುವವನಾದ್ದರಿಂದ ನಿನ್ನ ಲಿಂಗವು ಭಿನ್ನವಾಗಿ ಬೀಳಲಿ"ಎಂದು ಶಪಿಸಿದನು. ಆಗಲೇ ನನ್ನ ಲಿಂಗವು ಭಿನ್ನವಾಯಿತು. ನಾನು ಅಲ್ಲೇ ಗುಪ್ತನಾದೆನು. ಋಷಿಪತ್ನಿಯರು ತಮ್ಮ ತಮ್ಮ ಗೃಹಗಳಿಗೆ ತೆರಳಿದರು. ಆ ಲಿಂಗವು ಅಧಿಕವಾಗಿ ವೃದ್ಧಿಹೊಂದುತ್ತಿತ್ತು. ಆಗ ಬ್ರಹ್ಮನು ನನ್ನ ಬಳಿಗೆ ಬಂದು ಪ್ರಾರ್ಥನೆಮಾಡಿದನು. ನಾನು ಅದರ ಪೂರ್ವವೃತ್ತಾಂತಗಳನ್ನೆಲ್ಲ ಆತನಿಗೆ ತಿಳುಹಿ

ಆ ಲಿಂಗವನ್ನು ಭೇದಿಸಲು ಬ್ರಹ್ಮನಿಗೆ ನನ್ನ ತ್ರಿಶೂಲವನ್ನು ಕೊಟ್ಟೆನು. ಆತನು ನಾನು ಹ್ಯಾಗೆ ಆ ಲಿಂಗವನ್ನು ಭೇದನ ಮಾಡಲಿ, ಎಂದು ಅನುತಾಪಪಡಹೊಂದಲು, ನಾನೇ ಆ ಲಿಂಗವನ್ನು ಭೇದಿಸಿ ಹನ್ನೆರಡು ತುಂಡುಗಳನ್ನು ಮಾಡಿದೆನು. ಅವು ಗಳಲ್ಲಿ ಓಂಕಾರ, ಸೋಮನಾಥ, ತ್ರ್ಯಂಬಕ, ಮಲ್ಲಿಕಾರ್ಜುನ, ನಾಗೇಶ, ಕಾಶೀವಿಶ್ವೇಶ್ವರ, ಕೇದಾರೇಶ, ಮಹಾಕಾಲ, ಭೀಮೇಶ, ಘುಸೃಣೇಶ್ವರ ರೆಂದು ಈಗ ಪ್ರಸಿದ್ಧಿ ಹೊಂದಿವೆ. ಇನ್ನೊಂದು ಭಾಗವು ಗಂಧಮಾದನ ಪರ್ವ ತದ ಮೇಲುಭಾಗದಲ್ಲಿರುವದು. ಅದು ಈಗ ಪ್ರಕಟವಾಗುವದು ಇದು ವರೆಗೂ ಅದನ್ನು ಯಾರೂ ನೋಡಿರಲಿಲ್ಲ. ನೀನು ಎಲ್ಲಿ ಶಿವಲಿಂಗವನ್ನು ಸ್ಥಾಪಿಸಿರುವೆ ಯೋ, ಅದರ ಈಶಾನ್ಯಭಾಗದಲ್ಲಿ ಆ ಪರ್ವತವಿರುವದು. ನೋಡು, ಈ ದಿವಸ ನಿನ್ನಿಂದಲೇ ಆ ಲಿಂಗವು ಪ್ರಸಿದ್ಧಿಯನ್ನು ಹೊಂದಿತು. ಅದ್ದರಿಂದ ಈ ಸ್ಥಳಕ್ಕೆ ರಾಮೇಶ್ವರವೆಂದು ಹೆಸರು ಬರುವದು. ನಾನು ಈ ದಿವಸ ಕಾಶಿಯಿಂದ ಇಲ್ಲಿಗೆ ಬಂದೆನು. ಯಾವ ಮನುಷ್ಯನು ಸೇತುವಿನಲ್ಲಿ ಸ್ನಾನಮಾಡಿ, ಅಲ್ಲಿಯ ಮಳಲನ್ನು ತೆಗೆದುಕೊಂಡು ಕಾಶಿಗೆ ಹೋಗಿ, ಅಲ್ಲಿ ತ್ರಿವೇಣಿಯಲ್ಲಿ ಆ ಮಳಲನ್ನು ಕಲಿಸಿ, ಸ್ನಾ ನಮಾಡಿ, ಆ ಗಂಗೋದಕದಿಂದ ರಾಮಲಿಂಗನಿಗೆ ಅಭಿಷೇಕ ಮಾಡುವನೋ, ಆತ ನಿಗೆ ನಿಶ್ಚಯವಾಗಿಯೂ ಬ್ರಹ್ಮಪ್ರಾಪ್ತಿಯಾಗುವದು. ಪಾರ್ವತಿಯೇ, ಇಷ್ಟು ನಾನು ಮಾತನಾಡುವದರೊಳಗಾಗಿ ಅಗಸ್ತ್ಯರು ಅಲ್ಲಿಗೆ ಬಂದರು. ನನ್ನನ್ನೂ, ರಾಮನನ್ನೂ ನೋಡಿ ಅವರಿಗೆ ಬಹಳ ಸಂತೋಷವಾಯಿತು. ಅವರು ಶ್ರೀರಾಮ ನನ್ನು ಕುರಿತು — ಶ್ರೀರಾಮನೇ, ನಿನ್ನ ಯೋಗದಿಂದಲೇ ನನಗೆ ಪರಮೇಶ್ವರನ ದರ್ಶನವಾಯಿತು, ಎಂದು ಕೊಂಡಾಡಿದರು.

ಬಳಿಕ ಅಗಸ್ತ್ಯರು ರಾಮೇಶ್ವರನನ್ನು ಪೂಜಿಸಿ, ಗಂಧಮಾದನ ಪರ್ವತದ ದರ್ಶನ ತೆಗೆದುಕೊಂಡು, ತಮ್ಮ ಆಶ್ರಮಕ್ಕೆ ತೆರಳಿದರು. ಇತ್ತ ಸೇತು ಬಂಧನಕ್ಕೆ ಉಪಕ್ರಮವಾಯಿತು. ನಳನಿಗೆ ಅಂತರಂಗದಲ್ಲಿ ಗರ್ವವು ಉಂಟಾಗಿತ್ತು. ಆ ಕಾರಣ ಕಲ್ಲುಗಳು ಬಂದಕೆಳ್ಳಿಂದು ಕೂಡಿಕೊಳ್ಳಲಿಲ್ಲ. ಶ್ರೀರಾಮನು ತನ್ನ ನಾಮಾಕ್ಷರ ಗಳನ್ನು ಕಲ್ಲುಗಳ ಮೇಲೆ ಬರೆದು, ಸೇತುಕಟ್ಟುವಂತೆ ಆಜ್ಞಾಪಿಸಿದನು. ಆಗ ವಾನ ರರು ಬಹಳ ವೇಗದಿಂದ ನೂರು ಯೋಜನ ಸೇತುವೆಯನ್ನು ಕಟ್ಟಲಾರಂಭಿಸಿದರು. ಐದನೇ ದಿವಸ ನೂರು ಯೋಜನ ಉದ್ದ, ಹನ್ನೆರಡು ಯೋಜನ ಅಗಲವಾದ ಸೇತುವೆಯು ಸಿದ್ಧವಾಯಿತು. ಬಳಿಕ ವಾನರಸೇನೆಯು ಬಹು ವೇಗದಿಂದ ಲಂಕೆ ಯ ಕಡೆಗೆ ಹೊರಟಿತು. ಮಾರುತಿಯು ಭುಜಗಳಮೇಲೆ ಕುಳಿತು, ರಾಮ-ಲಕ್ಷ್ಮಣ

ರು ಸೇನೆಯ ಮಧ್ಯಭಾಗದಲ್ಲಿ ಪ್ರಯಾಣಮಾಡಿದನು. ಸಮುದ್ರದಂತೆ ಗಂಭೀರವಾದ ವಾನರಸೇನೆಯು ಲಂಕೆಗೆ ಸ್ವಲ್ಪ ದೂರದಲ್ಲಿ ಬಂದಿಳಿಯಿತು. ಶ್ರೀರಾಮನು ಅಲ್ಲಿರುವ ಪರ್ವತವನ್ನೇರಿ, ಲಂಕೆಯ ವೈಭವವನ್ನೆಲ್ಲ ನೋಡುತ್ತಿದ್ದನು. ಆತನು ತನ್ನ ಮಂತ್ರಿಗಳೊಡನೆ ಆಲೋಚಿಸಿ, ಅಂಗದನನ್ನು ರಾವಣನ ಕಡೆಗೆ ಸಂಧಾನಕ್ಕಾಗಿ ಕಳುಹಿಸಿದನು.

ಅಂಗದನು ಲಂಕಾನಗರವನ್ನು ಪ್ರವೇಶಿಸಿ, ರಾವಣನ ಸಭೆಗೆ ಹೋದನು. ಅಲ್ಲಿ ಆಸನಗಳು ಇಲ್ಲದ್ದರಿಂದ ಅಂಗದನು ರಾವಣನ ಸಿಂಹಾಸನಕ್ಕೆ ಸರಿಯಾಗಿ ಬಾಲವನ್ನು ಸುಂಟಿಸುತ್ತಿ, ಅದರ ಮೇಲೆ ಕುಳಿತನು. ಮತ್ತು ರಾವಣನನ್ನು ಕುರಿತು 'ಎಲೈ ರಾಕ್ಷಸಾಧಿಪನೇ, ರಾಮನು ಸಾಕ್ಷಾತ್ ಈಶ್ವರನಾಗಿರುವನು. ಆತನ ಸಂಗಡ ದ್ವೇಷವು ಸರ್ವಥಾ ಬೇಡ. ಸೀತಾದೇವಿಯನ್ನು ಆತನಿಗೊಪ್ಪಿಸಿ ಶರಣಾಗತನಾಗು ಯೆಂದು ಬಹುವಿಧವಾಗಿ ಹೇಳಿದನು. ಆದರೂ ರಾವಣನು ಕೇಳಲಿಲ್ಲ. ಆತನು ತನ್ನನ್ನೂ ತನ್ನ ವೈಭವವನ್ನೂ ಹೊಗಳಿಕೊಂಡು, ಅಂಗದನನ್ನೂ, ರಾಮಲಕ್ಷ್ಮಣರನ್ನೂ ಬಹಳ ನಿಂದಿಸಿದನು. ಅದನ್ನು ಕೇಳಿ ಅಂಗದನು ಎಲೋ ರಾವಣನೇ, ನಿನ್ನ ಪರಾಕ್ರಮವು ನಮಗೆ ತಿಳಿದಿರುವದು. ವಾಲಿಯ ಪಾರ್ಶ್ವಗಳಿಂದ ನಿನ್ನ ಅಂಗಗಳಲ್ಲಿರುವ ಎಲುಬುಗಳು ಎಷ್ಟು ಮುರಿದವೋ ಏನೋ! ಪರಮೇಶ್ವರನ ಅಂಗುಷ್ಠಘಾತದಿಂದ ನೀನು ಎಷ್ಟು ಆಯಾಸ ಹೊಂದಿದೆಯೋ ಏನೋ! ಎಲೋ ರಾವಣನೇ ಕಾರ್ತವೀರ್ಯಾರ್ಜುನನ ಕಾರಾಗೃಹದಲ್ಲಿ ಹೊಂದಿದ ದುಃಖವನ್ನು ಮರೆತುಬಿಟ್ಟೆಯಾಗೆ? ನನ್ನ ತಂದೆಯು ಹಿಂದೆ ನಿನ್ನನ್ನು ನನ್ನ ತೊಟ್ಟಿಲಿನ ಕಂಭಗಳಿಗೆ ಕಟ್ಟಿದಾಗ ನಿನ್ನನ್ನು ನಾನು ನೋಡಿರಲಿಲ್ಲವೇ! ಎಂದು ಬಹುವಿಧವಾಗಿ ಹೀಯಾಳಿಸಿದನು. ಈ ಮಾತುಗಳನ್ನು ಕೇಳಿದೊಡನೆ ರಾವಣನು ಅಂಗದನನ್ನು ಹೊಡೆಯಲು ಮಾತಿಗೆ ಅಪ್ಪಣೆಮಾಡಿದನು. ಆನಂತರದ ಅಂಗದನು ಎದುರಿಗೆ ಬಂದ ರಾಕ್ಷಸಾಧಮರನ್ನು ಕೊಂದು, ಆ ಸಭೆಯನ್ನು ತನ್ನ ಶಿರಸ್ಸಿನಲ್ಲಿಟ್ಟುಕೊಂಡು ಶ್ರೀರಾಮನ ಬಳಿಗೆ ಬಂದನು. ಶ್ರೀ ರಾಮನು ರಾವಣನ ಸಭೆಯನ್ನೇ ತಲೆಯಮೇಲೆ ಧರಿಸಿಕೊಂಡು ಬರುತ್ತಿರುವ ಅಂಗದನನ್ನು ನೋಡಿ, "ಎಲೈ, ಮಗು, ಅಂಗದ, ನೀನು ವಿಚಿತ್ರಕಾರ್ಯವನ್ನು ಮಾಡಿದೆ! ರಾವಣನ ಸಭೆಯನ್ನೇ ಇಲ್ಲಿಗೆ ತಂದಿರುವೆ ಎಂದನು

ಶ್ರೀ ರಾಮನ ಈ ಮಾತುಗಳನ್ನು ಕೇಳಿ ಅಂಗದನು, ಪುನಃ ಆ ಸಭೆಯು ಇದ್ದಲ್ಲಿ ಬೀಳುವಂತೆ ಬಾಲದಿಂದ ಎಸೆದನು. ಅಂಗದನ ಈ ಪರಾಕ್ರಮದ ಕಾರ್ಯವ

ನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಶ್ರೀ ರಾಮನು ಅವನ ಹಸ್ತವನ್ನು ಗಟ್ಟಿಯಾಗಿ ಹಿಡಿದು ಸಮಾಧಾನ ಪಡಿಸಿದನು. ರಾವಣನು ಸೀತಾದೇವಿಯನ್ನು ಬಿಟ್ಟುಕೊಡುವವನಲ್ಲವೆಂದು ಕೇಳಿ ಸುಗ್ರೀವನಿಗೆ ಬಹಳ ಕೋಪಬಂತು. ಆ ಕಪಿ ಶ್ರೇಷ್ಠನು ಅಲ್ಲಿಂದಲೇ ಲಂಕೆಗೆ ಹಾರಿ ಸಿಂಹಾಸನದ ಮೇಲೆ ಕುಳಿತಿದ್ದ ರಾವಣನನ್ನು ತನ್ನ ಮುಷ್ಟಿಘಾತದಿಂದ ಕೆಳಗೆ ಕೆಡಹಿದನು. ಬಳಿಕ ಅವರಿಬ್ಬರಿಗೂ ಬಾಹುಯುದ್ಧವಾಯಿತು. ಆಗ ರಾವಣನು ಸೋತನು. ಸುಗ್ರೀವನು ಅಲ್ಲಿಂದ ಬಂದು ಶ್ರೀರಾಮನ ಚರಣಗಳಿಗೆ ನಮಸ್ಕರಿಸಿ ನಿಂತನು. ಶ್ರೀರಾಮನು ಸುಗ್ರೀವನನ್ನು ಅಪ್ಪಿಕೊಂಡು ಅಯ್ಯಾ ವಾನರಾಧಿಪನೆ, ನೀನೇಕೆ ಇಂಥ ಸಾಹಸದ ಕೆಲಸ ಮಾಡಿದೆ? ಇನ್ನು ಮೇಲೆ ನೀವು ಯಾರೂ ನನ್ನ ಅಪ್ಪಣೆಯಿಲ್ಲದೆ ಲಂಕೆಗೆ ಹೋಗಬಾರದು. ಎಂದು ಕಟ್ಟಪ್ಪಣೆ ಮಾಡಿದನು. ಬಳಿಕ ಶುಭಮುಹೂರ್ತದಲ್ಲಿ ಶ್ರೀರಾಮನು ಸಮಸ್ತ ವಾನರ ಸೇನೆಯೊಡನೆ ಲಂಕೆಯನ್ನು ಮುತ್ತಿದನು. ಆ ಕಾಲದಲ್ಲಿ ರಾವಣನಿಗೆ ಅವನ ಬಂಧುಗಳು ಶ್ರೀ ರಾಮನ ಸಂಗಡ ಯುದ್ಧಮಾಡಬೇಡ ಎಂದು ಬಹಳ ಬುದ್ಧಿಹೇಳಿದರು. ಹಾಗಾದರೂ ರಾವಣನು ಕೇಳಲಿಲ್ಲ. ತನಗೆ ವಿರುದ್ಧವಾಗಿ ಮಾತನಾಡಿದವರೆಲ್ಲ ನಗರದಿಂದಾಚೆಗೆ ಹೋಗಬೇಕೆನು. ಧೂಮ್ರಾಕ್ಷ, ವಜ್ರದಂಷ್ಟ್ರ, ನರಕಾಂತಕ, ಮಹೋದರರೆಂಬ ನಾಲ್ಕು ಬಲ ವೀರರನ್ನು ನಾಲ್ಕು ದಿಕ್ಕಿನ ಬಾಗಿಲುಗಳಲ್ಲಿ ಕಾವಲಿರಿಸಿದನು. ಅವರಿಗೆ ಅಪರಿಮಿತವಾದ ಸೈನ್ಯವು ಸಹಾಯಕ್ಕೆ ನಿಂತಿತು. ಮಾಲ್ಯವಂತನೆಂಬ ಪರಮ ವೃದ್ಧನ ಮಾತನ್ನಾದರೂ ಯಾವಾಗ ರಾವಣನು ಗಣನೆಗೆ ತರಲಿಲ್ಲವೋ, ಆಗಲೆ ಇವನ ವಿನಾಶಕಾಲವು ಒದಗಿತೆಂದು ಎಲ್ಲರೂ ತಿಳಿದರು. ರಾಮ-ರಾವಣರ ಸೇನೆಗಳು ರಣರಂಗದಲ್ಲಿ ಪೂರ್ವ ಪಶ್ಚಿಮ ಸಮುದ್ರಗಳಂತೆ ಕೂಡಿದವು ವಿಜಯವನ್ನು ಹೊಂದಬೇಕೆಂದು ಬಹು ರೋಷದಿಂದ ಯುದ್ಧಮಾಡಲು ಆರಂಭಿಸಿದವು.

ಈ ಮೇರೆಗೆ ರಾಕ್ಷಸರಿಗೂ ವಾನರರಿಗೂ ಯುದ್ಧವು ಪ್ರಾರಂಭವಾದ ಬಳಿಕ ಅಂಗದ, ಮಾರುತಿ, ಸುಗ್ರೀವ ಇವರೇ ಮೊದಲಾದ ವಾನರಾಧಿಪರು ರಾಕ್ಷಸರ ಮುಖ್ಯಭಾಗಸೇನೆಯನ್ನು ಧ್ವಂಸಮಾಡಿದರು; ಅನೇಕ ಸೇನಾಪತಿಗಳನ್ನು ಭೂಮಿಯ ಮೇಲೆ ಕೆಡಹಿದರು. ಅನಂತರ ಮಾರುತಿಯೇ ಮೊದಲಾದ ಕಪಿಶ್ರೇಷ್ಠರು ವಾದ್ಯ ಸಮಾರಂಭಗಳಿಂದ ಶ್ರೀ ರಾಮನ ದರ್ಶನಕ್ಕೆ ಬಂದು ಆತನನ್ನು ನಮಸ್ಕರಿಸಿ ಯುದ್ಧಕ್ಕೆ ತೆರಳಿದರು. ಮೇಘನಾದನು ಈ ಸಮಸ್ತ ಕಪಿಗಳ ಹಾವಳಿಯನ್ನು ಅಡಗಿಸಲೋಸುಗ ನಾಗಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಎಲ್ಲ ಕಪಿಗಳೂ

ಮೂರ್ಛಿತರಾದರು. ರಾಮ-ಲಕ್ಷ್ಮಣರೂ ಕೂಡ ನಿದ್ರೆಬಂದವರಂತೆ ಮಲಗಿದರು. ಇಷ್ಟರೊಳಗೆ ಶ್ರೀ ರಾಮನು ಚೇತರಿಸಿಕೊಂಡು ಗರುಡನನ್ನು ಧ್ಯಾನ ಮಾಡಿದನು. ಶ್ರೀ ರಾಮನ ಸೇನೆಗೆ ಬಂದ ವಿಪತ್ತನ್ನು ತಿಳಿದು ಗರುಡನು ಆಕ್ಷಣದಲ್ಲಿಯೇ ಅಲ್ಲಿಗೆ ಬಂದನು. ಆತನನ್ನು ನೋಡಿದೊಡನೆ ಸಮಸ್ತ ಸರ್ಪಗಳೂ ಪೋಂಟಿಕೊಂಡವು. ವಾನರ ಸೇನೆಯು ಬಹುಸಂತೋಷದಿಂದ ಯುದ್ಧಕ್ಕಿಳಿತು. ಆಗ ಪಾಪಿಷ್ಠನು ಗುಪ್ತನಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆ ಬ್ರಹ್ಮಾಸ್ತ್ರಕ್ಕೆ ಮಾನ ಕೊಡಲು ಶ್ರೀ ರಾಮನು ಒಂದು ಕ್ಷಣದ ವರೆಗೆ ತಟಸ್ಥನಾಗಿದ್ದನು. ಅನಂತರ ಎದ್ದು ನೋಡಲು, ಸೇನೆಯು ಮೃತವಾದಂತೆ ಬಿದ್ದಿತ್ತು. ಆಗ ಶ್ರೀ ರಾಮನು ಬಹಳ ಕೋಪದಿಂದ "ತಮ್ಮಾ ಲಕ್ಷ್ಮಣಾ, ನನ್ನ ಧನುಸ್ಸನ್ನೂ, ಅಕ್ಷಯ ಬಾಣಗಳನ್ನೂ ಕೊಡು ನಾನು ಬ್ರಹ್ಮಾಸ್ತ್ರದಿಂದ ಈ ಸಮಸ್ತ ರಾಕ್ಷಸರನ್ನೂ ಸುಟ್ಟು ಬೂದಿಮಾಡುವೆನು" ಯೆಂದನು. ಈ ಮಾತುಗಳನ್ನು ಕೇಳಿ ಇಂದ್ರಜಿತನು ಲಂಕಾಪಟ್ಟಣಕ್ಕೆ ಹಾರಿದನು. ಇತ್ತ ಮಾರುತಿಯೂ, ವಿಭೀಷಣನೂ ಪ್ರಲಾಪಮಾಡಲಾರಂಭಿಸಿದರು. ಶ್ರೀ ರಾಮನು ಜೀವದಿಂದಿರುವನೆಂದು ತಿಳಿದು, ಅವರು ಅಲ್ಲಿಗೆ ಬಂದು ಸೇನೆಯ ದುರವಸ್ಥೆಯನ್ನು ತಿಳಿಸಿದರು. ಶ್ರೀ ರಾಮನು ಜಾಂಬುವಂತನೆಲ್ಲಿರುವನು. ಆತನಾದರೆ ಅನೇಕ ವಿಧವಾದ ಔಷಧಿಗಳನ್ನು ಬಲ್ಲವನು. ಯೆಂದನು. ಇದನ್ನು ಕೇಳಿ ವಿಭೀಷಣನು ಆತನನ್ನು ಹುಡುಕಲು ಆರಂಭಿಸಿದನು. ಸ್ವಲ್ಪಮಟ್ಟಿಗೆ ಜೀವಿತಗಳನ್ನು ಧರಿಸಿದ್ದ ಜಾಂಬುವಂತನು ವಿಭೀಷಣನನ್ನು ನೋಡಿ ನೀನು ಯಾರು! ಎಂದು ಪ್ರಶ್ನೆ ಮಾಡಿದನು. ಮಾರುತಿ ಎಂಬವನೇನು ಜೀವಿತವಂತನಾಗಿದ್ದರೆ ಈ ಸೇನೆಯು ಬದುಕೀತು. ಇಲ್ಲವಾದರೆ ಇವರ ಆಶೆಯೇ ನಿಮಗೆ ಬೇಡ ಯೆಂದನು.

ಜಾಂಬುವಂತನ ಈ ಮಾತುಗಳನ್ನು ಕೇಳಿ ವಿಭೀಷಣನು ಇದೇನು ಹೀಗೆ ಹೇಳುವಿರಿ. ಅಂಗದ, ಸುಗ್ರೀವಾದಿಗಳಿಂದ ಈ ಕೆಲಸವಾಗುವದಿಲ್ಲವೇ! ಯೆಂದು ಕೇಳಿದನು. ಅದಕ್ಕೆ ಜಾಂಬುವಂತನು ಇವರಿಂದ ಒಂದೂ ಕೆಲಸವಾಗುವದಿಲ್ಲ. ಮಾರುತಿ ಜೀವಂತನಾಗಿದ್ದರೆ ಕರೆಯಿರಿ ಯೆಂದನು. ಆಗ ಮಾರುತಿಯು ಬಂದು ನಾನು ಮಾಡತಕ್ಕ ಕೆಲಸವೇನು! ಯೆಂದು ಕೇಳಿದನು. ಜಾಂಬುವಂತನು ಎ, ಮಹೇಶ್ವರನ ಅವತಾರವಾದ ಮಾರುತಿಯೇ, ನೀನು ಕ್ಷೀರಸಮುದ್ರದ ಮಧ್ಯದಲ್ಲಿರುವ ದ್ರೋಣಗಿರಿಗೆ ಹೋಗಿ ಅದರಲ್ಲಿರುವ ಶ್ರೇಷ್ಠವಾದ ಕೆಲವು ಔಷಧಿಗಳನ್ನು ತೆಗೆದುಕೊಂಡು ಬಾ ಯೆಂದು ಔಷಧಿಗಳ ಹೆಸರನ್ನೂ ಗುರುತುಗಳನ್ನೂ ಹೇಳಿದನು

ನಿನ್ನ ಸಂಗಡ ಯುದ್ಧಮಾಡುವೆನು, ಎಂದನು. ಬಳಿಕ ರಾವಣನೂ ತನ್ನ ನಗರಿಗೆ ಹಿಂತಿರುಗಿದನು. ಇತ್ತ ಜಾಂಬುವಂತನು ಆಂಜನೇಯನಿಂದ ಸಂಜೀವನೀ ಮೊದಲಾದ ಮೂಲಿಕೆಗಳನ್ನು ತರಿಸಿ, ಲಕ್ಷ್ಮಣನಿಗೆ ಎಚ್ಚರವಾಗುವಂತೆ ಮಾಡಿದನು. ಬಳಿಕ ಎಲ್ಲಾ ವಾನರಸೈನ್ಯವೂ ಯುದ್ಧಮಾಡಲು ಹರ್ಷದಿಂದ ಹೊರಟಿತು.

ಆಂಜನೇಯನು ದ್ರೋಣಪರ್ವತವನ್ನು ತರಲು ಹೊರಟಿರುವನೆಂದು ತಿಳಿದು, ರಾವಣನು, ಆ ರಾವ ದೂತನಿಗೆ ವಿಘ್ನವನ್ನುಂಟು ಮಾಡಬೇಕೆಂದು, ಕಾಲನೇಮಿ ಎಂಬ ರಾಕ್ಷಸನನ್ನು ಆ ಪರ್ವತಕ್ಕೆ ಹೋಗುವ ಮಾರ್ಗದಲ್ಲಿರಿಸಿದ್ದನು. ಆ ರಾಕ್ಷಸನು ಮಾರುತಿಗೆ ತನ್ನ ದೈತ್ಯವೃತ್ತಿಯ ಪ್ರಭಾವದಿಂದ ವಂಚನೆ ಮಾಡಲುದ್ಯುಕ್ತನಾದನು. ಆ ಕಾಲದಲ್ಲಿ ಆತನು—ಎಲೈ ಮಾರುತಿಯೆ. ಈ ಸನ್ನಿ ಬಳಿಯಲ್ಲಿರುವವನು ಮುನಿಯಲ್ಲ, ಕಾಲನೇಮಿಯೆಂಬ ರಾಕ್ಷಸನು ನಿನಗೆ ತೊಂದರೆಪಡಿಸಲು, ಈ ವೇಷವನ್ನು ಹೊಂದಿರುವನು, ಎಂದು ಅಶರೀರವಾಣಿಯಾಯಿತು. ಮಾರುತಿಯು ಕೂಡಲೆ ಅವನನ್ನು ಯಮಪುರಿಗೆ ಕಳುಹಿಸಿದನು. ಬಳಿಕ ಆತನು ದ್ರೋಣಪರ್ವತಕ್ಕೆ ತೀವ್ರದಿಂದ ಪ್ರಯಾಣಮಾಡಿ, ಆ ಪರ್ವತವನ್ನು ತೆಗೆದುಕೊಂಡು ಬರುತ್ತಿದ್ದನು. ಆಗ ಭರತನು ಆಂಜನೇಯನನ್ನು ನೋಡಿ ಇವನು ರಾಕ್ಷಸನಿರಬಹುದೆಂದು ಬಾಣಪ್ರಯೋಗಮಾಡಿ ಮಾರುತಿಯ ಮಾರ್ಗವನ್ನು ತಡೆದನು. ಬಳಿಕ ಮಾರುತಿಯು ಭರತನನ್ನು ಹೋಲಿಕೆಯಿಂದ ರಾಮನೆಂದು ಭ್ರಾಂತಿಗೊಂಡು, ಏ ಶ್ರೀರಾಮನೇ, ಇಲ್ಲಿಗೇಕೆ ಬಂದೆ. ರಾವಣನಿಂದ ಪರಾಜಯವಾಯಿತೇ ಹ್ಯಾಗೆ! ಎಂದು, ಕೇಳಿದನು. ಈ ಮಾತುಗಳು ಭರತನ ಕಿವಿಗೆ ಬಿದ್ದ ಕೂಡಲೆ ಇವನು ಯಾವನೋ ಒಬ್ಬ ರಾಕ್ಷಸನಿರಬಹುದು ಎಂದು ಯೋಚಿಸಿ, ಧನುಸ್ಸಿನಲ್ಲಿ ಬಾಣವನ್ನು ಸೇರಿಸಿ ಬಿಡಲಾರಂಭಿಸಿದನು. ಮಾರುತಿಯು ಇದನ್ನೆಲ್ಲ ನೋಡಿ, ಈತನು ರಾಮನಲ್ಲವೆಂದು ತಿಳಿದು 'ಎಲೋ ಧನುರ್ಧಾರಿಯೇ, ನಾನು ಯಾರೆಂದು ತಿಳಿದಿರುವೆ? ಶ್ರೀರಾಮನ ದೂತನಾದ ಆಂಜನೇಯನಲ್ಲವೇ? ಇಕೋ, ನನ್ನ ಬಲವನ್ನು ನೋಡು; ಎಂದು ಗರ್ಜಿಸಿದನು. ಅನಂತರ ಭರತನು ಮಾರುತಿಗೆ ನಮಸ್ಕರಿಸಿ, ಶ್ರೀರಾಮನ ಕ್ಷೇಮಲಾಭಗಳನ್ನು ಆತನಿಂದ ವಿಶದವಾಗಿ ವಿಚಾರಿಸಿದನು. ಬಳಿಕ ಮಾರುತಿಯು ಭರತನ ಅಪ್ಪಣೆಯನ್ನು ಪಡೆದು, ಲಂಕೆಗೆ ಬಂದನು. ಲಕ್ಷ್ಮಣನಿಗೆ ಆ ಔಷಧಿಗಳಿಂದ ಆರೋಗ್ಯವಾದಬಳಿಕ ದ್ರೋಣಪರ್ವತವನ್ನು ಮೊದಲಿದ್ದ ಸ್ಥಾನದಲ್ಲಿ ಇರಿಸಿದನು. ದಾರಿಯಲ್ಲಿ ಭರತನಿಗೆ ಲಕ್ಷ್ಮಣನ ಯೋಗಕ್ಷೇಮವನ್ನು ತಿಳುಹಿ, ವಾಯುಸುತನು ಶ್ರೀರಾಮನ ಸನ್ನಿಧಿಗೆ ಬಂದು ಸೇರಿದನು.

## ೯ ನೆಯ ಪ್ರಕರಣ.

### ರಾ ವ ಣ ನ ಸಂ ಹಾ ರ.

ಇತ್ತಲಾ ರಾವಣನು ತನಗೆ ಅಪಜಯವಾದದ್ದನ್ನು ತಿಳಿದು ಬಹಳ ದುಃಖಪಡುತ್ತಿದ್ದನು. ಅತನು ತನ್ನ ಸ್ನೇಹಿತರಾದ ಪಾತಾಳಲೋಕದಲ್ಲಿ ವಾಸಮಾಡುವ ಅಹಿರಾವಣ ಮಹಿರಾವಣರನ್ನೂ ಕರೆಸಿ, ಈಗ ನೀವು ರಾಮ-ಲಕ್ಷ್ಮಣರನ್ನು ಕೊಂದು ನನಗೆ ಸಹಾಯ ಮಾಡಿರಿ, ಎಂದು ಕೇಳಿಕೊಂಡನು. ಆ ರಾಕ್ಷಸರೂ ಕೂಡ ರಾವಣನನ್ನು ಸಮಾಧಾನಪಡಿಸಿ, ಶ್ರೀ ರಾಮನ ಶಿಬಿರದ ಬಳಿಗೆ ಬಂದರು. ಅದು ಒಳಗೆ ಪ್ರವೇಶಮಾಡಲು ಅಸಾಧ್ಯವಾಗಿತ್ತು. ಆ ಮಾಯಾವಿಗಳಾದ ರಾಕ್ಷಸರು ಸೂಕ್ಷ್ಮರೂಪವನ್ನು ಧರಿಸಿ, ಆಕಾಶಮಾರ್ಗದಿಂದ ಒಳಹೊಕ್ಕು, ರಾಮಲಕ್ಷ್ಮಣರು ಮಲಗಿದ್ದ ಕಲ್ಲನ್ನು ಸ್ವಲ್ಪವೂ ಶಬ್ದವಾಗದಂತೆ ಕಿತ್ತು ಹೆಗಲಮೇಲಿಟ್ಟುಕೊಂಡು, ಪಾತಾಳಲೋಕಕ್ಕೆ ಪ್ರಯಾಣ ಮಾಡಿದರು. ಪ್ರಾತಃಕಾಲದಲ್ಲಿ ಎದ್ದು ಎಲ್ಲಾ ವಾನರರೂ ರಾಮ-ಲಕ್ಷ್ಮಣರಿಲ್ಲದ್ದನ್ನು ನೋಡಿ ಬಹಳ ಗಾಬರಿಗೊಂಡರು. ಮಾರುತಿಯು ಅವರ ಪಾದಗಳ ಗುರುತುಗಳನ್ನು ಹುಡುಕುತ್ತಾ ಹೊರಟನು. ಹಾಗೆಯೇ ಸಂಚಾರ ಮಾಡುತ್ತ ಲಂಕೆಯ ದಕ್ಷಿಣದಿಕ್ಕಿನಲ್ಲಿರುವ ನಿಕುಂಭಿನಿಯ ಬಳಿಗೆ ಬಂದನು. ಆಗ ಅಲ್ಲಿ ವಾಸಮಾಡುವ ಎರಡು ಪಕ್ಷಿಗಳಲ್ಲಿ ಗರ್ಭಿಣಿಯಾದ ಹೆಣ್ಣು ಪಕ್ಷಿಯು ತನ್ನ ಪತಿಯನ್ನು ಕುರಿತು, ‘ಎಲೈ ಪ್ರಾಣನಾಥನೆ, ನನಗೆ ನರಮಾಂಸವನ್ನು ತಿನ್ನಬೇಕೆಂದು ಆಶೆಯುಂಟಾಗಿರುವದು.’, ಎಂದು ಹೇಳಿತು. ಆ ಮಾತುಗಳನ್ನು ಕೇಳಿ ಗಂಡುಪಕ್ಷಿಯು ‘ಎಲೈ ಸತಿಯೆ, ಈ ದಿವಸ ಅಹಿರಾವಣ—ಮಹಿರಾವಣರು ರಾಮ—ಲಕ್ಷ್ಮಣರನ್ನು ಇದೇ ಮಾರ್ಗದಿಂದ ಪಾತಾಳಲೋಕಕ್ಕೆ ತೆಗೆದುಕೊಂಡು ಹೋಗಿರುವರು. ಆ ದೈತ್ಯರು ನಾಳಿನದಿವಸ ರಾಮ—ಲಕ್ಷ್ಮಣರನ್ನು ದೇವಿಗೆ ಬಲಿಕೊಡುವರು. ಆ ಸಮಯವನ್ನು ಕಾದುಕೊಂಡಿದ್ದು, ನಾನು ನಿನಗೆ ನರಮಾಂಸವನ್ನು ತಂದುಕೊಡುವೆನು ”

ಪಕ್ಷಿಗಳ ಈ ಮಾತುಗಳನ್ನು ಕೇಳಿ ಮಾರುತಿಗೆ ಬಹು ಸಂತೋಷವಾಯಿತು. ಅತನು ಅಲ್ಲಿಂದ ಮುಂದೆ ಬಹುವೇಗದಿಂದ ತೆರಳಿದನು. ಪಾತಾಳಲೋಕದ ದಾರಿಯಲ್ಲಿ ವಾಸವಾಗಿದ್ದ ಒಂದು ಮೊಸಳೆಯು ಮಾರುತಿಯನ್ನು ತಡೆದು ‘ನೀನು ಯಾರು?

ಎಲ್ಲಿಗೆ ಹೋಗುವೆ? ಎಂದು ಭಯಂಕರವಾದ ಧ್ವನಿಯಿಂದ ಕೇಳಿತು. ಆಗ ಮಾರುತಿಯು ನಾನು ರಾಮಕಾರ್ಯಕ್ಕಾಗಿ ಬಂದಿರುವೆನು, ಎಂದು ತಿಳುಹಿಸನು. ಈ ಮಾತುಗಳನ್ನು ಕೇಳಿ ಆ ಕಪಿಶ್ರೇಷ್ಠವು 'ಎಲೈ ವೀರನೆ, ರಾಮಸೈನ್ಯದಲ್ಲಿ ಅಂಜನಾಸುತನೆಂಬ ನನ್ನ ತಂದೆ ಇರುವನು. ಆತನದೇನಾದರೂ ನಿನಗೆ ಗುರುತುಂಟೋ? ಆ ನನ್ನ ತಂದೆಯು ಕ್ಷೇಮದಿಂದಿರುವನೋ? ಎಂದು ಕೇಳಿತು. ಆಗ ಮಾರುತಿಗೆ ಬಹಳ ಆಶ್ಚರ್ಯವಾಯಿತು. ಆತನು 'ಎಲೈ ವಾನರನೆ, ಅಂಜನೇಯನು ಬಾಲಬ್ರಹ್ಮಚಾರಿಯಲ್ಲವೆ ಹೀಗಿರುವಾಗ ಆತನಿಗೆ ಹೆಂಡತಿಯಲ್ಲಿರುವಳೆ?ಎಂದು ಪ್ರಶ್ನೆಮಾಡಿದನು. ಇದನ್ನು ಕೇಳಿ ಆ ಕಪಿಯು'ಎಲೈ ಕಪಿಶ್ರೇಷ್ಠನೇ ಕೇಳು. ಮಾರುತಿಯು ಲಂಕೆಯನ್ನು ದಹನಮಾಡಿ, ಅತಿ ಶ್ರಮಾಧಿಕ್ಯದಿಂದ ಹಾರಿ ಹೋಗುತ್ತಿರಲು,ಅವನ ಮುಖಗತವಾದ ಶ್ಲೇಷ್ಮವು ಸಮುದ್ರದಲ್ಲಿ ಬಿತ್ತು. ಅದನ್ನು ನನ್ನ ತಾಯಿಯು ಭಕ್ಷಣಮಾಡಿದಳು. ಅದರಿಂದ ಆಕೆಯು ಆಗಲೇ ಗರ್ಭಿಣಿಯಾಗಿ ನನ್ನನ್ನು ಹಡೆದಳು, ಎಂದನು

ಮಾರುತಿಗೆ ಆ ಮಾತುಗಳೆಲ್ಲ ಯುಕ್ತವಾಗಿ ತೋರಿದವು. ಆತನು ಮಕರನನ್ನು ನೋಡಿ 'ಎಲೈ ವೀರನೇ, ನಾನೇ ಆಂಜನೇಯನೆಂಬುವನು ಎಂದನು. ಈ ವಚನವನ್ನು ಕೇಳಿದಕೂಡಲೆ ಮಕರನು ಬಹು ಭಕ್ತಿಯಿಂದ ತಂದೆಗೆ ನಮಸ್ಕಾರಮಾಡಿ, 'ಇಲ್ಲಿ ಬರಲು ಕಾರಣವೇನು' ಎಂದು ಪ್ರಶ್ನೆಮಾಡಿ ಮಾರುತಿಯ. ಸಮಸ್ತ ವಿಚಾರಗಳನ್ನು ತಿಳಿದನು. ಬಳಿಕ ಮಕರವು 'ಎಲೈ ತಂದೆಯೇ, ಇನ್ನು ತಡಮಾಡಬೇಡ, ನಾಳೆ ಸೂರ್ಯೋದಯಕ್ಕೆ ಸರಿಯಾಗಿ ಅಹಿರಾವಣನು ರಾಮ-ಲಕ್ಷ್ಮಣರನ್ನು ಕಾಮಾಕ್ಷಿ ಎಂಬ ದೇವಿಗೆ ಬಲಿಕೊಡಲು ನಿಶ್ಚಯಮಾಡಿದನು. ನೀವು ಅದೇ ದೇವಾಲಯವನ್ನು ಪ್ರವೇಶಿಸಿ ಕಾರ್ಯ ಸಾಧನೆ ಮಾಡತಕ್ಕದ್ದು, ಎಂದು ಹೇಳಿತು. ಅಂಜನೇಯನೂ ಈ ಮಾತನ್ನು ಕೇಳಿದೊಡನೆ ಅತೀವೇಗದಿಂದ ಅಹಿರಾವಣನನಗರವನ್ನು ಪ್ರವೇಶಿಸಿ, ಮತ್ತಾವ ಕಾರ್ಯಗಳನ್ನೂ ಮಾಡದೆ ಮಗನ ಮಾತಿನಂತೆ ಕಾಮಾಕ್ಷಿಯ ದೇವಾಲಯವನ್ನೇ ಪ್ರವೇಶಿಸಿದನು. ಸೂರ್ಯೋದಯಕ್ಕೆ ಸರಿಯಾಗಿ ಅಹಿರಾವಣನು ರಾಮ-ಲಕ್ಷ್ಮಣರನ್ನು ಜೊತೆಗೆ ಕರೆದುಕೊಂಡು ಬಹು ವಿಜೃಂಭಣೆಯಿಂದ ದೇವಾಲಯದ ಸಮೀಪಕ್ಕೆ ಬಂದನು. ಅಷ್ಟರೊಳಗೆ ಗರ್ಭಗೃಹದಲ್ಲಿದ್ದ ಮಾರುತಿಯು ದೇವಿಯ ಧ್ವನಿಯನ್ನನುಸರಿಸಿದ ಮಾತುಗಳಿಂದ ಯೋ ಭಕ್ತ ಶಿರೋಮಣಿಯೇ, ನೀನು ಈ ದಿವಸ ನನ್ನ ಪೂಜೆಯನ್ನು ಬಹಳ ವಿಜೃಂಭಣೆಯಿಂದ ಮಾಡಬೇಕು. ನಿನಗೆ ನನ್ನ ಅನುಗ್ರಹದ ಕಾಲವು ಒದಗಿರುವದು. ಜೀವಂತರಾದ ಮನುಷ್ಯರನ್ನು

ಭಕ್ಷಿಸಲು ನನಗೆ ಇಚ್ಛೆಯುಂಟಾಗಿರುವದು. ನೀನು ದೇವಾಲಯದ ಗವಾಕ್ಷದಿಂದ ಎಲ್ಲ ಪೂಜಾಸಾಮಗ್ರಿಗಳನ್ನೂ ನನಗೆ ಸಮರ್ಪಿಸಬೇಕು. ಬಳಿಕ ಆ ಕುಮಾರರನ್ನು ಗಂಧಮಾಲ್ಯಾದಿಗಳಿಂದ ಪೂಜಿಸಿ, ದೇವಾಲಯದ ಬಾಗಿಲನ್ನು ಸ್ವಲ್ಪಮಟ್ಟಿಗೆ ತೆಗೆದು ಅವರನ್ನು ಒಳಗೆ ಬಿಡಬೇಕು. ಆಗ ಯಾರಾದರೂ ಒಳಗೆ ನೋಡಿದರೆ, ಕೂಡಲೆ ಅವರ ಶಿರಸ್ಸು ಸಾವಿರಾರು ತುಂಡುಗಳಾಗಿ ಬೀಳುವದು ಎಂದು ಹೇಳಿದನು.

ಅವಿವೇಕಿಯಾದ ಅಹಿರಾವಣನು ದೇವಿಯ ಅಪ್ಪಣೆಯಂತೆ ಸಾವಿರಾರು ಕೊಡ ಪಂಚಾಮೃತವನ್ನೂ, ಪಂಚಭಕ್ಷ್ಯಗಳನ್ನೂ ಗವಾಕ್ಷದಿಂದ ದೇವಾಲಯದ ಒಳಕ್ಕೆ ಕಳಿಸಿದನು. ಅಷ್ಟಾದರೂ ಆಂಜನೇಯನಿಗೆ ತೃಪ್ತಿಯಾಗಲಿಲ್ಲ. ಆಗ ಮಾರುತಿಯು 'ಎಲೈ ಭಕ್ತನೇ, ಇನ್ನೂ ನನ್ನ ಕ್ಷುದ್ಬಾಧೆಯು ಪರಿಹಾರವಾಗಲಿಲ್ಲ' ಎಂದು ಕೂಗಿದನು. ಬಳಿಕ ಆ ರಾಕ್ಷಸನು ನಗರದ ಚಿಕ್ಕ ಮಕ್ಕಳಿಗೂ ಕೂಡ ಮಿಗಿಸದಂತೆ ಎಲ್ಲ ಹಾಲನ್ನೂ ತರಿಸಿ ದೇವಿಗೆ ಸಮರ್ಪಿಸಿದನು. ಆ ನಗರದಲ್ಲಿ ಹಾಹಾಕಾರವು ಪ್ರಾರಂಭವಾಯಿತು. ಇಷ್ಟಾದ ಮೇಲೆ ಅಹಿರಾವಣನು ದೇವಿಯ ಅಪ್ಪಣೆಯಂತೆ ಆ ಪುರುಷರನ್ನು ಯಥಾವಿಧಿಯಿಂದ ಪೂಜಿಸಿ, ದೇವಾಲಯದ ಬಾಗಿಲನ್ನು ಸ್ವಲ್ಪಮಟ್ಟಿಗೆ ತೆಗೆದು ಒಳಗೆ ನೂಕಿದನು. ಎದುರಿಗೆ ಬಂದ ರಾಮ-ಲಕ್ಷ್ಮಣರನ್ನು ನೋಡಿ ಮಾರುತಿಯು ಬಹು ಹರ್ಷದಿಂದ ಅವರ ಪಾದಗಳಿಗೆರಗಿದನು. ಅನಂತರ ರಾಮ-ಲಕ್ಷ್ಮಣರು ಮಾರುತಿಯ ವೃತ್ತಾಂತವನ್ನೆಲ್ಲ ಕೇಳಿ, ಬಹು ಸಂತೋಷಪಟ್ಟರು. ಮತ್ತು ದೇವಾಲಯದ ಬಾಗಿಲನ್ನು ಒಡೆಯುವಂತೆ ಮಾರುತಿಗೆ ಅಪ್ಪಣೆ ಮಾಡಿದರು. ಬಳಿಕ ರಾಮ-ಲಕ್ಷ್ಮಣರು ಹೊರಕ್ಕೆ ಬಂದು ಒಂದು ಕ್ಷಣದಲ್ಲಿ ರಾಕ್ಷಸರ ಸೇನೆಗಳನ್ನೆಲ್ಲ ನಾಶಮಾಡಿದರು. ಆಗ ರಾಮ-ಲಕ್ಷ್ಮಣರಿಗೂ ಅಹಿರಾವಣ-ಮಹಿರಾವಣರಿಗೂ ಮಹತ್ತರವಾದ ಯುದ್ಧವು ನಡೆಯಿತು. ಆ ರಾಕ್ಷಸರ ರಕ್ತಬಿಂದುವು ಭೂಮಿಯ ಮೇಲೆ ಬಿದ್ದೊಡನೆ, ಅವರಿಗೆ ಸಮಾನರಾದ ರಾಕ್ಷಸರು ಹುಟ್ಟಲಾರಂಭಿಸಿದರು.

ಇವನ್ನು ನೋಡಿ ಮಾರುತಿಯು ಅಹಿರಾವಣನ ಹೆಂಡತಿಯ ಬಳಿಗೆ ಹೋಗಿ, ಈ ವೃತ್ತಾಂತವೇನೆಂದು ವಿಚಾರಿಸಿದನು. ಆಗ ಆ ತರುಣಿಯು ಎಲೈ ಮಾರುತಿಯೇ, ನಾನು ಒಬ್ಬ ನಾಗೇಂದ್ರನ ಮಗಳು. ನನ್ನನ್ನು ಈ ಅಹಿರಾವಣನು ಬಲಾತ್ಕಾರದಿಂದ ಇಲ್ಲಿಗೆ ಕದ್ದು ತಂದಿರುವನು. ಮಹಿರಾವಣನಿಗೂ ನನ್ನ ಮೇಲೆ ವಿಶ್ವಾಸವುಂಟು. ಆದರೂ ನನಗೆ ಅವರನ್ನು ಸಂತೋಷಪಡಿಸಲು ಇಷ್ಟವಿಲ್ಲ. ನನ್ನನ್ನು ನೀನು ಶ್ರೀರಾಮನಿಗೆ ಪತ್ನಿಯನ್ನಾಗಿ ಮಾಡುವೆನೆಂದು ವಚನ ಕೊಟ್ಟರೆ,

ನಾನು ಆ ದೈತ್ಯರ ಮರಣಕ್ಕೆ ಉಪಾಯವನ್ನು ಹೇಳುವೆನು ಎಂದಳು. ಆಗ ಮಾರುತಿಯು ಎಲೈ ಕಮಣಿಯೇ, ಶ್ರೀ ರಾಮನ ಘಾತದಿಂದ ನಿನ್ನ ಮಂಚವು ಮುರಿಯದೆ ಸ್ಥಿರವಾಗಿದ್ದದ್ದಾದರೆ, ಆತನು ನಿನ್ನನ್ನು ವಿವಾಹ ಮಾಡಿಕೊಳ್ಳುವನು ಎಂದನು. ಬಳಿಕ ಆ ನಾಗಕನ್ನಿಕೆಯು ಪೂರ್ವದಲ್ಲಿ ಕೆಲವು ಭ್ರಮರಗಳಿಗೆ ಆ ರಾಕ್ಷಸರು ಪ್ರಾಣದಾನ ಮಾಡಿದ್ದರು. ಆ ಭ್ರಮರಗಳು ಆ ರಾಕ್ಷಸರ ರಕ್ತದಮೇಲೆ ಅಮೃತ ಬಿಂದುಗಳನ್ನು ವರ್ಷಿಸುವವು. ಅದರಿಂದ ಬಹುರಾಕ್ಷಸರು ಹುಟ್ಟುವರು. ಇಕೋ, ಇಲ್ಲಿರುವ ಭ್ರಮರಗಳನ್ನು ನೀನು ಸಂಹಾರಮಾಡಿದೆಯಾದರೆ, ಆ ಕ್ಷಣದಲ್ಲಿ ಅವರು ಮರಣಹೊಂದುವರು ಎಂದಳು. ಬಳಿಕ ಮಾರುತಿಯು ಆ ರಾಕ್ಷಸರ ಶಯನಗೃಹದಲ್ಲಿದ್ದ ತುಂಬಿಗಳನ್ನೆಲ್ಲ ಒಂದು ನಿಮಿಷದಲ್ಲಿ ನಾಶಮಾಡಿದನು. ಅದರಲ್ಲಿ ಒಂದು ಭ್ರಮರವು, ಜೀವದಾನಮಾಡು ಎಂದು ಮಾರುತಿಯನ್ನು ಬೇಡಿಕೊಂಡಿತು. ಆಗ ವಾಯುಸುತನು ಎಲೈ ಭ್ರಮರವೇ, ನಿನ್ನನ್ನು ಕೊಲ್ಲುವದಿಲ್ಲ. ಇದರ ಕೃತಜ್ಞತೆಗಾಗಿ ನೀನು ಅಹಿರಾವಣನ ಮಂಚವನ್ನು ಸ್ವಲ್ಪವೂ ಗುರ್ತುಕಾಣದಂತೆ ಒಳಗೆ ಪ್ರವೇಶಿಸಿ ಕೊರೆದು ಬಿಡು, ಎಂದು ಆಜ್ಞಾಪಿಸಿ ತಾನು ರಾಮ-ಲಕ್ಷ್ಮಣರ ಬಳಿಗೆ ನಡೆದನು. ಅಷ್ಟರಲ್ಲಿ ಅಹಿರಾವಣ-ಮಹಿರಾವಣರನ್ನು ಶ್ರೀ ರಾಮನು ಆಯಾಸವಿಲ್ಲದೆ ಸಂಹರಿಸಿದ್ದನು. ಅನಂತರ ಶ್ರೀ ರಾಮನು ಆ ಪಟ್ಟಣಕ್ಕೆ ಮಾರುತಿಯ ಮಗನಾದ ಮಕರನನ್ನು ರಾಜನನ್ನಾಗಿ ಮಾಡಿದನು.

ಬಳಿಕ ಶ್ರೀ ರಾಮನು ಮಾರುತಿಯ ಆಗ್ರಹಕ್ಕಾಗಿ ನಾಗಕನ್ಯೆಯ ಅಂತಃಪುರವನ್ನು ಪ್ರವೇಶಿಸಿದನು. ದಾಶರಥಿಯು ಆ ಮಂಚವನ್ನು ಮುಟ್ಟಿದಕೂಡಲೆ ಅದು ಪುಡಿ ಪುಡಿಯಾಗಿ ಕೆಳಗೆಬಿತ್ತು. ಆಗ ಶ್ರೀ ರಾಮನು ಆ ನಾಗಕನ್ಯೆಯನ್ನು ಮುಂದೆ ಕೃಷ್ಣಾವತಾರಕಾಲದಲ್ಲಿ ನಿನ್ನನ್ನು ಪಾಣಿಗ್ರಹಣಮಾಡುವೆನು ಎಂದು ಸಮಾಧಾನಗೊಳಿಸಿದನು. ಇಷ್ಟಾದಮೇಲೆ ರಾಮ-ಲಕ್ಷ್ಮಣರಿಬ್ಬರೂ ಆಂಜನೇಯನ ಭುಜದ ಮೇಲೆ ಕುಳಿತು ಶೀಘ್ರವಾಗಿ ತಮ್ಮ ಪಾಳಯವನ್ನು ಸೇರಿದರು. ಸುಗ್ರೀವಾದಿಗಳಿಗೆ ರಾಮ-ಲಕ್ಷ್ಮಣರನ್ನು ನೋಡಿ ಪರಮಾನಂದವಾಯಿತು. ವಾನರರು ಗರ್ಜನೆ ಮಾಡಿದರು. ಆ ಧ್ವನಿಯನ್ನು ಕೇಳಿ ರಾವಣನು ಗಾಬರಿಹೊಂದಿದನು. ಮತ್ತು ಅಹಿರಾವಣ-ಮಹಿರಾವಣರನ್ನು ಶ್ರೀ ರಾಮನು ಕೊಂದನೆಂಬ ವರ್ತಮಾನವನ್ನು ಕೇಳಿ, ಆತನು ತನಗೆ ಮೃತ್ಯುವು ಸಮೀಪಿಸಿತೆಂದು ತಿಳಿದನು. ಶ್ರೀ ರಾಮನು ಸಾಕ್ಷಾತ್ ನಾರಾಯಣನೇ ಹೊರತು ಮನುಷ್ಯನಲ್ಲ ಎಂದು ನಿಶ್ಚಯ ಮಾಡಿದನು.

ರಾವಣನು ಶ್ರೀರಾಮನೊಡನೆ ಯುದ್ಧಮಾಡುವದಕ್ಕಾಗಿ ಕುಂಭಕರ್ಣನನ್ನು ಎಚ್ಚರಗೊಳಿಸುವಂತೆ ರಾಕ್ಷಸರಿಗೆ ಆಜ್ಞಾಪಿಸಿದನು. ಕುಂಭಕರ್ಣನನ್ನು ಎಬ್ಬಿಸುವದು ರಾಕ್ಷಸರಿಗೆ ಬಹು ಅಸಾಧ್ಯವಾಯಿತು. ಅವರು ಅವನ ದೇಹದಮೇಲೆ ಅನೇಕ ಶಸ್ತ್ರಾಸ್ತ್ರಗಳನ್ನು ಹಾಕಿ ಉರಿಹಚ್ಚಿದರು. ಈಮಧ್ಯೆ ಅನೇಕ ರಾಕ್ಷಸರು ಕುಂಭಕರ್ಣನ ಶ್ವಾಸೋಚ್ಛ್ವಾಸದ ಬಲದಿಂದ ಅವನ ದೇಹದ ಒಳಕ್ಕೂ, ಹೊರಕ್ಕೂ ತಿರುಗಾಡಲಾರಂಭಿಸಿದರು. ಕೆಲವರು ಆತನ ಕೈಕಾಲುಗಳ ಮೇಲೆ ಕಲ್ಲು ಬಂಡೆಗಳನ್ನು ಎತ್ತಿ ಎಸೆದರು. ಅನಂತರ ಕುಂಭಕರ್ಣನು ಸ್ವಲ್ಪ ಕಣ್ಣು ಬಿಟ್ಟು ನೋಡಿದನು. ಆ ಕೂಡಲೆ ರಾಕ್ಷಸರು ಅವನ ಬಾಯೊಳಗೆ ಸಾವಿರಾರು ಕುರಿಗಳನ್ನು ಹೊಗಿಸಿದರು. ನೂರಾರುಕೊಡ ನೀರನ್ನು ಸುರುವಿದರು. ಅಷ್ಟಾದ ಬಳಿಕ ಸ್ವಲ್ಪಮಟ್ಟಿಗೆ ತೃಪ್ತನಾಗಿ ಆ ರಾಕ್ಷಸನು ಅಣ್ಣನಾದ ರಾವಣನಿದ್ದಲ್ಲಿಗೆ ಬಂದನು. ಕುಂಭಕರ್ಣನು ಲಂಕೆಯಲ್ಲಿ ನಡೆದ ಅನಾಹುತವನ್ನು ನೋಡಿ, ಛೇ! ಅಣ್ಣನವರೇ, ಶ್ರೀರಾಮನ ಸಂಗಡ ದ್ವೇಷಮಾಡಬೇಡಿರಿ. ಆತನು ಸಾಕ್ಷಾತ್ ವಿಷ್ಣುವಿರುವನು. ಈ ವಿಷಯವನ್ನು ನಾನು ಪೂರ್ವದಲ್ಲಿ ನಾರದರಿಂದ ಕೇಳಿರುವೆನು ಎಂದನು. ಈ ಮಾತನ್ನು ಕೇಳಿ ರಾವಣನು ಕೋಪಗೊಂಡು ಎಲೈ ಹೇಡಿಯಾದ ಕುಂಭಕರ್ಣನೇ, ನಿನಗೆ ನಿದ್ರೆ ಇನ್ನೂ ತೀರಲಿಲ್ಲವೆಂದು ತೋರುವದು. ಹೋಗು, ನಿನಗೇಕೆ ಯುದ್ಧದವಿಚಾರವೆಂದು ನುಡಿದನು. ಬಳಿಕ ಕುಂಭಕರ್ಣನು ರೋಷದಿಂದ ಅಣ್ಣನಿಗೆ ನಮಸ್ಕರಿಸಿ ಇಕೋ ಈಗಲೇ ಯುದ್ಧಕ್ಕೆ ಹೊರಡುವೆನೆಂದು ರಾಮ-ಲಕ್ಷ್ಮಣರಿದ್ದಲ್ಲಿಗೆ ತೆರಳಿದನು.

ವಾನರರು ಆ ಕುಂಭಕರ್ಣನನ್ನು ನೋಡಿ ಬೆದರಿ, ಶ್ರೀರಾಮಚಂದ್ರನಿದ್ದಲ್ಲಿಗೆ ಓಡಿಹೋದರು. ವಿಭೀಷಣನು ಅಣ್ಣನನ್ನು ನೋಡಿ ಪಾದಗಳಿಗೆರಗಿದನು. ಮತ್ತು ತನ್ನ ವೃತ್ತಾಂತವನ್ನು ಸವಿಸ್ತಾರವಾಗಿ ತಿಳಿಸಿದನು. ಕುಂಭಕರ್ಣನು ಒಳ್ಳೇದಾಯಿತು ನೀನು ನನ್ನಲ್ಲಿ ನಿಲ್ಲಬೇಡ. ಶ್ರೀರಾಮನ ಕಡೆಗೇ ನಡೆ. ಯುದ್ಧದಲ್ಲಿ ಈ ಸಂಬಂಧಗಳು ಯಾವವೂ ನೋಡತಕ್ಕವುಗಳಲ್ಲ ಎಂದನು. ಬಳಿಕ ವಿಭೀಷಣನು ಶ್ರೀರಾಮನ ಕಡೆಗೆ ತೆರಳಿದನು ಆ ಕುಂಭಕರ್ಣನ ಕೈಕಾಲುಗಳ ಹೊಡತದಿಂದ ಅನೇಕ ಕಪಿಗಳು ಹತರಾದರು. ಬಳಿಕ ಕುಂಭಕರ್ಣನು ಸುಗ್ರೀವನನ್ನು ಎಳೆದುಕೊಂಡು ಲಂಕೆಗೆ ತೆರಳಿದನು. ಆಗ ಸುಗ್ರೀವನು ತನ್ನ ಉಗುರುಗಳಿಂದ ಕುಂಭಕರ್ಣನ ಮೂಗು, ಕಿವಿ ಇವುಗಳನ್ನು ಛೇದಿಸಿ, ತಿರುಗಿ ಶ್ರೀರಾಮಸನ್ನಿಧಿಗೇ ಬಂದನು. ಅನಂತರ ಕುಂಭಕರ್ಣನು ಲಂಕೆಗೆ ಹೋಗಲು ಅವಮಾನ

1

ಗೊಂಡು ಮತ್ತೆ ಶ್ರೀ ರಾಮನಕಡೆಗೇ ತಿರುಗಿದನು. ಶ್ರೀ ರಾಮ-ಕುಂಭಕರ್ಣರಿಗೆ ದೊಡ್ಡಯುದ್ಧ ನಡೆಯಿತು. ಶ್ರೀ ರಾಮನು ಕುಂಭಕರ್ಣನ ಕಾಲು ಕೈಗಳನ್ನು ಛೇದಿಸಿದನು. ಹಾಗಾದರೂ ಆ ರಾಕ್ಷಸನು ಶ್ರೀ ರಾಮನ ಬಳಿಗೆ ಚೆಂಡಿನಂತೆ ಪುಟಿದು ಬರಲಾರಂಭಿಸಿದನು. ಆಗ ಶ್ರೀರಾಮನು ತನ್ನ ದಿವ್ಯಾಸ್ತ್ರದಿಂದ ಅವನ ಶಿರಸ್ಸನ್ನು ಆಕಾಶಕ್ಕೆ ಹಾರಿಸಿದನು. ದೇವತೆಗಳು ಈ ಮಹತ್ಕಾರ್ಯವನ್ನು ನೋಡಿ, ಬಹಳ ಸಂತೋಷ ಹೊಂದಿದರು. ಈ ವರ್ತಮಾನವನ್ನು ಕೇಳಿ, ರಾವಣನು ಬಹಳ ಶೋಕಮಾಡಿದನು.

ಇಂದ್ರಜಿತುವು ತಂದೆಯನ್ನು ಸಮಾಧಾನಗೊಳಿಸಿ, ಶತ್ರುವಧಕಾರಕವಾದ ಹೋಮವನ್ನು ಮಾಡಲು, ನಿಕುಂಭಿಲೆ ಯೆಂಬ ಮಹಾಸ್ಥಾನಕ್ಕೆ ನಡೆದನು. ಅಲ್ಲಿ ಆತನು ರಥ, ಶಸ್ತ್ರ, ಪದಾತಿ, ಅಶ್ವ, ಗಜ, ಇವೇ ಮೊದಲಾದ ಸಮಸ್ತ ಸಂಭಾರಗಳೂ ಅಕ್ಷಯಗಳಾಗಬೇಕು, ಯೆಂದು ದೀಕ್ಷಾವಸ್ತ್ರಗಳನ್ನು ಧರಿಸಿ, ಹೋಮಮಾಡಲಾರಂಭಿಸಿದನು. ನಾನಾವಿಧಗಳಾದ ಸಮಿಧೆಗಳು, ಚರುಗಳು, ದಧಿ, ಕ್ಷೀರ, ಘೃತ, ಇವೇ ಮೊದಲಾದ ಪದಾರ್ಥಗಳನ್ನು ಅಗ್ನಿಯಲ್ಲಿ ವಷಟ್ಕಾರ ಪೂರ್ವಕವಾಗಿ ಸಮರ್ಪಿಸಲಾರಂಭಿಸಿದನು. ಮತ್ತು ಮನುಷ್ಯನ ಶಿರಸ್ಸು, ದಂತ, ಕೇಶ, ಸ್ನಾಯು, ರಕ್ತ, ಮೇಧಸ್ಸು, ಇವೇ ಮೊದಲಾದ ದ್ರವ್ಯಗಳನ್ನು ಹೋಮಮಾಡುತ್ತಿದ್ದನು. ಈ ಹೋಮಧೂಮವು ಆಕಾಶವನ್ನು ಮುಸುಕಿರುವದನ್ನು ವಿಭೀಷಣನು ನೋಡಿ, ಶ್ರೀ ರಾಮನ ಬಳಿಗೆ ಬಂದು – "ಎ, ರಘುನಾಥನೇ, ಈಗ ಇಂದ್ರಜಿತುವು ಒಂದು ಯಾಗವನ್ನು ಮಾಡುತ್ತಿರುವನು. ಅದು ಮುಗಿದರೆ, ಅವನನ್ನು ಜಯಿಸುವದು ಯಾರಿಂದಲೂ ಸಾಧ್ಯವಿಲ್ಲ. ಈಗಲೆ ಅವನನ್ನು ನಾಶಮಾಡಬೇಕು. ಮತ್ತು ಅವನಿಗೆ ಬ್ರಹ್ಮನು 'ಯಾವ ಮಹಾತ್ಮನು ಹನ್ನೆರಡು ವರ್ಷಗಳು ನಿದ್ರಾಹಾರಾದಿಗಳನ್ನು ಬಿಟ್ಟಿರುವನೋ! ಆತನು ನಿನ್ನನ್ನು ಸಂಹಾರಮಾಡುವನು,' ಯೆಂದು ಹೇಳಿರುವನು. ಈಗ ಅವಕಾಶ ಮಾಡಿದರೆ, ಪ್ರಯೋಜನಗಳೆಲ್ಲಾ ನಿಷ್ಫಲವಾಗುವವು," ಯೆಂದನು.

ಈ ಮಾತುಗಳನ್ನು ಕೇಳಿ ಶ್ರೀರಾಮನು, ಅಯೋಧ್ಯೆಯನ್ನು ಬಿಟ್ಟಾಗಿನಿಂದಲೂ ನಿದ್ರಾಹಾರಗಳನ್ನು ವರ್ಜ ಮಾಡಿದ್ದ ಲಕ್ಷ್ಮಣನಿಗೆ ಆಜ್ಞೆಮಾಡಿದನು. ಆತನು ಶ್ರೀ ರಾಮನ ಅಪ್ಪಣೆಯಂತೆ ಅಂಗದನ ಭುಜದ ಮೇಲೆ ಕುಳಿತ, ಯುದ್ಧಕ್ಕೆ ತೆರಳಿದನು. ಜೊತೆಗೆ ಆಂಜನೇಯ, ಸುಗ್ರೀವ, ನಳ, ನೀಲ ಇವರೇ ಮೊದಲಾದ ಸಮಸ್ತ ವಾನರಶ್ರೇಷ್ಠರೂ ಹೊರಟರು. ಆ ಹೋಮಾಗಾರದ ಸಮೀಪದಲ್ಲಿ ಕ್ರೂರವಾದ

ರಾಕ್ಷಸರನ್ನು ಲಕ್ಷ್ಮಣನು ಆಗ್ನೇಯಾಸ್ತ್ರದಿಂದ ಸುಟ್ಟು ಕೆಡಹಿದನು. ಮುಂದೆ ಇಂದ್ರಜಿತುವು ಹೋಮಮಾಡುತ್ತಿರುವ ಗುಹೆಯ ಬಾಗಿಲಿಗೆ ಮುಚ್ಚಿದ್ದ ಕಲ್ಲನ್ನು ಮಾರುತಿಯು ತೆಗೆದು ಬಿಸುಟು, ಒಳಗೆ ಹೋಮಮಾಡುತ್ತಿರುವ ಇಂದ್ರಜಿತುವಿನ ಬಳಿಗೆ ಹೋಗಿ, ಹೋಮಾಗ್ನಿಯಲ್ಲಿ ನೀರು ಸುರಿದು, ಆ ರಾಕ್ಷಸನನ್ನು ತನ್ನ ಕಾಲಿನಿಂದ ಒದ್ದನು. ಇದನ್ನೆಲ್ಲಾ ನೋಡಿ, ಬಹು ಕುಪಿತನಾದ ಇಂದ್ರಜಿತುವು ರಥವನ್ನೇರಿ ಶತ್ರುಗಳೊಡನೆ ಯುದ್ಧಮಾಡಲುಪಕ್ರಮಿಸಿದನು. ಆಗ ಲಕ್ಷ್ಮಣನು ತನ್ನ ದಿವ್ಯಾಸ್ತ್ರಗಳಿಂದ ಆ ರಾಕ್ಷಸನ ಕವಚ, ರಥ, ಅಶ್ವ ಇವುಗಳನ್ನೆಲ್ಲಾ ಧ್ವಂಸಮಾಡಿದನು. ಬಳಿಕ ಇಂದ್ರಜಿತುವು ಮತ್ತೊಂದು ರಥದ ಮೇಲೆ ಕುಳಿತು, ಯುದ್ಧಕ್ಕೆ ಸಿದ್ಧನಾದನು. ಆ ರಾಕ್ಷಸ-ರಾಜಪುತ್ರನು ಲಕ್ಷ್ಮಣನ ಕವಚವನ್ನು ತನ್ನ ಬಾಣದಿಂದ ಖಂಡಿಸಿದನು. ಆಗ ಲಕ್ಷ್ಮಣನಿಗೆ ಬಹಳ ಸಿಟ್ಟು ಬಂದು, ಆತನು ಆ ರಾಕ್ಷಸನ ಬಲಗೈಯನ್ನು ಖಂಡಿಸಿ, ಅದು ಅವನ ಗೃಹದಲ್ಲಿ ಬೀಳುವಂತೆ ಬಾಣಗಳನ್ನು ಹೊಡೆದನು. ಇಂದ್ರಜಿತುವು ಎಡಗೈಯಿಂದ ಹೊಡೆಯಲಾರಂಭಿಸಿದನು. ಆಗ ಲಕ್ಷ್ಮಣನು ಆ ಹಸ್ತವನ್ನು ರಾವಣನ ಎದುರಿಗೆ ಬೀಳುವಂತೆ ತನ್ನ ಬಾಣದಿಂದ ಹೊಡೆದನು. ಆಗಲೂ ಶೂರನಾದ ಇಂದ್ರಜಿತುವು ಲಕ್ಷ್ಮಣನ ಮೇಲೆ ಬೀಳಲುದ್ಯುಕ್ತನಾದನು. ಸೌಮಿತ್ರಿಯು 'ಇನ್ನು ತಡಮಾಡಲಾಗದೆ'ಂದು ಶ್ರೀರಾಮನಾಮಾಂಕಿತವಾದ ಅಸ್ತ್ರದಿಂದ ಇಂದ್ರಜಿತುವಿನ ಶಿರಸ್ಸನ್ನು ಆಕಾಶಕ್ಕೆ ಹಾರಿಸಿದನು. ಆಗ ದೇವತೆಗಳು ಲಕ್ಷ್ಮಣನ ಮೇಲೆ ಪುಷ್ಪಗಳನ್ನು ವರ್ಷಿಸಿದರು. ಗಂಧರ್ವರು ಆತನ ಕೀರ್ತಿಯನ್ನು ಹೊಗಳಿದರು. ಲಕ್ಷ್ಮಣನು ಇಂದ್ರಜಿತುವಿನ ಹನನವಾದ ಕೂಡಲೆ ಪರಮ ಹರ್ಷದಿಂದ ಸಿಂಹನಾದ ಮಾಡಿದನು.

ಈ ಧ್ವನಿಯನ್ನು ಕೇಳಿ ಸೀತಾದೇವಿಯು ವಿಹ್ವಲಳಾಗಿ, ಹತ್ತಿರದಲ್ಲಿದ್ದ ತ್ರಿಜಟೆ ಎಂಬ ತನ್ನ ಸಖಿಯನ್ನು ಕುರಿತು—'ಈಗ ನಡೆದ ಕೋಲಾಹಲದ ಕಾರಣವೇನಿರಬಹುದು' ಎಂದು ವಿಚಾರಿಸಿದಳು. 'ಲಕ್ಷ್ಮಣನು ಇಂದ್ರಜಿತುವನ್ನು ಸಂಹರಿಸಿದನು' ಎಂಬ ವಾರ್ತೆಯನ್ನು ಕೇಳಿ, ಆಕೆಗೆ ಆನಂದವಾಯಿತು. ಇತ್ತಲಾ ಮಾರುತಿಯು ಇಂದ್ರಜಿತುವಿನ ಶಿರಸ್ಸನ್ನು ತೆಗೆದುಕೊಂಡು, ಲಕ್ಷ್ಮಣ, ಅಂಗದ, ಸುಗ್ರೀವ ಇವರೇ ಮೊದಲಾದ ವಾನರಶ್ರೇಷ್ಠರಿಂದೊಡಗೂಡಿ ಶ್ರೀರಾಮನ ಸನ್ನಿಧಿಗೆ ಬಂದನು. ರಾವಣನು ಇಂದ್ರಜಿತುವಿನ ಎಡಗೈಯನ್ನು ನೋಡಿ, ಬಹಳ ದುಃಖಪಟ್ಟನು. ಆ ದುಃಖದ ವೇಗದಲ್ಲಿ ರಾವಣನು ಪ್ರಜ್ಞೆ ಇಲ್ಲದೆ 'ಸೀತಾದೇವಿಯನ್ನು ಈಗಲೇ ಸಂಹಾರ ಮಾಡುವೆನು' ಎಂದು ಹೊರಟನು. ಅಷ್ಟರಲ್ಲಿ ಸುಪಾರ್ಶ್ವನೆಂಬ

ಅವನ ಮಂತ್ರಿಯು ಸ್ತ್ರೀವಧಮಾಡಬಾರದೆಂದು ರಾವಣನಿಗೆ ಬಹಳ ಉಪದೇಶಿಸಿ, ಆತನನ್ನು ಹಿಂತಿರುಗಿಸಿದನು. ಆಗ ರಾವಣನು ಶ್ರೀರಾಮನೊಡನೆ ಯುದ್ಧವೊಡಲು ನಿಶ್ಚಯಿಸಿದನು.

ಇತ್ತಲಾ ಇಂದ್ರಜಿತುವಿನ ದಕ್ಷಿಣ ಹಸ್ತವು ಅವನ ಪತ್ನಿಯಾದ ಸುಲೋಚನೆಯ ಮನೆಯಲ್ಲಿ ಬಿದ್ದಿತ್ತು. ಅದನ್ನು ನೋಡಿ ಆ ತರುಣಿಯು ಬಹಳ ಶೋಕ ಮಾಡಿದಳು. ಆಗ ಆ ಹಸ್ತವು 'ಎಲೈ ಸುಂದರಿಯೇ, ನಾನು ಪರಮಾತ್ಮನಿಂದ ಮರಣಹೊಂದಿರುವೆನು. ನನ್ನ ಸಲುವಾಗಿ ನೀನು ದುಃಖಪಡಲು ಕಾರಣವಿಲ್ಲ. ನೀನು ಈಗಲೇ ಶ್ರೀ ರಾಮನ ಬಳಿಗೆ ಹೋಗಿ, ಅಲ್ಲಿರುವ ನನ್ನ ಶಿರಸ್ಸನ್ನು ತಂದು ಅದರೊಡನೆ ನೀನು ಸಹಗಮನ ಮಾಡು. ಅಂದರೆ ನಿನಗೆ ನನ್ನ ದರ್ಶನವು ದೊರೆಯುವದು' ಎಂದು ನೆಲದ ಮೇಲೆ ಬರೆಯಿತು. ಇದನ್ನು ಓದಿಕೊಂಡು ಸುಲೋಚನೆಯು ಅತ್ತೆಮಾವಂದಿರ ಅಪ್ಪಣೆಯನ್ನು ಪಡೆದು, ಶಿಬಿಕೆಯಲ್ಲಿ ಕುಳಿತು, ಶ್ರೀರಾಮನ ಬಳಿಗೆ ತೆರಳಿದಳು. ಆ ತರುಣಿಯು ತನ್ನ ಗಂಡನ ಶಿರಸ್ಸನ್ನು ಕೊಡುವಂತೆ ಶ್ರೀ ರಾಮನನ್ನು ಪ್ರಾರ್ಥಿಸಿದಳು. ಬಳಿಕ ಆ ಪತಿವ್ರತೆಯು ಗಂಡನ ಶಿರಸ್ಸನ್ನು ಸ್ವೀಕರಿಸಿ, ಲಂಕೆಗೆ ಪ್ರಯಾಣ ಮಾಡಿದಳು. ಆದೀನಳಾದ ಸುಲೋಚನೆಯು ತನ್ನ ಅಂತಃಪುರವನ್ನು ಪ್ರವೇಶಿಸಿ, ಸಮಸ್ತ ದಾನಧರ್ಮಗಳನ್ನೂ ಸಾಂಗಮಾಡಿಕೊಂಡು, ಪತಿಯ ಶಿರಸ್ಸಿನೊಡನೆ ನಿಕುಂಭಿಲಿಯ ಬಳಿಯಲ್ಲಿರುವ ಯಜ್ಞಕುಂಡದಲ್ಲಿ ಹಾರಿ ಪತಿಯೊಡನೆ ವೈಕುಂಠಕ್ಕೆ ಪ್ರಯಾಣ ಮಾಡಿದಳು.

ಇತ್ತಲಾ ರಾವಣನು ಸಮಸ್ತ ಬಂಧುಗಳೊಡನೆ ಬಂದು, ಶ್ರೀ ರಾಮನೊಡನೆ ಯುದ್ಧಮಾಡಲು ಸಿದ್ಧನಾದನು. ಆಗ ರಾಮನು ಮಿಕ್ಕ ರಾಕ್ಷಸರನ್ನೆಲ್ಲ ತನ್ನ ಬಾಣಗಳಿಂದ ಸದೆಬಡೆದು ಭೂಮಿಯ ಮೇಲೆ ಉರುಳಿಸಿದನು. ಇಷ್ಟರಲ್ಲಿ ರಾವಣನು ಮಯನೆಂಬ ರಾಕ್ಷಸನಿಂದ ಒಂದು ಕೃತ್ರಿಮವಾದ ರಾಮನ ಶಿರಸ್ಸನ್ನು ನಿರ್ಮಾಣಮಾಡಿಸಿ, ಸೀತಾದೇವಿಯನ್ನು ಮೋಸಗೊಳಿಸಲುದ್ಯುಕ್ತನಾದನು. ಈ ವಿಷಯವನ್ನು ಮೊದಲೇ ಬ್ರಹ್ಮನು ಸೀತೆಗೆ ತಿಳುಹಿದ್ದನು. ರಾವಣನು ಮಯನಿಂದ ನಿರ್ಮಿತವಾದ ಶಿರಸ್ಸನ್ನು ತೆಗೆದುಕೊಂಡು ಹೋಗಿ, ಸೀತಾದೇವಿಯ ಎದುರಿಗಿರಿಸಿ 'ಎಲೈ ಸೀತೆಯೇ, ಇಕೋ, ನೋಡು. ಶ್ರೀ ರಾಮನ ಶಿರಸ್ಸನ್ನು ತಂದಿರುವೆನು' ಎಂದನು. ಸೀತೆಯು ಈ ಕೃತ್ರಿಮವನ್ನು ತಿಳಿದವಳಾದ್ದರಿಂದ ಸ್ವಲ್ಪ ಹೊತ್ತು ಸುಮ್ಮನೆ ಇದ್ದು 'ಎಲೈ ನೀಚನಾದ ರಾವಣನೇ, ಇನ್ನು ಸ್ವಲ್ಪ ಕಾಲದೊಳಗೆ ಛಿನ್ನವಾದ ನಿನ್ನ ಶಿರಸ್ಸುಗಳನ್ನು ದೈವಯೋಗದಿಂದ ನೋಡುವೆನು'

ಎಂದಳು. ಈ ಮಾತುಗಳನ್ನು ಕೇಳಿ ರಾವಣನು ಬಹಳ ಖಿನ್ನನಾಗಿ ತನ್ನ ಸಭಾ ಮಂಟಪಕ್ಕೆ ಹಿಂತಿರುಗಿದನು.

ಇತ್ತ ಶ್ರೀ ರಾಮನು ಲಂಕಾನಗರಿಯನ್ನು ದಹನ ಮಾಡುವಂತೆ ವಾನರರಿಗೆ ಆಜ್ಞೆಮಾಡಿದನು. ರಾಮಚಂದ್ರನ ಅಪ್ಪಣೆಯಂತೆ ಕಪಿವರರು ಲಂಕೆಯನ್ನು ಸುಡಲಾರಂಭಿಸಿದರು. ಆಗ ಮೊದಲಿನಂತೆ ನಗರದಲ್ಲಿ ಜನಗಳ ಆರ್ತಧ್ವನಿಯು ಪ್ರಾರಂಭವಾಯಿತು. ರಾವಣನು ದಿವ್ಯಾಸ್ತ್ರಗಳಿಗಾಗಿ ಗುಹೆಯಲ್ಲಿ ಯಜ್ಞಮಾಡಲು ಹೊರಟನು. ಅಲ್ಲಿ ಆತನು ರಕ್ತದಿಂದಸ್ನಾನಮಾಡಿ, ರಕ್ತವಸ್ತ್ರಗಳನ್ನುಟ್ಟು, ನರಶಿರಸ್ಸುಗಳ ಮಾಲಿಕೆಯನ್ನು ಕಂಠದಲ್ಲಿ ಧರಿಸಿ, ನರಶಿರಸ್ಸುಗಳನ್ನು ಹೋಮ ಮಾಡುತ್ತ ಬಹಳ ಕ್ರೂರವಾದ ನಿಶ್ಚಯದಿಂದ ಕುಳಿತಿದ್ದನು. ಈ ವರ್ತಮಾನವನ್ನು ಕೇಳಿ ವಿಭೀಷಣನು ಶ್ರೀ ರಾಮನಿಗೆ ಬಹಳ ತ್ವರೆ ಮಾಡುವಂತೆ ಹೇಳಿದನು. ಬಳಿಕ ಶ್ರೀ ರಾಮನ ಆಜ್ಞೆಯಿಂದ ಸಮಸ್ತವಾನರರೂ ಲಂಕೆಗೆ ತೆರಳಿದರು. ಆ ಗುಹೆಯ ಬಳಿಯಲ್ಲಿ ಕಾವುಕೊಂಡಿದ್ದ ರಾಕ್ಷಸರನ್ನು ನಾಶಮಾಡಿ, ಆಂಜನೇಯನೇ ಮೊದಲಾದ ಕಪಿಶ್ರೇಷ್ಠರು ಗುಹೆಯ ಬಾಗಿಲನ್ನು ಹುಡುಕಲಾರಂಭಿಸಿದರು. ಆಗ ವಿಭೀಷಣನ ತಂಗೆಯಾದ ಸರಮಾ ಎಂಬ ಸ್ತ್ರೀಯು ಆ ಗುಹೆಯ ಬಾಗಿಲನ್ನು ತೋರಿಸಿದಳು. ಆಕ್ಷಣವೇ ವಾನರರು ಒಳಗೆ ಪ್ರವೇಶಿಸಿ, ರಾವಣನನ್ನು ಬಹಳ ಹಿಂಸೆಪಡಿಸಿದರು. ಆದರೂ ರಾವಣನು ಬಹಿರ್ಮುಖನಾಗಲಿಲ್ಲ. ಬಳಿಕ ವಾನರರು ಹತ್ತರದಲ್ಲಿದ್ದ ಮಂಡೋದರಿಯನ್ನು ತೊಂದರೆಪಡಿಸಲಾರಂಭಿಸಿದರು. ಆಕೆಯ ಆರ್ತಧ್ವನಿಯನ್ನು ಕೇಳಿ ರಾವಣನು ಬಹಿರ್ಮುಖನಾದನು.

ಇದನ್ನು ನೋಡಿ ಸಮಸ್ತ ವಾನರರೂ ಶ್ರೀರಾಮನ ಬಳಿಗೆ ಪ್ರಯಾಣ ಮಾಡಿದರು. ರಾವಣನ ಯಜ್ಞವು ನಷ್ಟವಾಯಿತು. ಇತ್ತಲಾ ಮಂಡೋದರಿಯು ರಾವಣನನ್ನು ಕುರಿತು—'ಎಲೈ ವಲ್ಲಭನೆ, ನಮಗೆ ಮೃತ್ಯು-ಸ್ವರೂಪಿಯಾದ ಸೀತಾದೇವಿಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡು' ಎಂದು ಬಹು ವಿಧವಾಗಿ ಪ್ರಾರ್ಥಿಸಿದಳು. ಆದರೂ ಅದಕ್ಕೆ ಪ್ರಯೋಜನವೇನೂ ದೊರೆಯಲಿಲ್ಲ. ಆಗ ರಾವಣನು ಮಂಡೋದರಿಗೆ—'ಎಲೈ ಪ್ರಿಯಳೇ, ಆ ರಾಮನು ಸಾಕ್ಷಾತ್ ವಿಷ್ಣುವೆಂದು ನಾನು ಬಲ್ಲೆನು. ಸಾಯುಜ್ಯ ಪದವಿಯನ್ನು ಹೊಂದುವದಕ್ಕಾಗಿ ನಾನು ಆತನ ಹಸ್ತದಿಂದಲೇ ಮೃತನಾಗುವೆನು. ಬಳಿಕ ನೀನೂ ನನ್ನೊಡನೆ ಸಹಗಮನ ಮಾಡು' ಎಂದು ಹೇಳಿ, ಕೊನೆಯ ಯತ್ನವನು ಮಾಡುವದಕ್ಕೋಸ್ಕರ ರಣರಂಗಕ್ಕೆ

ತಿಳಿಸಿದನು. ಆ ಕಾಲದಲ್ಲಿ ಅವನಿಗೆ ಅನೇಕ ದುಶ್ಶಕುನಗಳಾದವು. ಬಳಿಕ ರಾಕ್ಷಸೇಶನು ಯುದ್ಧರಂಗಕ್ಕೆ ಹೋಗಿ, ಮಯನಿಂದ ನಿರ್ಮಾಣ ಮಾಡಿಸಿದ ಮಾಯಾ ಸೀತೆಯನ್ನು ವಾನರರ ಸೈನ್ಯದ ಮಧ್ಯದಲ್ಲಿ ಕತ್ತರಿಸಿ ಬಿಸುಟಿದನು. ಇದನ್ನು ನೋಡಿ ಸಮಸ್ತ ವಾನರರೂ ಹಾ ಹಾಕಾರ ಮಾಡಿದರು. ಶ್ರೀರಾಮನಿಗೆ ಈ ವಿಷಯವು ಮೊದಲೇ ಬ್ರಹ್ಮನಿಂದ ತಿಳಿದಿತ್ತಾದ್ದರಿಂದ ಆತನು ಶೋಕಪಡಲಿಲ್ಲ. ಬಳಿಕ ವಾನರರಿಗೂ ಸೀತಾದೇವಿಯು ಕ್ಷೇಮವಾಗಿರುವಳೆಂಬ ವರ್ತಮಾನವು ತಿಳಿಯಿತು. ಆಗ ಅವರು ಪರಮಾನಂದದಿಂದ ರಾವಣನೊಡನೆ ಯುದ್ಧಮಾಡಲು, ಸಿದ್ಧರಾದರು. ಅಷ್ಟರಲ್ಲಿ ಮಾತಲಿಯು ಶಸ್ತ್ರಾಸ್ತ್ರಗಳಿಂದ ತುಂಬಿದ ದೇವೇಂದ್ರನ ರಥವನ್ನು ತೆಗೆದುಕೊಂಡು ಬಂದು, ಶ್ರೀರಾಮನ ಬಳಿಯಲ್ಲಿ ನಿಂತನು. ಶ್ರೀರಾಮನು ಆ ರಥದ ಮೇಲೆ ಕುಳಿತು ರಾವಣನೊಡನೆ ಯುದ್ಧಮಾಡಲು ಆರಂಭಿಸಿದನು. ಆಗ ಆ ಮಹಾವೀರರಿಬ್ಬರೂ ಒಬ್ಬರಮೇಲೊಬ್ಬರು ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸ ತೊಡಗಿದರು. ಈ ರೀತಿಯಾಗಿ ರಾಮರಾವಣರ ಶಸ್ತ್ರಾಸ್ತ್ರಗಳಿಗೇ ಬಹಳ ಹೊತ್ತಿನವರೆಗೆ ಹೊಡದಾಟ ನಡೆಯಿತು. ಅವರು ಸ್ವಲ್ಪವಾದರೂ ಘಾಸಿಯಾಗಲಿಲ್ಲ. ಆಗ ರಾಮನು ತನ್ನ ನಿಜವಾದ ಪರಾಕ್ರಮವನ್ನು ಪ್ರಕಟಮಾಡಿದನು.

ಆ ಕಾಲದಲ್ಲಿ ಶ್ರೀರಾಮನ ಹಸ್ತಚಾತುರ್ಯವನ್ನು ನೋಡಿ, ಲಕ್ಷ್ಮಣ, ಅಂಗದ, ಆಂಜನೇಯನೇ ಮೊದಲಾದ ಸಮಸ್ತ ವೀರರೂ ಬೆರಗಾದರು. ಬಳಿಕ ರಾವಣನ ಸೈನ್ಯದಲ್ಲಿ ಸಾವಿರಾರು ಕಬಂಧಗಳು ಕುಣಿದಾಡಿದವು. ರಾವಣನು ತನ್ನ ಶಸ್ತ್ರದಿಂದ ಶ್ರೀರಾಮನ ರಥದ ಧ್ವಜವನ್ನು ಮುರಿದನು. ಅನಂತರ ಶ್ರೀರಾಮನ ಆಜ್ಞೆಯಂತೆ ಮಾರುತಿಯು ಆ ಧ್ವಜದ ಸ್ಥಾನದಲ್ಲಿ ಕುಳಿತನು. ರಾವಣನು ಬಹಳ ಕೋಪದಿಂದ ಮಾತಲಿ, ಮಾರುತಿಗಳಿಬ್ಬರನ್ನೂ ಮೂರ್ಛೆಗೊಳಿಸಿದನು. ಮಾರುತಿಯು ಜಾಗ್ರತೆ ಎಚ್ಚರ ಹೊಂದಿದನಾದ್ದರಿಂದ ಶ್ರೀರಾಮನು ಆತನ ಹೆಗಲ ಮೇಲೆ ಕುಳಿತು ಮತ್ತೂ ಯುದ್ಧಮಾಡಲಾರಂಭಿಸಿದನು. ಮತ್ತೆ ರಾವಣನು ತನ್ನ ಗದೆಯ ಹೊಡತದಿಂದ ಆಂಜನೇಯನನ್ನು ಮೂರ್ಛೆಗೊಳಿಸಿದನು. ಆಗ ಶ್ರೀರಾಮನು ತನ್ನ ರಥವನ್ನು ಕರೆದನು. ಒಡನೆ ಆ ರಥವು ಶ್ರೀರಾಮನ ಬಳಿಗೆ ಆಕಾಶಮಾರ್ಗದಿಂದ ಬಂದು ನಿಂತಿತು. ಸಮಸ್ತ ಶಸ್ತ್ರಗಳೂ ಅದರಲ್ಲಿ ಸಿದ್ಧವಾಗಿದ್ದವು. ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳೆಂಬ ಕುದುರೆಗಳಿಂದ ಕೂಡಿದ ಆ ರಥವನ್ನು ನಡೆಸಲು ದಾರುಕನು ಸಿದ್ಧನಾಗಿದ್ದನು. ಅಂಥಾ ತನ್ನ ರಥದ ಮೇಲೆ ಕುಳಿತು, ಶ್ರೀರಾಮನು ಶಾರ್ಙ್ಗವೆಂಬ ಧನುಸ್ಸನ್ನು ಕೈ

ಯಲ್ಲಿ ಹಿಡಿದು ರಾವಣನ ಮೇಲೆ ಬಾಣಗಳ ವೃಷ್ಟಿ ಕರೆದನು.

ರಾವಣನ ಶಿರಸ್ಸುಗಳನ್ನು ಶ್ರೀರಾಮನು ಖಂಡಿಸಿದ ಹಾಗೆ ಅವು ಮತ್ತೆ ಚಿಗಿಯು ಹತ್ತಿದವು. ಇದನ್ನು ನೋಡಿ ಶ್ರೀ ರಾಮನಿಗೆ ಆಶ್ಚರ್ಯವಾಯಿತು. ಆತನು ಇದರ ಕಾರಣವೇನೆಂದು ವಿಭೀಷಣನನ್ನು ಕೇಳಿದನು. ರಾವಣನ ಹೃದಯದಲ್ಲಿ ಅಮೃತವಿರುವದೆಂಬ ವರ್ತಮಾನವನ್ನು ವಿಭೀಷಣನಿಂದ ತಿಳಿದು, ದಾಶರಥಿಯು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ, ಆತನ ಹೃದಯದೊಳಗಿರುವ ಅಮೃತವನ್ನೆಲ್ಲ ಹೀರಿಸಿದನು. ಬಳಿಕ ರಾವಣನ ಒಂಬತ್ತು ಶಿರಸ್ಸುಗಳನ್ನೂ ಹದಿನೆಂಟು ಹಸ್ತಗಳನ್ನೂ ಛೇದಿಸಿದನು. ಆದರೂ ರಾವಣನು ಎರಡೇ ಭುಜಗಳಿಂದ ಬಹಳ ಹೊತ್ತಿನ ವರೆಗೂ ಯುದ್ಧ ಮಾಡಿದನು. ಅನಂತರ ಶ್ರೀ ರಾಮನು ದಾರುಕನ ಸೂಚನೆಯಂತೆ ಸಮಯವನ್ನರಿತು, ಬ್ರಹ್ಮಾಸ್ತ್ರದಿಂದ ರಾವಣನ ಶಿರಸ್ಸನ್ನು ಆಕಾಶಕ್ಕೆ ಹಾರಿಸಿದನು. ಆ ಕಾಲದಲ್ಲಿ ರಾವಣನ ಶರೀರದಿಂದ ಒಂದು ದಿವ್ಯವಾದ ತೇಜಸ್ಸು ಹೊರಟು, ಶ್ರೀ ರಾಮನಲ್ಲಿ ಐಕ್ಯಹೊಂದಿತು. ಆಗ ಎಲ್ಲ ಕಡೆಗಳಲ್ಲೂ ಜಯ ಜಯ ಶಬ್ದಗಳು ಕೇಳಿಸಲಾರಂಭವಾದವು. ದೇವತೆಗಳು ಶ್ರೀ ರಾಮನನ್ನು ಸ್ತೋತ್ರಮಾಡಲಾರಂಭಿಸಿದರು. ಮಹರ್ಷಿಗಳು ಆಶೀರ್ವದಿಸಿದರು. ಗಂಧರ್ವಕನ್ಯೆಯರು ಶ್ರೀ ರಾಮನ ಮೇಲೆ ಪುಷ್ಪವರ್ಷಣ ಮಾಡಿದರು. ಬಳಿಕ ಮಂಡೋದರಿಯು ಪತಿಯ ದೇಹದೊಡನೆ ಅಗ್ನಿಪ್ರವೇಶ ಮಾಡಿದಳು. ಆ ದಂಪತಿಗಳಿಬ್ಬರೂ ವಿಮಾನಾರೂಢರಾಗಿ ವೈಕುಂಠಕ್ಕೆ ತೆರಳಿದರು. ಶ್ರೀ ರಾಮನು ವಿಭೀಷಣನಿಂದ ರಾವಣನೇ ಮೊದಲಾದ ಬಂಧುಗಳ ಉತ್ತರ ಕ್ರಿಯೆಗಳನ್ನು ಯಥಾಶಾಸ್ತ್ರವಾಗಿ ನಡೆಸಿದನು. ಇವಾದ ಬಳಿಕ ರಾಮಚಂದ್ರನು ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಾಭಿಷೇಕ ಮಾಡುವಂತೆ ಸೌಮಿತ್ರಿಯನ್ನು ಆಜ್ಞಾಪಿಸಿದನು. ಆಗ ವಿಭೀಷಣನ ಪಟ್ಟಾಭಿಷೇಕ ಮಹೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು. ಅನಂತರ ಶ್ರೀರಾಮನು, ಲಕ್ಷ್ಮಣ, ಲಂಕೇಶನಾದ ವಿಭೀಷಣ, ಸುಗ್ರೀವ, ಆಂಜನೇಯ ಇವರೇ ಮೊದಲಾದ ಪರಿವಾರದೊಡನೆ ಅಶೋಕವನವನ್ನು ಪ್ರವೇಶಿಸಿ, ಸೀತಾದೇವಿಗೆ ಸಮಸ್ತ ವೃತ್ತಾಂತವನ್ನೂ ತಿಳುಹಿದನು.



ತಪ್ತೂ ಸೀತೆಯೆ ಎಡನೆ ಸೇರಿತು. ಆಗ ಸೀತಾದೇವಿಯು ಷೋಡಶಕಳೆಗಳಿಂದ ಕೂಡಿದ ಚಂದ್ರನಂತೆ ಪ್ರಕಾಶಿಸಿದಳು.

ಇಷ್ಟರಲ್ಲಿ ಇಂದ್ರನು ಸಮಸ್ತ ಕಪಿಗಳ ಮೇಲೆ ಅಮೃತವನ್ನು ವರ್ಷಿಸಿದನು. ಮೃತರಾಗಿ ಬಿದ್ದಿದ್ದ ಎಲ್ಲಾ ಕಪಿಗಳೂ ಎದ್ದು, ಸೀತಾ–ರಾಮರನ್ನು ನೋಡಿ ಪರಮಾನಂದಪಟ್ಟರು. ಶ್ರೀರಾಮನು, ಕುಂಭಕರ್ಣನು ಭಕ್ಷಿಸಿದ ಕಪಿಯನ್ನು ಕಾಣದೆ, ಯಮನ ಮುಖವನ್ನು ನೋಡಿದನು. ಅಷ್ಟರಲ್ಲಿ ಯಮನು ಆ ಕಪಿಯನ್ನು ಬದುಕಿಸಿ ಶ್ರೀರಾಮನಿಗೆ ಸಮರ್ಪಿಸಿದನು. ಈ ಅಮೃತವೃಷ್ಟಿಯಾಗುವದಕ್ಕೆ ಮೊದಲೇ ಆಂಜನೇಯಾದಿಗಳು ಸಕಲ ರಾಕ್ಷಸರನ್ನು ಸಮುದ್ರಕ್ಕೆ ತುಂಬಿದ್ದರು. ಅದ್ದರಿಂದ ಒಬ್ಬ ರಾಕ್ಷಸನಿಗಾದರೂ ಅಮೃತವೃಷ್ಟಿಯು ಫಲಿಸಲಿಲ್ಲ. ಬಳಿಕ ವಿಭೀಷಣನು ಶ್ರೀರಾಮನನ್ನು ಅಭ್ಯಂಜನಸ್ನಾನ ಮಾಡಲು ಆಗ್ರಹಮಾಡಿದನು. ಆದರೂ ರಘುನಾಥನು—“ಭರತನನ್ನು ನೋಡುವವರೆಗೂ ನಾನು ಅಭ್ಯಂಜನಸ್ನಾನ ಮಾಡುವದಿಲ್ಲೆಂದು ನಿಶ್ಚಯ ಮಾಡಿರುವೆನು” ಎಂದು ವಿಭೀಷಣನನ್ನು ಸಮಾಧಾನಗೊಳಿಸಿದನು. ಅನಂತರ ಶ್ರೀರಾಮನು ಸೀತಾಸಮೇತನಾಗಿ ಪುಷ್ಪಕವಿಮಾನವನ್ನು ಏರಿದನು. ವಿಭೀಷಣನೂ ಜೊತೆಗೆ ಹೊರಡಲು ನಿಶ್ಚಯಿಸಿದನು. ಬಳಿಕ ಲಕ್ಷ್ಮಣ, ವಿಭೀಷಣ, ಸುಗ್ರೀವ ಇವರೇ ಮೊದಲಾದ ರಾಮಭಕ್ತರೂ ವಿಮಾನದಲ್ಲಿ ಕುಳಿತರು. ಪುಷ್ಪಕವು ಅಯೋಧ್ಯೆಯ ಕಡೆಗೆ ಹೊರಟಿತು. ಆಗ ವಿಭೀಷಣನು ಶ್ರೀರಾಮನನ್ನು ಕುರಿತು—“ಎಲೈ ರಘುನಾಥನೆ, ಮಹಿರಾವಣ–ಮಹಿರಾವಣರನ್ನು ನೀನು ಕೂಡಲೆ ಯಾಕೆ ನಾಶಮಾಡಲಿಲ್ಲ? ಆಂಜನೇಯನ ದಾರಿಯನ್ನು ನೋಡುತ್ತಾ ಪಾತಾಳದಲ್ಲಿಯಾಕೆ ಕುಳಿತಿದ್ದೆ?” ಎಂದು ಪ್ರಶ್ನೆ ಮಾಡಿದನು. ಆಗ ಶ್ರೀರಾಮನು “ಎಲೈ ಭಕ್ತಾಗ್ರೇಸರನೇ, ಕೇಳು; ಆ ರಾಕ್ಷಸರ ನಾಶಕ್ಕೆಂತ ಮೊದಲು, ಮಾರುತಿಯು ಅನೇಕ ಕುಂಡಗಳ ನಾಶಮಾಡಬೇಕೆಂದು ಪ್ರಕೃತಿ ಮಾಡಿತ್ತು. ಈ ನೆವದಿಂದ ನನ್ನ ಭಕ್ತನಾದ ಮಾರುತಿಯ ಕೀರ್ತಿಯು ಲೋಕದಲ್ಲಿ ವಿಸ್ತಾರವಾಗಬೇಕೆಂದ ನನಗೆ ಇಚ್ಛೆಯಾಯಿತು. ಹಾಗಿಲ್ಲದಿದ್ದರೆ ನನಗೆ ಆ ರಾಕ್ಷಸರ ಹನನವು ಅಸಾಧ್ಯವೇ ಆಗ್ಯಾಗಿ?” ಎಂದನು. ಆ ಮಾತುಗಳನ್ನು ಕೇಳಿ ಮಾರುತಿಯು, “ಎಲೈ ವಿಭೀಷಣನೇ, ಸಮುದ್ರವನ್ನು ಹಾರಿದೆನೆಂಬ ಗರ್ವವು ನನಗೆ ಬಹಳವಾಗಿತ್ತು. ಆಗಲೇ ಶ್ರೀರಾಮನು ಸಮುದ್ರತೀರದಲ್ಲಿ ನನ್ನ ಗರ್ವವನ್ನೆಲ್ಲಾ ನಾಶಮಾಡಲು, ಅಸಂಭಾವ್ಯವಾದ ಲೀಲೆಗಳನ್ನು ತೋರಿಸಿದನು. ಈ ವಿಷಯವು ನಿನಗೆ ತಿಳಿಯದೆ ಹ್ಯಾಗೆ? ಇಂಥಾ ಪುರುಷೋತ್ತಮನಾದ ಶ್ರೀರಾಮನಿಗೆ ಅಸಾಧ್ಯ

ವಾದ ಕಾರ್ಯಗಳು ಯಾವಿರುವವು?” ಎಂದು ಹೇಳಿದನು.

ಈ ಮಾತುಗಳನ್ನು ಕೇಳಿ, ವಿಭೀಷಣನು ಶ್ರೀರಾಮನ ಪಾದಕಮಲಗಳನ್ನು ನಮಸ್ಕರಿಸಿ, ಆತನನ್ನು ಪರಮ ಭಕ್ತಿಯಿಂದ ಪೂಜಿಸಿದನು. ಶ್ರೀರಾಮನು ಸೀತಾದೇವಿಯ ಪ್ರಾರ್ಥನೆಯಂತೆ ತ್ರಿಜಟೆಗೆ ಶ್ರೇಷ್ಠವಾದ ವರವನ್ನು ಕೊಟ್ಟನು. ಅಷ್ಟರಲ್ಲಿ ವಿಮಾನವು ನೂರು ಯೋಜನ ಉದ್ದವುಳ್ಳ ಸೇತುವನ್ನು ದಾಟಿ ಸಮುದ್ರದ ಉತ್ತರ ದಿಕ್ಕಿಗೆ ಬಂತು. ಅಲ್ಲಿ ಶ್ರೀರಾಮನು ವಿಮಾನದಿಂದ ಇಳಿದು, ಸೇತುವನ್ನು ತನ್ನ ಬಾಣದಿಂದ ತುಂಡು ತುಂಡು ಮಾಡಿ ಸಮುದ್ರದಲ್ಲಿ ಮುಳುಗಿಸಿದನು. ಇಷ್ಟರಲ್ಲಿ ಸಂಪಾತಿಯು ಶ್ರೀರಾಮನನ್ನು ಕಂಡನು. ಆಗ ರಘುನಾಥನು ಅವನಿಗೆ ಉತ್ತಮ ಗತಿಯನ್ನಿತ್ತು, ಸಮುದ್ರ ತೀರದಲ್ಲಿ ಜಟಾಯುವಿನ ಜ್ಞಾಪಕಾರ್ಥವಾಗಿ ಜುಂದು ಜಟಾಯು ತೀರ್ಥ ರಿಂಬ ಸರೋವರವನ್ನು ನಿರ್ಮಾಣಮಾಡಿದನು. ಬಳಿಕ ಶ್ರೀರಾಮನು ಸೀತಾದೇವಿಗೆ ದಾರಿಯಲ್ಲಿ ಮನೋಹರಗಳಾದ ಸ್ಥಳವಿಶೇಷಗಳನ್ನು ತೋರಿಸುತ್ತಾ, ವಿಮಾನಾರೂಢನಾಗಿ ಪ್ರಯಾಣ ಮಾಡಿದನು. ವಿಮಾನವು ಕಿಷ್ಕಿಂಧಾ ನಗರಿಯ ಹತ್ತರ ಬಂದೊಡನೆ ಶ್ರೀ ರಾಮನು ಅಲ್ಲಿ ವಾಸವಾಗಿದ್ದ ತನ್ನ ಭಕ್ತರನ್ನೆಲ್ಲಾ ಜೊತೆಗೆ ಕರೆದುಕೊಂಡು, ಪ್ರವರ್ಷಣ, ಋಷ್ಯಮೂಕ, ಪಂಪಾ, ಕೃಷ್ಣಾ, ಭೀಮಾ, ಪಂಚವಟೀ, ಗೋದಾವರೀತೀರ, ಅಗಸ್ತ್ಯಾಶ್ರಮ, ಅತ್ರಿಮಹರ್ಷಿಗಳ ಉಪವನ, ಚಿತ್ರಕೂಟ, ಗಂಗಾ, ಭಾರದ್ವಾಜಾಶ್ರಮ ಈ ಪುಣ್ಯಕ್ಷೇತ್ರಗಳನ್ನು ಸೀತಾದೇವಿಗೆ ತೋರಿಸುತ್ತಾ, ಅಲ್ಲಲ್ಲಿ ನಡೆದ ವಿಚಿತ್ರಗಳನ್ನು ನೆನಪುಮಾಡಿಕೊಳ್ಳುತ್ತಾ, ಪ್ರಯಾಣಮಾಡಿದನು. ಹಾದಿಯಲ್ಲಿ ಭರದ್ವಾಜ ಮಹಾಮುನಿಗಳ ಕೋರಿಕೆಯಂತೆ ಆ ದಿವಸ ಶ್ರೀರಾಮನು ಅವರ ಆಶ್ರಮದಲ್ಲಿ ವಾಸಮಾಡಲು ನಿಶ್ಚಯಮಾಡಿದನು. ಶ್ರೀರಾಮನ ಅನುಮತಿಯಂತೆ ವಿಮಾನವು ಭರದ್ವಾಜಾಶ್ರಮದಲ್ಲಿ ನಿಂತಿತು. ಬಳಿಕ ರಘುನಾಥನು—‘ತಾನು ಬಂದಿರುವ ವೃತ್ತಾಂತವನ್ನು ಭರತನಿಗೆ ತಿಳಿಸುವಂತೆ ಆಜ್ಞಾಪಿಸಿ, ಮಾರುತಿಯನ್ನು ಆಗಲೇ ಅಯೋಧ್ಯೆಗೆ ಕಳಿಸಿದನು. ದಾರಿಯಲ್ಲಿ ಶೃಂಗಬೇರಪುರಕ್ಕೆ ರಾಜನಾದ ಗುಹನ ದರ್ಶನ ಮಾಡಿಕೊಂಡು, ಮುಂದೆ ಪ್ರಯಾಣ ಮಾಡುವಂತೆ ಮಾರುತಿಗೆ ಅಪ್ಪಣೆಯಾಗಿತ್ತು.

ಇತ್ತಲಾ ಭರತನು ಆ ದಿವಸ ಮುಹೂರ್ತದವರೆಗೂ ದಾರಿಯು ನೋಡಿದನು. ಆದರೂ ಶ್ರೀರಾಮನ ವರ್ತಮಾನವೇ ಗೊತ್ತಾಗಲಿಲ್ಲ. ಆಗ ಭರತನು ಸಾಯಂಕಾಲಕ್ಕೆ ಅಗ್ನಿಪ್ರವೇಶಮಾಡಲು ಸಿದ್ಧಮಾಡಿದನು. ಆತನು ಶತ್ರುಘ್ನನನ್ನು ಕುರಿತು—“ಎಲೈ ಶತ್ರುಘ್ನನೇ, ರಾಮ-ಲಕ್ಷ್ಮಣರು ಲಂಕೆಯಲ್ಲಿ ಅಪಾಯಕ್ಕೆ ಗುರಿ

ಯಾದರೆಂಬ ವಿಷಯದಲ್ಲಿ ಏನೂ ಸಂಶಯವಿಲ್ಲ. ನೀನು ಸೇನಾಸಮೇತನಾಗಿ ಲಂಕೆಗೆ ಹೋಗಿ, ಸೀತಾದೇವಿಯನ್ನು ಬಂಧನದಿಂದ ಬಿಡಿಸತಕ್ಕದ್ದು. ನಾನು ಮೊದಲು ಮಾಡಿದ ಪ್ರತಿಜ್ಞೆಯಂತೆ ಈ ದಿವಸ ಸಾಯಂಕಾಲಕ್ಕೆ ಅಗ್ನಿಪ್ರವೇಶ ಮಾಡುವೆನು" ಎಂದನು. ಈ ಮಾತುಗಳನ್ನು ಕೇಳಿ, ಕೌಸಲ್ಯೆಯೇ ಮೊದಲಾದ ತಾಯಿಯರು, ಮಂತ್ರಿಗಳು, ಸಮಸ್ತ ಪ್ರಜೆಗಳು ಗಾಬರಿ ಹೊಂದಿದರು. ಭರತನು ಅವರ ಯಾವ ಮಾತುಗಳನ್ನೂ ಲಕ್ಷ್ಯಕ್ಕೆ ತರಲಿಲ್ಲ. ಸಾಯಂಕಾಲದಲ್ಲಿ ಆತನು ಸ್ನಾನಮಾಡಿ, ಶುಭ್ರವಸ್ತ್ರಗಳನ್ನು ಧರಿಸಿ, ಪ್ರದೀಪ್ತವಾದ ಅಗ್ನಿಯ ಬಳಿಗೆ ಬಂದು ನಿಂತನು. ಆ ಕಾಲದಲ್ಲಿ ಪ್ರಜೆಗಳ ಕೋಲಾಹಲವು ಅಸಾಧ್ಯವಾಗಿತ್ತು. ಮಾರುತಿಯು ಆಕಾಶಮಾರ್ಗದಲ್ಲಿರುವಾಗಲೇ ಭರತನ ಅಗ್ನಿಪ್ರವೇಶದ ಸನ್ನಾಹವನ್ನು ನೋಡಿ, ಇನ್ನು ತಡಮಾಡಿದರೆ ಈತನು ಅಗ್ನಿಯಲ್ಲಿ ಹಾರುವನೆಂದು ಯೋಚಿಸಿ—ಎಲೈ ಭರತನೇ, ಅಗ್ನಿಪ್ರವೇಶ ಮಾಡಬೇಡ. ಶ್ರೀರಾಮನು ಕ್ಷೇಮದಿಂದಿರುವನು. ಎಂದು ಗಟ್ಟಿಯಾಗಿ ಕೂಗಿದನು. ಆಕಸ್ಮಿಕವಾದ ಈ ಮಾತುಗಳನ್ನು ಕೇಳಿ, ಸಮಸ್ತರೂ ಮೇಲಕ್ಕೆ ನೋಡಿದರು. ಅಷ್ಟರಲ್ಲಿ ಭರತನ ಬಳಿಗೆ ಆಂಜನೇಯನು ಬಂದು ನಿಂತನು. ಆಗ ಭರತನು ಮಾರುತಿಗೆ ನಮಸ್ಕಾರ ಮಾಡಿದನು; ಮತ್ತು, ನಾಳೆ ಸೂರ್ಯೋದಯಕ್ಕೆ ಶ್ರೀರಾಮನು ಸೀತಾಸಮೇತನಾಗಿ ಬರುವನೆಂಬ ಮಾರುತಿಯ ವಚನವನ್ನು ಕೇಳಿ ಪರಮಾನಂದಭರಿತನಾದನು. ಅನಂತರ ಆಂಜನೇಯನು ಭರತನಿಗೆ ಹಿಂದೆ ನಡೆದ ಸಮಸ್ತ ವೃತ್ತಾಂತಗಳನ್ನೂ ತಿಳಿಸಿದನು. ಭರತನು ಅಷ್ಟರಲ್ಲಿ ಅಯೋಧ್ಯಾನಗರವನ್ನು ಶೃಂಗಾರಮಾಡಿಸುವಂತೆ ಮಂತ್ರಿಗಳಿಗೆ ಆಜ್ಞಾಪಿಸಿದನು. ಈ ರೀತಿಯಲ್ಲಿ ಭರತನು, ಆ ದಿವಸ ರಾತ್ರಿಯನ್ನು ಪರಮಾನಂದದಿಂದ ಕಳೆದು, ಮರುದಿವಸ ಶ್ರೀರಾಮನ ಪಾದುಕೆಗಳನ್ನು ಶಿರಸ್ಸಿನಲ್ಲಿ ಧರಿಸಿ ಚತುರಂಗ ಸೇನೆಯೊಡನೆ ಶ್ರೀರಾಮನ ದರ್ಶನಕ್ಕಾಗಿ ಹೊರಟನು.

ಮಾಘಶುದ್ಧ ಪಂಚಮಿಯ ಪ್ರಾತಃಕಾಲಕ್ಕೆ ಸರಿಯಾಗಿ ಶ್ರೀರಾಮನ ವಿಮಾನವು ದಕ್ಷಿಣದಿಕ್ಕಿನಿಂದ ಅಯೋಧ್ಯೆಯ ಕಡೆಗೆ ಬಂತು. ಭರತನು ಅದನ್ನು ನೋಡಿ, ಆನಂದದಿಂದ ಮುಂದುವರಿದನು. ಆಗ ಶ್ರೀರಾಮನು ವಿಮಾನದಿಂದಿಳಿದು, ಭರತನನ್ನಪ್ಪಿಕೊಂಡು ಶಿರಸ್ಸಿನ ಮೇಲೆ ಹಸ್ತವನ್ನಿಟ್ಟು ಆಶೀರ್ವದಿಸಿದನು. ಮತ್ತು ಕೌಸಲ್ಯೆಯೇ ಮೊದಲಾದ ತಾಯಿಯರಿಗೂ, ಗುರುಗಳಾದ ವಸಿಷ್ಠರಿಗೂ ನಮಸ್ಕಾರ ಮಾಡಿದನು. ಸಮಸ್ತ ಪುರಜನರಿಗೂ ಆ ದಿವಸ ದರ್ಶನಕೊಟ್ಟು ಶ್ರೀರಾಮನು ಪರಮಸಂತೋಷಗೊಳಿಸಿದನು. ಶ್ರೀರಾಮ-ಲಕ್ಷ್ಮಣ-ಭರತ ಇವರೆ

ಲ್ಲರೂ ಗುರುಗಳ ಅಪ್ಪಣೆಯಂತೆ ನಂದಿಗ್ರಾಮದಲ್ಲಿ ತಮ್ಮ ತಾಪಸ ವೇಷಗಳನ್ನು ಬಿಟ್ಟು, ಮಂಗಲಸ್ನಾನವಮಾಡಿ, ದಿವ್ಯ ವಸ್ತ್ರಾಭರಣಗಳಿಂದ ಭೂಷಿತರಾದರು. ಸೀತಾದೇವಿಯು ಕೌಸಲ್ಯೆಯೇ ಮೊದಲಾದ ಹಿರಿಯರಿಗೆ ನಮಸ್ಕರಿಸಿ, ಊರ್ಮಿಳೆಯೇ ಮುಂತಾದ ತಂಗಿಯರನ್ನು ಆಲಿಂಗಿಸಿದಳು. ಬಳಿಕ ಸಮಸ್ತ ರಾಜಕನ್ಯೆಯರೂ ಅಮೌಲ್ಯವಾದ ವಸ್ತ್ರಾಭರಣಗಳಿಂದ ಶೋಭಿಸಿದರು. ಆಗ ಭರತನು ಮುಡುಪಿನಂತೆ ಕಾಪಾಡಿದ್ದ ರಾಜ್ಯವನ್ನು ಶ್ರೀ ರಾಮನಿಗೆ ಸಮರ್ಪಿಸಿದನು ಬಳಿಕ ಶ್ರೀ ರಾಮನು ತಮ್ಮಂದಿರೊಡನೆ ವಸಿಷ್ಠರ ಅಪ್ಪಣೆಯಂತೆ ಸೀತಾಸಮೇತನಾಗಿ ರಥದಲ್ಲಿ ಕುಳಿತು, ಅಯೋಧ್ಯಾನಗರಿಯನ್ನು ಪ್ರವೇಶಿಸಿದನು. ಆ ಕಾಲದಲ್ಲಿ ಮೇಲುಪ್ಪರಿಗೆಗಳಲ್ಲಿ ನಿಂತಿರುವ ಸಮಸ್ತ ಪುರಜನರೂ ಶ್ರೀ ರಾಮನ ಮೇಲೆ ಹೂಮಳೆ ಗರೆದರು. ಅನೇಕ ಪೌರನಾರಿಯರು ಸೀತಾ-ರಾಮರಿಗೆ ಅಲ್ಲಲ್ಲಿ ಆರತಿಗಳನ್ನು ಮಾಡಿದರು. ಶ್ರೀ ರಾಮನು ಅಂತಃಪುರದ ಬಳಿಗೆ ಬಂದೊಡನೆ ರಥದಿಂದ ಕೆಳಗಿಳಿದನು. ಸುಗ್ರೀವನೇ ಮೊದಲಾದ ರಾಮಭಕ್ತರೂ ವಿಮಾನದಿಂದ ಕೆಳಗಿಳಿದ ನಂತರ, ಶ್ರೀ ರಾಮನು ವಿಮಾನಕ್ಕೆ ಕುಬೇರನ ಬಳಿಗೆ ಹೋಗುವಂತೆ ಅಪ್ಪಣೆ ಮಾಡಿದನು. ಬಳಿಕ ದಾಶರಥಿಯು ಸೀತಾಸಮೇತನಾಗಿ ಸಭಾಪ್ರವೇಶಮಾಡಿದನು. ಸುಗ್ರೀವಾದಿಗಳು ವಾಸಮಾಡಲು ಬೇರೆ ಬೇರೆ ಅಂತಃಪುರಗಳನ್ನೇರ್ಪಡಿಸಿದರು. ಸುಮುಹೂರ್ತದಲ್ಲಿ ವಸಿಷ್ಠರು ಶ್ರೀ ರಾಮನಿಗೆ ರಾಜ್ಯಾಭಿಷೇಕಮಾಡಿದರು.

ಆ ಕಾಲದಲ್ಲಿ ಸುಗ್ರೀವನೇ ಮೊದಲಾದ ವಾನರ ಶ್ರೇಷ್ಠರೂ ವಿಭೀಷಣನೇ ಮೊದಲಾದ ರಾಕ್ಷಸಶ್ರೇಷ್ಠರೂ, ಸಾಮಂತರಾಜರೂ ಸಿಂಹಾಸನದ ಉಭಯ ಪಾರ್ಶ್ವಗಳಲ್ಲೂ ನಿಂತಿದ್ದರು. ಶ್ರೀ ರಾಮಚಂದ್ರನು ಸೀತಾಸಮೇತನಾಗಿ ಸುಮುಹೂರ್ತದಲ್ಲಿ ಸಿಂಹಾಸನದಮೇಲೆ ಕುಳಿತನು. ಆಗ ಲಕ್ಷ್ಮಣನು ಸಿಂಹಾಸನದ ಹಿಂಭಾಗದಲ್ಲಿ ನಿಂತು ಸೀತಾ-ರಾಮರಿಗೆ ಶ್ವೇತಚ್ಛತ್ರವನ್ನು ಹಿಡಿದಿದ್ದನು. ಭರತ ಶತ್ರುಘ್ನರು ಸೀತಾ-ರಾಮರ ಉಭಯ ಪಾರ್ಶ್ವಗಳಲ್ಲೂ ನಿಂತು, ಚಾಮರಗಳಿಂದ ಗಾಳಿಹಾಕುತ್ತಿದ್ದರು. ಭಕ್ತಾಗ್ರೇಸರನಾದ ಮಾರುತಿಯು, ಶ್ರೀ ರಾಮನ ಚರಣಕಮಲಗಳಿಗೆ ಪಾದುಕೆಗಳನ್ನು ತೊಡಿಸುತ್ತಾ ಎದುರಾಗಿ ಕುಳಿತಿದ್ದನು. ರಾಜ್ಯಾಭಿಷೇಕ ಕಾಲದಲ್ಲಿ ಸಮಸ್ತರಿಗೂ ಪರಮಾನಂದವಾಯಿತು. ಜಯ ಜಯ ಧ್ವನಿಗಳು ದಿಗಗ್ರಗಳನ್ನು ಹೊಂದಿದವು. ಆ ಕಾಲದಲ್ಲಿ ಶ್ರೀರಾಮನು ಸುಗ್ರೀವನೇ ಮೊದಲಾದ ಭಕ್ತರು ಸಮರ್ಪಿಸಿದ ಕಾಣಿಕೆಗಳನ್ನು ಪರಮ ಹರ್ಷದಿಂದ ಸ್ವೀಕರಿಸಿದನು. ವಾದ್ಯ, ನೃತ್ಯ, ಸ್ತುತಿ, ವೇದಪಾಠ, ಆಶೀರ್ವಾದ ಇವುಗಳ ಧ್ವನಿ

ಯಿಂದ ಅಯೋಧ್ಯಾನಗರಿಯು ಶಬ್ದಾಯಮಾನವಾಗಿತ್ತು. ಈ ಸಂಭ್ರಮವನ್ನು ನೋಡಿ ಭರತನು ಕೃತಕೃತ್ಯತೆಯನ್ನು ಹೊಂದಿದನು. ಆಕಾಶದಲ್ಲಿ ದೇವತೆಗಳೊಡನೆ ದಶರಥಮಹಾರಾಜನು ರಾಜ್ಯಾಭಿಷೇಕ ಮಹೋತ್ಸವವನ್ನು ನೋಡಿ ಪರಮಾನಂದಭರಿತನಾದನು. ದಶರಥನು 'ಎಲೈ ರಾಮನೇ, ಈ ದಿವಸ ನಾನು ಧನ್ಯನಾದೆನು. ನನ್ನ ಪಿತೃಗಳು ಮುಕ್ತರಾದರು. ನನ್ನ ನಗರಿಯು ಪವಿತ್ರವಾಯಿತು. ನಿನ್ನ ತಾಯಿಯಾದ ಕೌಸಲ್ಯೆಯು ಇಂಥ ರಾಜ್ಯಾಭಿಷೇಕ ಮಹೋತ್ಸವವನ್ನು ತನ್ನ ಪೂರ್ಣದೃಷ್ಟಿಯಿಂದ ನೋಡುತ್ತಿರುವಳೆಂದಮೇಲೆ, ಇದಕ್ಕಿಂತಲೂ ಐಹಿಕ ಸುಖವಾವುದು' ಎಂದು ನುಡಿದನು. ತಂದೆಯು ಈ ಮಾತುಗಳನ್ನು ಕೇಳಿದೊಡನೆ, ಶ್ರೀರಾಮನೇ ಮೊದಲಾದ ಪುತ್ರರೂ, ಸೀತೆಯೇ ಮೊದಲಾದ ಸೊಸೆಂದಿರೂ, ಕೌಸಲ್ಯೆಯೇ ಮೊದಲಾದ ಪತ್ನಿಯರೂ ದಶರಥನ ಚರಣಗಳಿಗೆರಗಿದರು. ಸಮಸ್ತ ಲೋಕಗಳಿಗೂ ಸುಖದಾಯಕನಾದ ಶ್ರೀರಾಮನು ರಾಜನಾಗಲು, ಭೂಮಿಯು ಸಸ್ಯಗಳಿಂದ ಪೂರ್ಣವಾಯಿತು. ವೃಕ್ಷಗಳು ಮಿತಿಮೀರಿ ಫಲಗಳನ್ನು ಧರಿಸಿದವು. ಶ್ರೀರಾಮನ ರಾಜ್ಯಾಭಿಷೇಕವಾದನಂತರ ಭರತನು ಬ್ರಾಹ್ಮಣರನ್ನು ಗೋದಾನ, ಭೂದಾನ, ಸುವರ್ಣದಾನ, ಅನ್ನದಾನ, ಇವುಗಳಿಂದ ತೃಪ್ತಿಗೊಳಿಸಿದನು. ಸೀತಾದೇವಿಯು ಶ್ರೀರಾಮನ ಅಪ್ಪಣೆಯಂತೆ ಮಾರುತಿಗೆ ತನ್ನ ಕೊರಳಲ್ಲಿದ್ದ ಅಮೌಲ್ಯವಾದ ವಜ್ರದ ಸರವನ್ನು ಕೊಟ್ಟಳು.

ಇಷ್ಟಾದಬಳಿಕ ಶ್ರೀರಾಮನು 'ಎಲೈ ಮಾರುತಿಯೇ, ನಿನಗೆ ನಾನು ಪ್ರಸನ್ನನಾಗಿರುವೆನು. ಏನಾದರೂ ಬೇಡುವದಿದ್ದರೆ ಬೇಡಿಕೋ' ಎಂದನು. ಆಗ ಆಂಜನೇಯನು ಕೈ ಜೋಡಿಸಿಕೊಂಡು ಎಲೈ ಮಹಾನುಭಾವನೇ, ನನಗೆ ಯಾವಾಗಲೂ ನಿಮ್ಮ ನಾಮಸ್ಮರಣೆಮಾಡಬೇಕೆಂಬ ಇಚ್ಛೆಯು ಬಹಳವಾಗಿರುವದು. ಅದು ಸಿದ್ಧಿಸಲಿ, ನಿನ್ನ ನಾಮವು ಭೂಮಿಯ ಮೇಲೆ ಇರುವವರೆಗೂ ನನ್ನ ದೇಹವು ನಿನ್ನ ಸೇವೆಯಲ್ಲಿ ಆಸಕ್ತವಾಗಿರಲಿ, ನಿನ್ನ ಕಥಾಶ್ರವಣವು ಎಲ್ಲಿ ನಡೆಯುವದೋ, ಅಲ್ಲಿ ಯಾವಾಗಲೂ ನನ್ನ ಭಾಸವಿರಲಿ, ಎಂದು ಪ್ರಾರ್ಥಿಸಿದನು. ಭಕ್ತಶ್ರೇಷ್ಠನಾದ ಮಾರುತಿಯ ಈ ಮಾತುಗಳನ್ನು ಕೇಳಿ ಶ್ರೀರಾಮನು 'ಹಾಗೇಯೇ ಆಗಲಿ' ಎಂದು ಸಮ್ಮತಿಸಿದನು. ಮಿಕ್ಕ ಎಲ್ಲ ವಾನರರಿಗೂ ಯೋಗ್ಯತಾನುಸಾರ ಮರ್ಯಾದೆ ಮಾಡಿ ಸಂತೋಷಗೊಳಿಸಿದನು. ಹೀಗೆ ಶ್ರೀರಾಮನು ಸುಗ್ರೀವಾದಿಗಳಿಂದ ಸಹಿತನಾಗಿ ಬಹಳ ದಿವಸಗಳ ವರೆಗೂ ಅಯೋಧ್ಯೆಯಲ್ಲಿ ಪರಮಾನಂದದಿಂದ ವಾಸಮಾಡಿದನು.

ಒಂದಾನೊಂದು ದಿವಸ ಕಬೋರನ ಕಡೆಯಿಂದ ವಿವಾನವು ಶ್ರೀರಾಮನ ಬಳಿಗೆ ಬಂತು. ಆ ಪುಷ್ಪಕವು ಎಲೈ ರಾಮಚಂದ್ರನೆ, ನೀನು ಭೂಮಿಯು ಮೇಲೆ ಇರುವ ವರೆಗೂ ನಿನ್ನಲ್ಲೇ ಇರುವಂತೆ ಕಬೇರನು ನನಗೆ ಅಪ್ಪಣೆ ಮಾಡಿ ರುವನು ಎಂದು ವಿಜ್ಞಾಪಿಸಿತು. ಶ್ರೀರಾಮನು ಆ ಮಾತುಗಳನ್ನು ಕೇಳಿ ಪರಮ ಸಂತೋಷಪಟ್ಟು, ಎಲೈ ವಿಮಾನವೇ, ಹಾಗಾದರೆ ಈ ವಿಭೀಷಣಾದಿಗಳನ್ನು ಅವ ರವರ ರಾಜಧಾನಿಗೆ ತಲ್ಪಿಸಿ ಶೀಘ್ರವಾಗಿ ಒರಬೇಕು ಎಂದು ಆಜ್ಞಾಪಿಸಿದನು. ಅನಂತರ ವಿಭೀಷಣಾದಿಗಳು ತಮ್ಮ ತಮ್ಮ ನಗರಿಗಳಿಗೆ ಶ್ರೀರಾಮನ ಅಪ್ಪಣೆಯ ನ್ನು ಪಡೆದು ಪ್ರಯಾಣ ಮಾಡಿದರು. ಆಗ ಅಯೋಧ್ಯೆಯಲ್ಲಿ ಶ್ರೀರಾಮನೂ, ಶೃಂಗಬೇರಪುರದಲ್ಲಿ ಗುಹನೂ, ಕಿಷ್ಕಿಂಧೆಯಲ್ಲಿ ಸುಗ್ರೀವನೂ, ಲಂಕೆಯಲ್ಲಿ ವಿ ಭೀಷಣನೂ, ಪಾತಾಳಲೋಕದಲ್ಲಿ ಮಯರುಕಯ ಮಗನಾದ ಮಕರನೂ, ಆಕಾ ಶದಲ್ಲಿ ಗರುಡನೂ ರಾಜ್ಯಪಾಲನೆ ಮಾಡುತ್ತ ವಾಸವಾಗಿದ್ದರು. ಮಾರುತಿಯು ಹಿಮಾಲಯಕ್ಕೆ ಹೋಗಿ ಅಲ್ಲಿ ಶ್ರೀರಾಮಧ್ಯಾನ ಮಾಡುತ್ತ ಕುಳಿತನು. ಆ ರಾಮಭಕ್ತರು ಆಗಾಗ್ಗೆ ರಾಮನ ದರ್ಶನಕ್ಕಾಗಿ ಅಯೋಧ್ಯೆಗೆ ಬರುತ್ತಿದ್ದರು. ಶ್ರೀರಾಮನು ಬಹಳ ಔದಾರ್ಯದಿಂದ ರಾಜ್ಯಭಾರ ಮಾಡುತ್ತಿದ್ದನು. ಲಕ್ಷ್ಮಣ ಮೊದಲಾದ ಮೂವರು ತಮ್ಮಂದಿರೂ ಶ್ರೀರಾಮನ ಸೇವೆಯನ್ನು ಬಹು ಭಕ್ತಿ ಯಿಂದ ಮಾಡುತ್ತಿದ್ದರು. ಶ್ರೀರಾಮನು ಲಕ್ಷ್ಮಣನಿಗೆ ಬಹಳ ತಾತ್ಪರ್ಯದಿಂದ ಯುವ ರಾಜ ಪದವಿಯನ್ನಿತ್ತನು. ಪಾರ್ವತಿಯೇ ಕೇಳು ಶ್ರೀರಾಮನ ರಾಜ್ಯದಲ್ಲಿ ಪ್ರಜೆಗಳಿಗೆ ಯಾವ ಭಯವೂ ಇರಲಿಲ್ಲ. ಪ್ರಜೆಗಳನ್ನು ಶ್ರೀರಾಮನು ಮಕ್ಕಳಂತೆ ಕಾಣುತ್ತಿದ್ದನು. ಈ ಪ್ರಕಾರವಾಗಿ ರಾಮರಾಜ್ಯವು ಸಮಸ್ತ ಲೋಕಗಳಿಗೂ ಸುಖದಾಯಕವಾಗಿ ಅನೇಕಸಾವಿರ ವರ್ಷಗಳ ವರೆಗೂ ನಡೆಯಿತು.

## ೧೧ನೆಯ ಪ್ರಕರಣ.

### ರಾವಣಾದಿಗಳ ಪೂರ್ವವೃತ್ತಾಂತ.

ಶ್ರೀರಾಮನು ರಾಜ್ಯಸಂರಕ್ಷಣೆಮಾಡುತ್ತಿರುವಾಗ ಒಂದಾನೊಂದು ಕಾಲದಲ್ಲಿ ಅಗಸ್ತ್ಯಮುನಿಗಳು ಅತನ ಬಳಿಗೆ ಬಂದರು. ಶ್ರೀರಾಮನು ಮಹರ್ಷಿಗಳನ್ನು

ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಉಚಿತವಾದ ಆಸನದಲ್ಲಿ ಕುಳ್ಳಿರಿಸಿದನು. ಬಳಿಕ ಅಗಸ್ತ್ಯರು "ಎಲೈ ರಾಮನೇ, ನೀನು ಬಹಳ ಭಾಗ್ಯಶಾಲಿಯು, ಮಹಾತ್ಮನು, ಮೇಘನಾದನೆಂಬ ರಾಕ್ಷಸನನ್ನು ಸಂಹರಿಸಿದ ನಿನ್ನ ಮಹಿಮೆಯನ್ನು ಯಾರು ವರ್ಣನೆ ಮಾಡಬಲ್ಲರು!" ಎಂದನು. ಈ ವಚನಗಳನ್ನು ಕೇಳಿ ಶ್ರೀರಾಮನು "ಸ್ವಾಮಿಯಾದ ಮುನೀಶ್ವರರೇ, ನಾನು ರಾವಣ-ಕುಂಭಕರ್ಣರೇ ಮೊದಲಾದ ಅನೇಕ ರಾಕ್ಷಸರನ್ನು ಕೊಂದಿರುವೆನು ಅವರಲ್ಲಿ ಯಾರ ಹೆಸರನ್ನೂ ಹೇಳದೆ, ಇಂದ್ರಜಿತುವಿನ ವಧೆಯಿಂದಲೇ ನಾವು ಪರಮೈಶ್ವರ್ಯವನ್ನು ಹೊಂದಿದಂತೆ ತೋರುತ್ತಿರುವದು. ಎಲ್ಲರಿಗಿಂತಲೂ ಅವನಲ್ಲಿ ಅಂಥಾ ಬಲವೇನಿತ್ತು? ಇದನ್ನು ನನಗೆ ತಿಳಿಸಬೇಕು" ಎಂದು ಪ್ರಾರ್ಥಿಸಿದನು. ಆಗ ಅಗಸ್ತ್ಯರು "ಎಲೈರಾಮನೇ, ಇಂದ್ರಜಿತುವಿನ ಚರಿತ್ರವನ್ನು ನಿನಗಾಗಿ ಹೇಳುವೆನು, ಸಾವಧಾನದಿಂದ ಕೇಳು. ಕೃತಯುಗದಲ್ಲಿ ಬ್ರಹ್ಮನಿಗೆ ಪುಲಸ್ತ್ಯನೆಂಬ ಒಬ್ಬ ಮಗನಿದ್ದನು. ಆತನು ತೃಣಬಿಂದು ಮಹರ್ಷಿಗಳ ಪುತ್ರಿಯನ್ನು ವಿವಾಹಮಾಡಿಕೊಂಡನು. ಆ ಪುಲಸ್ತ್ಯನಿಗೆ ತೃಣಬಿಂದು ಕನ್ಯೆಯಲ್ಲಿ ವಿಶ್ರವಸ್ಸು ಎಂಬ ಮಗನು ಜನಿಸಿದನು. ಆತನು ವೇದವೇದಾಂಗಗಳಲ್ಲಿ ನಿಪುಣನಾಗಿದ್ದನು. ಆ ಪುಲಸ್ತ್ಯಪುತ್ರನಿಗೆ ಭರದ್ವಾಜ ಋಷಿಗಳ ಪುತ್ರಿಯನ್ನು ಕೊಟ್ಟು ವಿವಾಹವಾಯಿತು. ಬಳಿಕ ಅತನಿಗೆ ವೈಶ್ರವಣ ಅಥವಾ ಕುಬೇರನೆಂಬ ಕೀರ್ತಿವಂತನಾದ ಮಗನು ಜನಿಸಿದನು ಕುಬೇರನಿಗೆ ಬ್ರಹ್ಮನು ಪ್ರಸನ್ನನಾಗಿ ಬೇಕಾದ ಕಡೆಗೆ ಸಂಚರಿಸಲು ಯೋಗ್ಯವಾದ ಒಂದು ವಿಮಾನವನ್ನು ಕೊಟ್ಟು, ನಿಧಿಗಳಿಗೆ ರಾಜನಾಗುವಂತೆ ಆಶೀರ್ವದಿಸಿದನು.

ಒಂದಾನೊಂದು ದಿವಸ ವೈಶ್ರವಣನು ಆ ಪುಷ್ಪಕವಿಮಾನದಲ್ಲಿ ಕುಳಿತು, ತಂದೆಯ ದರ್ಶನಕ್ಕಾಗಿ ಬಂದನು. ಆತನು ತಂದೆಗೆ ನಮಸ್ಕರಿಸಿ ತಾತಪಾದರೇ, ನನಗೆ ಬ್ರಹ್ಮನು ವಾಸಮಾಡಲು ಅನುಕೂಲವಾದ ಸ್ಥಳವನ್ನು ಕೊಡಲಿಲ್ಲ. ಈಗ ನಾನು ಎಲ್ಲಿ ವಾಸಮಾಡಲಿ? ಎಂದು ಪ್ರಶ್ನೆಮಾಡಿದನು. ಆಗ ಪೌಲಸ್ತ್ಯನು "ಎಲೈ ಮಗನೇ, ಸಮುದ್ರದ ಮಧ್ಯದಲ್ಲಿ ಲಂಕಾ ಎಂಬ ಒಂದು ನಗರಿ ಇರುವದು. ಅದು ವಿಶ್ವಕರ್ಮ ನಿರ್ಮಿತವಾಗಿದ್ದು. ವಿಷ್ಣುವಿನ ಭಯದಿಂದ ಅಲ್ಲಿ ಯಾವ ರಾಕ್ಷಸರೂ ಇದುವರೆಗೂ ವಾಸವಾಗಿಲ್ಲ. ಅಲ್ಲಿ ನೀನು ವಾಸಮಾಡು. ಅದು ಅನುಕೂಲವಾಗಿದೆ" ಎಂದನು. ಬಳಿಕ ವೈಶ್ರವಣನು ತಂದೆಯ ಅಪ್ಪಣೆಯನ್ನು ಪಡೆದು, ಲಂಕಾನಗರಕ್ಕೆ ಪ್ರಯಾಣಮಾಡಿದನು. ಮತ್ತು ಬಹುಕಾಲದವರೆಗೆ ಯಾವ ಬಾಧೆಯೂ ಇಲ್ಲದೆ ಸುಖವಾಗಿ ಆ ನಗರದಲ್ಲಿ ವಾಸವಾಗಿದ್ದನು. ಒಂದಾ

ನೊಂದು ಕಾಲದಲ್ಲಿ ಸುಮಾಲಿ ಎಂಬ ರಾಕ್ಷಸನು ತನ್ನ ಪುತ್ರಿಯೊಡನೆ ಲೋಕ ಸಂಚಾರವಮಾಡುತ್ತ, ವಿಮಾನಾರೂಢನಾಗಿ ಆಕಾಶದಲ್ಲಿ ಪ್ರಯಾಣಮಾಡುತ್ತಿರುವ ಕುಬೇರನನ್ನು ನೋಡಿದನು. ಆಗಲಾ ರಾಕ್ಷಸನಿಗೆ, ನಾನು ಏನಾದರೂ ನಮ್ಮ ವಂಶದವರಿಗೆ ಉಪಕಾರ ಮಾಡಬೇಕೆಂಬ ಇಚ್ಛೆಯು ಉತ್ಪನ್ನವಾಯಿತು. ಬಳಿಕ ಸುಮಾಲಿಯು ತನ್ನ ಮಗಳಾದ ಕೈಕಸಿಗೆ 'ಎಲೈ ಪುತ್ರಿಯೇ, ನೀನು ವಿಶ್ರವಸನನ್ನು ಪಾಣಿಗ್ರಹಣ ಮಾಡಿದರೆ, ಅವನ ತೇಜಸ್ಸಿನಿಂದ ನಿನಗೆ ಈ ಕುಬೇರನಂತೆ ಪರಾಕ್ರಮಿಯಾದ ಮಗನು ಹುಟ್ಟುವನು' ಎಂದು ಬೋಧಿಸಿದನು.

ಆ ಮಾತುಗಳನ್ನು ಕೇಳಿ ಕೈಕಸಿಯು ಆದಿವಸ ಸಾಯಂಕಾಲದಲ್ಲಿ ಮುನಿಯ ಎದುರಿಗೆ ಬಂದು ಭೂಮಿಯನ್ನು ತನ್ನ ಪಾದಗಳಿಂದ ಕೆರೆಯುತ್ತಾ ನಿಂತಳು. ಈ ಸುಂದರಿಯಾದ ತರುಣಿಯನ್ನು ನೋಡಿ, ಆ ವಿಶ್ರವಸ್ಸು 'ಎಲೈ ತರುಣಿಯೇ, ನೀನು ಇಲ್ಲಿಗೆ ಯಾಕೆಬಂದೆ?'ಎಂದು ಪ್ರಶ್ನೆಮಾಡಿದನು ಆಗ ಕೈಕಸಿಯು ಮಹಾಸ್ವಾಮಿಾ ಸರ್ವಜ್ಞರಾದ ತಮಗೆ ನನ್ನ ಮನೋಗತವು ತಿಳಿದೇ ಇರಬಹುದು ಎಂದಳು. ಆಗ ಮಹರ್ಷಿಯು ಎಲೈ ತರುಣಿಯೇ, ನಿನ್ನ ಮನೋಭಿಪ್ರಾಯವು ನನಗೆ ತಿಳಿಯಿತು. ಆದರೆ ಈಗ ದುರ್ಮುಹೂರ್ತವಾದದ್ದರಿಂದ ನಿನಗೆ ದುಷ್ಟರಾದಮಕ್ಕಳು ಹುಟ್ಟುವರು. ಅವರಲ್ಲಿ ಕೊನೆಯವನು ಮಾತ್ರ ಭಗವದ್ಭಕ್ತನಾಗುವನು. ಅವನಿಂದಲೇ ನಿನ್ನ ವಂಶಗಳು ಉದ್ಧಾರವಾಗುವವು ಎಂದನು. ಅನಂತರ ಕೈಕಸಿಯು ರಾವಣ, ಕುಂಭಕರ್ಣ, ಕ್ರೌಂಚೀ, ಶೂರ್ಪನಖಾ,ಕುಂಭೀನಸಾ, ವಿಭೀಷಣರೆಂಬ ಮಕ್ಕಳನ್ನು ಪಡೆದಳು. ಅವರಲ್ಲಿ ವಿಭೀಷಣನ ಹೊರತಾಗಿ ಮಿಕ್ಕ ಮಕ್ಕಳೆಲ್ಲ ದುಷ್ಟರಾದರು. ಆವರು ಅನೇಕ ಮಹರ್ಷಿಗಳನ್ನು ಹಿಂಸೆ ಮಾಡಲಾರಂಭಿಸಿದರು. ಒಂದಾನೊಂದು ಕಾಲದಲ್ಲಿ ರಾವಣನು ತಾಯಿಗೋಸ್ಕರ ಪರಮೇಶ್ವರನ ಆತ್ಮಲಿಂಗವನ್ನು ತರಲು ಪಾತಾಳಕ್ಕೆ ಹೋಗಿದ್ದನು. ಅಲ್ಲಿ ಆತನು ತನ್ನ ಮಸ್ತಕವನ್ನು ಒಡೆದು, ತನ್ನ ದೇಹವನ್ನು ವೀಣೆಮಾಡಿ, ಶರೀರದಲ್ಲಿರುವ ನರಗಳನ್ನೆಲ್ಲ ತಂತ್ರಿಯ ತಂತುಗಳನ್ನಾಗಿ ಮಾಡಿಕೊಂಡು ಷಡ್ಜಸ್ವರದಿಂದ ಪರಮೇಶ್ವರನ ಮಹಿಮೆಯನ್ನು ಗಾಯನಮಾಡಲಾರಂಭಿಸಿದನು. ಆಗ ಶಂಕರನು ಎಲೈ ನಂದಿಯೇ, ಆ ರಾಕ್ಷಸನ ಬಳಿಗೆ ಹೋಗಿ, ಅವನು ಒಡೆದಿದ್ದ ಶಿರಸ್ಸನ್ನು ಜೋಡಿಸಿ, ನೀನು ವೃಥಾ ಶ್ರಮಪಡಬೇಡವೆಂದು ಆತನಿಗೆಹೇಳು"ಎಂದು ಅಜ್ಞಾಪಿಸಿದನು. ನಂದಿಯೂ ಪರಮೇಶ್ವರನ ಅಪ್ಪಣೆಯಂತೆ ರಾವಣನಿಗೆ ತಿಳುಹಿದನು. ಆದರೂ ಆ ಕ್ರೂರನಾದ ರಾಕ್ಷಸನು ಮರುದಿವಸ ಮೊದಲಿನಂತೆ ಗಾಯನ ಮಾಡಲಾರಂಭಿಸಿದನು.

ಹೀಗೆ ಹತ್ತು ದಿವಸಗಳ ವರೆಗೂ ರಾವಣನಿಗೂ ನಂದಿಗೂ ಸಂವಾದವಾಯಿತು. ಬಳಿಕ ಆ ರಾಕ್ಷಸನ ನಿಶ್ಚಯಕ್ಕೆ ಮೆಚ್ಚಿ, ಸಾಂಬಶಿವನು ಪ್ರಸನ್ನನಾಗಿ ಆತನಿಗೆ ಹತ್ತು ಶಿರಸ್ಸುಗಳನ್ನೂ ಇಪ್ಪತ್ತು ಭುಜಗಳನ್ನೂ ತನ್ನ ಸಂತೋಷದಿಂದ ಕೊಟ್ಟನು. ಮತ್ತು ರಾವಣನ ಪ್ರಾರ್ಥನೆಯಂತೆ ಪಾರ್ವತಿಯನ್ನೂ ಆತ್ಮಲಿಂಗವನ್ನೂ ಕೊಟ್ಟು ಸಂತೋಷಗೊಳಿಸಿದನು. ಬಳಿಕ ದಾರಿಯಲ್ಲಿ ಅವೆರಡೂ ಕಾರಣಾಂತರಗಳಿಂದ ನಷ್ಟವಾದವು. ಆ ಆತ್ಮಲಿಂಗವೇ ಗೋಕರ್ಣದಲ್ಲಿ ಈಗ ಪ್ರಸಿದ್ಧವಾಗಿರುವದು.

ಒಂದಾನೊಂದು ದಿವಸ ಕೈಕಸಿಯು ವಿಮಾನಾರೂಢನಾದ ಕುಬೇರನನ್ನು ನೋಡಿ ತನ್ನ ಪುತ್ರರಾದ ರಾವಣಾದಿಗಳನ್ನು ಕುರಿತು, ನೋಡಿದಿರಾ, ಕುಬೇರನನ್ನು!! ನಿಮಗೆ ಅಂಥ ಯೋಗ್ಯತೆಯು ಎಲ್ಲಿಯದು? ಎಂದು ಹೀಯಾಳಿಸಿದಳು. ಆಗ ರೋಷದಿಂದ ರಾವಣ, ಕುಂಭಕರ್ಣ, ವಿಭೀಷಣ ಈ ಮೂವರೂ ಗೋಕರ್ಣದಲ್ಲಿ ಸಾವಿರಾರು ವರ್ಷಗಳ ವರೆಗೆ ಬ್ರಹ್ಮನನ್ನು ಕುರಿತು ಉಗ್ರವಾದ ತಪಸ್ಸುಗಳನ್ನು ಮಾಡಿದರು. ಬಳಿಕ ಬ್ರಹ್ಮನು ಅವರಿಗೆ ಪ್ರಸನ್ನನಾಗಿ, ಎಲೈ ಭಕ್ತಶಿರೋಮಣಿಗಳಿರಾ, ನಾನು ಪ್ರಸನ್ನನಾಗಿರುವೆನು. ನಿಮ್ಮ ಇಷ್ಟಾರ್ಥಗಳನ್ನು ಕೇಳಿಕೊಳ್ಳಿರಿ ಎಂದನು. ಆಗ ರಾವಣನು ಮನುಷ್ಯೇತರರಿಂದ ನನಗೆ ಮರಣವಾಗಬಾರದೆಂತಲೂ, ಕುಂಭಕರ್ಣನು—ನಿದ್ರೆ ಹತ್ತಿದ ನನಗೆ ಆರು ತಿಂಗಳ ವರೆಗೂ ಎಚ್ಚರವಾಗಬಾರದೆಂತಲೂ, ವಿಭೀಷಣನು—ನಾನು ಯಾವಾಗಲೂ ಈಶ್ವರಭಕ್ತನಾಗಿಯೂ, ಅಮರನಾಗಿಯೂ ಇರಬೇಕೆಂತಲೂ ಪ್ರಾರ್ಥಿಸಿದರು. ಬ್ರಹ್ಮನು ಆ ವರಗಳನ್ನು ಕೊಟ್ಟು ತಾನು ಸತ್ಯಲೋಕಕ್ಕೆ ಪ್ರಯಾಣ ಮಾಡಿದನು. ಬಳಿಕ ರಾವಣಾದಿಗಳು ತಮ್ಮ ತಾಯಿಯ ಬಳಿಗೆ ಬಂದರು. ಸುಮಾಲಿಯ ಆಜ್ಞೆಯಂತೆ ರಾವಣನು ಕುಬೇರನನ್ನು ಲಂಕಾನಗರದಿಂದ ಓಡಿಸಿ, ಅಲ್ಲಿ ರಾಕ್ಷಸರ ರಾಜ್ಯವನ್ನು ಸ್ಥಾಪಿಸಿದರು. ಕುಬೇರನು ತಂದೆಯ ಅಪ್ಪಣೆಯಂತೆ ಕೈಲಾಸಕ್ಕೆ ಹೋಗಿ ಶಂಕರನನ್ನು ತಪಸ್ಸಿನಿಂದ ಸಂತೋಷಗೊಳಿಸಿದನು. ಮತ್ತು ಶಂಕರನ ಅಪ್ಪಣೆಯಂತೆ ವಿಶ್ವಕರ್ಮನು ಅಲಕಾ ಎಂಬ ನಗರಿಯನ್ನು ಕುಬೇರನಿಗೆ ನಿರ್ಮಾಣ ಮಾಡಿಕೊಟ್ಟನು. ಕುಬೇರನು ಆ ನಗರದಲ್ಲಿ ಯಾವ ಬಾಧೆಯೂ ಇಲ್ಲದೆ ಸುಖವಾಗಿ ವಾಸವಾಡಿದನು.

ರಾವಣನು ತನ್ನ ತಂಗಿಯಾದ ಶೂರ್ಪನಖಿಯನ್ನು ವಿದ್ಯುಜ್ಜಿಹ್ವನೆಂಬ ರಾಕ್ಷಸನಿಗೆ ಕೊಟ್ಟು ವಿವಾಹ ಮಾಡಿ, ಆತನಿಗೆ ದಂಡಕಾರಣ್ಯದಲ್ಲಿ ವಾಸ

ಕೆ ಪಿಡಿಯುವನು? ಅವನು ಇಂದ್ರನ ಬಳಿಗೆ ದೂರು ಹೇಳಲು, ಹೋದದ್ದರ ಕಾರಣವೇನು? ಎಂದನು. ಆಗ ಅಗಸ್ತ್ಯರು, ಎಲೈ ರಾಮನೇ ಕೇಳು. ದೇವಾಸುರರು ಕ್ಷೀರಸಮುದ್ರವನ್ನು ಮಥನಮಾಡಿ ಅಮೃತವನ್ನು ತೆಗೆದರಷ್ಟೆ. ಆ ಅಮೃತಭಕ್ಷಣಕಾಲದಲ್ಲಿ ರಾಹುವೂ ಕೂಡ ಅಮೃತಭಕ್ಷಣಮಾಡಿ, ಸಮಸ್ತ ದೇವತೆಗಳನ್ನೂ ಬಾಧಿಸಲಾರಂಭಿಸಿದನು. ಆಗ ದೇವೇಂದ್ರನು—ಎಲೋ ರಾಹುವೇ, ನೀನು ಸಮಸ್ತರನ್ನೂ ಬಾಧಿಸಬೇಡ. ಸೂರ್ಯಚಂದ್ರರಿಬ್ಬರನ್ನು ಬಾಧಿಸೆಂದು ಆಜ್ಞೆಮಾಡಿದನು. ಎಂದು ಹೇಳಿ ಶ್ರೀ ರಾಮನನ್ನು ಕುರಿತು—ಎಲೋ ಶ್ರೀ ರಾಮನೇ, ನಿನಗೆ ತಿಳಿಯದ ವಿಷಯಗಳು ಯಾವಿರುವವು? ನೀನು ಸಾಕ್ಷಾತ್ ಪರಬ್ರಹ್ಮನಾಗಿಯೇ ಇರುವೆ. ನಿನ್ನ ಇಚ್ಛೆಯಂತೆ ಈ ಯಲ್ಲ ಸಮಾಚಾರಗಳನ್ನೂ ನಿನಗೆ ತಿಳಿಸಬೇಕಾಯಿತು. ಎಂದು ಹೇಳಿ ತಮ್ಮ ಆಶ್ರಮಕ್ಕೆ ಪ್ರಯಾಣ ಮಾಡಿದರು. ಅವರು ಬರುವಾಗಲಾಗಲಿ ಹೋಗುವಾಗಲಾಗಲಿ ವಿಂಧ್ಯಾದ್ರಿಗೆ ದರ್ಶನವನ್ನೇ ಕೊಡಲಿಲ್ಲ. ದರ್ಶನವಾದಕೂಡಲೆ ಅದು ಮೊದಲಿನಂತೆ ಎಲ್ಲಿ ಬೆಳೆಯುವದೋ? ಎಂಬ ಸಂದೇಹವು ಅವರಿಗೆ ಪೂರ್ಣವಾಗಿತ್ತು. ಬಳಿಕ ಶ್ರೀರಾಮನು ಸಾವಿರಾರು ವರ್ಷಗಳ ವರೆಗೆ ರಾಜ್ಯಸಂರಕ್ಷಣೆ ಮಾಡುತ್ತಿದ್ದನು. ಆ ಕಾಲದಲ್ಲಿ ಅತಿವೃಷ್ಟಿ—ಅನಾವೃಷ್ಟಿಗಳೇ ಮೊದಲಾದ ಉತ್ಪಾತಗಳು ಯಾವವೂ ಇರಲಿಲ್ಲ. ಅಕಾಲ ಮರಣದ ಸುದ್ದಿಯೇ ಇರಲಿಲ್ಲ. ಶ್ರೀ ರಾಮನು ಆಗ ಅನೇಕ ಮಹತ್ಕೃತ್ಯಗಳನ್ನು ನೆರವೇರಿಸಿದನು. ಶ್ರೀ ರಾಮನು ಏಕಪತ್ನೀ ವ್ರತದಲ್ಲೂ, ಏಕವಾಣಿಯಲ್ಲೂ ನಿಯಮವುಳ್ಳವನಾಗಿದ್ದನು. ರಾಮರಾಜ್ಯದಲ್ಲಿ ಪರಸ್ಪರ ವೈರವೆಂಬ ಮಾತಿನ ಸುದ್ದಿಯೇ ಇಲ್ಲದಿತ್ತು. ಶ್ರೀ ರಾಮನ ರಾಜ್ಯದಲ್ಲಿ ನಾಸ್ತಿಕರು, ಅಧಾರ್ಮಿಕರು, ಡಾಂಭಿಕರು ಇವರ ಹೆಸರೇ ಇರಲಿಲ್ಲ. ತಾಯಿ—ತಂದೆ, ಪತಿ—ಪತ್ನಿ, ಬಂಧುಗಳು ಇವರುಗಳಲ್ಲಿ ವೈರವು ಯಾವಾಗಲೂ ಹುಟ್ಟುತ್ತಿರಲಿಲ್ಲ. ಈ ರೀತಿಯಾಗಿ ಪ್ರಜೆಗಳಿಗೆ ನಾನಾ ವಿಧವಾದ ಅನುಕೂಲಗಳನ್ನುಂಟುಮಾಡುತ್ತಾ, ಸೀತಾದೇವಿಯೊಡನೆ ಪರಮಾನಂದವನ್ನನುಭವಿಸುತ್ತಾ ಶ್ರೀ ರಾಮನು ಅನೇಕ ಸಾವಿರವರ್ಷಗಳು ಸುಖದಿಂದ ರಾಜ್ಯಸಂರಕ್ಷಣೆ ಮಾಡುತ್ತಿದ್ದನು.

ಸಾರಕಾಂಡಮಿದಂ ದೇವಿ, ಯೇಶೃಣ್ವಂತಿನರೋತ್ತಮಾಃ ।
ತೇಷಾಂ ಮನೋರಥಾಸ್ಸರ್ವೇ ಪರಿಪೂರ್ಣಾಭವಂತಿಹ ॥

—ಸಾರಕಾಂಡಂ ಸಮಾಪ್ತಂ—

# ಯಾತ್ರಾಕಾಂಡ.

---

## ೧ನೆಯ ಪ್ರಕರಣ.

## ಶ್ರೀರಾಮನ ಯಾತ್ರೋದ್ಯಮವು.

ಪಾರ್ವತಿಯು 'ಎಲೈ ಮಹೇಶ್ವರನೇ, ನೀವು ಹೇಳಿದ ಪರಮಾನಂದಕರವಾದ ಸಾರಕಾಂಡವನ್ನು ಕೇಳಿದೆನು; ಆದರೆ ಇನ್ನೂ ಕೆಲವು ವಿಷಯಗಳನ್ನು ಕೇಳಬೇಕೆಂದು ಇಚ್ಛೆಯಾಗಿರುವದು. ಶ್ರೀರಾಮನು ಅಶ್ವಮೇಧವನ್ನು ಹ್ಯಾಗೆ ಮಾಡಿದನು? ಆ ನಾಲ್ಕುಮಂದಿ ಅಣ್ಣತಮ್ಮಂದಿರಿಗೆ ಎಷ್ಟುಮಂದಿ ಮಕ್ಕಳಾದರು? ಆ ಮಕ್ಕಳ ವಿವಾಹಾದಿಗಳ ವಿಜೃಂಭಣೆಯು ಹ್ಯಾಗೆ ನಡೆಯಿತು! ಶ್ರೀರಾಮನು ಅನೇಕ ಸಹಸ್ರವರ್ಷಗಳವರೆಗೆ ರಾಜ್ಯಸಂರಕ್ಷಣೆ ಮಾಡುವಾಗ ಏನೇನು ಮಹತ್ಕೃತ್ಯಗಳನ್ನು ಮಾಡಿದನು? ಇದೆಲ್ಲವನ್ನೂ ದಯವಿಟ್ಟು ನನಗೆ ಸವಿಸ್ತಾರವಾಗಿ ಹೇಳಿರಿ,' ಎಂದು ಪ್ರಶ್ನೆಮಾಡಿದಳು. ಈ ಮಾತುಗಳನ್ನು ಕೇಳಿ, ಶಂಕರನು—'ಪಾರ್ವತಿಯೇ, ನೀನು ಬಹಳ ಯೋಗ್ಯವಾದ ಪ್ರಶ್ನೆ ಮಾಡಿದೆ. ಮೊದಲು ವಾಲ್ಮೀಕಿ ಮಹಾಕವಿಗಳಿಂದ ನಿರ್ಮಿತವಾದ ಶತಕೋಟಿ ರಾಮಾಯಣದ ವಿಷಯವನ್ನು ನಿನಗೆ ಹೇಳುವೆನು. ಒಂದಾನೊಂದು ಕಾಲದಲ್ಲಿ ವಾಲ್ಮೀಕಿಯು ತನ್ನ ಶಿಷ್ಯರೊಡನೆ ತಮಸಾ ನದಿಗೆ ಸ್ನಾನಮಾಡಲು ಹೊರಟನು. ಆತನು ಆ ನದೀತೀರದಲ್ಲಿ ತನ್ನ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು, ದರ್ಭೆಯನ್ನು ಕೈಯಲ್ಲಿ ಧರಿಸಿ ಸ್ನಾನಮಾಡಲು ನದಿಯಲ್ಲಿ ಇಳಿಯುವಾಗ ಒಂದು ಚಮತ್ಕಾರವನ್ನು ಕಂಡನು. ಅಲ್ಲಿ ಕ್ರೌಂಚದಂಪತಿಗಳು ವಿಹಾರಮಾಡುತ್ತಿದ್ದವು. ಒಬ್ಬ ವ್ಯಾಧನು ಆ ದಂಪತಿಗಳಲ್ಲಿ ಗಂಡುಪಕ್ಷಿಯನ್ನು ತನ್ನ ಬಾಣದಿಂದ ಹೊಡೆದನು. ತನ್ನ ಪತಿಯು ಮರಣ ಹೊಂದಿದ್ದನ್ನು ನೋಡಿ, ಹೆಣ್ಣುಪಕ್ಷಿಯು ರೋದನಮಾಡಲಾರಂಭಿಸಿತು. ಇದನ್ನು ಕಂಡು ವಾಲ್ಮೀಕಿಯು 'ಎಲೈ ವ್ಯಾಧನೇ, ನೀನು ವಿಹಾರಮಾಡುವ ಈ ದಂಪತಿಗಳಲ್ಲಿ ಗಂಡುಹಕ್ಕಿಯನ್ನು ಕೊಂದೆಯಾದ್ದರಿಂದ ನೀನು ಎಂದಿಗೂ ಸುಖವನ್ನು ಹೊಂದದೆ ಇರು.' ಎಂದು ಶಪಿಸಿದನು. ಮತ್ತು ತನ್ನ ಮಾತುಗಳನ್ನು ವಿಚಾರಮಾಡುತ್ತ ಆ ವಾಲ್ಮೀಕಿಯು ತಾನೇ ಆಶ್ಚರ್ಯಪಟ್ಟನು. ಬಳಿಕ ತಾನು ಹೇಳಿದ ಮಾತುಗಳು ನಾಲ್ಕುಪಾದಗಳಿಂದಲೂ, ಮೂವತ್ತೆರಡು ಅಕ್ಷರಗಳಿಂದಲೂ ಕೂಡಿರುವಂತೆ ತಿಳಿಯಿತು.

ವಾಲ್ಮೀಕಿಯು ಸ್ನಾನಾದಿ ನಿತ್ಯ ಕರ್ಮಗಳನ್ನು ನೆರವೇರಿಸಿ, ತನ್ನ ಆಶ್ರಮಕ್ಕೆ ಬಂದನು.

ಅಷ್ಟರಲ್ಲಿ ಆಶ್ರಮಕ್ಕೆ ಬ್ರಹ್ಮನು ಬಂದಿದ್ದನು. ವಾಲ್ಮೀಕಿಯು ಬ್ರಹ್ಮನನ್ನು ಯೋಗ್ಯವಾದ ಆಸನದಲ್ಲಿ ಕುಳ್ಳಿರಿಸಿ, ಅರ್ಘ್ಯಪಾದ್ಯಾದಿ ಸಾಮಗ್ರಿಗಳಿಂದ ಪೂಜಿಸಿದನು. ಬಳಿಕ ಬ್ರಹ್ಮನು 'ಎಲೈ ವಾಲ್ಮೀಕಿಯೇ, ನೀನು ನದೀತೀರದಲ್ಲಿ 'ಮಾನಿಷಾದ' ಎಂಬ ಶ್ಲೋಕವನ್ನು ಹ್ಯಾಗೆ ಉಚ್ಚಾರಣೆ ಮಾಡಿದೆಯೋ ಅದರಂತೆ ಮುಂದೆ ನಡೆಯುವ, ಶ್ರೀ ರಾಮನ ಚರಿತ್ರೆಯನ್ನು ನೀನು ರಚಿಸು. ನನ್ನ ಕೃಪೆಯಿಂದ ಎಲ್ಲಾ ಕಥಾನಕವೂ ನಿನ್ನ ಮನಸ್ಸಿಗೆ ಗೋಚರವಾಗಲಿ. ರಾಮ–ಲಕ್ಷ್ಮಣ. ಸುಗ್ರೀವ–ವಾಲಿ–ಮಾರುತಿಗಳೇ ಮೊದಲಾದವರ ಸಮಸ್ತ ಗೋಪ್ಯವಿಚಾರಗಳೂ ನಿನಗೆ ಸ್ಫುರಿಸಲಿ. ನೀನು ಬರೆದ ಚರಿತ್ರೆಯು ಎಂದೂ ಸುಳ್ಳಾಗದಿರಲಿ. ನೀನು ರಚಿಸಿದ ಶ್ರೀ ರಾಮನ ಚರಿತ್ರೆಯು ಸೂರ್ಯ,–ಚಂದ್ರ,–ನಕ್ಷತ್ರ,–ಭೂಮಿ,–ಸಮುದ್ರ, ಇವುಗಳಿರುವ ವರೆಗೂ ಪ್ರಸಿದ್ಧವಾಗಿರಲಿ.' ಎಂದು ಮಾತನಾಡಿ, ನಾರದರಿಂದ ಉಪದಿಷ್ಟವಾದ ಶ್ರೀ ರಾಮಚರಿತ್ರೆಯನ್ನು ವಾಲ್ಮೀಕಿಗೆ ಬ್ರಹ್ಮನು ಮತ್ತೂ ಉಪದೇಶ ಮಾಡಿ, ಸತ್ಯಲೋಕಕ್ಕೆ ಪ್ರಯಾಣಮಾಡಿದನು. ಅನಂತರ ವಾಲ್ಮೀಕಿಯು ಪರಮಾನಂದದಿಂದ ಶ್ರೀ ರಾಮಚರಿತ್ರೆಯನ್ನು ಬರೆದನು. ಈಶ್ವರಾನುಗ್ರಹದಿಂದ ಆ ಶತಕೋಟಿರಾಮಾಯಣವೂ ಅನುಷ್ಟುಪ್ ಶ್ಲೋಕಗಳಿಂದಲೇ ಪೂರ್ಣವಾಯಿತು.

ಪಾರ್ವತಿಯೇ, ವಾಲ್ಮೀಕಿಯು ರಚಿಸಿದ ರಾಮಾಯಣವನ್ನು ಕೇಳಿ ದೇವತೆಗಳು ಸಂತುಷ್ಟರಾದರು. ಈ ಮಹಾಕಾವ್ಯದ ವಿಷಯವಾಗಿ ದೇವತೆಗಳು, ಗಂಧರ್ವರು, ದಾನವರು, ರಾಕ್ಷಸರು ಇವರುಗಳಲ್ಲಿ ಪರಸ್ಪರ ಕಲಹಬಿತ್ತು. ಆಗ ನಾನು ಸಮಸ್ತರನ್ನೂ ಕರೆದುಕೊಂಡು ಶ್ರೀಮನ್ನಾರಾಯಣನ ಬಳಿಗೆ ಬಂದೆನು. ನಾರಾಯಣನು ಶೇಷಶಾಯಿಯಾಗಿದ್ದನು. ಆ ಪರಮಾತ್ಮನ ಸಮಕ್ಷವಾಗಿ ನಾನು ಆ ಮಹಾಕಾವ್ಯವನ್ನು ಮೂರುಭಾಗ ಮಾಡಿ ಮೂರು ಲೋಕಗಳಿಗೂ ಸರಿಯಾಗಿ ಹಂಚಿಕೊಟ್ಟೆನು. ಬಳಿಕ ಅವುಗಳನ್ನು ಆಯಾ ಲೋಕದವರು ತಮ್ಮ ತಮ್ಮ ಅನುಕೂಲತೆಯಂತೆ ಅನೇಕ ಭಾಗಗಳನ್ನಾಗಿ ಮಾಡಿಕೊಂಡರು. ಮುಂದೆ ಅಲ್ಪಾಯುಷ್ಯವಂತರಾದ ಜನರಿಗೆ ಈ ಮಹಾಪ್ರಬಂಧವು ತಿಳಿಯಲು ಸಾಧ್ಯವಿಲ್ಲವೆಂದು, ಕೃಪಾನಿಧಿಯಾದ ವೇದವ್ಯಾಸರು, ಹದಿನೆಂಟು ಪುರಾಣಗಳು, ಉಪಪುರಾಣಗಳು, ಇತಿಹಾಸಗಳು ಎಂಬ ಭೇದಗಳಿಂದ ಅದೇ ರಾಮಾಯಣವನ್ನೇ ವಿಸ್ತರಿಸಿದರು.

ಅನೇಕ ಮುನಿಗಳು ಅದೇ ರಾಮಾಯಣದ ಒಂದು ಭಾಗದಿಂದ ಆರು ಶಾಸ್ತ್ರಗಳನ್ನೂ ನಿರ್ಮಾಣಮಾಡಿದರು. ಬಹಳ ಹೇಳುವದರಿಂದೇನು? ಮಹಾತ್ಮರು ಎಷ್ಟು ಗ್ರಂಥಗಳನ್ನು ಈ ಮೊದಲೇ ರಚಿಸಿರುವರೋ, ಮುಂದೆ ಎಷ್ಟು ರಚಿಸುವರೋ, ಈಗ ಎಷ್ಟು ರಚಿಸುತ್ತಿರುವರೋ, ಆ ಗ್ರಂಥಗಳೆಲ್ಲ ರಾಮಾಯಣದಿಂದಲೇ ಆದವೆಂದು ತಿಳಿಯತಕ್ಕದ್ದು. ನಾರಾಯಣನು ರಾಮಾಯಣದಲ್ಲಿರುವ ಸಾರವೆಂದು ನಾಲ್ಕು ಶ್ಲೋಕಗಳನ್ನು ಬ್ರಹ್ಮನಿಗೆ ಉಪದೇಶಿಸಿದನು. ಕೆಲವು ಕಾಲದ ಮೇಲೆ ಆತನು ನಾರದರಿಗೆ ಈ ತತ್ತ್ವವನ್ನು ಬೋಧಿಸಿದನು. ನಾರದರಿಂದ ವ್ಯಾಸರು ಈ ತತ್ತ್ವವನ್ನು ತಿಳಿದು ಸಮಸ್ತ ಗ್ರಂಥಗಳಲ್ಲೂ ಈ ವಿಷಯವನ್ನು ಪ್ರಚಾರಮಾಡಿದರು. ಆ ವಿಷಯವು ಬಹಳ ದುರವಗಾಹವಾದದ್ದು. ಆದರೂ ಅದರ ಸಾರವನ್ನು ನಿನಗೆ ಬೋಧಿಸುವೆನು. ನಾರಾಯಣನು ಹೇಳಿದ್ದೇನಂದರೆ—‘ನಾನು ಪೂರ್ವದಲ್ಲಿ ಒಬ್ಬನೇ ಇದ್ದೆನು. ಸತ್, ಅಸತ್ ಎಂಬ ಭಾಗಗಳಾವವೂ ಇರಲಿಲ್ಲ. ಅನಂತರ ಉಂಟಾದ ಸಮಸ್ತವೂ ನಾನೇ ಇದ್ದೇನೆ. ಪ್ರಳಯವಾದನಂತರ ಉಳಿಯತಕ್ಕವನೂ ನಾನೇ. ಆತ್ಮನಿಗಿಂತಲೂ ಬೇರೆ ಯಾವ ಪದಾರ್ಥಗಳು ಗೋಚರವಾಗುವವೋ, ಆತ್ಮನೇ ಇಲ್ಲವೆಂದು ಏನು ತೋರುವದೋ, ಅದೆಲ್ಲ ಭ್ರಮದ ವ್ಯಾಪಾರವಾಗಿದೆ. ಅದೇ ಭಗವಂತನ ಮಾಯೆಯು. ಯಾವ ರೀತಿಯಾಗಿ ಮಹಾಭೂತಗಳಲ್ಲಿ ಉಚ್ಚನೀಚಗಳಾದ ಭೂತಗಳು ಒಳಕೊಳ್ಳುತ್ತವೆಯೋ, ಮಹಾಭೂತಗಳು ಉಚ್ಚನೀಚ ಭೂತಗಳ ಮಧ್ಯೆ ಹ್ಯಾಗೆ ಒಳಕೊಳ್ಳುವದು ಅಸಂಭವವೋ, ಹಾಗೆ ನನ್ನಲ್ಲಿ ಈ ಸಮಸ್ತ ಜಗತ್ತೂ ಅಂತರ್ಭೂತವಾಗುವದು. ನಾನು ಅದರಲ್ಲಿ ಸೇರಲು ಸಾಧ್ಯವಿಲ್ಲ. ನಾನು ಯಾವಾಗಲೂ ಎಲ್ಲ ಕಡೆಯಲ್ಲೂ ಇರುವೆನೆಂದು ತಿಳಿಯಬೇಕು.

ಪಾರ್ವತಿಯೇ, ಇದರಲ್ಲಿ ಎಲ್ಲ ಶಾಸ್ತ್ರಾರ್ಥಗಳೂ ಕೂಡಿರುವವು. ಈ ಶ್ಲೋಕಗಳ ನಿಶ್ಚಯವು ತಿಳಿಯಿತೆಂದರೆ, ಕಾರ್ಯಭಾಗವು ಮುಗಿಯಿತೆಂದು ತಿಳಿಯತಕ್ಕದ್ದು. ಅಧಾರ್ಮಿಕರಾದ ಜನಗಳ ದುಷ್ಟತನದಿಂದ ಖಿಲವಾದ ರಾಮಚರಿತ್ರೆಯನ್ನು ವ್ಯಾಸಮಹರ್ಷಿಗಳು ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳುಳ್ಳ ಏಳು ಕಾಂಡಗಳಿಂದ ಕೂಡಿದ ಒಂದು ಗ್ರಂಥವನ್ನು ರಚಿಸುವರು. ಅನಂತರ ಬಹುಪರಿಯ ರಾಮಾಯಣಗಳನ್ನು ಅನೇಕ ಕವಿಗಳು ಪ್ರಕಟಮಾಡುವರು. ನಾನು ಈಗ ಹೇಳಿದ ವಿಷಯವೇ ವಾಲ್ಮೀಕಿ ನಿರ್ಮಿತವಾದ ಶತಕೋಟಿರಾಮಾಯಣದ ಸಾರವಾಗಿದೆ. ಅನೇಕರು ರಾಮಾಯಣಗಳನ್ನು ಬರೆದರೂ ತಪಸ್ಸಿದ್ಧನಾದ ವಾಲ್ಮೀಕಿಯ ಶತಕೋಟಿ ರಾಮಾಯಣಕ್ಕೆ ಅವು ಯಾವೂ ಸರಿಬಾರವು. ಅದೇ ವಿಷಯವನ್ನು

ನಿನಗೆ ಹೇಳಲಾರಂಭಿಸಿರುವೆನು. ಈ ಚರಿತ್ರೆಯನ್ನು ಮುಂದೆ ರಾಮದಾಸನು ತನ್ನ ಶಿಷ್ಯನಾದ ವಿಷ್ಣುದಾಸನಿಗೆ ಹೇಳತಕ್ಕವನಿರುವನು.

## ಗಂಗಾಸರಯೂ-ಸಂಗಮ ಪ್ರಯಾಣ.

ಅದಕ್ಕೆ ಪಾರ್ವತಿಯು 'ಎಲೈ ಶಂಕರನೇ, ವಿಷ್ಣುದಾಸನು ಯಾರು? ಆತನಿಗೆ ರಾಮದಾಸನು ರಾಮಾಯಣವನ್ನು ಯಾವಾಗ ಹೇಳುವನು' ಎಂದು ಕೇಳಿದಳು. ಪರಮೇಶ್ವರನು 'ಪಾರ್ವತಿಯೇ ಕೇಳು. ಭಾರತ ವರ್ಷದಲ್ಲಿ ದಂಡಕಾರಣ್ಯದಲ್ಲಿರುವ ಗೋದಾವರೀತೀರದಲ್ಲಿರುವ ಅಬ್ಜವೆಂಬ ಕ್ಷೇತ್ರದಲ್ಲಿ ನೃಸಿಂಹನೆಂಬ ಒಬ್ಬ ಮುನಿಯು ವಾಸಮಾಡುವನು. ಆತನಿಗೆ ರಾಮನೆಂಬ ಒಬ್ಬ ಮಗನು ಹುಟ್ಟುವನು. ಆ ಮಗನಿಗೆ ವಿಷ್ಣುವೆಂಬ ಒಬ್ಬ ಶಿಷ್ಯನಾಗುವನು. ಆ ಗುರುಶಿಷ್ಯರಿಬ್ಬರೂ ಶ್ರೀ ರಾಮ-ಸೇವೆಯಲ್ಲಿ ಬಹು ಪ್ರೀತಿಯುಳ್ಳವರಾಗುವರು. ಆದ್ದರಿಂದ ಅವರಿಗೆ ದಾಸರೆಂಬ ಹೆಸರು ಬರುವದು. ಆ ರಾಮದಾಸನು ಶಿಷ್ಯನೊಡನೆ ತೀರ್ಥಾಟನ ಮಾಡುತ್ತ ಗಯೆಯಲ್ಲಿ ಪಿತೃಶ್ರಾದ್ಧಾದಿಗಳನ್ನು ನೆರವೇರಿಸಿ, ಗುರುಗಳ ಅಪ್ಪಣೆಯಂತೆ ಗೃಹಸ್ಥಾಶ್ರಮವನ್ನು ಹೊಂದುವನು. ಅನಂತರ ಆತನು ತನ್ನ ಶಿಷ್ಯನಿಗೆ ಈ ವಿಷಯವನ್ನು ಬೋಧಿಸುವನು. ಒಂದಾನೊಂದು ಕಾಲದಲ್ಲಿ ಸಾರಕಾಂಡವನ್ನೆಲ್ಲ ಗುರುಗಳ ಮುಖದಿಂದ ಕೇಳಿದ ವಿಷ್ಣುದಾಸನು 'ಪ್ರಭೋ, ಸಾರಕಾಂಡವೆಲ್ಲ ಕೇಳಿದ್ದಾಯಿತು. ಅದರಲ್ಲಿ ಸೀತಾರಾಮರ ಸುಖಸವಾಚಾರವೇ ಬರಲಿಲ್ಲ. ಆದ್ದರಿಂದ ಅವರು ಹ್ಯಾಗೆ ಸುಖಗಳನ್ನು ಅನುಭವಿಸಿದರು, ಅಶ್ವಮೇಧವನ್ನು ಹ್ಯಾಗೆ ಮಾಡಿದರು, ಪುತ್ರ-ಪೌತ್ರರ ವಿವಾಹಗಳನ್ನು ಯಾವರೀತಿ ನಡೆಸಿದರು. ಈ ಎಲ್ಲ ವನ್ನೂ ನನಗೆ ತಿಳಿಸಬೇಕು' ಎಂದು ಪ್ರಾರ್ಥಿಸಿದನು. ಆಗ ರಾಮದಾಸನು 'ಪ್ರಿಯ ಶಿಷ್ಯನೇ, ಬಹಳ ಉತ್ತಮವಾದ ಪ್ರಶ್ನೆ ಮಾಡಿದೆ. ಆನಂದಕರವಾದ ಶ್ರೀರಾಮನ ಚರಿತ್ರೆಯನ್ನು ಹೇಳುವೆನು ಕೇಳು. ಶ್ರೀರಾಮನು ಸಮಸ್ತಶತ್ರುಗಳನ್ನೂ ಗೆದ್ದು ಸಾರ್ವಭೌಮ ಪದವಿಯನ್ನನುಭವಿಸುತ್ತಿರುವ ಕಾಲದಲ್ಲಿ ಸೀತೆಯು 'ಎಲೈ ರಘುನಾಥನೆ, ನನ್ನದೊಂದು ಪ್ರಾರ್ಥನೆ ಇದೆ. ಅದನ್ನು ನೆರವೇರಿಸುವೆನೆಂದು ಭರವಸಕೊಟ್ಟರೆ, ವಿಜ್ಞಾಪನೆ ಮಾಡಿಕೊಳ್ಳುವೆನು' ಎಂದಳು. ಆಗ ಶ್ರೀರಾಮನು—'ಪ್ರಿಯೆ, ನಿನಗೆ ಏನು ಇಚ್ಛೆ ಇರುವದು? ಹೇಳು. ಅದನ್ನು ಈಗಲೆ ನೆರವೇರಿಸಿ ಕೊಡುವೆನು' ಎಂದು ಹೇಳಿದನು.

ಬಳಿಕ ಸೀತೆಯು 'ಪ್ರಭೋ, ನಾವು ಇಲ್ಲಿಂದ ದಂಡಕಾರಣ್ಯಕ್ಕೆ ಹೋಗುವಾಗ ಶೃಂಗಬೇರಪುರದಲ್ಲಿ ಒಂದು ರಾತ್ರಿ ವಾಸಮಾಡಿ, ನಾವೆಯಿಂದ ಗಂಗಾ

ನದಿಯನ್ನು ದಾಟಿದೆವಷ್ಟೆ. ಆಗ ನಾನು 'ಎಲೈ ಭಾಗೀರಥಿಯೇ, ನಾವು ಹದಿನಾ ಲ್ಕು ವರ್ಷಗಳ ವನವಾಸವನ್ನು ಯಾವ ತೊಂದರಗಳೂ ಇಲ್ಲದಂತೆ, ಮುಗಿಸಿಕೊಂ ಡು ಬರುವಂತೆ ಅನುಗ್ರಹಿಸು. ಬರುವಾಗ ನಾನು ನಿನ್ನನ್ನು ಅನೇಕ ವಿಧಗಳಾದ ಪೂಜಾದ್ರವ್ಯಗಳಿಂದ ಸಂತೋಷಗೊಳಿಸುವೆನು' ಎಂದು ಪ್ರಾರ್ಥನೆ ಮಾಡಿದ್ದೆನು. ಆದರೆ ಬರುವಾಗ ನಾವು ಪುಷ್ಪಕವನ್ನೇರಿ ಭರತನನ್ನು ನೋಡಬೇಕೆಂಬ ಕುತೂಹಲ ದಿಂದ ಅಯೋಧ್ಯೆಗೆ ಬಂದೆವು. ಆದ್ದರಿಂದ ಆ ವಿಷಯವನ್ನು ಮರೆತೆನು. ಈ ದಿವ ಸ ಅದು ಜ್ಞಾಪಕವಾಯಿತು. ಈ ಕಾರ್ಯವನ್ನು ಮುಗಿಸಿದ ಹೊರತು, ನನ್ನ ಮನಸ್ಸು ಸಮಾಧಾನಹೊಂದುವಂತೆ ಇಲ್ಲ' ಎಂದು ಹೇಳಿದಳು. ಆಗ ಶ್ರೀ ರಾಮ ನು "ಪ್ರಿಯೆ, ನೀನು ಮಾಡಿದ ಹರಿಕೆಯ ಸಂಬಂಧವು ನನಗೂ ಇರುವದಷ್ಟೆ? ಆ ಹರಿಕೆಯು ನಿನ್ನದಲ್ಲ, ನನ್ನದು ಎಂದು ತಿಳಿಯತಕ್ಕದ್ದು. ನಾನು ನಾಳೆ ಪ್ರಾತಃ ಕಾಲದಲ್ಲಿ ಆ ನಿನ್ನ ಇಚ್ಛೆಯನ್ನು ಪೂರ್ಣಮಾಡುವೆನು. ಆದರೆ ನೀನು ಯಾವ ಸ್ಥಳದಲ್ಲಿ ಭಾಗೀರಥಿಯನ್ನು ಪೂಜಿಮಾಡಬೇಕೆಂದಿರುವೆ? ಅದನ್ನು ತಿಳಿಸಿದರೆ, ಈ ಗಲೇ ಎಲ್ಲ ಸನ್ನಾಹಗಳನ್ನೂ ಅಲ್ಲಿ ಸಿದ್ಧಪಡಿಸುವಂತೆ ಅನುಚರರಿಗೆ ಆಜ್ಞೆಮಾ ಡುವೆನು" ಎಂದನು.

ತನ್ನ ಪ್ರಾಣಪ್ರಿಯನಾದ ಶ್ರೀ ರಾಮನ ಈ ಮಾತುಗಳನ್ನು ಕೇಳಿ ಸೀತೆಯು 'ಪ್ರಾಣನಾಥನೇ, ಸರಯೂ-ಗಂಗಾನದಿಗಳ ಸಂಗಮದಲ್ಲಿ ಈ ಹರಿಕೆಯನ್ನು ತೀ ರಿಸಬೇಕೆಂದು ಇಚ್ಛೆಯಾಗಿರುವದು' ಎಂದಳು. ಆಗ ಶ್ರೀ ರಾಮನು 'ಎಲೈ ಲ ಕ್ಷ್ಮಣನೆ, ನಾಳೆ ಪ್ರಾತಃಕಾಲಕ್ಕೆ ಸರಿಯಾಗಿ ಗಂಗಾ-ಸರಯೂ ಸಂಗಮಕ್ಕೆ ನಾ ವು ಪ್ರಯಾಣ ಮಾಡಬೇಕೆಂದಿರುವೆವು. ಅಲ್ಲಿ ಸಮಸ್ತ ಉಪಕರಣಗಳನ್ನು ಸಿದ್ಧ ಪಡಿಸು, ಎಂದು ಅಜ್ಞಾಪಿಸಿದನು. ಆಗ ಸೌಮಿತ್ರಿಯು ಆಜ್ಞೆಯಂತೆ ಸಮಸ್ತ ಸೇವ ಕರೂ ದಾರಿಗಳನ್ನು ಸರಿಮಾಡುವ ಪ್ರಯತ್ನಗಳಲ್ಲಿ ನಿರತರಾದರು. ಶ್ರೀ ರಾಮ ನು—'ನಾಳೆ ಪ್ರಾತಃಕಾಲಕ್ಕೆ ಸರಿಯಾಗಿ ಎಲ್ಲರೂ ಸರಯೂ-ಗಂಗಾಸಂಗಮಕ್ಕೆ ನನ್ನೊಡನೆ ಪ್ರಯಾಣಮಾಡಬೇಕು' ಎಂದು ಸಭಾಸದರಿಗೂ, ಪೌರಜನರಿಗೂ ಆ ಜ್ಞಾಪಿಸಿದನು. ಆದಿವಸ ರಾತ್ರಿಯಲ್ಲೆಲ್ಲಾ ಪ್ರಯಾಣದ ಅನುಕೂಲಗಳು ನಡೆ ಯುತ್ತಿದ್ದವು. ಬೆಳಗಾಗುವದರೊಳಗೆ ಸಮಸ್ತ ಸೇನಾನಾಯಕರೂ ತಮ್ಮ ವಾ ಹನಗಳನ್ನೇರಿ ರಾಜಗೃಹದ ಹೊರಭಾಗದಲ್ಲಿ ಬಂದು ನಿಂತಿದ್ದರು.

ಆನೆ, ಕುದುರೆ, ಒಂಟೆ, ಕಾಲಾಳುಗಳು ಇವೇ ಮೊದಲಾದ ಸೇನಾಂ ಗಗಳನ್ನು ಅರಮನೆಗೆ ಎದುರಾಗಿ ನಿಲ್ಲಿಸಿದ್ದರು. ಬೆಳಿಗ್ಗೆ ಶ್ರೀ ರಾಮನು ತ

ನ್ನ ನಿತ್ಯ ಕರ್ಮಗಳನ್ನೆಲ್ಲ ಮುಗಿಸಿಕೊಂಡು, ವಸ್ತ್ರ-ಭೂಷಣಗಳೇ ಮೊದಲಾದ ದಿವ್ಯ ವಸ್ತುಗಳನ್ನು ಧರಿಸಿ, ಪ್ರಯಾಣಕ್ಕೆ ಸಿದ್ಧನಾದನು. ಸೀತಾದೇವಿಯೂ ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಶ್ರೀ ರಾಮನೊಡನೆ ಹೊರಡಲು ಸಿದ್ಧಳಾದಳು. ಶ್ರೀ ರಾಮನು ಗುರುಗಳಾದ ವಸಿಷ್ಠರ ಅಪ್ಪಣೆಯಂತೆ ವಿಘ್ನೇಶ್ವರನ ಪೂಜೆಯೇ ಮೊದಲಾದ ಸಮಸ್ತ ಮಂಗಳಕಾರ್ಯಗಳನ್ನೂ ನೆರವೇರಿಸಿ, ಪರಿವಾರ ಸಮೇತನಾಗಿ ಹೊರಟನು. ಮತ್ತು ಅಗ್ನಿಹೋತ್ರವನ್ನೂ ಜೊತೆಯಲ್ಲೇ ತರುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿದನು. ಬಳಿಕ ಕೌಸಲ್ಯೆಯೇ ಮೊದಲಾದ ಸಮಸ್ತ ರಾಜಸ್ತ್ರೀಯರೂ ದಿವ್ಯ ವಸ್ತ್ರಾಭರಣಗಳಿಂದ ಭೂಷಿತರಾಗಿ ಪುಷ್ಪಕವನ್ನೇರಿದರು. ಶ್ರೀ ರಾಮನೂ ಸೀತಾಸಮೇತನಾಗಿ ಪುಷ್ಪಕಾರೋಹಣ ಮಾಡಲು ರಾಜಗೃಹದಿಂದ ಹೊರಕ್ಕೆ ಬಂದನು. ಆ ಕಾಲದಲ್ಲಿ ದೇವದುಂದುಭಿಗಳು ಮೊಳಗಿದವು. ವಾದ್ಯಗಳ ಶಬ್ದಗಳಿಂದ ಜನಗಳ ಕಿವಿಗಳು ಕೇಳದಂತಾದವು. ಶ್ರೀ ರಾಮನು ಪುಷ್ಪಕದ ಬಳಿಗೆ ಬಂದೊಡನೆ 'ಹೇ ಪ್ರಿಯೆ ಸೀತೆ, ನೀನು ಯಾವ ವಾಹನದ ಮೇಲೆ ಕುಳಿತುಕೊಳ್ಳುವೆ?' ಎಂದು ಕೇಳಿದನು. ಆಗ ಜಾನಕಿಯು ಗಜಾರೋಹಣ ಮಾಡಬೇಕೆಂಬ ತನ್ನ ಇಚ್ಛೆಯನ್ನು ಶ್ರೀ ರಾಮನಿಗೆ ಸೂಚಿಸಿದಳು. ಆಗಲೆ ಆನೆಯು ಸಿದ್ಧವಾಗಿ ನಿಂತಿತ್ತು. ಸೀತೆಯು ಗುರುಹಿರಿಯರಿಗೆರಗಿ, ಶ್ರೀ ರಾಮನ ಅಪ್ಪಣೆಯನ್ನು ಪಡೆದು ಸಖಿಯರೊಡನೆ ಆ ಗಜವನ್ನು ಹತ್ತಿದಳು. ಆಗ ಪುರನಿವಾಸಿಗಳಾದ ಕನ್ಯಾಜನರು ಸೀತೆಯ ಮೇಲೆ ಪುಷ್ಪವರ್ಷಣ ಮಾಡಿದರು. ಬಳಿಕ ಶ್ರೀ ರಾಮನು ಸುಮಂತ್ರನಿಗೆ 'ಅಯೋಧ್ಯೆಯ ಯೋಗಕ್ಷೇಮವನ್ನು ವಿಚಾರಿಸುತ್ತಾ ನಾನು ಬರುವ ವರೆಗೂ ಪ್ರಜೆಗಳಿಗೆ ಯಾವ ತೊಂದರೆಯೂ ಬರದಂತೆ ಕಾಪಾಡಿಕೊಂಡಿರೆಂ'ದು ಆಜ್ಞಾಪಿಸಿ, ಪ್ರಯಾಣ ಕಾಲದ ವ್ಯವಸ್ಥೆಯನ್ನು ಯಥಾಯೋಗ್ಯ ಮರ್ಯಾದೆಗಳಿಂದ ನಡೆಸುವಂತೆ ಲಕ್ಷ್ಮಣನಿಗೆ ಸೂಚಿಸಿದನು.

ಸೇನಾಜನವು ಲಕ್ಷ್ಮಣನ ಆಜ್ಞೆಯಂತೆ ಸುವ್ಯವಸ್ಥೆಯಿಂದ ಪ್ರಯಾಣಮಾಡಲಾರಂಭಿಸಿತು. ಬಳಿಕ ಸುಮಂತ್ರನಿಗೆ ಮತ್ತೂ ಪುರರಕ್ಷಣೆಯ ವಿಷಯವಾಗಿ ಎಚ್ಚರ ಹೇಳಿ, ಶ್ರೀರಾಮನು ಲಕ್ಷ್ಮಣನ ಹಸ್ತವನ್ನು ಹಿಡಿದುಕೊಂಡು ಸಂತೋಷದಿಂದ ವಾಹನದ ಕಡೆಗೆ ಬಂದನು. ಆ ಗಜವನ್ನು ಪ್ರದಕ್ಷಣೆಮಾಡಿ ನಮಸ್ಕರಿಸಿ, ರಾಮ-ಲಕ್ಷ್ಮಣರು ಆರೋಹಣ ಮಾಡಿದರು. ಆಗ ಪುಷ್ಪವೃಷ್ಟಿಯಾಯಿತು. ಬಂದಿಗಳು ಸ್ತುತಿಸಿದರು. ಪ್ರಜೆಗಳು ಜಯಜಯಕಾರ ಮಾಡಿದರು. ಸೇವಕರು ಶ್ರೀರಾಮನ ಸೇವೆಯಲ್ಲಿ ಸಿದ್ಧರಾದರು. ಈ ರೀತಿ ಸುವ್ಯವಸ್ಥಿತವಾದ ಸಂಗ

ತಿಯನ್ನು ತಿಳಿದು, ಶ್ರೀರಾಮನು ಪುಷ್ಪಕವಿಮಾನಕ್ಕೆ ಪ್ರಯಾಣಮಾಡುವಂತೆ ಅಜ್ಞೆ ಮಾಡಿದನು. ಆಗ ಪುಷ್ಪಕವು ಮೆಲ್ಲಮೆಲ್ಲನೆ ಪ್ರಯಾಣಮಾಡಲಾರಂಭಿಸಿತು. ಸಮಸ್ತ ಪುರಜನರೂ ಶ್ರೀರಾಮಾದಿಗಳನ್ನು ನೋಡಲು ಬಹಳ ಕುತೂಹಲಪಡುತ್ತಿದ್ದರು. ಮತ್ತು ಶ್ರೀರಾಮನಿಗೆ ನಮಸ್ಕಾರಮಾಡುತ್ತಿದ್ದರು. ಅವರ ನಮಸ್ಕಾರಗಳನ್ನು ಆದರದಿಂದ ಸ್ವೀಕರಿಸುತ್ತಾ ಶ್ರೀರಾಮನು ದಾರಿಯಲ್ಲಿರುವ ಉಪವನಗಳನ್ನೂ ನದಿಗಳನ್ನೂ ನೋಡುತ್ತಾ ಮುಂದೆ ಪ್ರಯಾಣಮಾಡಿದನು.

ಪುಷ್ಪಕವಿಮಾನವು ದಾರಿಯಲ್ಲಿ ಮೊದಲೇ ಏರ್ಪಡಿಸಿದ್ದ, ಇಳಿಕೊಳ್ಳತಕ್ಕ ಸ್ಥಳಕ್ಕೆ ಬಂದು ನಿಂತಿತು. ಅಲ್ಲಿ ಸಮಸ್ತ ಪ್ರಜೆಗಳೂ ಶ್ರೀರಾಮನಿಗೆ ಸತ್ಕಾರ ಮಾಡಲು ಕಾದಿದ್ದರು. ಆಗ ಸೀತಾ-ರಾಮರು ಪ್ರಜೆಗಳ ಕೋರಿಕೆಯಂತೆ ಆ ದಿವಸ ಅಲ್ಲೇ ನಿಲ್ಲಲು ನಿಶ್ಚಯಮಾಡಿದರು. ಬಳಿಕ ಸಮಸ್ತ ಪರಿವಾರದವರೂ ಸಿದ್ಧಪಡಿಸಿದ್ದ ಗೃಹಗಳಲ್ಲಿ ವಾಸಮಾಡಿದರು. ಶ್ರೀರಾಮನು ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ಸೀತಾಸಮೇತನಾಗಿ ಎಲ್ಲಾ ಬಂಧುವರ್ಗಗಳೊಡನೆ ಭೋಜನ ಮಾಡಿದನು. ಬಳಿಕ ಶ್ರೀ ರಾಮನು ತಮ್ಮಂದಿರೊಡನೆ ತಾಂಬೂಲ ಭಕ್ಷಣೆ ಮಾಡುತ್ತ, ನಿಪುಣರಾದ ಗಾಯಕರ ಸಂಗೀತವನ್ನು ಕೇಳುತ್ತ ಬಹಳ ಹೊತ್ತಿನ ವರೆಗೆ ಕುಳಿತಿದ್ದನು. ಮುಂದೆ ಶ್ರೀ ರಾಮಾದಿಗಳು ತಮಗಾಗಿ ಏರ್ಪಡಿಸಿದ್ದ ಶಯನ ಗೃಹಗಳಲ್ಲಿ ಆ ದಿವಸದ ಆಯಾಸಪರಿಹಾರಕ್ಕಾಗಿ ಮಲಗಲು ತೆರಳಿದರು.

ಅರುಣೋದಯಕ್ಕೆ ಬಂದಿಗಳು ಸ್ತುತಿಸುತ್ತಿರಲು, ಶ್ರೀರಾಮನು ಹಾಸಿಗೆಯಿಂದೆದ್ದು ಗುರುಹಿರಿಯರಿಗೆ ನಮಸ್ಕರಿಸಿ, ಸ್ನಾನಾಹ್ನಿಕಾದಿಗಳನ್ನು ತೀರಿಸಿಕೊಂಡು, ಸೇನಾಸಮೇತನಾಗಿ ಮುಂದಕ್ಕೆ ಪ್ರಯಾಣ ಮಾಡಲು ಸಿದ್ಧನಾದನು. ಆಗ ಪುರಜನಗಳು 'ಈ ದಿವಸ ಮಾತ್ರ ಇಲ್ಲೇ ಇದ್ದು ನಾಳೆ ಮುಂದಕ್ಕೆ ಪ್ರಯಾಣ ಮಾಡಬೇಕು' ಎಂದು ಪ್ರಾರ್ಥನೆ ಮಾಡಿಕೊಂಡರು. ಶ್ರೀ ರಾಮನು ಅವರ ಅನುಮತಿಯಂತೆ ಆ ದಿವಸವೂ ಅಲ್ಲೇ ಇದ್ದು, ಮರುದಿವಸ ಪ್ರಾತಃಕಾಲಕ್ಕೆ ಮುಂದೆ ಪ್ರಯಾಣ ಬೆಳಸಿದನು. ಹೀಗೆ ಒಂದೊಂದು ಸ್ಥಳದಲ್ಲಿ ಎರಡು, ಮೂರು, ನಾಲ್ಕು ದಿವಸಗಳ ವಸತಿ ಮಾಡುತ್ತ, ಅಲ್ಲಲ್ಲಿರುವ ಎಲ್ಲಾ ವಿಶೇಷಗಳನ್ನೂ ಸಾವಧಾನದಿಂದ ನೋಡುತ್ತ, ಒಂದು ತಿಂಗಳೊಳಗೆ ಶ್ರೀ ರಾಮನು ಗಂಗಾಸರಯೂ ಸಂಗಮದ ಬಳಿಯಲ್ಲಿರುವ ಮುದ್ಗಲಮಹರ್ಷಿಗಳ ಹಳೇ ಆಶ್ರಮವನ್ನು ಹೊಂದಿದನು.

### ಶ್ರೀ ರಾಮ-ಮುದ್ಗಲರ ಸಂವಾದ.

ಮುದ್ಗಲ ಮಹಾಮುನಿಗಳು ಗಂಗಾನದಿಯ ದಕ್ಷಿಣತೀರದಲ್ಲಿ ಒಂದು ಹೊಸ

ಆಶ್ರಮವನ್ನು ಕಟ್ಟಿಕೊಂಡು ಅದರಲ್ಲಿ ವಾಸವಾಗಿದ್ದರು. ಶ್ರೀ ರಾಮನು ತಮ್ಮ ಹಳೇ ಆಶ್ರಮದ ಬಳಿಗೆ ಬಂದಿರುವನೆಂಬ ವರ್ತಮಾನವನ್ನು ಕೇಳಿ, ಪರಮ ಹರ್ಷದಿಂದ ಶಿಷ್ಯಸಮೇತರಾಗಿ ಶ್ರೀ ರಾಮನ ದರ್ಶನದ ಸಲುವಾಗಿ ತಮ್ಮ ಮೊದಲಿನ ಆಶ್ರಮಕ್ಕೆ ಬಂದರು. ಆ ಮಹರ್ಷಿಗಳನ್ನು ನೋಡಿದೊಡನೆ ಶ್ರೀ ರಾಮನು ಸಾಷ್ಟಾಂಗಪ್ರಣಾಮ ಮಾಡಿ ಸತ್ಕರಿಸಿದನು. ಬಳಿಕ ಸಮಸ್ತರೂ ಉಚಿತಾಸನಗಳಲ್ಲಿ ಕುಳಿತಿರಲು, ಶ್ರೀ ರಾಮನು 'ಸ್ವಾಮಿಾ ಮುದ್ಗಲರೆ, ತಾವು ಪೂರ್ವದಲ್ಲಿ ವಾಸ ಮಾಡಿದ ಈ ಆಶ್ರಮವನ್ನು ಏಕೆ ಬಿಟ್ಟಿರಿ?' ಎಂದನು. ಆಗ ಮುದ್ಗಲರು "ಎಲೈ ಭಕ್ತವತ್ಸಲನೆ, ಹದಿನಾಲ್ಕುವರ್ಷ ವನವಾಸವನ್ನು ಮುಗಿಸಿ ಸುಖದಿಂದ ಬಂದ ನಿನ್ನನ್ನು ನೋಡಿ ನಾವು ಧನ್ಯರಾದೆವು. ನೀನು ಭರತನ ಪ್ರಾಣರಕ್ಷಣೆಗಾಗಿ ಲತೆಗಳನ್ನು ತರಿಸಿಕೊಂಡ ಬಳಿಕ ದಶರಥನೊಡನೆ ಇಲ್ಲಿಗೆ ಬಂದಿದ್ದೆಯಷ್ಟೆ? ಆಗ ನಿನ್ನ ಮೊದಲನೆಯ ದರ್ಶನವಾಗಿತ್ತು. ನಾನು ಇಲ್ಲಿ ವಾಸಮಾಡಗೆ ಇರುವದಕ್ಕೆ ಕಾರಣವನ್ನು ಹೇಳುವೆನು ಕೇಳು. ಇಲ್ಲಿ ಗಂಗಾ-ಸರಯೂ ನದಿಗಳಲ್ಲಿ ಒಂದಾದರೂ ನದಿ ಇಲ್ಲ. ಆದರೆ ಇಲ್ಲಿ ಅನೇಕ ಮಹರ್ಷಿಗಳು ತಪಸ್ಸುಗಳಿಂದ ಸಿದ್ಧಿಯನ್ನು ಹೊಂದಿರುವರು. ನಾನಾದರೂ ಬಹು ಕಾಲಗಳ ವರೆಗೂ ಇಲ್ಲೇ ತಪಸ್ಸು ಮಾಡುತ್ತಿದ್ದೆನು. ಆದರೂ ಇಲ್ಲಿ ಪುಣ್ಯನದಿಗಳಿಲ್ಲದ್ದರಿಂದ ಬೇರೆ ಕಡೆಗೆ ಹೋಗಬೇಕಾಗಿದೆ" ಎಂದರು.

ಶ್ರೀ ರಾಮನು 'ಮಹಾಮುನಿಗಳೇ, ತಮಗೆ ಅನುಕೂಲವಾದ ಉಪಕರಣಗಳು ಯಾವವೊ? ಅವುಗಳನ್ನು ಇಲ್ಲಿ ದೊರಕುವಂತೆ ಮಾಡಿದರೆ, ತಾವು ಇಲ್ಲಿ ವಾಸಮಾಡಲು ಸಮ್ಮತಿಸುವಿರಾ ಹ್ಯಾಗೆ?' ಎಂದು ಪ್ರಶ್ನೆ ಮಾಡಿದನು. ಆಗ ಮುದ್ಗಲರು 'ಮಹಾರಾಜನೆ, ಇಲ್ಲಿ ಗಂಗಾಸರಯೂ ನದಿಗಳ ಸಂಗಮವಾದದ್ದೇ ಆದರೆ, ನಮ್ಮ ಆಯುಷ್ಯವನ್ನೆಲ್ಲ ಇದೇ ಕ್ಷೇತ್ರದಲ್ಲಿ ಕಳೆಯುವೆವು' ಎಂದರು. ಬಳಿಕ ಶ್ರೀ ರಾಮನು 'ಮಹಾತ್ಮರೆ, ಸರಯೂನದಿಗೆ ಅಂಥಾ ಶ್ರೇಷ್ಠತ್ವವು ಹ್ಯಾಗೆ ಬಂತು?' ಎಂದು ಪ್ರಶ್ನಮಾಡಿದನು. ಆಗ ಮುದ್ಗಲರು 'ಶ್ರೀ ರಾಮನೆ, ನಿನ್ನ ಚರಿತ್ರೆಯನ್ನು ನಿನ್ನ ಸಂತೋಷಕ್ಕಾಗಿಯೇ ಹೇಳುವೆನು ಕೇಳು. ಪೂರ್ವದಲ್ಲಿ ಶಂಖಾಸುರನೆಂಬ ದೈತ್ಯನು ನಾಲ್ಕು ವೇದಗಳನ್ನೂ ಅಪಹಾರ ಮಾಡಿ, ಸಮುದ್ರದಲ್ಲಿ ಅಡಗಿದ್ದನಷ್ಟೆ? ಆಗ ನೀನು ಮತ್ಸ್ಯಾವತಾರ ಮಾಡಿ ಆ ದೈತ್ಯನನ್ನು ಸಂಹರಿಸಿ, ವೇದಗಳನ್ನು ಬ್ರಹ್ಮದೇವನಿಗೆ ಕೊಡಲಿಲ್ಲವೆ? ಆಗ ನಿನಗೆ ಪರಮಸಂತೋಷವಾಯಿತು. ಮತ್ತೆ ನೀನು ಪೂರ್ವರೂಪವನ್ನು ಧರಿಸಿದೆ. ಅದೇ ಕಾಲದಲ್ಲಿ ನಿನ್ನ

ನೇತ್ರಗಳಿಂದ ಆನಂದಾಶ್ರುಗಳು ಥಟಥಟನೆ ಸುರಿದವು. ಆ ಬಿಂದುಗಳು ಮೊದಲು ಬಿಂದು ಸರೋವರದಲ್ಲಿ ಬಿದ್ದವು. ಅನಂತರ ಮಾನಸಸರೋವರಕ್ಕೆ ಬಂದು ಸೇರಿದವು. ಇಷ್ಟರಲ್ಲಿ ನಿನ್ನ ವಂಶದವನಾದ ವೈವಸ್ವತಮನುವು ಯಜ್ಞವನ್ನು ಮಾಡಬೇಕೆಂದು ಬಯಸಿದನು. ಮತ್ತು ಕುಲಗುರುಗಳಾದ ವಸಿಷ್ಠರಿಗೆ 'ಮಹಾಸ್ವಾಮೀ, ನಾನು ಈ ಅಯೋಧ್ಯೆಗೆ ರಾಜನಾಗಿರುವೆನಷ್ಟೆ, ಇಂಥಾ ನನ್ನ ರಾಜಧಾನಿಯ ಬಳಿಯಲ್ಲಿ ಯಜ್ಞಮಾಡಲು ನನಗೆ ಆಶೆಯುಂಟಾಗಿರುವದು' ಎಂದು ಹೇಳಿಕೊಂಡನು. ಆಗ ಕುಲಗುರುಗಳು 'ಮಹಾರಾಜನೇ, ನೀನು ಮಾಡಿದ ಯೋಚನೆಯು ಬಹಳ ಶ್ರೇಷ್ಠವಾದದ್ದೇ ಸರಿ. ಆದರೆ ಈ ನಗರಿಯ ಬಳಿಯಲ್ಲಿ ಜಲಸೌಕರ್ಯಗಳು ಮಾತ್ರ ಇರುವದಿಲ್ಲ. ಆದ ಕಾರಣ ನೀನು ಹಿಮವತ್ಪರ್ವತದಿಂದ ಪತಿತಪಾವನೆಯಾದ ಒಂದು ನದಿಯನ್ನು ಬರಮಾಡು' ಎಂದರು.

ವೈವಸ್ವತಮನುವು ಗುರುಗಳ ಮಾತುಗಳನ್ನು ಕೇಳಿದೊಡನೆ, ಧನುಸ್ಸಿನಲ್ಲಿ ಬಾಣವನ್ನು ಸೇರಿಸಿ ಮಾನಸಸರೋವರಕ್ಕೆ ಹೊಡೆದನು. ಆ ಬಾಣವು ಅಲ್ಲಿ ಸೇರಿದೊಡನೆ, ಅಲ್ಲಿಂದ ಶ್ರೇಷ್ಠವಾದ ಈ ನದಿಯು ಉತ್ಪನ್ನವಾಗಿ, ಬಾಣದ ಮಾರ್ಗವನ್ನೇ ಅನುಸರಿಸಿ ಅಯೋಧ್ಯೆಗೆ ಬಂತು. ಶರಪ್ರಯೋಗದಿಂದ ಬಂತಾದ್ದರಿಂದ ಶರಯೂ ಎಂತಲೂ, ಸರೋವರದಿಂದ ಬಂತಾದ್ದರಿಂದ ಸರಯೂ ಎಂತಲೂ ಇದಕ್ಕೆ ಹೆಸರುಗಳಿವೆ. ಈ ನದಿಯು ಮುಂದೆ ಪ್ರವಹಿಸುತ್ತ ಸಾಗರವನ್ನು ಸೇರಿತು. ಮುಂದೆ ಕೆಲವು ಕಾಲಗಳ ಮೇಲೆ ಕಪಿಲಮಹರ್ಷಿಯ ಕೋಪದಿಂದ ಸಗರ ಚಕ್ರವರ್ತಿಯ ಅರವತ್ತುಸಾವಿರಮಂದಿಮಕ್ಕಳು ಬೂದಿಯಾದರು. ಅವರನ್ನು ಉದ್ಧಾರ ಮಾಡಬೇಕೆಂದು ಭಗೀರಥನು ತಪಸ್ಸಿನಿಂದ ಶಂಕರನನ್ನು ಸಂತೋಷಗೊಳಿಸಿ, ದೇವಗಂಗೆಯನ್ನು ಭೂಲೋಕಕ್ಕೆ ತಂದನು. ಆ ಭಾಗೀರಥಿಯು ಈ ಸರಯೂ ನದಿಯೊಡನೆ ಕೂಡಿಕೊಂಡಿತು. ಎಲೈ ಪರಮೇಶ್ವರನೇ, ಇದೇ ಭಾಗೀರಥಿಯು ಮುಂದೆ ಕಲಿಯುಗದಲ್ಲಿ ಗಂಗೆ ಎಂಬ ಹೆಸರಿನಿಂದ ಪ್ರಸಿದ್ಧಳಾಗುವಳು. ಈ ಜಾಹ್ನವಿಯು ನಿನ್ನ ಪಾದಾಂಗುಷ್ಠದಿಂದ ಉತ್ಪನ್ನಳಾದ್ದರಿಂದ ಸಮಸ್ತ ಜನರ ಪಾಪಗಳನ್ನು ನಾಶಮಾಡುವಳು. ಎಲೈ ಶ್ರೀ ರಾಮನೆ, ಇನ್ನು ನೀನು ಕೇಳತಕ್ಕ ವಿಷಯಗಳೇನಿರುತ್ತವೆ?" ಎಂದರು.

ಈ ಪೂರ್ವವೃತ್ತಾಂತವನ್ನು ಕೇಳಿ, ಶ್ರೀ ರಾಮನು 'ಎಲೈ ಲಕ್ಷ್ಮಣನೇ, ಬಾಣವನ್ನು ಪ್ರಯೋಗಿಸಿ ಸರಯೂ ನದಿಯನ್ನು ಇಲ್ಲಿಗೆ ಬರುವಂತೆ ಮಾಡು' ಎಂದು ಆಜ್ಞಾಪಿಸಿದನು. ಲಕ್ಷ್ಮಣನು ಆಗಲೇ ತನ್ನ ಧನುಸ್ಸಿನಲ್ಲಿ ಬಾಣವನ್ನು ಜೋಡಿಸಿ

ಸರಯೂ ನದಿಯು ಇರುವಲ್ಲಿಗೆ ಪ್ರಯೋಗಿಸಿದನು. ಅನಂತರ ಸರಯೂ ನದಿಯು ಎರಡು ಭಾಗವಾಯಿತು. ಮತ್ತು ಒಂದು ಭಾಗವು ಮುದ್ಗಲ ಮಹರ್ಷಿಗಳ ಆಶ್ರಮದ ಬಳಿಯಲ್ಲಿ ಪ್ರವಹಿಸುತ್ತ ಗಂಗಾನದಿಯನ್ನು ಸೇರಿತು. ಶ್ರೀ ರಾಮನು ಸರಯೂ ನದಿಯನ್ನು ನೋಡಿ, ಪರಮ ಹರ್ಷದಿಂದ "ಇಲ್ಲಿ ಮುಂದೆ 'ದ್ರದ್ರೀ' ಎಂಬ ನಗರವಾಗಲಿ. ಭೋ ಮಹರ್ಷಿಗಳೇ, ತಮ್ಮ ವಸತಿಯಿಂದ ಈ ಸ್ಥಾನವು ಪರಮ ಪವಿತ್ರವಾಗಲಿ" ಎಂದನು. ಬಳಿಕ ಜಾನಕಿಯನ್ನು ಕರೆಸಿ ಲಕ್ಷ್ಮಣನ ಅದ್ಭುತ ಕೃತ್ಯವನ್ನು ತಿಳುಹಿದನು. ಮತ್ತು 'ಎಲೈ ಸೀತೆಯೇ, ನೀನು ಕೌಸಲ್ಯೆ ಅರುಂಧತಿ ಮೊದಲಾದ ಸಮಸ್ತ ಗುರುಜನಗಳೊಡಗೂಡಿ, ಗಂಗಾಸರಯೂ ನದಿಗಳ ಹಳೇ ಸಂಗಮಕ್ಕೆ ಹೋಗಿ ಪೂಜಾವಿಧಿಯನ್ನು ತೀರಿಸಿಕೊಂಡು ಬಾ, ಅನಂತರ ನಾನು ಇಲ್ಲಿ ಈ ನೂತನವಾದ ನದಿಯನ್ನು ಪೂಜಿಮಾಡಬೇಕೆಂದಿರುವೆನು' ಎಂದನು. ಶ್ರೀ ರಾಮನ ಈ ಮಾತುಗಳನ್ನು ಕೇಳಿ, ಸೀತಾದೇವಿಯು ಪೂಜಾ ಸಾಮಗ್ರಿಗಳನ್ನು ತರಲು ಸಖಿಯರಿಗೆ ಅಪ್ಪಣೆಮಾಡಿದಳು.

ಶ್ರೀ ರಾಮನ ಅಪ್ಪಣೆಯಂತೆ ಸೀತಾದೇವಿಯು ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ವೃದ್ಧಸರಯೂ ಸಂಗಮಕ್ಕೆ ಸಮಸ್ತ ಬಂಧುಗಳೊಡನೆ ಪ್ರಯಾಣ ಮಾಡಿದಳು. ಅಲ್ಲಿ ಅರಿಶಿನ, ಕುಂಕುಮಗಳೇ ಮೊದಲಾದ ಮಂಗಳ ದ್ರವ್ಯಗಳಿಂದ ಗಂಗೆಯನ್ನು ಪೂಜಿಸಿ, ಪೂರ್ಣಫಲಸಹಿತವಾದ ತಾಂಬೂಲವನ್ನು ವಸ್ತ್ರಸಹಿತವಾಗಿ ಭಾಗೀರಥಿಗೆ ಸಮರ್ಪಿಸಿದಳು. ಮತ್ತು ಸಾವಿರಾರು ಜನ ಬ್ರಾಹ್ಮಣರಿಗೂ ಸುಮಂಗಲೆಯರಿಗೂ ಪಕ್ವಾನ್ನಗಳಿಂದ ಭೋಜನ ಮಾಡಿಸಿ, ನಾನಾವಿಧಗಳಾದ ಉಪಾಯನಗಳಿಂದ ಸಂತೋಷಗೊಳಿಸಿದಳು. ಆಗ ವಸಿಷ್ಠರೇ ಮೊದಲಾದ ಬ್ರಹ್ಮನಿಷ್ಠರೂ, ಅರುಂಧತಿಯೇ ಮೊದಲಾದ ಪತಿವ್ರತಾ ಶಿರೋಮಣಿಗಳೂ ಸೀತಾದೇವಿಗೆ ಆಶೀರ್ವಾದ ಮಾಡಿದರು. ಬಳಿಕ ಸೀತಾದೇವಿಯು 'ಶ್ರೀ ರಾಮನು ಇನ್ನೂ ಭೋಜನ ಮಾಡಿಲ್ಲ'ವೆಂದು ಮನಸ್ಸಿನಲ್ಲಿ ಯೋಚಿಸಿ, ತಾನೂ ಭೋಜನ ಮಾಡದೆ ಪರಿವಾರ ಸಹಿತಳಾಗಿ ವಿಮಾನವನ್ನೇರಿ ಶ್ರೀ ರಾಮನಿದ್ದಲ್ಲಿಗೆ ಬಂದು ಸೇರಿದಳು. ಶ್ರೀ ರಾಮನು ಸೀತಾಸಮೇತನಾಗಿ, ನೂತನ ಸರಯೂ ಪೂಜೆಯನ್ನು ಅತಿ ವಿಜೃಂಭಣೆಯಿಂದ ನೆರವೇರಿಸಿದನು. ಮತ್ತು ಸೀತಾದೇವಿಗಿಂತ ಅಧಿಕವಾಗಿ ವಸ್ತ್ರಾಭರಣ ದಾನಗಳನ್ನು ಬ್ರಾಹ್ಮಣ-ಸುಮಂಗಲೆಯರಿಗೆ ಸಮರ್ಪಿಸಿದನು. ಸಾವಿರಾರು ಜನ ಬ್ರಾಹ್ಮಣ ಸಂತರ್ಪಣೆಯನ್ನು ಅತಿ ಸಂಭ್ರಮದಿಂದ ನಡೆಸಿದನು. ಈ ಸಮಾರಂಭವು ನೆರವೇರಿದ ಬಳಿಕ ಶ್ರೀ ರಾಮನು ಭೋಜನಾದಿಗಳನ್ನು ತೀರಿಸಿ

ಕೊಂಡು, ಸಿಂಹಾಸನದ ಮೇಲೆ ಕುಳಿತು—'ಎಲೈ ಸೌಮಿತ್ರಿಯೇ, ಈ ದಿವಸ ಮೊದಲುಗೊಂಡು ಒಂಬತ್ತು ದಿವಸಗಳವರೆಗೂ ಇಲ್ಲಿಗೆ ಬಂದ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ, ಯತಿ ಇವರೆಲ್ಲರನ್ನೂ, ನಾನೇ ಪೂಜೆಮಾಡಿ, ಭಕ್ಷ್ಯಭೋಜ್ಯಾದಿಗಳಿಂದ ಸರ್ವರನ್ನೂ ತೃಪ್ತಿಗೊಳಿಸಬೇಕೆಂದಿರುವೆನು. ಈ ವರ್ತಮಾನವನ್ನು ಸುತ್ತಲೂ ಇರುವ ಪುಣ್ಯಾಶ್ರಮಿಗಳೆಲ್ಲರಿಗೂ ತಿಳಿಸುವಂತೆ ದೂತರಿಗೆ ಆಜ್ಞಾಪಿಸು. ಇಲ್ಲಿಗೆ ಬಂದ ಸಮಸ್ತರೂ ನನ್ನಿಂದ ಪೂಜೆಯನ್ನು ಸ್ವೀಕರಿಸಿ ಪ್ರಯಾಣ ಮಾಡಬೇಕು. ಈ ಕಾರ್ಯವನ್ನು ಯಾರೂ ಸ್ವಲ್ಪವಾದರೂ ತಪ್ಪಿಸಬಾರದು' ಎಂದು ಅಪ್ಪಣೆಮಾಡಿದನು. ಲಕ್ಷ್ಮಣನು ಶ್ರೀರಾಮನ ಈ ಆಜ್ಞೆಯನ್ನು ಶಿರಸಾವಹಿಸಿ, ಸಮಸ್ತ ಬ್ರಾಹ್ಮಣರನ್ನೂ ತ್ವರೆಯಿಂದ ಕರೆಸಿದನು. ಅವರೆಲ್ಲರಿಗೂ ರಘುನಾಥನಿಂದ ವಸ್ತ್ರ, ಆಭರಣ, ಭೋಜನ ಇವೆಲ್ಲವೂ ಅರ್ಪಿಸಲ್ಪಟ್ಟವು.

ಶ್ರೀರಾಮನು ಸರಯೂ ತೀರದಲ್ಲಿ ವಾಸವಾಗಿರುವನೆಂಬ ವರ್ತಮಾನವನ್ನು ಕೇಳಿ, ಚ್ಯವನರೆಂಬ ಮಹರ್ಷಿಗಳು ಅಲ್ಲಿಗೆ ದಯಮಾಡಿಸಿದರು. ಮತ್ತು ಭಾಗ್ಯಶಾಲಿಯಾದ ಶ್ರೀ ರಾಮನು ಮಾಡಿದ ಸತ್ಕಾರಗಳನ್ನು ಸ್ವೀಕರಿಸಿ 'ಎಲೈ ದೀನದಯಾಳುವೆ, ನಾವು ಕೀಕಟ ದೇಶದಲ್ಲಿ ವಾಸಿಸುವೆವು. ಮಗಧದೇಶದ ಪ್ರಾಣಿಗಳು ನಮ್ಮ ಆಶ್ರಮದ ಬಳಿಗೆ ಬಂದು ಬಹಳ ತೊಂದರೆಗೊಳಿಸುವರು. ಅವರನ್ನು ಶಿಕ್ಷಿಸಿ ನನ್ನನ್ನು ಉದ್ಧಾರ ಮಾಡು' ಎಂದು ಬೇಡಿಕೊಂಡರು. ಆಗಲೇ ಶ್ರೀರಾಮನು ತನ್ನ ಧನುಸ್ಸಿಲ್ಲಿ ಬಾಣವನ್ನು ಜೋಡಿಸಿ ಚ್ಯವನರ ಆಶ್ರಮದ ಕಡೆಗೆ ಪ್ರಯೋಗಿಸಿದನು. ಅದು ಶ್ರೀರಾಮನ ಇಚ್ಛೆಯಂತೆ ಆ ಆಶ್ರಮದ ಸುತ್ತಲೂ ಒಂದು ದೊಡ್ಡ ಕಂದಕವನ್ನು ನಿರ್ಮಾಣ ಮಾಡಿತು. ಅದನ್ನು ದಾಟಲು ಆ ಮಗಧರಿಗೆ ಶಕ್ತಿಯಿಲ್ಲದಾಯಿತು. ಅದೇ ಸ್ಥಳದಲ್ಲಿ ಈಗ ರಾಮರೇಖಾ ಎಂಬ ನಗರವಾಗಿದೆ. ಸಂತುಷ್ಟರಾದ ಚ್ಯವನರು 'ಎಲೈ ದಾಶರಥಿಯೇ, ಕೀಕಟ ದೇಶವು ಬಹಳ ದೂಷಿತವಾಗಿರುವದು. ಅದನ್ನು ನಿನ್ನ ನಾಮದಿಂದ ಉದ್ಧರಿಸು' ಎಂದರು. ಆಗ ಶ್ರೀರಾಮನು 'ಅಲ್ಲಿ ಪುಣ್ಯಕರವಾದ ಒಂದು ನದಿಯು ಪ್ರವಹಿಸುವದು, ಮತ್ತು ಪೂಜ್ಯರಾದ ನಿಮ್ಮ ಆಶ್ರಮವಿರುವದು. ಈ ವಿಷಯದಲ್ಲಿ ಆ ಸ್ಥಳವು ಪ್ರಸಿದ್ಧಿಯನ್ನು ಹೊಂದಲಿ' ಎಂದು ನುಡಿದನು. ಇದನ್ನು ಕೇಳಿ ಚ್ಯವನರಿಗೆ ಪರಮ ಹರ್ಷವಾಯಿತು.

ಶ್ರೀರಾಮನ ಈ ಒಂಭತ್ತು ದಿವಸಗಳ ಸತ್ರದಲ್ಲಿ ಪ್ರತಿ ದಿವಸವೂ ಸಾವಿರಾರು ಜನ ಬ್ರಾಹ್ಮಣರು ಭೋಜನ ಮಾಡಿ, ಯೋಗ್ಯ ಸತ್ಕಾರಗಳನ್ನು ಪಡೆದು ತ

ಮ್ಮ ಆಶ್ರಮಗಳಿಗೆ ತೆರಳುತ್ತಿದ್ದರು. ಒಂದು ದಿವಸ ಕುಂಭೋದರನೆಂಬ ಬ್ರಾಹ್ಮಣನು ಗಂಗಾಯಾತ್ರೆಗಾಗಿ ಹೊರಟು ದಾರಿಯಲ್ಲಿ ಕಾಣುತ್ತಿರುವ ಆ ಸ್ಥಾನಕ್ಕೆ ಬಂದನು. ಆತನು ಶ್ರೀ ರಾಮನ ದೂತರನ್ನು ನೋಡಿ, "ನೀವು ಯಾರು? ಈ ಉನ್ನತವಾದ ಚಿತ್ರ–ವಸ್ತ್ರಗಳಿಂದ ಕೂಡಿದ ಧ್ವಜಸ್ತಂಭವು ಯಾವ ರಾಜನದು? ಇಲ್ಲಿ ನಮಗೆ ಕೇಳಿ ಬರುತ್ತಿರುವ ಜಯಜಯ ಶಬ್ದಗಳು ಯಾರವು? ಇವುಗಳನ್ನೆಲ್ಲ ಸವಿಸ್ತಾರವಾಗಿ ಹೇಳಿರಿ" ಎಂದು ಪ್ರಶ್ನೆ ಮಾಡಿದನು. ಆಗ ದೂತರು 'ಎಲೈ ಬ್ರಾಹ್ಮಣೋತ್ತಮರೇ, ಅಯೋಧ್ಯಾಧಿಪತಿಯಾದ ಶ್ರೀ ರಾಮಚಂದ್ರನು ಇಲ್ಲಿ ಯಾತ್ರೆಗಾಗಿ ಬಂದಿರುವನು. ಆತನು ಇಲ್ಲಿ ಮಹಾ ವಿಭವದಿಂದ ಒಂದು ಅನ್ನಸತ್ರವನ್ನಿರಿಸಿರುವನು. ಅಲ್ಲಿ ತೃಪ್ತರಾದ ಬ್ರಾಹ್ಮಣರು ಶ್ರೀ ರಾಮನಿಗೆ ಆಶೀರ್ವಾದ ಮಾಡುತ್ತಿರುವರು. ಅದೇ ಶಬ್ದಗಳೇ ಇಲ್ಲಿಗೆ ಕೇಳಬರುವವು. ಮಹಾಸ್ವಾಮೀ, ತಾವಾದರೂ ಒಳಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸುವೆವು" ಎಂದರು. ಆಗಲಾಬ್ರಾಹ್ಮಣನು ಈ ಮಾತುಗಳನ್ನು ಕೇಳಿ ಹಿಂತಿರುಗಿದನು. ಶ್ರೀ ರಾಮದೂತರು ಆ ಬ್ರಾಹ್ಮಣನನ್ನು ದಾರಿಯಲ್ಲಿ ತಡೆದು 'ಮಹಾಸ್ವಾಮೀ, ಇದೇನು? ಶ್ರೀ ರಾಮನ ಕೋರಿಕೆಯನ್ನು ನೆರವೇರಿಸದೆ ದಯಮಾಡಿಸುವಿರಲ್ಲ!' ಎಂದರು. ಆಗಲೂ ಬ್ರಾಹ್ಮಣನು ಏನೂ ಮಾತನಾಡದೆ ಮುಂದೆ ನಡೆದನು. ಬಳಿಕ ಶ್ರೀ ರಾಮಸೇವಕರು ಬಹಳ ನಿರ್ಬಂಧ ಪಡಿಸಿದರು. ಆಗಲಾ ಬ್ರಾಹ್ಮಣನು ಮನಸ್ಸಿನಲ್ಲಿ 'ಇಂಥಾ ಜಗನ್ನಾಯಕನಾದ ಶ್ರೀ ರಾಮನು ನಮ್ಮ ಭರತಖಂಡದಲ್ಲಿ ಹ್ಯಾಗೆ ಯಾತ್ರೆ ಮಾಡ್ಯಾನು? ಈತನು ಅಲ್ಲಲ್ಲಿ ಯಾತ್ರೆ ಮಾಡದೆ ಹೋದರೆ ಒಂದಾದರೂ ಕ್ಷೇತ್ರಗಳಾಗುವಂತೆ ಇಲ್ಲ. ಒಳ್ಳೇದು. ಶ್ರೀ ರಾಮನು ಯಾತ್ರೆಗೆ ಹೊರಡುವ ಉಪಾಯವನ್ನೇ ಮಾಡುವೆನು' ಎಂದು ಯೋಚಿಸಿ, 'ಎಲೈ ದೂತರೆ, ನಿಮ್ಮ ಶ್ರೀ ರಾಮನು ಲಂಕೆಯಲ್ಲಿ ಪುತ್ರ–ಮಿತ್ರ ಸಹಿತನಾದ ರಾವಣನೆಂಬ ಬ್ರಾಹ್ಮಣನನ್ನು ಕೊಂದಿರುವನು. ಆ ಪಾಪ ಪರಿಹಾರಕ್ಕಾಗಿ ಆತನು ತೀರ್ಥಾಟನವನ್ನೂ, ಯಜ್ಞವನ್ನೂ ಮಾಡಿಲ್ಲ. ಆದಕಾರಣ ನಾನು ಆತನ ಮನೆಯಲ್ಲಿ ಅನ್ನೋದಕಗಳನ್ನು ತೆಗೆದುಕೊಳ್ಳುವದಿಲ್ಲ. ಈ ಮಾತುಗಳನ್ನು ನಿಮ್ಮ ರಾಜನಿಗೆ ತಿಳುಹಿರಿ' ಎಂದು ಹೇಳಿ ಪ್ರಯಾಣ ಮಾಡಿದನು.

ಬಳಿಕ ದೂತರು ಸಭಾಮಧ್ಯದಲ್ಲಿ ಸಿಂಹಾಸನಾರೂಢನಾದ ಶ್ರೀ ರಾಮನಿಗೆ ಈ ವರ್ತಮಾನವನ್ನು ತಿಳುಹಿದರು. ಶ್ರೀ ರಾಮನು ಆ ಬ್ರಾಹ್ಮಣನ ಅಭಿಪ್ರಾಯವನ್ನು ಮನಸ್ಸಿನಲ್ಲಿ ತಿಳಿದು, ವಸಿಷ್ಠ, ಸುಮಂತ್ರರೇ ಮೊದಲಾದ ಹಿರಿಯರ

ಅನುಮತಿಯಂತೆ ಮೊದಲು ತೀರ್ಥಾಟನ, ಅನಂತರ ಯಜ್ಞ ಇವುಗಳನ್ನು ನಡಿಸ ಬೇಕೆಂದು ನಿಶ್ಚಯ ಮಾಡಿದನು. ಮತ್ತು ಸಮಸ್ತ ಸಂಭಾರಗಳನ್ನೂ ಅಯೋಧ್ಯೆಯಿಂದ ತರಿಸಿದನು. ಬಳಿಕ ಶ್ರೀ ರಾಮನು ಪುಷ್ಪಕವನ್ನು ಕುರಿತು—'ಎಲೈ ಪುಷ್ಪಕವೆ, ನೀನು ಪರಮ ಸಮರ್ಥನೇ ಇದ್ದೀಯೆ. ಈ ನನ್ನ ಸಮಸ್ತ ವೈಭವ, ರಥ, ತುರಗ, ಗಜ, ಪ್ರಜೆಗಳು, ಇವರೆಲ್ಲರನ್ನೂ ಧರಿಸುವ ಸಾಮರ್ಥ್ಯವು ನಿನಗೆ ನನ್ನ ಕೃಪೆಯಿಂದ ಬರಲಿ.' ಎಂದು ಹೇಳಿದನು. ಶ್ರೀ ರಾಮನ ಈ ಮಾತುಗಳನ್ನು ಕೇಳಿ ಪುಷ್ಪಕವಿಮಾನವು ಹತ್ತುಯೋಜನದಷ್ಟು ಅಗಲವಾಯಿತು. ಅಂಥಾ ವಿಮಾನದಲ್ಲಿ ಒಂದು ಪಟ್ಟಣದಲ್ಲಿಯಂತೆ ಸರ್ವಾನುಕೂಲಗಳೂ ಸಿದ್ಧವಾದವು. ಅಲ್ಲಲ್ಲಿ ಗಜಶಾಲೆಗಳು, ಅಶ್ವಶಾಲೆಗಳು, ವೀರರು ವಾಸಮಾಡುವ ಮಂದಿರಗಳು, ಸೀತಾದೇವಿಯೇ ಮೊದಲಾದ ಸಮಸ್ತ ರಾಜಸ್ತ್ರೀಯರಿಗೂ ಅಂತಃಪುರಗಳು, ವಸಿಷ್ಠರೇ ಮೊದಲಾದ ಮಹರ್ಷಿಗಳಿಗೆ ತಪಸ್ಸು ಮಾಡಲು ಯೋಗ್ಯವಾದ ವಿಶ್ರಾಂತಿಸ್ಥಾನಗಳು ಶಿಲ್ಪಿಗಳಿಂದ ಅದೇ ಕ್ಷಣದಲ್ಲಿ ರಚಿಸಲ್ಪಟ್ಟವು. ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತರು.

ಬಳಿಕ ಶ್ರೀ ರಾಮನು ಸೀತಾಸಮೇತನಾಗಿ ಅಯೋಧ್ಯಾನಗರಿಯಿಂದ ಭಿಬಿಡವಾದ ಪುಷ್ಪಕವನ್ನು ಹತ್ತಿದನು. ಆಗ ಜಯಘೋಷಗಳಾದವು. ನಾನಾವಿಧವಾದ ವಾದ್ಯಗಳು ಧ್ವನಿಮಾಡಿದವು. ನಾಲ್ಕು ದಿಕ್ಕುಗಳನ್ನೂ ತನ್ನ ಕಾಂತಿಯಿಂದ ಪ್ರಕಾಶಗೊಳಿಸುವ ಆ ಪುಷ್ಪಕವಿಮಾನವು ಶ್ರೀ ರಾಮನ ಅಪ್ಪಣೆಯಂತೆ ಪೂರ್ವದಿಕ್ಕಿಗೆ ತೆರಳಿತು. ಸೂರ್ಯನಂತೆ ಹೊಳೆಯುವ ಆ ವಿಮಾನವು ಅತಿ ವೇಗವಾಗಿ ಪ್ರಯಾಣಮಾಡುತ್ತಿದ್ದುದರಿಂದ ಅದರ ಸುತ್ತಲೂ ಇರುವ ಘಂಟೆಗಳು ಧ್ವನಿಮಾಡಲಾರಂಭಿಸಿದವು. ಸಮಸ್ತ ಸ್ತ್ರೀ-ಪುರುಷರೂ ಭೂಲೋಕದಲ್ಲಿರುವ ಅನೇಕ ವಿಚಿತ್ರಗಳನ್ನು ನೋಡುತ್ತ ಆನಂದದಿಂದ ವಿಮಾನದಲ್ಲಿ ಕುಳಿತಿದ್ದರು. ಶ್ರೀ ರಾಮನ ರಥಗಳಿಗೆ ನಾಲ್ಕು ಧ್ವಜಗಳಿದ್ದವು; ಯಾಕೆಂದರೆ, ಆತನು ಬಾಲ್ಯದಲ್ಲಿ ತಂದೆಯ ರಥದ ಮೇಲೆ ಕುಳಿತುಕೊಳ್ಳುತ್ತಿದ್ದನಾದ್ದರಿಂದ ಕೋವಿದಾರಧ್ವಜವು ಆತನ ರಥದಲ್ಲಿ ಕಂಗೊಳಿಸುತ್ತಿತ್ತು; ಮತ್ತು ಆತನು ಬಾಣಾಂಕಿತವಾದ ರಥದಲ್ಲಿ ಕುಳಿತು ತಾಟಕೆಯನ್ನು ನಾಶಮಾಡಿದ್ದರಿಂದ ಆತನ ರಥದಲ್ಲಿ ಬಾಣಧ್ವಜವೊಂದು ಪ್ರಕಾಶಿಸುತ್ತಿತ್ತು. ಇಂದ್ರನ ವಜ್ರಧ್ವಜವನ್ನು ರಾವಣನು ಯುದ್ಧದಲ್ಲಿ ಮುರಿದಾಗ ಶ್ರೀ ರಾಮನು ಆಂಜನೇಯನನ್ನು ಧ್ವಜಸ್ಥಾನದಲ್ಲಿ ಕುಳ್ಳಿರಿಸಿಕೊಂಡದ್ದರಿಂದ ರಥದಲ್ಲಿ ಕಪಿಧ್ವಜವೊಂದು ದೇದೀಪ್ಯಮಾನವಾಗಿತ್ತು. ಯುದ್ಧದಲ್ಲಿ ರಾವಣನನ್ನು ಕೊಲ್ಲ

ಬೇಕೆಂದು ಶ್ರೀ ರಾಮನು ತನ್ನ ವಾಹನವಾದ ಗರುಡನನ್ನು ಆರೋಹಣ ಮಾಡಿದ್ದರಿಂದ ಆತನ ರಥದಲ್ಲಿ ಗರುಡಧ್ವಜವು ಥಳಥಳಿಸುತ್ತಿತ್ತು. ಶ್ರೀ ರಾಮನಿಗೆ ಸುಮಂತ್ರ, ಚಿತ್ರರಥ, ವಿಜಯ, ದಾರುಕರೆಂಬ ನಾಲ್ಕು ಜನ ಸಾರಥಿಗಳಿದ್ದರು.

## ೨ನೆಯ ಪ್ರಕರಣ.

## ಶ್ರೀರಾಮನ ತೀರ್ಥ-ಯಾತ್ರಾವಿವರಣವು.

ಇತ್ತಲಾ ರಘುನಾಥನು ಸ್ವಲ್ಪ ಪಶ್ಚಿಮಕ್ಕೆ ಪ್ರಯಾಣಮಾಡಿ, ಪ್ರಯಾಗಕ್ಷೇತ್ರವನ್ನು ಸೇರಿದನು. ಕ್ಷೇತ್ರಕ್ಕೆ ಸ್ವಲ್ಪ ದೂರದಲ್ಲಿ ಪುಷ್ಪಕವನ್ನು ನಿಲ್ಲಿಸಿ, ಪರಿವಾರ ಸಮೇತನಾಗಿ ಮೆಲ್ಲಮೆಲ್ಲನೆ ತ್ರಿವೇಣೀ ಸಂಗಮಕ್ಕೆ ತೆರಳಿದನು. ಅಲ್ಲಿ ನಾರಿಕೇಳ ಸಹಿತವಾದ ವಾಯನದಾನಗಳನ್ನು ಬ್ರಾಹ್ಮಣೋತ್ತಮರಿಗೆ ಸಮರ್ಪಿಸಿ, ಭೂಷಣಗಳಿಂದ ಸಹಿತವಾದ ಸೀತಾದೇವಿಯ ಹೆರಳನ್ನು ನಾಲ್ಕು ಬೆರಳಿನಷ್ಟು ಮಾತ್ರ ಕತ್ತರಿಸಿ ದಾನಮಾಡಿದನು. ಲಕ್ಷ್ಮಣನೇ ಮೊದಲಾದ ತಮ್ಮಂದಿರೊಡನೆ ಶ್ರೀ ರಾಮನು ವಪನಾದಿ ತೀರ್ಥಕೃತ್ಯಗಳನ್ನು ನೆರವೇರಿಸಿ, ಆ ದಿವಸ ಉಪವಾಸಮಾಡಿದನು. ಮರುದಿವಸ ಪಿತೃಶ್ರಾದ್ಧ, ತರ್ಪಣಾದಿಗಳನ್ನು ನೆರವೇರಿಸಿದನು. ಮಾಘಮಾಸ ಒಂದು ತಿಂಗಳು ಕಳೆಯುವ ವರೆಗೂ ಶ್ರೀ ರಾಮಾದಿಗಳು ಅದೇ ಕ್ಷೇತ್ರದಲ್ಲಿ ವಾಸವಾಗಿದ್ದರು. ಅವರು ಅಷ್ಟತೀರ್ಥಗಳಿಗೆ ಹೋಗಿ, ಅಲ್ಲಿ ದಾನಧರ್ಮಗಳನ್ನು ನೆರವೇರಿಸಿ, ಅಕ್ಷಯವಟದ ದರ್ಶನ ಮಾಡಿದವರಾಗಿ, ತ್ರಿವೇಣೀ ಸಂಗಮಕ್ಕೆ ಬಂದು ಎಲ್ಲರೂ ಪೂಜಾದಿಗಳನ್ನು ನಡೆಸಿದರು. ಬಳಿಕ ಶ್ರೀ ರಾಮನು ಸಾವಿರಾರು ಕುಂಭಗಳಲ್ಲಿ ಗಂಗೆಯನ್ನು ತುಂಬಿ ವಿಮಾನದಲ್ಲಿರಿಸಿಕೊಂಡು, ತೀರ್ಥವಾಸಿಗಳಾದ ಸಮಸ್ತ ಬ್ರಾಹ್ಮಣರ ಅಪ್ಪಣೆಯನ್ನು ಪಡೆದು ವಿಮಾನಾರೂಢನಾಗಿ ವಿಂಧ್ಯಾಚಲಕ್ಕೆ ಪ್ರಯಾಣಮಾಡಿದನು.

ಅಲ್ಲಿ ದುರ್ಗಾಪೂಜೆ, ತೀರ್ಥವಿಧಿ, ಬ್ರಾಹ್ಮಣಭೋಜನ, ದಾನ ಇವುಗಳನ್ನೆಲ್ಲ ಮುಗಿಸಿಕೊಂಡು, ಸಮಸ್ತರೊಡನೆ ಶ್ರೀ ರಾಮನು ಪುಷ್ಪಕಾರೂಢನಾಗಿ ಕಾಶೀಕ್ಷೇತ್ರಕ್ಕೆ ಪ್ರಯಾಣ ಮಾಡಿದನು. ಆಕಾಶಮಾರ್ಗದಿಂದ ಬರುತ್ತಿರುವ ದೇದೀಪ್ಯಮಾನವಾದ ಪುಷ್ಪಕವನ್ನು ನೋಡಿ ಕಾಶೀವಾಸಿಗಳು, ಚಂದ್ರನೆಂತಲೂ, ಸೂರ್ಯನೆಂತಲೂ, ದೊಡ್ಡ ನಕ್ಷತ್ರವೆಂತಲೂ ತಮತಮಗೆ ತೋಚಿದಂತೆ ಮಾತು

ನಾಡುತ್ತಿದ್ದರು. ಯಾವನೋ ಒಬ್ಬನು, ಇದನ್ನು ನೋಡಿದರೆ ನಾರದಮುನಿಗಳಿ ರಬಹುದೆಂದನು. ಮತ್ತೊಬ್ಬನು, ಇದು ಅಗ್ನೇಯಾಸ್ತ್ರವಿರಬಹುದೆಂದು ಊಹಿಸಿದನು. ಇದು ಸಹಸ್ರ ಹೆಡೆಗಳುಳ್ಳ ಆದಿಶೇಷನೇ ಇರಬಹುದೆಂದು ಇನ್ನೊಬ್ಬನು ತರ್ಕಿಸಿದನು. ವಿವೇಕಶೂನ್ಯನಾದ ಒಬ್ಬ ಮನುಷ್ಯನು ಇದೇನೋ ಅನರ್ಥವು ಒದಗಿತೆಂದು ಅಳಲಾರಂಭಿಸಿದನು. ಇಷ್ಟರಲ್ಲಿ ಶ್ರೀ ರಾಮನು ಬರುವ ವೃತ್ತಾಂತವು ಎಲ್ಲರಿಗೂ ತಿಳಿಯಿತು. ಆಗ ಎಲ್ಲರಿಗೂ ಪರಮಾನಂದವಾಯಿತು.

ಶ್ರೀ ರಾಮನು ಮೊದಲು, ವಿನಾಯಕನ ಪೂಜೆಮಾಡಿ, ಬಳಿಕ ವಿಶ್ವೇಶ್ವರನ ದರ್ಶನ ಮಾಡಿಕೊಂಡನು. ಅನಂತರ ಸ್ನಾನ, ಕ್ಷೌರ, ಶ್ರಾದ್ಧ, ವಸ್ತ್ರದಾನ, ಅನ್ನದಾನ ಇವುಗಳನ್ನೆಲ್ಲ ಯಥಾವಿಧಿಯಾಗಿ ಮುಗಿಸಿದನು. ಪಂಚತೀರ್ಥ-ಯಾತ್ರೆಯನ್ನು ನೆರವೇರಿಸಿದನು. ಸರ್ವಲಿಂಗ, ಗಣಪತಿ, ಭೈರವ, ಯೋಗಿನಿ, ದುರ್ಗಿಯರು, ಮಾಯಾ, ಅಷ್ಟದಿಕ್ಪಾಲಕರು, ನವಗ್ರಹ ಈವರೇ ಮೊದಲಾದ ಸಮಸ್ತ ತೀರ್ಥದೇವತೆಗಳನ್ನೂ ಪೂಜಿಸಿದನು. ಕ್ಷೇತ್ರಪ್ರದಕ್ಷಿಣೆ, ಪಂಚಕ್ರೋಶ ಇವೇ ಮೊದಲಾದ ಸಮಸ್ತ ಯಾತ್ರೆಗಳನ್ನೂ ನೆರವೇರಿಸಿದನು. ಶ್ರೀ ರಾಮನು ಕಾಶಿಯ ವಾಯುವ್ಯಭಾಗದಲ್ಲಿ ರಾಮೇಶ್ವರನೆಂಬ ಒಂದು ಮಹಾಲಿಂಗವನ್ನು ಸ್ಥಾಪಿಸಿದನು. ಇಷ್ಟರಲ್ಲಿ ಶ್ರೀ ರಾಮನು ತೀರ್ಥ-ಯಾತ್ರೆಗೆ ಹೊರಟಿರುವನೆಂಬ ವರ್ತಮಾನವನ್ನು ಕೇಳಿ ಮಾರುತಿಯು ಶ್ರೀ ರಾಮನ ಸನ್ನಿಧಿಗೆ ಬಂದನು. ಆತನು ಸೀತಾರಾಮರಿಗೆ ವಂದನೆಮಾಡಿ ಭಾಗೀರಥಿಯಲ್ಲಿ ಸ್ನಾನವಾಡಿ, ಅಲ್ಲಿ ಶಂಕರತೀರ್ಥವೆಂಬ ಒಂದು ಪ್ರಸಿದ್ಧವಾದ ಪುಷ್ಕರಣಿಯನ್ನು ನಿರ್ಮಾಣಮಾಡಿದನು; ಮತ್ತು ಗಂಗಾತೀರದಲ್ಲಿ ಪಾಷಾಣದ ಘಂಟೆಯನ್ನು ಕಟ್ಟಿದನು. ಶ್ರೀ ರಾಮನು ಪಂಚಗಂಗೆಯಲ್ಲಿ ಕಾರ್ತಿಕಮಾಸವು ಮುಗಿಯುವ ವರೆಗೂ ಸ್ನಾನಮಾಡಿದನು. ಬ್ರಹ್ಮಚಾರಿ, ಭಿಕ್ಷು ಇವರುಗಳಿಗೆ ಅನ್ನಸತ್ರಗಳನ್ನು ನಿರ್ಮಾಣ ಮಾಡಿಸಿದನು. ನಾನಾಪ್ರಕಾರಗಳಾದ ದಾನಗಳನ್ನು ನಡೆಸಿದನು. ಅನೇಕ ವ್ರತಗಳನ್ನು ಮಾಡಿದನು. ಈ ರೀತಿಯಾಗಿ ಒಂದು ವರ್ಷದ ವರೆಗೂ ಶ್ರೀ ರಾಮನು ಪರಿವಾರಸಮೇತನಾಗಿ ಕಾಶೀಕ್ಷೇತ್ರದಲ್ಲೇ ವಾಸವಾಗಿದ್ದನು. ಬಳಿಕ ಅನ್ನಪೂರ್ಣೆ, ದಂಡಪಾಣಿ ಮೊದಲಾದ ದೇವತೆಗಳಿಗೆ ನಮಸ್ಕರಿಸಿ ಶ್ರೀ ರಾಮನು ಸಕಲ ಜನರೊಡನೆ ಪುಷ್ಪಕಾರೋಹಣ ಮಾಡಿದನು.

ಮುಂದೆ ಕರ್ಮನಾಶಾ ನದಿಯಲ್ಲಿ ಸ್ನಾನಮಾಡಿ, ಶ್ರೀ ರಾಮನು ದಾನ-ಧರ್ಮಾದಿಗಳನ್ನು ಮುಗಿಸಿಕೊಂಡು, ಪರಿವಾರದೊಡನೆ ಸ್ವರ್ಣಭದ್ರಾ ಸಂಗಮಕ್ಕೆ ಪ್ರಯಾಣಮಾಡಿದನು. ಶ್ರೀ ರಾಮನು ಎಲ್ಲ ಪುಣ್ಯಕ್ಷೇತ್ರಗಳಲ್ಲೂ ಮಿತಿಯಿಲ್ಲದ

ದಾನ-ಧರ್ಮಗಳನ್ನು ಮಾಡುತ್ತಿದ್ದನು. ಆ ಮಹಾನುಭಾವನು ಯಾವ ತೀರ್ಥಗಳ ಸನ್ನಿಧಿಗೆ ಹೋಗಿದ್ದನೋ, ಆ ತೀರ್ಥಗಳು ಲೋಕಪ್ರಸಿದ್ಧವಾದವು. ಅವುಗಳ ನ್ನು ಎಣಿಸಲು, ಆದಿಶೇಷನೂ ಶಕ್ತನಾಗಲಾರನು. ಆ ಸ್ವರ್ಣಭದ್ರಾ ತೀರ್ಥದ ಲ್ಲಿ ಸ್ನಾನಮಾಡಿ ಶ್ರೀರಾಮನು ಸಮಸ್ತ ತೀರ್ಥಕೃತ್ಯಗಳನ್ನೂ ನೆರವೇರಿಸಿದನು. ಅಲ್ಲಿ ಆತನು ತನ್ನ ಹಾಗು ತನ್ನ ತಮ್ಮಂದಿರ ಹೆಸರುಗಳಿಂದ ನಾಲ್ಕು, ಸೀತೆಯ ಹೆಸರಿನಿಂದ ಒಂದು, ಆಂಜನೇಯನ ಹೆಸರಿನಿಂದ ಒಂದು, ಈ ರೀತಿಯಾಗಿ ಆರು ತೀರ್ಥಗಳನ್ನು ಪ್ರಖ್ಯಾತಿಗೊಳಿಸಿದನು. ಮುಂದೆ ಶ್ರೀ ರಾಮನು ಗಂಡಕೀನದಿಗೆ ಪ್ರಯಾಣಮಾಡಿದನು. ಆ ಮಹಾನದಿಯಲ್ಲಿ ಸ್ನಾನಮಾಡಿ, ನೇಪಾಳದಲ್ಲಿರುವ ಮಹಾಕ್ಷೇತ್ರವನ್ನು ನೋಡುತ್ತ ಹರಿಹರ ಕ್ಷೇತ್ರಕ್ಕೆ ಬಂದನು. ಮುಂದೆ ಆತನು ಭಾಗೀರಥಿಯ ದಕ್ಷಿಣದಲ್ಲಿರುವ ವೈಕುಂಠಪುರ, ಜರಾಸಂಧಪುರ, ಗಯಾ ಮೊದ ಲಾದ ಕ್ಷೇತ್ರಗಳಿಗೆ ಪ್ರಯಾಣಮಾಡಿದನು. ಗಯೆಯಲ್ಲಿ ವಿಷ್ಣುಪಾದಕ್ಕೆ ನಮ ಸ್ಕರಿಸುವದಕ್ಕಾಗಿ ಶ್ರೀ ರಾಮನು ವಿಮಾನದಿಂದ ಇಳಿದನು. ಆತನು ತನ್ನ ಈ ಕಾರ್ಯವನ್ನು ಮುಗಿಸಿಕೊಂಡು ಬರುವಷ್ಟರಲ್ಲಿ, ಸೀತೆಯು ಪರಿವಾರಸಹಿತ ಫಲ್ಗು ನದೀ ತೀರಕ್ಕೆ ಪ್ರಯಾಣಮಾಡಿದ್ದಳು.

ಆ ನದಿಯಲ್ಲಿ ಸ್ನಾನಮಾಡಿ ಸೀತಾದೇವಿಯು ಮಳಲಿನ ಮೇಲೆ ಗೌರೀಪೂಜೆ ಮಾಡುತ್ತ ಸ್ವಲ್ಪ ಹೊತ್ತು ಕುಳಿತಿದ್ದಳು. ಬಳಿಕ ಜಾನಕಿಗೆ 'ಆ ಮಳಲು ಭೂಮಿ ಯಲ್ಲಿ ತಮ್ಮ ಪೂರ್ವಜರಿಗೆ ಪಿಂಡದಾನ ಮಾಡಬೇಕೆಂದು' ಇಚ್ಛೆಯುಂಟಾಯಿತು. ಆಕೆಯು ಒಂದು ಮಳಲಿನ ಪಿಂಡವನ್ನು ಮಾಡಿ ಭೂಮಿಯಲ್ಲಿಟ್ಟಳು. ಅಷ್ಟರಲ್ಲಿ ಭೂಮಿಯಿಂದ ದಶರಥನ ಒಂದು ಹಸ್ತವು ಮೇಲಕ್ಕೆ ಬಂದು ಆ ಪಿಂಡವನ್ನು ಸ್ವೀ ಕರಿಸಿತು. ಇದನ್ನು ನೋಡಿ ಸೀತೆಗೆ ಪರಮಾಶ್ಚರ್ಯವಾಯಿತು. ಅನಂತರ ಸೀ ತೆಯು ಮತ್ತೊಂದು ಪಿಂಡವನ್ನು ಭೂಮಿಯ ಮೇಲಿರಿಸಿದಳು. ಇದೇ ಮೇರೆಗೆ ಸೀತಾದೇವಿಯು ಭೂಮಿಯಮೇಲಿರಿಸಿದ ನೂರಾಎಂಟು ಪಿಂಡಗಳನ್ನೂ ದಶರಥನು ತನ್ನ ಹಸ್ತಗಳಿಂದ ಸ್ವೀಕಾರ ಮಾಡಿದನು. ಈ ಸಮಾಚಾರವನ್ನು ಸೀತಾದೇವಿ ಯು ಯಾರಿಗೂ ತಿಳಿಸಲಿಲ್ಲ. ವಿಷ್ಣುಪಾದಕ್ಕೆ ನಮಸ್ಕರಿಸಿ ಬಂದ ಶ್ರೀ ರಾಮನು ಆ ನದಿಯಲ್ಲಿ ಸ್ನಾನ ಮಾಡಿ ತನ್ನ ನಿತ್ಯಕೃತ್ಯಗಳನ್ನು ನೆರವೇರಿಸಿ, ಆ ಮಹಾ ಕ್ಷೇತ್ರ ದಲ್ಲಿ ಪಿಂಡದಾನ ಮಾಡಿದನು. ಆಗ ದಶರಥನು ಪಿಂಡವನ್ನು ಹಸ್ತದಿಂದ ಸ್ವೀಕಾರ ಮಾಡಲಿಲ್ಲ. ಇದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಶ್ರೀ ರಾಮನು 'ಇದಕ್ಕೆ ಕಾರಣವೇನಿರಬಹುದು' ಎಂದು ಲಕ್ಷ್ಮಣನನ್ನು ಪ್ರಶ್ನೆ ಮಾಡಿದನು. ಸೌಮಿ

ತ್ರಿಯು 'ಅಣ್ಣಾ, ತಾವು ಚಿತ್ರಕೂಟದ ಬಳಿಯಲ್ಲಿರುವ ತಮಸಾನದೀತೀರದಲ್ಲಿ, ಪಿಂಡದಾನ ಮಾಡಿದ ಸಮಯದಲ್ಲಿ ದಶರಥನು ತನ್ನ ಹಸ್ತದಿಂದಲೇ ಪಿಂಡಗಳನ್ನು ಸ್ವೀಕರಿಸಿದ್ದನ್ನು ನಾನು ನೋಡಿದ್ದೆನು. ಈಗ ಹೀಗಾಗಲು ಕಾರಣವೇನೋ ನನಗೆ ತಿಳಿಯದು. ಸೀತಾದೇವಿಯನ್ನು ಕೇಳಿದರೆ ಈ ವಿಷಯವು ಗೊತ್ತಾಗಬಹುದು' ಎಂದನು. ಆಗ ಶ್ರೀ ರಾಮನು ಜಾನಕಿಗೆ ಈ ವೃತ್ತಾಂತವನ್ನು ತಿಳಿಸಿದನು. ಸೀತೆಯು ಭಯಪಡುತ್ತ ಹಿಂದೆ ನಡೆದ ಸಂಗತಿಯನ್ನು ವಿಸ್ತಾರವಾಗಿ ಹೇಳಿದಳು. ಶ್ರೀ ರಾಮನು 'ಪ್ರಿಯಳೆ, ದಶರಥನು ಪಿಂಡಗಳನ್ನು ಸ್ವೀಕರಿಸಿದುದಕ್ಕೆ ಸಾಕ್ಷಿ ಯಾರಿರುವರು?' ಎಂದನು. ಆಗ ಜಾನಕಿಯು, 'ಮಾವಿನಮರ, ಪಲ್ಗುನದಿ, ಕ್ಷೇತ್ರವಾಸಿಗಳು, ಬೆಕ್ಕು, ಪಕ್ಷಿಗಳು, ಆಕಳು, ಅಶ್ವತ್ಥ, ಸೂರ್ಯ ಇವರೇ ಈ ವಿಷಯದಲ್ಲಿ ಸಾಕ್ಷಿಗಳಾಗಿರುವರು' ಎಂದು ಪ್ರತ್ಯುತ್ತರ ಕೊಟ್ಟಳು. ಶ್ರೀ ರಾಮನು ಅವೆಲ್ಲವನ್ನೂ ವಿಚಾರಿಸುವಲ್ಲಿ ಸೂರ್ಯನ ಹೊರತಾಗಿ ಮತ್ತೆಯಾರೂ ಶ್ರೀ ರಾಮನ ಹೆದರಿಕೆಯಿಂದ ಆ ಸಂಗತಿಯನ್ನು ಒಪ್ಪಿಕೊಳ್ಳಲಿಲ್ಲ. ಸೂರ್ಯನು ಮಾತ್ರ 'ಎಲೈ ಶ್ರೀ ರಾಮನೇ, ನಿನ್ನ ತಂದೆಯು ತೃಪ್ತನಾಗಿರುವನು. ಈ ವಿಷಯದಲ್ಲಿ ನೀನು ಸ್ವಲ್ಪವಾದರೂ ಅನುಮಾನ ಹೊಂದಲು ಕೆಲಸವಿಲ್ಲ' ಎಂದು ಹೇಳಿದನು. ಬಳಿಕ ಸೀತಾದೇವಿಯು ಸುಳ್ಳು ಹೇಳಿದ ಆ ಸಮಸ್ತ ಪ್ರಾಣಿಗಳಿಗೂ ಶಾಪವನ್ನಿತ್ತಳು. ಆದ ಕಾರಣ ಅಲ್ಲಿಯ ಆಮ್ರವೃಕ್ಷಗಳು ಫಲರಹಿತಗಳಾದವು. ತೀರ್ಥವಾಸಿಗಳು ಯಾವಾಗಲೂ ಅತೃಪ್ತರಾದರು. ಬೆಕ್ಕಿನ ಬಾಲವು ಅಸ್ಪೃಶ್ಯವಾಯಿತು. ಆಕಳಿನ ಮುಖವು ಅಮಂಗಲವಾಯಿತು. ಅಶ್ವತ್ಥನ ಎಲೆಗಳು ಯಾವಾಗಲೂ ಚಂಚಲಗಳಾದವು. ಅಷ್ಟರಲ್ಲಿ ದಶರಥನು ವಿಮಾನಾರೂಢನಾಗಿ ಅಲ್ಲಿಗೆ ಬಂದು 'ಎಲೈ ಶ್ರೀ ರಾಮನೇ, ಸೀತಾದೇವಿಯಿಂದ ಪಿಂಡಗಳನ್ನು ಸ್ವೀಕರಿಸಿ ನಾನು ನರಕದಿಂದ ಮುಕ್ತನಾದೆನು. ಈಗಲೇ ನಾನು ಧನ್ಯನಾಗಿರುವೆನು.' ಎಂದನು. ಆದರೂ ಶ್ರೀ ರಾಮನಿಗೆ ದಶರಥನು ಲೋಕಶಿಕ್ಷಣೆಗಾಗಿ ಗಯೆಯಲ್ಲಿ ಪಿತೃಶ್ರಾದ್ಧವನ್ನು ಮಾಡು' ಎಂದು ಆಜ್ಞಾಪಿಸಿದನು.

ಆಗ ಶ್ರೀ ರಾಮನು 'ತಂದೆಯೇ, ತಾವು ಇಷ್ಟು ಆತುರದಿಂದ ವಾಲುಕಾಪಿಂಡಗಳನ್ನು ಯಾಕೆ ಸ್ವೀಕಾರ ಮಾಡಿದಿರಿ?' ಎಂದು ಪ್ರಶ್ನಮಾಡಿದನು. ದಶರಥನು 'ರಾಮಚಂದ್ರನೇ, ಕೇಳು. ಗಯೆಯಲ್ಲಿ ಶ್ರಾದ್ಧ ಮಾಡುವಾಗ ಅನೇಕ ವಿಘ್ನಗಳು ಬರುವವು. ಆದಕಾರಣ ನಾನು ಜಾಗರೂಕನಾಗಿ ಆ ಪಿಂಡಗಳನ್ನು ಸ್ವೀಕರಿಸಿದೆನು' ಎಂದು ಹೇಳಿ ಗುಪ್ತನಾದನು. ಬಳಿಕ ಶ್ರೀ ರಾಮನು ಗಯೆಯಲ್ಲಿ ಯಥಾ

ವಿಧಿಯಿಂದ ಪಿತೃಶ್ರಾದ್ಧವನ್ನು ನೆರವೇರಿಸಿ, ಗದಾಧರನ ಪೂಜೆಯೇ ಮೊದಲಾದ ತೀರ್ಥಕೃತ್ಯಗಳನ್ನು ನಡೆಸಿದನು. ಗಯೆಯಲ್ಲಿ ರಘುನಾಥನು ಮೂರು ತಿಂಗಳವರೆಗೂ ವಾಸವಾಗಿದ್ದನು. ಅಲ್ಲಿ ಅನೇಕ ದಾನ-ಧರ್ಮಗಳಿಂದ ಬ್ರಾಹ್ಮಣರನ್ನು ಸಂತೋಷಗೊಳಿಸಿ, ಶ್ರೀ ರಾಮನು ಪುಷ್ಪಕವನ್ನೇರಿ ಪೂರ್ವದಿಕ್ಕಿಗೆ ಪ್ರಯಾಣ ಮಾಡಿದನು. ಫಲ್ಗುನದೀತೀರದಲ್ಲಿ ಶ್ರೀ ರಾಮನ ವಾಸವಾಗಿತ್ತಾದ್ದರಿಂದ ಆ ಸ್ಥಳವನ್ನು ಬ್ರಾಹ್ಮಣರು 'ರಾಮಗಯೆ' ಎಂದು ಕರೆದರು. ಬಳಿಕ ಶ್ರೀ ರಾಮನು ಗಂಗಾ ಫಲ್ಗುನದಿಗಳ ಸಂಗಮಕ್ಕೆ ಬಂದು, ಅಲ್ಲಿ ಸ್ವಲ್ಪ ವಿಶ್ರಾಂತಿಯನ್ನು ಹೊಂದಿ, ಮುದ್ಗಲ ಮಹರ್ಷಿಗಳ ಹೊಸ ಆಶ್ರಮವಿದ್ದಲ್ಲಿಗೆ ಪ್ರಯಾಣಮಾಡಿದನು. ಆ ಸ್ಥಳದಲ್ಲಿ ಗಂಗೆಯು ಉತ್ತರದಿಕ್ಕಿಗೆ ಪ್ರವಹಿಸುವದು. ಅದೇ ಸ್ಥಳದಲ್ಲಿ ಸೀತಾದೇವಿಯು ಮುಂದೆ ಭೂಪ್ರವೇಶ ಮಾಡತಕ್ಕವಳಿರುವಳು. ಅಲ್ಲಿ ಶ್ರೀ ರಾಮನು ಒಂದು ಶ್ರೇಷ್ಠವಾದ ತೀರ್ಥವನ್ನು ಸ್ಥಾಪಿಸಿದನು. ಅನಂತರ ಉತ್ತರವಾಹಿನಿಯ ಕಡೆಗೆ ನಡೆದನು. ಅಲ್ಲಿ ಶ್ರೀ ರಾಮನ ಹೆಸರಿನಿಂದ ಒಂದು ನಗರಿಯೂ, ಬಿಲ್ವೇಶ್ವರನೆಂಬ ಒಂದು ಲಿಂಗವೂ ಪ್ರಸಿದ್ಧವಾಗಿರುವವು. ರಾವಣನಿಂದ ಸ್ಥಾಪಿಸಲ್ಪಟ್ಟ ವೈಜನಾಥ ಲಿಂಗವನ್ನು ಪೂಜಿಸಿ, ಶ್ರೀ ರಾಮನು ದಾರಿಯಲ್ಲಿರುವ ಸೃಷ್ಟಿಯ ವಿಶೇಷಗಳನ್ನು ನೋಡುತ್ತ ನೂರಾರು ಗಾವುದಗಳ ವರೆಗೂ ಪ್ರಯಾಣ ಮಾಡಿದನು. ಅಲ್ಲಿ ಸಹಸ್ರ ಮುಖಗಳಿಂದ ಸಮುದ್ರಕ್ಕೆ ಸೇರುವ ಭಾಗೀರಥಿಯನ್ನು ನೋಡಿ, ಪೂರ್ವಸಾಗರತೀರದಲ್ಲಿ ನಾನಾ ದಾನ-ಧರ್ಮಗಳನ್ನೂ ಮಾಡಿದನು. ಅನಂತರ ನಾನಾ ವಿಧವಾದ ಪರ್ವತಗಳು, ನದಿಗಳು, ದೇವಾಲಯಗಳು ಇವುಗನ್ನು ನೋಡುತ್ತ ಗೋದಾತೀರದಲ್ಲಿ ರಾಮಗಿರಿ ಎಂಬ ಪರ್ವತವನ್ನು ಪ್ರಸಿದ್ಧಿಗೊಳಿಸಿ ಶ್ರೀ ರಾಮನು ಗೋದಾನದಿಯು ಸಾಗರಕ್ಕೆ ಸೇರುವ ಸ್ಥಳಕ್ಕೆ ಪ್ರಯಾಣಮಾಡಿದನು. ಆ ಸಂಗಮದಲ್ಲಿ ಸ್ನಾನಮಾಡಿ ಆತನು ಪರಿವಾರ ಸಹಿತ ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡಿದನು. ಆಗ ಆಯಾದೇಶದ ರಾಜರು ರಾಜಾಧಿರಾಜನಾದ ಶ್ರೀ ರಾಮನಿಗೆ ಕಾಣಿಕೆಗಳನ್ನು ಸಮರ್ಪಿಸಿ, ಆತನೊಡನೆ ತಾವೂ ತೀರ್ಥ-ಯಾತ್ರೆಗೆ ಪ್ರಯಾಣ ಮಾಡಿದರು.

ಮುಂದೆ ಶ್ರೀರಾಮನು ಮತ್ಸ್ಯತೀರ್ಥವನ್ನು ದಾಟಿ, ಕೃಷ್ಣಾನದಿಯಲ್ಲಿ ಸ್ನಾನಮಾಡಿ, ಮನೋಹರಗಳಾದ ಉಪವನಗಳನ್ನು ನೋಡುತ್ತಾ ನೃಸಿಂಹ ತೀರ್ಥಕ್ಕೆ ಬಂದನು. ಮತ್ತು ಕೃಷ್ಣಾ-ಸಾಗರ ಸಂಗಮಕ್ಕೆ ಬಂದು, ಅಲ್ಲಿ ಸ್ನಾನಮಾಡಿ, ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಶ್ರೀಶೈಲಪರ್ವತಕ್ಕೆ ಪ್ರಯಾಣಮಾಡಿದನು.

ಅಲ್ಲಿರುವ ನೀಲಗಂಗಾತೀರ್ಥದಲ್ಲಿ ಸ್ನಾನಮಾಡಿ, ಮಲ್ಲಿಕಾರ್ಜುನನ ದರ್ಶನಮಾಡಿಕೊಂಡು, ಆ ಪರ್ವತದ ಮನೋಜ್ಞಸಕರಗಳಾದ ಶಿಖರಗಳನ್ನು ನೋಡುತ್ತಾ ಬ್ರಹ್ಮಕುಂಡಕ್ಕೆ ಬಂದನು. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿ, ಮುಂದಕ್ಕೆ ಪ್ರಯಾಣ ಮಾಡಲುದ್ಯುಕ್ತನಾದನು. ಆ ಪ್ರಾಂತದ ರಾಜರೆಲ್ಲರೂ ಶ್ರೀ ರಾಮನಿಗೆ ಕಾಣಿಕೆಗಳನ್ನರ್ಪಿಸಿ, ಆತನೊಡನೆ ತೀರ್ಥಯಾತ್ರೆಗಾಗಿ ಹೊರಟರು. ಭೀಮಕುಂಡ, ನಿವೃತ್ತಿಸಂಗಮ, ತುಂಗಭದ್ರಾ ಸಂಗಮ, ಭವನಾಶಿನೀ ಇವುಗಳಲ್ಲಿ ಸ್ನಾನಮಾಡಿ, ಅಹೋಬಲ ದರ್ಶನ, ನಾರಸಿಂಹಮೂರ್ತಿಯ ಪೂಜನ, ಇವುಗಳನ್ನು ಮುಗಿಸಿಕೊಂಡು, ಪುಷ್ಪಗಿರಿಗೆ ಪ್ರಯಾಣಮಾಡಿದನು. ಅಲ್ಲಿಯ ಪುಣ್ಯತೀರ್ಥಗಳನ್ನೂ, ಪಂಪಾಕ್ಷೇತ್ರವನ್ನೂ ನೋಡುತ್ತಾ ಕಿಷ್ಕಿಂಧೆಗೆ ಪ್ರಯಾಣಮಾಡಿದನು. ಸುಗ್ರೀವನು ಕುಲದ್ಧೈವವೆಯಾದ ಶ್ರೀ ರಾಮನನ್ನು ಪೂಜಿಸಿದನು. ಬಳಿಕ ರಾಮಚಂದ್ರನು ಆ ವಾನರೇಶ್ವರನನ್ನು ಜೊತೆಗೆ ಕರೆದುಕೊಂಡು ಪ್ರಹರ್ಷಣ ಪರ್ವತಕ್ಕೆ ಹೋದನು. ಅಲ್ಲಿ ಸೀತಾದೇವಿಗೆ ತಾನು ಪೂರ್ವದಲ್ಲಿ ವಿಹಾರಮಾಡುತ್ತಿದ್ದ ಗುಹೆಯನ್ನು ತೋರಿಸಿದನು. ಮತ್ತು ಷಣ್ಮುಖನೇ ಮೊದಲಾದ ಸಮಸ್ತ ದೇವತೆಗಳನ್ನು ಪೂಜಿಸಿ, ಶೇಷಾಚಲಕ್ಕೆ ಬಂದನು. ಅಲ್ಲಿರುವ ಪುಷ್ಕರಿಣೀತೀರ್ಥದಲ್ಲಿ ಸ್ನಾನಮಾಡಿ, ಸುವರ್ಣಮುಖರೀ-ತೀರದಲ್ಲಿರುವ ಕಾಳಹಸ್ತೀಶ್ವರನನ್ನು ಪೂಜಿಸಿ ಕಾಂಚೀ ಕ್ಷೇತ್ರಕ್ಕೆ ಪ್ರಯಾಣಮಾಡಿದನು. ಆ ಕ್ಷೇತ್ರದಲ್ಲಿ ಪ್ರಸಿದ್ಧನಾದ ಏಕಾಂಬರೇಶ್ವರನನ್ನು ಪೂಜಿಸಿ, ಮೀನಾಕ್ಷಿಯ ದರ್ಶನ ಮಾಡಿಕೊಂಡು, ವೇಗವತಿಯಲ್ಲಿ ಸ್ನಾನಮಾಡಿ, ವರದರಾಜನಿಗೆ ನಮಸ್ಕಾರಮಾಡಿ, ಪಕ್ಷಿತೀರ್ಥಕ್ಕೆ ತೆರಳಿದನು. ಆ ನಂತರ ಅಲ್ಲಿರುವ ಪುಣ್ಯಕ್ಷೇತ್ರಗಳಲ್ಲಿ ಸ್ನಾನಮಾಡಿ, ತ್ರಿವಿಕ್ರಮನಿಗೆ ನಮಸ್ಕರಿಸಿ, ಅರುಣಾಚಲಕ್ಕೆ ನಡೆದನು. ಆ ಪರ್ವತವನ್ನು ನೋಡಿ ಪರಮ ಹರ್ಷಗೊಂಡು, ಶ್ರೀರಾಮನು, ಮಣಿಮುಕ್ತಾನದಿ, ವೃದ್ಧಾಚಲ, ವಟಪಾಲ, ಶ್ರೀಮುಷ್ಟಿ, ಯಜ್ಞಪ್ರವಾಹ, ಚಿದಂಬರ, ಕಾವೇರಿ, ಸಿಂಹಕ್ಷೇತ್ರ, ಭವ್ಯವನ, ವೇದಾರಣ್ಯ, ವೃದ್ಧಕಾವೇರಿ, ಕುಂಭಕೋಣ, ಶ್ರೀನಿವಾಸ, ವೃಂದಾವನ, ನಾರನಾಥ, ಶ್ರೀವತ್ಸಪ್ರಯಾಗ ಮಾಧವ, ಅಭ್ರಶಿರಸ, ಕಮಲಾಲಯ, ತ್ಯಾಗೇಶ್ವರ, ಗಯಾತೀರ್ಥ, ಅಭಯದೇಶ್ವರ, ನವಪಾಷಾಣತೀರ್ಥ, ದೇವೀಪತ್ತನ, ವೇತಾಲತೀರ್ಥ, ರಾಮತೀರ್ಥ, ಲಕ್ಷ್ಮಣತೀರ್ಥ, ಅಗ್ನಿಕುಂಡ, ಧನುಷ್ಕೋಟಿ, ಜಟಾಯುತೀರ್ಥ, ವಿಶ್ವನಾಥ ಇವೇ ಮೊದಲಾದ ಸಮಸ್ತ ಕ್ಷೇತ್ರಗಳಿಗೂ ಹೋಗಿ, ಅಲ್ಲಿ ಸ್ನಾನಮಾಡಿ, ದಾನ-ಧರ್ಮಾದಿಗಳಿಂದ ಬ್ರಾಹ್ಮಣರನ್ನು ತೃಪ್ತಿಗೊಳಿಸಿದನು. ಅನಂತರ ಶ್ರೀ ರಾಮನು

ರಾಮೇಶ್ವರಕ್ಕೆ ಹೋಗಿ ರಾಮಲಿಂಗನಿಗೆ ಗಂಗಾಜಲಗಳಿಂದ ಸ್ನಾನಮಾಡಿಸಿ, ಧನುಷ್ಕೋಟಿಯಲ್ಲಿ ಸ್ನಾನಮಾಡಿದನು. ಮತ್ತು ಅಲ್ಲಿ ಕೋಟಿತೀರ್ಥವೆಂಬ ಒಂದು ಪುಣ್ಯಕ್ಷೇತ್ರವನ್ನು ನಿರ್ಮಾಣಮಾಡಿದನು. ಅನಂತರ ಸೇತುಮಾಧವನ ದರ್ಶನಮಾಡಿಕೊಂಡು ವಿಮಾನಾರೂಢನಾಗಿ ಸಮಸ್ತ ಪರಿವಾರದೊಡನೆ ಆಕಾಶ ಮಾರ್ಗದಿಂದ ಪ್ರಯಾಣಬೆಳಸಿದನು.

ಅನಂತರ ಶ್ರೀ ರಾಮನು ತಾಂಬ್ರಪರ್ಣೀ ಸಂಗಮದಲ್ಲಿ ಸ್ನಾನದಾನಾದಿಗಳನ್ನು ನೆರವೇರಿಸಿ, ಸಮುದ್ರತೀರದಲ್ಲಿರುವ ಸ್ಕಂಧನನ್ನು ಪೂಜಿಸಿ, ತಾಂಬ್ರಪರ್ಣೀ ತೀರದಲ್ಲಿರುವ ಪುಣ್ಯಕ್ಷೇತ್ರಗಳನ್ನು ನೋಡುತ್ತ ಪ್ರಯಾಣಮಾಡಿದನು. ಮಾರ್ಗದಲ್ಲಿ ತೋತಾದ್ರಿ, ಕನ್ಯಾಕುಮಾರಿ ಈ ಪ್ರದೇಶಗಳು ಸಂಧಿಸಿದವು. ಕನ್ಯಾಕುಮಾರಿಯು ಒಬ್ಬ ಬ್ರಾಹ್ಮಣನ ಮಗಳು. ಈಕೆಯು ಮೊದಲು ನಾಗರಾಜನ ಪುತ್ರಿಯಾಗಿದ್ದಳು. ಅಹಿರಾವಣನ ಮನೆಯಲ್ಲಿರುವಾಗ ಈ ತರುಣಿಗೆ ಶ್ರೀ ರಾಮನ ದರ್ಶನವಾಗಿತ್ತು. ಆ ಬ್ರಾಹ್ಮಣಪುತ್ರಿಯು ಶ್ರೀ ರಾಮನನ್ನು ನೋಡಿ 'ಎಲೈ ರಾಮಭದ್ರನೇ, ನಾನು ಬಹಳ ದಿವಸಗಳಿಂದಲೂ ವ್ರತಸ್ಥಳಾಗಿರುವೆನು. ನನ್ನ ತಂದೆಯು ನನ್ನನ್ನು ಸುರೇಂದ್ರನಿಗೆ ಲಗ್ನಮಾಡಿಕೊಡಲು ನಿಶ್ಚಯಿಸಿ ಆತನನ್ನು ತನ್ನ ಗ್ರಾಮಕ್ಕೆ ಕರೆತಂದಿರುವನು. ಆದರೆ ನೀನು ತೀರ್ಥಯಾತ್ರೆಗೆ ಬಂದ ವರ್ತಮಾನವನ್ನು ಕೇಳಿ, ನಿನ್ನನ್ನೇ ಪಾಣಿಗ್ರಹಣ ಮಾಡುವೆನೆಂದು ಹಟಹಿಡಿದು ನಾನು ಇಲ್ಲಿಗೆ ಬಂದಿರುವೆನು. ನನ್ನ ವಿಷಯದಲ್ಲಿ ತಂದೆಗೆ ಬಹಳ ಕೋಪವುಂಟಾಗಿರುವದು. ನನ್ನ ವಿವಾಹಕ್ಕಾಗಿ ಏನೇನು ಸಾಹಿತ್ಯಗಳನ್ನು ನನ್ನ ತಾಯಿಯು ಮಾಡಿಟ್ಟಿದ್ದಳೋ, ಅವೆಲ್ಲವನ್ನೂ ನನ್ನ ತಂದೆಯು ಕೋಪದಿಂದ ಸಮುದ್ರಲ್ಲಿ ಸೆದಿರುವನು. ಎಲೈ ದಯಾನಿಧಿಯೇ, ನೋಡು, ತರಂಗಗಳಲ್ಲಿ ಆ ಸಾಮಗ್ರಿಗಳು ತೇಲಿ ಬರುತ್ತಲಿವೆ. ನೀನು ದೀನಳಾದ ನನಗೆ ದರ್ಶನಕೊಟ್ಟೆ. ಇನ್ನು ತಡವೇಕೆ? ದಾಸಿಯಾದ ನನ್ನನ್ನು ಉದ್ಧಾರಮಾಡು.' ಎಂದು ಪ್ರಾರ್ಥಿಸಿದಳು. ಈ ಮಾತುಗಳನ್ನು ಕೇಳಿ ಶ್ರೀರಾಮನು 'ಎಲೈ ತರುಣಿಯೆ, ನಾನು ಈ ರಾಮಾವತಾರದಲ್ಲಿ ಏಕಪತ್ನೀವ್ರತವನ್ನು ಹೊಂದಿರುವೆನು. ಮುಂದೆ ಕೃಷ್ಣಾವತಾರದಲ್ಲಿ ನಿನ್ನ ಪಾಣಿಗ್ರಹಣ ಮಾಡುವೆನು.' ಎಂದು ಮಧುರವಾಣಿಗಳಿಂದ ಸಮಾಧಾನ ಪಡಿಸಿದನು. ಆ ಬ್ರಾಹ್ಮಣ ಪುತ್ರಿಯೂ ಕೂಡ ಸತ್ಯಸಂಧನಾದ ಶ್ರೀರಾಮನ ಮಾತುಗಳನ್ನು ಶಿರಸಾವಹಿಸಿ, ತಪಸ್ಸು ಮಾಡಲು ಹೊರಟು ಹೋದಳು. ಮುಂದೆ ಈ ಕನ್ಯಾಮಣಿಯೇ ತನ್ನ ತಪೋಬಲದಿಂದ ಜಾಂಬುವಂತನ ಮಗಳಾಗಿ ಹುಟ್ಟಿ, ಶ್ರೀಕೃಷ್ಣನ ಪಾಣಿಗ್ರಹಣ ಮಾಡುವಳು.

ಶ್ರೀ ರಾಮನು ತಾಂಬ್ರಪರ್ಣೀ ತೀರದಲ್ಲಿರುವ ಶೇಷಶಾಯಿಯಾದ ಅನಂತಪದ್ಮನಾಭನ ದರ್ಶನಮಾಡಿದನು. ಆ ಸ್ಥಳದಲ್ಲಿ ತಾಂಬ್ರಪರ್ಣಿಯು ಪಶ್ಚಿಮ ವಾಹಿನಿಯಾಗಿರುವದು. ಅಲ್ಲಿರುವ ಪದ್ಮತೀರ್ಥ, ಧರ್ಮಾಧಮನ ಸರೋವರ ಇವೇ ಮೊದಲಾದ ಸಮಸ್ತ ತೀರ್ಥಗಳಲ್ಲೂ ಸ್ನಾನಮಾಡಿ, ಶ್ರೀ ರಾಮನು ಸ್ತ್ರೀ ರಾಜ್ಯವನ್ನು ನೋಡಿದನು. ಆದರೆ ರಘುನಾಥನು ಲೋಕಶಿಕ್ಷಣೆಗಾಗಿ ತಾನು ಅಲ್ಲಿಗೆ ಹೋಗಲಿಲ್ಲ. ಅಲ್ಲಿಂದ ಹಿಂತಿರುಗಿ ಘೃತಮಾಲಾ, ಸಿಂಧು, ಗಜೇಂದ್ರ-ಮೋಕ್ಷ, ಮೈರಾಳ ಇವೇ ಮೊದಲಾದ ಕ್ಷೇತ್ರ-ತೀರ್ಥಗಳನ್ನು ನೋಡುತ್ತ, ಚಂದ್ರಕುಮಾರಪರ್ವತ, ದಕ್ಷಿಣಕಾಶೀ, ಕಾಶೀವಿಶ್ವನಾಥ, ಚಂಪಕಾರಣ್ಯ, ಚಿತ್ರಗಂಗಾ, ಹರಿಹರ, ವೇಗಪುರಿ, ಸೌಂದರೇಶ್ವರ, ಮೀನಾಕ್ಷೀ, ಕಾವೇರೀತೀರದಲ್ಲಿರುವ ರಂಗನಾಥ, ಶ್ರೀರಂಗಶಯನ, ಜಂಬುಕೇಶ್ವರ, ಹೈಮವತೀನದಿ, ಶಾಲಿಗ್ರಾಮ, ರಾಮನಾಥಪುರ, ಕುಮಾರಧಾರಾ, ಸುಬ್ರಹ್ಮಣ್ಯ, ಉಡುಪೀಕೃಷ್ಣ, ಶೃಂಗಗಿರ್ಯಾಶ್ರಮ, ಶಾರದಾದೇವಿ, ಕೋಟೇಶ್ವರ, ಹರಿಹರೇಶ್ವರ, ಮೂಕಾಂಬಿಕೆ, ಧಾರೇಶ್ವರ, ಗೌರೇಶ್ವರ, ಸರ್ಪೇಶ್ವರ, ಗೋಕರ್ಣದಲ್ಲಿರುವ ಮಹಾಬಲೇಶ್ವರ, ಹರಿಹರೇಶ್ವರ, ಪರಶುರಾಮ, ಭೀಮೇಶ್ವರ, ಧೌಮ, ಮಹಾಬಲ, ಕೋಲಾಪುರ, ಕೃಷ್ಣಾಸಂಗಮ, ಘಟಪ್ರಭಾ, ಮಲ್ಲಾರಿ, ನಾರಸಿಂಹ, ಪಾಂಡುರಂಗ, ಈ ಮಹಾಕ್ಷೇತ್ರಗಳನ್ನೂ ಮಹಿತರಾದ ದೇವತೆಗಳನ್ನೂ ನೋಡುತ್ತ ಅಲ್ಲಲ್ಲಿ ಸ್ನಾನ, ಪೂಜಾ, ದಾನಾದಿಗಳಿಂದ ದೇವಬ್ರಾಹ್ಮಣರನ್ನು ತೃಪ್ತಿಗೊಳಿಸುತ್ತ ದಾರಿಯಲ್ಲಿ ಜನಸ್ಥಾನವನ್ನು ನೋಡಿ ಪೂರ್ವವೃತ್ತಾಂತಗಳನ್ನೆಲ್ಲ ಜ್ಞಾಪಕಮಾಡಿಕೊಳ್ಳುತ್ತ, ಸೀತಾದೇವಿಯೊಡನೆ ಸಂಭಾಷಣೆಮಾಡುತ್ತ ಶ್ರೀ ರಾಮನು ಪ್ರಯಾಣಮಾಡಿದನು. ದಕ್ಷಿಣ ದೇಶವಾಸಿಗಳಾದ ಸಮಸ್ತರಾಜರೂ ಶ್ರೀ ರಾಮನಿಗೆ ಕಾಣಿಕೆಗಳನ್ನಿತ್ತು ಆತನೊಡನೆ ತಾವೂ ಯಾತ್ರೆಗೆ ಹೊರಟರು.

ವಿಷ್ಣುದಾಸನು 'ಗುರುಗಳೇ, ವಾಹನಾರೂಢರಾಗಿ ಯಾತ್ರೆಗೆ ಹೋಗಬಾರದೆಂದು ಶಾಸ್ತ್ರವಿದೆಯಷ್ಟೆ? ಶ್ರೀ ರಾಮನು ಪುಷ್ಪಕಾರೂಢನಾಗಿ ತೀರ್ಥ-ಯಾತ್ರೆಯನ್ನು ಹ್ಯಾಗೆ ಮಾಡಿದನು? ಈ ಸಂಶಯವನ್ನು ನನಗೆ ಪರಿಹರಿಸಿರಿ' ಎಂದನು. ಆಗ ಗುರುಗಳಾದ ರಾಮದಾಸರು 'ಎಲೈ ಶಿಷ್ಯನೆ, ಕೇಳು; ಮಂಡಲೇಶ್ವರರು, ರಾಜರು, ದ್ವೀಪಾಧಿಪತಿಗಳು, ಮಠಾಧಿಪತಿಗಳು, ವಿವಾಹಮಾಡಿಕೊಳ್ಳಲು ಸಿದ್ಧರಾದವರು ಇವರುಗಳು ಕಾಲುನಡಿಗೆಗಳಿಂದ ಪ್ರಯಾಣಮಾಡಲಾಗದೆಂದು ಶಾಸ್ತ್ರನಿಯಮವಿರುವದು. ಶ್ರೀ ರಾಮನ ಆಜ್ಞೆಯಂತೆ ಸಕಲಪರಿವಾರದ

ವರೂ ವಿಮಾನಾರೋಹಣ ಮಾಡಿದರು. ಆದ್ದರಿಂದ ನಿನಗೆ ಸಂಶಯು ಬರಲು ಏನೂ ಕಾರಣವಿಲ್ಲ' ಇರಲಿ. ಶ್ರೀ ರಾಮನು ಸೀತಾಸಮೇತನಾಗಿ ಸಪ್ತಶೃಂಗಪರ್ವತದಲ್ಲಿ ಎರಡು ಮೂರು ದಿವಸಗಳ ವರೆಗೆ ವಾಸಮಾಡಿ, ಅಗಸ್ತ್ಯರ ಆಶ್ರಮ, ಸುತೀಕ್ಷ್ಣರ ಆಶ್ರಮ, ಜೈಲಪುರ, ಘೃಣೇಶ್ವರ, ಇವೇ ಮೊದಲಾದ ಸಮಸ್ತ ಪುಣ್ಯಸ್ಥಳಗಳಲ್ಲೂ ಸಂಚರಿಸುತ್ತ, ದೇವಗಿರಿಯಿಂದ ವಿರಜಾಕ್ಷೇತ್ರಕ್ಕೆ ಬಂದು ಸೇರಿದನು. ಅಲ್ಲಿ ಸ್ನಾನಮಾಡಿ, ದೇವತಾವಂದನೆ, ದಾನ-ಧರ್ಮ, ಇವುಗಳನ್ನು ನೆರವೇರಿಸಿ, ಸೀತಾದೇವಿಯೊಡನೆ ಮಾತನಾಡುತ್ತ ನಾರಸಿಂಹಕ್ಷೇತ್ರಕ್ಕೆ ಬಂದು ಸೇರಿದನು. ಅಲ್ಲಿ ಯಥಾವಿಧಿಯಾಗಿ ಸ್ನಾನ ಮಾಡಿದನು. ಮುಂದೆ ನರ್ಮದಾತೀರಕ್ಕೆ ಪ್ರಯಾಣಮಾಡಿ ಓಂಕಾರೇಶ್ವರನನ್ನು ಪೂಜಿಸಿದನು. ಅಲ್ಲಿಂದ ಪಶ್ಚಿಮದಿಕ್ಕಿಗೆ ಪ್ರಯಾಣ ಮಾಡಲು ನಿಶ್ಚಯಿಸಿದನು. ತಾಪೀ, ನರ್ಮದಾ, ಮೊದಲಾದ ತೀರ್ಥಗಳಲ್ಲಿ ಸ್ನಾನಮಾಡಿ, ಪ್ರಭಾಸತೀರ್ಥಕ್ಕೆ ಬಂದು ಸೇರಿದನು. ಪಂಚಸರಸ್ವತಿಯಲ್ಲಿ ಸ್ನಾನಮಾಡಿ, ಸೌರಾಷ್ಟ್ರ ದೇಶದಲ್ಲಿರುವ ಸೋಮನಾಥನ ದರ್ಶನ ತೆಗೆದುಕೊಂಡು, ನಾಭ್ರಮತೀತೀರ್ಥದ ಮಾರ್ಗವಾಗಿ, ಅನೇಕ ರಮಣೀಯವಾದ ಸ್ಥಳಗಳನ್ನು ನೋಡುತ್ತ ಶಂಖೋದ್ಧಾರಕ್ಕೆ ಬಂದು ಸೇರಿದನು.

ಶ್ರೀ ರಾಮನು ಗೋಮತಿಯಲ್ಲಿ ಸ್ನಾನಮಾಡಿ, ದ್ವಾರವತಿಯನ್ನು ಪ್ರವೇಶಿಸಿದನು. ಈ ನಗರಿಯು ಅನಾದಿ ಸಿದ್ಧವಾಗಿದ್ದು ಪುಣ್ಯನಗರಿಗಳಲ್ಲಿ ಗಣನೆಗೆ ಬಂದದೆ. ಈ ರೀತಿಯಾಗಿ ಪಶ್ಚಿಮದಿಕ್ಕಿನಲ್ಲಿ ತೀರ್ಥಗಳನ್ನು ನೋಡುತ್ತ ಅಲ್ಲಲ್ಲಿರುವ ಸಮಸ್ತ ರಾಜರಿಂದ ಸತ್ಕಾರಗಳನ್ನು ಸ್ವೀಕರಿಸುತ್ತ ಸಮಸ್ತ ಪರಿವಾರದೊಡನೆ ಶ್ರೀ ರಾಮನು ಪುಷ್ಕರತೀರ್ಥಕ್ಕೆ ಬಂದು ಸೇರಿದನು. ವಿಮಾನದಲ್ಲಿ ಪ್ರತಿನಿತ್ಯವೂ ಕೋಟ್ಯಾವಧಿ ಬ್ರಾಹ್ಮಣರ ಭೋಜನವಾಗುತ್ತಿತ್ತು. ಪೂರ್ವ ಪಶ್ಚಿಮ ದಕ್ಷಿಣ ಈ ಮೂರು ದಿಕ್ಕುಗಳ ರಾಜರೂ ಪರಿವಾರಸಮೇತರಾಗಿ ಆ ಪುಷ್ಪಕವಿಮಾನದಲ್ಲಿ ಕುಳಿತಿದ್ದರು. ಅವರೆಲ್ಲರಿಗೂ ಶ್ರೀ ರಾಮನು ಅತಿಥಿಗಳಂತೆ ಸತ್ಕಾರ ಮಾಡಿದನು. ಅಷ್ಟು ಜನಗಳಿಗೂ ಒಂದೇ ಕಡೆ ಪಾಕಶಾಲೆಯುಏರ್ಪಟ್ಟಿತ್ತು. ರಾಜಾಧಿರಾಜರಿಗೆ ಬೇರೆ, ಶ್ರೀ ರಾಮಾದಿಗಳಿಗೆ ಬೇರೆ, ಬಡಜನರಿಗೆ ಬೇರೆ, ಈ ರೀತಿಯಾಗಿ ಭೇದಭಾವಗಳು ಅಲ್ಲಿ ಯಾವ ವಿಷಯಗಳಲ್ಲೂ ಇರಲಿಲ್ಲ. ಆ ಕಾಲದಲ್ಲಿ ಯಾವ ಪದಾರ್ಥಗಳಿಗೂ ಕೊರತೆ ಇರಲಿಲ್ಲ. ಜನಗಳು ನೃತ್ಯ, ಗೀತ, ವಾದ್ಯ ಮೊದಲಾದ ಕಲಾಕೌಶಲ್ಯಗಳಿಂದ ಯಾವಾಗಲೂ ಪರಮಾನಂದವನ್ನು ಹೊಂದುತ್ತಿದ್ದರು. ಈ ಗಲಾಟೆಯಲ್ಲಿ ಯಾರಿಗೂ ನಿದ್ರೆಗೇ ಮಾ

ರ್ಗವಿರಲಿಲ್ಲ. ಎಲ್ಲಾ ಕೆಲಸಗಳೂ ಒಂದೇ ವಿಮಾನದಲ್ಲಿ ನಡೆಯ ಬೇಕಾದ್ದರಿಂದ ಅದು ಒಂದು ದೊಡ್ಡ ನಗರದಂತೆ ಶಬ್ದಾಯಮಾನವಾಗಿತ್ತು. ವಿಮಾನವು ಸಮೀಪಕ್ಕೆ ಬಂದ ಹಾಗೆಲ್ಲ ಪುಷ್ಕರ ಕ್ಷೇತ್ರವಾಸಿಗಳಾದ ಜನರು ಭಯಭರಿತರಾದರು. ಕೆಲವರು ಇದು ದೇವಕನ್ಯೆಯರ ವಾಹನವಿರಬಹುದೆಂದರು. ಮತ್ತೆ ಕೆಲವರು ವಿಷ್ಣು ವಿಮಾನವಿರಬಹುದೆಂದರು. ಹೀಗೆ ಜನರು ನಾನಾ ವಿಧವಾಗಿ ತರ್ಕಮಾಡುತ್ತಿರಲು, ಪುಷ್ಪಕವಿಮಾನವು ಜನರ ದೃಗ್ಗೋಚರವಾಯಿತು. ಬಳಿಕ ಶ್ರೀ ರಾಮನನ್ನು ನೋಡಿ ಆ ಜನರು ಪರಮಾನಂದಭರಿತರಾದರು. ತೀರ್ಥವಾಸಿಗಳಾದ ಸಮಸ್ತ ಬ್ರಾಹ್ಮಣರನ್ನೂ ಶ್ರೀ ರಾಮನು ವಂದನೆ ಮಾಡಿ, ಕುಶಲ ಪ್ರಶ್ನೆ ಮಾಡಿದನು. ಮತ್ತು ಆ ತೀರ್ಥದಲ್ಲಿ ಸ್ನಾನ ಮಾಡಿ, ನಿತ್ಯ-ನಿಯಮಗಳನ್ನಾಚರಿಸಿ, ಕಾಶಿಯಲ್ಲಿ ಮಾಡಿದ ದಾನಕ್ಕಿಂತಲೂ ಹತ್ತರಷ್ಟು ಅಧಿಕವಾಗಿ ದಾನ-ಧರ್ಮಗಳಿಂದ ಸಮಸ್ತರನ್ನೂ ಸಂತೋಷಗೊಳಿಸಿದನು. ಈ ರೀತಿ ಪಶ್ಚಿಮದಿಕ್ಕಿನ ಯಾತ್ರೆಯನ್ನು ಮುಗಿಸಿ, ಬ್ರಾಹ್ಮಣರ ಅನುಮತಿಯನ್ನು ಪಡೆದು ಉತ್ತರದಿಕ್ಕಿಗೆ ಪ್ರಯಾಣ ಮಾಡಲು ಶ್ರೀ ರಾಮನು ಪುಷ್ಪಕವಿಮಾನಕ್ಕೆ ಅಪ್ಪಣೆ ಮಾಡಿದನು.

ಶ್ರೀರಾಮನು ವಿಮಾನದಲ್ಲಿ ಕುಳಿತು ಉತ್ತರದಿಕ್ಕಿನಲ್ಲಿಯ ಪರ್ವತ, ತೀರ್ಥ, ಜ್ವಾಲಾಮುಖಿ ಇವೇಮೊದಲಾದ ಸ್ಥಳಗಳನ್ನು ನೋಡುತ್ತಾ ತಪ್ತಮಣಿಕರ್ಣಿಕೆಗೆ ಬಂದು ಸೇರಿದನು. ಕರತೋಯಾ ನದಿಯಲ್ಲಿ ಸ್ನಾನಮಾಡಿ, ಮುಂದೆ ಪ್ರಯಾಣಮಾಡುವದು ಶಾಸ್ತ್ರ ಸಮ್ಮತವಲ್ಲವೆಂದು ತಿಳಿದು ಹಿಂತಿರುಗಿದನು. ಕರತೋಯಾನದಿಯನ್ನು ದಾಟಿ ಮುಂದೆ ಹೋಗುವದು, ತಾನುಮಾಡಿದ ಪುಣ್ಯಾ ಕೃತ್ಯಗಳನ್ನು ತಾನೇಸ್ತೋತ್ರ ಮಾಡಿಕೊಳ್ಳುವದು ಇವೇಮೊದಲಾದ ಕೆಲವು ಸಂಗತಿಗಳು ಶಾಸ್ತ್ರದಲ್ಲಿ ನಿಷೇಧಿಸಿರುವವು. ಆದ್ದರಿಂದ ಶ್ರೀ ರಾಮನು ಅಲಕನಂದೆಯ ಮಾರ್ಗವಾಗಿ ದೇವಪ್ರಯಾಗಕ್ಕೆ ಪ್ರಯಾಣಮಾಡಿ, ಅಲ್ಲಿಂದ ನರನಾರಾಯಣರನ್ನು ನೋಡಲು ಮುಂದೆ ಪ್ರಯಾಣಮಾಡಿದನು. ಬದರಿಕಾಶ್ರಮದಲ್ಲಿ ಕೇದಾರೇಶ್ವರನನ್ನು ಪೂಜಿಸಿ, ದೇವಗಂಧರ್ವರಿಗೆ ವಾಸಸ್ಥಾನವಾದ ಹಿಮಾಲಯ ಪರ್ವತದ ಮಾರ್ಗವಾಗಿ ಮಾನಸಸರೋವರಕ್ಕೆ ಹೊರಟನು. ಇದೇ ಸರೋವರದಿಂದ ಗಂಗಾ ಸರಯೂ ನದಿಗಳು ಉತ್ಪನ್ನವಾಗಿವೆ. ನಾನಾರೀತಿಯ ಹಂಸಪಕ್ಷಿಗಳು ಅಲ್ಲಿ ವಾಸವಾಗಿದ್ದವು. ಅವುಗಳ ರೂಪವು ಬಹಳ ಸುಂದರವಾಗಿತ್ತು. ಅದೇ ಸರೋವರದಲ್ಲಿ ದೇವತೆಗಳು ತಮ್ಮ ಸ್ತ್ರೀಯರೊಡನೆ ಜಲಕ್ರೀಡೆ ಮಾಡುವರು. ಶ್ರೀ ರಾಮನು ಆ ಸರೋವರದಲ್ಲಿ ಸ್ನಾನ ಮಾಡಿ, ಬಿಂದು ಸರಸ್ಸಿನಲ್ಲಿ ಸ್ನಾನದಾನಾದಿಗಳನ್ನು ಮುಗಿಸಿಕೊಂಡು, ಹಿಮಾಲ

ಯದ ಮೇಲೆ ಇರುವ ಬ್ರಹ್ಮಸಭೆಯನ್ನು ನೋಡಿ, ಸೀತಾಸಮೇತನಾಗಿ ಹಿಂತಿರು ಗಿದನು. ಇಂದ್ರಾದಿ ದೇವತೆಗಳು ವಿಮಾನಾರೂಢನಾದ, ಪರಿಜನಗಳಿಂದ ಯು ಕ್ತನಾದ ಶ್ರೀರಾಮನನ್ನು ನಮಸ್ಕರಿಸಿದರು. ಬ್ರಹ್ಮದೇವನು ಶ್ರೀರಾಮನನ್ನು ಆ ಲಿಂಗಿಸಿದನು. ಇಂದ್ರನೇ ಮೊದಲಾದ ದೇವತೆಗಳು ಶ್ರೀರಾಮನನ್ನು ಪೂಜಿಸಿ ದರು. ಬ್ರಹ್ಮನು ಸೀತಾ-ರಾಮರ ಪೂಜೆಮಾಡಿ ಆತನಿಗೆ ಸರ್ವಾರ್ಥಪ್ರದವಾದ ಕಾಮಧೇನುವನ್ನು ಸಮರ್ಪಿಸಿದನು. ಶ್ರೀರಾಮನು ಆ ಕಾಮಧೇನುವನ್ನು ವಿಮಾನ ದಲ್ಲಿ ಕುಳ್ಳಿರಿಸಿಕೊಂಡು, ದೇವತೆಗಳೊಡನೆ ಕೈಲಾಸಕ್ಕೆ ಪ್ರಯಾಣಮಾಡಿದನು.

ಶ್ರೀರಾಮನು ಬ್ರಹ್ಮಾದಿಗಳೊಡನೆ ಬರುತ್ತಿರುವನೆಂದು ವರ್ತಮಾನವನ್ನು ಕೇಳಿ ಶಂಕರನು, ಪಾರ್ವತೀಸಹಿತ ನಂದಿಯನ್ನೇರಿ ಶ್ರೀರಾಮನಿಗೆ ಎದುರಾಗಿ ಬಂದನು. ಶಂಕರನು ಬರುತ್ತಿರುವದನ್ನು ನೋಡಿ, ಶ್ರೀರಾಮನು ವಿಮಾನದಿಂದ ಇಳಿದು ಆತನ ನ್ನು ನಮಸ್ಕರಿಸಿದನು. ಬಳಿಕ ಪರಶಿವನು ಶ್ರೀ ರಾಮನನ್ನು ಆಲಿಂಗನೆ ಮಾಡಿ, ತನ್ನ ಮಂದಿರಕ್ಕೆ ಕರೆದುಕೊಂಡು ಹೋದನು ಪಾರ್ವತಿಯು ಸೀತಾದೇವಿಯನ್ನು ಅಭಿ ನಂದಿಸಿದಳು. ಸೀತಾದೇವಿಗೆ ನಾನಾ ವಿಧವಾದ ವಸ್ತ್ರಗಳು, ಆಭರಣಗಳು, ಇವುಗಳ ನ್ನು ಪಾರ್ವತಿಯು ಉಡುಗರೆಯಾಗಿ ಕೊಟ್ಟಳು. ಕರ್ಣಕುಂಡಲಗಳನ್ನೂ, ಚಂ ದ್ರಹಾರವನ್ನೂ ಆತ್ಮಾದರದಿಂದ ಸಮರ್ಪಿಸಿದಳು. ಬಳಿಕ ಶಂಕರನು—'ಎಲೈ ನಾರಾಯಣನೇ, ನಿನ್ನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನು. ಆತನಿಂದ ನಾನು ಉತ್ಪನ್ನನಾದೆನು. ಆದಕಾರಣ ನಾನು ನಿನಗೆ ಮೊಮ್ಮಗನಾಗಬೇಕು. ನಿನ್ನ ಸಹಾಯದಿಂದಲೇ ನಾನು ಸೃಷ್ಟಿಯನ್ನು ನಾಶಮಾಡುವೆನು. ಎಲೈ ಪರಮಾ ತ್ಮನೇ, ಇಂಥಾ ನೀನು ರಾವಣನ ವಧೆಯ ಭೀತಿಯಿಂದ ತೀರ್ಥಾಟನೆ ಮಾಡುವ ದನ್ನು ನೋಡಿದರೆ, ಆಶ್ಚರ್ಯವಾಗುವದು. ಆದರೆ ನೀನು ಲೋಕದ ಜನರಿಗೆ ನ ಡವಳಿಕೆಗಳನ್ನು ಉಪದೇಶಿಸಲು, ಈ ರೀತಿ ನಟಿಸುವೆ ಎಂದು ನಾನು ತಿಳಿಯುವೆನು. ಈ ರೀತಿಯಿಂದ ಶ್ರೀರಾಮನನ್ನು ಹೊಗಳಿ, ಪರಮೇಶ್ವರನು ಅಮೌಲ್ಯವಾದ ವ ಸ್ತ್ರಾಭರಣಗಳನ್ನೂ ನಾನಾವಿಧವಾದ ಭೋಜ್ಯ ಪದಾರ್ಥಗಳನ್ನೂ ಆತನಿಗೆ ಸಮ ರ್ಪಿಸಿದನು. ಮತ್ತು ಶ್ರೀರಾಮನ ಹೃದಯದಲ್ಲಿ ಚಿಂತಾಮಣಿಯೆಂಬ ಅಮೌಲ್ಯ ವಾದ ರತ್ನವನ್ನು ಧಾರಣ ಮಾಡಿಸಿ ಅಯೋಧ್ಯೆಗೆ ಪ್ರಯಾಣಮಾಡಲು ಅಪ್ಪಣೆಯ ನ್ನಿತ್ತನು. ಶ್ರೀರಾಮನ ಹೃದಯದಲ್ಲಿರುವ ದಿವ್ಯರತ್ನವನ್ನು ನೋಡಿ, ಸ್ವಲ್ಪಸ್ವಲ್ಪ ನಾಚಿಕೆಪಡುತ್ತಾ ಸೀತಾದೇವಿಯು—'ಎಲೈ ಪ್ರಾಣವಲ್ಲಭನೇ, ಈ ಕಾಮಧೇನು ನನನಿಗಿರಲಿ, ಈ ಚಿಂತಾಮಣಿಯು ತಮಗಿರಲಿ' ಎಂದು ಮೆಲ್ಲನೆ ಮಾತನಾಡಿದಳು.

ಸೀತೆಯು ಈ ಮಾತುಗಳನ್ನು ಕೇಳಿ ಶ್ರೀ ರಾಮನು ಬಹಳ ಸಂತೋಷಪಟ್ಟನು. ಮತ್ತು ಬ್ರಹ್ಮ, ಶಂಕರ, ಇಂದ್ರ ಇವರೇ ಮೊದಲಾದ ಸಮಸ್ತ ದೇವತೆಗಳಿಗೂ ಇನ್ನು ಸ್ವಲ್ಪ ದಿವಸಗಳಲ್ಲಿ ತಾನು ಮಾಡುವ ಅಶ್ವಮೇಧಯಾಗಕ್ಕಾಗಿ ಅಯೋಧ್ಯೆಗೆ ಬರುವಂತೆ ವಿಜ್ಞಾಪಿಸಿ, ಶ್ರೀ ರಾಮನು ವಿಮಾನಾರೂಢನಾಗಿ ಭಾಗೀರಥೀ ಮಾರ್ಗದಿಂದ ಹರಿದ್ವಾರಕ್ಕೆ ಬಂದನು. ಅಲ್ಲಿಂದ ಕುರುಕ್ಷೇತ್ರ, ಇಂದ್ರಪ್ರಸ್ಥ, ಮಧುವನ, ವೃಂದಾವನ, ಗೋಕುಲ, ಗೋವರ್ಧನ, ಸೀಪ್ರಾನದಿಯ ದಡದಲ್ಲಿರುವ ಅವಂತಿಕಾ ಇವೇ ಮೊದಲಾದ ಸಮಸ್ತ ಕ್ಷೇತ್ರಗಳನ್ನೂ ನೋಡಿಕೊಂಡು, ಮಹಾಕಾಳೇಶ್ವರನಿಗೆ ವಂದನೆಮಾಡಿ, ಹಸ್ತಿನಾಪುರಿಯನ್ನು ನೋಡಿ, ನಾಗರಕೂಪದ ದರ್ಶನವನ್ನು ಹೊಂದಿ ಗೋಮತಿಯಲ್ಲಿ ಸ್ನಾನಮಾಡಿ, ಶ್ರೀ ರಾಮನು ನೈಮಿಷಾರಣ್ಯಕ್ಕೆ ಬಂದು ಸೇರಿದನು.

ಅಲ್ಲಿ ಪೌರಾಣಿಕರಾದ ಸೂತರು, ಶಿಷ್ಯರೊಕ್ಕಗಳಾದ ಇತರ ಮಹರ್ಷಿಗಳು ಇವರುಗಳೆಲ್ಲರನ್ನೂ ಪೂಜಿಸಿ, ಬ್ರಹ್ಮಾವರ್ತಸರಸ್ಸಿನಲ್ಲಿ ಸ್ನಾನಮಾಡಿ, ತಮಸಾನದಿಯಿಂದ ಶ್ರೀರಾಮನು ಮುಂದೆ ಬರಲು ಅಯೋಧ್ಯೆಯು ಕಂಡಿತು. ಶ್ರೀ ರಾಮನು ಪರಿವಾರಸಮೇತ ವಿಮಾನಾರೂಢನಾಗಿ ನಗರಿಗೆ ಬರುತ್ತಿರುವನೆಂಬ ವರ್ತಮಾನವನ್ನು ಕೇಳಿ, ಸುಮಂತ್ರನು ಅಯೋಧ್ಯಾ ನಗರವನ್ನೆಲ್ಲ ಅಲಂಕಾರ ಮಾಡುವಂತೆ ದೂತರಿಗೆ ಅಜ್ಞಾಪಿಸಿದನು. ಮತ್ತು ಸುಮಂತ್ರನು ನಗರದಲ್ಲಿದ್ದ ಸೈನ್ಯವನ್ನು ಹಿಂದಿಟ್ಟುಕೊಂಡು, ಅತಿ ವಿನಯದಿಂದ ಶರಯೂ ನದಿಯನ್ನು ದಾಟಿ ಶ್ರೀ ರಾಮನ ವಿಮಾನಕ್ಕೆ ಎದುರಾಗಿ ಹೊರಟನು. ಶ್ರೀ ರಾಮನನ್ನು ನೋಡಿದೊಡನೆ ಸುಮಂತ್ರನು ಅತನಿಗೆ ಸಾಷ್ಟಾಂಗನಮಸ್ಕಾರ ಮಾಡಿ, ಸಮಸ್ತ ಪರಿಜನರ ಕ್ಷೇಮಲಾಭವನ್ನು ಅತಿ ವಿನಯದಿಂದ ವಿಚಾರಿಸಿದನು. ಬಳಿಕ ಅನೇಕ ವಾದ್ಯಘೋಷಗಳಾಗುತ್ತಿರಲು ವಿಮಾನವು ಮೆಲ್ಲಮೆಲ್ಲನೆ ರಾಮತೀರ್ಥದ ಬಳಿಗೆ ಬಂತು. ಕುಲಗುರುಗಳಾದ ವಸಿಷ್ಠರ ಅಜ್ಞೆಯಂತೆ ಶ್ರೀ ರಾಮನು ಆ ದಿವಸ ಉಪೋಷಣಮಾಡಿ ದಧಿಶ್ರಾದ್ಧಮಾಡಿದನು. ಆ ಕಾಲದಲ್ಲಿ ನಾನಾ ದಾನ-ಧರ್ಮಗಳು ನಡೆದವು. ಬಳಿಕ ಶ್ರೀ ರಾಮನು ಪುಷ್ಪಕವಿಮಾನದಲ್ಲಿ ಕುಳಿತು ಪರಿವಾರಸಮೇತನಾಗಿ ಸುಮುಹೂರ್ತದಲ್ಲಿ ಅಯೋಧ್ಯೆಯನ್ನು ಪ್ರವೇಶಿಸಿದನು. ಆ ಕಾಲದಲ್ಲಿ ನಾನಾ ವಾದ್ಯಗಳು ಧ್ವನಿಮಾಡಿದವು. ಪುಷ್ಪವೃಷ್ಟಿಯಾಯಿತು. ಶ್ರೀ ರಾಮನು ನಗರಿಯ ರಮ್ಯವಾದ ಸ್ಥಳಗಳನ್ನು ನೋಡುತ್ತಿರಲು ಸಭಾಮಂಟಪದ ಬಾಗಿಲಿಗೆ ಪುಷ್ಪಕವಿಮಾನವು ಹೋಗಿ ನಿಂತಿತು. ಆ ಕಾಲದಲ್ಲಿ ಸುಮಂತ್ರನ ಪತ್ನಿಯರು ಸೀತಾ-ರಾಮ

ರೇ ಮೊದಲಾದ ರಾಜಬಂಧುಗಳಿಗೆ ಪೊಸರುತನ್ನ, ಹಾಲು, ತುಪ್ಪ, ತೈಲ ಇನೇ ಮೊದಲಾದ ವಸ್ತುಗಳನ್ನು ದೃಷ್ಟಿಪರಿಹಾರಕ್ಕಾಗಿ ನಿವಾಳಿಸಿ ಬಿಸುಟವರು. ಮತ್ತು ಶ್ರೀ ರಾಮಚಂದ್ರ ಸೀತಾದೇವಿಯರಿಗೆ ನವರತ್ನದ ಆರತಿಗಳನ್ನೆತ್ತಿದರು. ಅನಂತರ ಶ್ರೀ ರಾಮನು ಸಭಾಮಂಟಪಕ್ಕೆ ದಯಮಾಡಿಸಿದನು. ಸೀತಾದೇವಿಯು ಪರಿಜನರೊಡನೆ ಅಂತಃಪುರವನ್ನು ಪ್ರವೇಶಮಾಡಿದಳು. ಶ್ರೀ ರಾಮನೊಡನೆ ಸಮಸ್ತ ರಾಜರು, ಮಂತ್ರಿಗಳು, ಸೇನಾಪತಿಗಳು, ನಾಗರಿಕರು, ಬ್ರಾಹ್ಮಣರು ಇವರೇ ಮೊದಲಾದ ಸಮಸ್ತ ಪರಿಜನರೂ ಸಭೆಯನ್ನು ಪ್ರವೇಶಿಸಿದರು. ಅನಂತರ ಶ್ರೀ ರಾಮನು ಸಮಸ್ತ ಬ್ರಾಹ್ಮಣರಿಗೂ ದಿವ್ಯಾನ್ನಗಳಿಂದ ಭೋಜನ ಮಾಡಿಸಿದನು. ತೃಪ್ತರಾದ ಎಲ್ಲ ಪರಿಜನರಿಗೂ ಐದು ದಿವಸಗಳ ವರೆಗೆ ವಿಶ್ರಾಂತಿಯನ್ನು ಹೊಂದಲು ಕಾಲಕೊಟ್ಟನು. ಮತ್ತು ತನ್ನ ಜೊತೆಗೆ ಬಂದ ಸಮಸ್ತ ರಾಜರಿಗೂ ಯಥಾಯೋಗ್ಯ ಮರ್ಯಾದೆಗಳಿಂದ ಸಂತೋಷವನ್ನುಂಟುಮಾಡಿ, ಶ್ರೀ ರಾಮನು ಕೈಜೋಡಿಸಿಕೊಂಡು 'ಓ ಸಾಮಂತರಾಜರೇ, ನೀವು ನನ್ನ ಯಜ್ಞದ ಕರೆದರೆಯನ್ನು ನೋಡಿದೊಡನೆ ಇಲ್ಲಿಗೆ ತಡಮಾಡದೆ ದಯಮಾಡಿಸಬೇಕು. ಈ ನನ್ನ ಮಾತನ್ನು ಯಾರೂ ಉದಾಸ ಮಾಡಬಾರದು' ಎಂದು ಪ್ರಾರ್ಥಿಸಿದನು. ಸಮಸ್ತ ರಾಜರೂ ಶ್ರೀ ರಾಮನ ಈ ವಿಜ್ಞಾಪನೆಯನ್ನು ಪರಮ ಸಂತೋಷದಿಂದ ಅಂಗೀಕರಿಸಿದರು. 'ಈ ದಿವಸ ಮೊದಲುಗೊಂಡು ನಾನು ಭೂಮಿಯಲ್ಲಿ ರಾಜ್ಯವಾಳುವ ವರೆಗೂ ಗೃಹಸ್ಥರು ಹೊರತಾಗಿ ಮತ್ತಾವ ವರ್ಣದವರೂ ತಮಗೋಸ್ಕರ ಬೇರೆ ಪಾಕಮಾಡಲು ಅಗತ್ಯವಿರುವದಿಲ್ಲ' ಎಂದು ತನ್ನ ಎಲ್ಲ ರಾಜ್ಯದಲ್ಲೂ ಪ್ರಸಿದ್ಧಿಪಡಿಸಿದನು. ಅಯೋಧ್ಯೆಯಲ್ಲಿ ವೇದಘೋಷವು ತಾನೇತಾನಾಗಿ ಕೇಳಲಾರಂಭಿಸಿತು. ಎಲ್ಲಿ ನೋಡಿದರೂ ಮಂಗಳ ಕಾರ್ಯಗಳೇ ನಡೆಯುತ್ತಿದ್ದವು. ಪುರಾಣ, ಹರಿಕಥಾ, ಕೀರ್ತನ ಇವುಗಳು ನಾಲ್ಕು ದಿಕ್ಕುಗಳಲ್ಲೂ ಹಬ್ಬಿದವು. ಶ್ರೀ ರಾಮನ ಕೃಪೆಯಿಂದ ಸಮಸ್ತ ಪ್ರಜೆಗಳೂ ಪರಮಾನಂದವನ್ನು ಹೊಂದಿದರು. ಎಲೈ ಪ್ರಿಯಶಿಷ್ಯನೇ, ನಿನಗೆ ಈ ಯಾತ್ರಾಕಾಂಡವನ್ನು ಹೇಳಿರುವೆನು. ಇದನ್ನು ಯಾರು ವಿಶ್ವಾಸದಿಂದ ಕೇಳುವರೋ, ಅವರು ತೀರ್ಥ-ಯಾತ್ರಾ ಫಲವನ್ನು ಹೊಂದುವರು. ಈ ಕಥಾಶ್ರವಣದಿಂದ ಸಮಸ್ತ ಇಷ್ಟಗಳೂ ಪೂರ್ಣವಾಗುವವು. ಮತ್ತು ಸಮಸ್ತ ಪಾತಕಗಳೂ ನಷ್ಟವಾಗುವವು. ನಿತ್ಯಸುಖವು ದೊರೆಯುವದು.

ಯಾತ್ರಾಕಾಂಡಸ್ಸಮಾಪ್ತಃ



# ಯಾಗಕಾಂಡ.

## ೧ನೆಯ ಪ್ರಕರಣ.

### ಯಜ್ಞಾರಂಭ.

ಒಂದಾನೊಂದು ದಿವಸ ಶ್ರೀರಾಮನು ಸಭಾಮಂಟಪದಲ್ಲಿ ಕುಳಿತು ಕುಲಗುರುಗಳಾದ ವಸಿಷ್ಠರನ್ನು ಕುರಿತು—'ಮಹಾಸ್ವಾಮಿ, ಕುಂಭೋದರನ ಮಾತಿನಂತೆ ನಾನು ತೀರ್ಥಯಾತ್ರೆಯನ್ನು ಮಾಡಿದೆನು. ಇನ್ನು ಅಶ್ವಮೇಧಯಾಗವನ್ನು ಮಾಡಬೇಕೆಂದಿರುವೆನು. ಆದ್ದರಿಂದ ಯಜ್ಞದ ಎಲ್ಲಾ ಸಾಮಗ್ರಿಗಳನ್ನು ತರಲು ಲಕ್ಷ್ಮಣನಿಗೆ ಆಜ್ಞಾಪಿಸಿರಿ. ಸುಮುಹೂರ್ತದಲ್ಲಿ ಭೂಪ್ರದಕ್ಷಿಣೆಗಾಗಿ ಶ್ಯಾಮಕರ್ಣದ ಅಶ್ವವನ್ನು ಬಿಡಬೇಕು. ಅದರ ರಕ್ಷಣೆಗಾಗಿ ಶತ್ರುಘ್ನನು ಸೇನಾಸಮೇತನಾಗಿ ಪ್ರಯಾಣ ಮಾಡಲಿ' ಎಂದು ಪ್ರಾರ್ಥಿಸಿದನು. ಅನಂತರ ವಸಿಷ್ಠರು ಆ ಸಭಾಮಂಟಪದಲ್ಲಿ ಕುಳಿತಿರುವ ಲಕ್ಷ್ಮಣನನ್ನು ನೋಡಿ 'ಎಲೈ ಸೌಮಿತ್ರಿಯೇ, ಇಂದಿಗೆ ಏಳನೇ ದಿವಸದಲ್ಲಿ ಸುಮುಹೂರ್ತವಿರುವದು. ಆ ದಿವಸವೇ ಅಶ್ವಮೇಧಯಾಗವು ಪ್ರಾರಂಭವಾಗಬೇಕು. ಅಷ್ಟರೊಳಗೆ ಯಜ್ಞಶಾಲೆಯನ್ನು ನಿರ್ಮಾಣಮಾಡಿಸು. ಸಮಿತ್, ಕುಶಗಳೇ ಮೊದಲಾದ ಸಮಸ್ತ ಸಾಧನಗಳನ್ನೂ ಯೋಗ್ಯರೀತಿಯಿಂದ ತೆಗೆದುಕೊಂಡು ಬರಬೇಕು' ಎಂದು ಆಜ್ಞೆಮಾಡಿದರು. ಕುದುರೆಯ ಹಣೆಗೆ ಕಟ್ಟುವ ಚಿನ್ನದ ತಗಡಿನಲ್ಲಿ ಬರೆಯುವ ಕ್ರಮಗಳನ್ನೂ ತಿಳಿಸಿದರು. ಜನಕನೇ ಮೊದಲಾದ ಕೆಲವು ರಾಜರ್ಷಿಗಳಿಗೆ ಮೊದಲೇ ಈ ವರ್ತಮಾನವನ್ನು ತಿಳಿಸಿ ಕರೆಸಲು ಉದ್ಯೋಗಮಾಡಿದರು. ಗುರುಗಳಾಜ್ಞೆಯಂತೆ ಲಕ್ಷ್ಮಣನು ಹತ್ತು ಯೋಜನ ವಿಸ್ತೀರ್ಣವುಳ್ಳ ಮಂಟಪವನ್ನು ಸಿದ್ಧಪಡಿಸಿ, ಅಲ್ಲಿ ಎಲ್ಲ ಯಜ್ಞದ ಸಾಮಗ್ರಿಗಳನ್ನೂ ಇರಿಸಿದನು. ಋಷಿಗಳು, ಮಂಡಲೇಶ್ವರರು, ಸದಸ್ಯರು, ಸ್ತ್ರೀಯರು ಇವರೆಲ್ಲರಿಗೂ ಯಜ್ಞಶಾಲೆಯಲ್ಲಿ ಕುಳಿತುಕೊಳ್ಳಲು ಬೇರೆ ಬೇರೆ ಸ್ಥಾನಗಳು ನಿರ್ಮಿತವಾಗಿದ್ದವು. ಬ್ರಾಹ್ಮಣರಿಗೆ ದರ್ಭೆಯ ಆಸನಗಳು, ಮಂಡಲೇಶ್ವರರಿಗೆ ಸಿಂಹಾಸನಗಳು, ಸಾಮಾನ್ಯ ಜನರಿಗೆ ಮಣೆಗಳು, ಇವೆಲ್ಲ ಅನುಕ್ರಮದಿಂದ ಸಿದ್ಧಪಡಿಸಲ್ಪಟ್ಟಿದ್ದವು. ಧನ, ಧಾನ್ಯ, ವಸ್ತ್ರ, ಭೂಷಣಗಳೇ ಮೊದಲಾದ ಸಮಸ್ತ ವಸ್ತುಗಳೂ ಯಜ್ಞಮಂಟಪದಲ್ಲಿ ಸಿದ್ಧವಾಗಿದ್ದವು. ಲಕ್ಷ್ಮಣನು ಗುರುಗಳ ಅಪ್ಪಣೆಗಿಂತಲೂ ನೂರರಷ್ಟು

ಹೆಚ್ಚು ಸಾಮಗ್ರಿಗಳನ್ನು ಏರ್ಪಡಿಸಿ, ಈ ವಿಷಯವನ್ನು ಶ್ರೀ ರಾಮನಿಗೆ ಅರಿಕೆ ಮಾಡಿಕೊಂಡನು.

ಅನಂತರ ಶ್ರೀ ರಾಮನು ಸುಮುಹೂರ್ತದಲ್ಲಿ ಮಂಗಳ ಸ್ನಾನಾದಿಗಳನ್ನು ನೆರವೇರಿಸಿ, ಸೀತಾಸಮೇತನಾಗಿ ಯಜ್ಞಮಂಟಪವನ್ನು ಪ್ರವೇಶಿಸಿದನು. ಆ ಕಾಲದಲ್ಲಿ ನಾನಾ ವಾದ್ಯಗಳು ಭೋರ್ಗರೆದವು. ಸುಮಂಗಲೆಯರು ಗಾಯನಮಾಡಿದರು. ಜಯ-ಜಯ ಶಬ್ದಗಳು ಕೇಳಿಸಿದವು. ಶ್ರೀ ರಾಮನು ಉನ್ನತವಾದ ಸಿಂಹಾಸನದಲ್ಲಿ ಕುಳಿತು ವಸಿಷ್ಠ, ಅರುಂಧತಿ, ಇವರಿಗೆ ಅಮೌಲ್ಯವಾದ ವಸ್ತ್ರಗಳನ್ನೂ, ಆಭರಣಗಳನ್ನೂ ದಾನ ಮಾಡಿದನು. ಮತ್ತು ನಾಗರಿಕರು, ಬಂಧುಗಳು, ಮಿತ್ರರು, ತಾಯಿಯರು, ತಂಗಿ, ಬ್ರಾಹ್ಮಣರು ಇವರೆಲ್ಲರಿಗೂ ವಸ್ತ್ರಾಭರಣಗಳನ್ನು ಕೊಟ್ಟು ಸಂತೋಷಗೊಳಿಸಿದನು. ಬಳಿಕ ವಸಿಷ್ಠರು ಸೀತಾರಾಮರನ್ನು ರತ್ನಖಚಿತವಾದ ಮಣೆಗಳ ಮೇಲೆ ಕುಳ್ಳಿರಿಸಿದರು. ಶ್ರೀ ರಾಮನು ಗುರುಗಳ ಅಪ್ಪಣೆಯಂತೆ ವಿಘ್ನೇಶ್ವರನನ್ನು ಪೂಜಿಸಿದನು. ಪುಣ್ಯಾಹವಾಚನಾದಿಗಳಾದ ಮೇಲೆ ಆ ದಂಪತಿಗಳಿಗೆ ಯಜ್ಞದೀಕ್ಷೆಯನ್ನಿತ್ತರು. ಧ್ವಜಾರೋಹಣಾದಿಗಳಾದ ಮೇಲೆ ಶ್ರೀ ರಾಮನು ಗುರುಗಳ ಆಜ್ಞೆಯಿಂದ ಹದಿನಾರು ಜನ ಋತ್ವಿಜರನ್ನು ಸ್ವೀಕರಿಸಿದನು. ಸಮಸ್ತ ಕರ್ಮಗಳಲ್ಲೂ ನಿಪುಣರಾದ ವಸಿಷ್ಠರು ಅಧ್ವರ್ಯುಗಳಾದರು. ಬ್ರಹ್ಮನು ತಾನೇ ಬ್ರಹ್ಮತ್ವವನ್ನು ಸ್ವೀಕರಿಸಿದನು. ವಿಶ್ವಾಮಿತ್ರರು ಹೋತೃಸ್ಥಾನವನ್ನು ಹೊಂದಿದರು. ಜನಕಮಹಾರಾಜನ ಗುರುಗಳಾದ ಶತಾನಂದರು ಉದ್ಗಾತೃಗಳಾದರು. ಯಮನು ಶಮಿತೃಸ್ಥಾನವನ್ನು ಹೊಂದಿದನು. ಕಶ್ಯಪರೇ ಮೊದಲಾದ ಹದಿನಾರು ಜನ ಮಹರ್ಷಿಗಳು ಶ್ರೀ ರಾಮನಿಗೆ ಋತ್ವಿಜರಾದರು. ಮಿಕ್ಕ ಅನೇಕ ವಿದ್ವಾಂಸರು ಬೇರೆಬೇರೆ ಕಾರ್ಯಗಳನ್ನು ಮಾಡಲು ಸಿದ್ಧರಾದರು. ಕುಂಡದಲ್ಲಿ ಅಗ್ನಿಯನ್ನು ಸ್ಥಾಪಿಸಿ, ಪಾತ್ರಾಸಾಧನಾದಿಗಳನ್ನು ಯಥಾಸಾಂಗ ಮುಗಿಸಿ, ವಸಿಷ್ಠಾದಿಗಳು ಶ್ಯಾಮಕರ್ಣದ ಅಶ್ವವನ್ನು ಪೂಜಿಸಿ, ಭೂಪ್ರದಕ್ಷಿಣೆ ಮಾಡಲು, ಭೂಮಿಯಲ್ಲಿ ಬಿಟ್ಟರು. ಹತ್ತು ಸಾವಿರ ಸೇನೆಯೊಡನೆ ಶತ್ರುಘ್ನ–ಸುಮಂತ್ರರು ಆ ಕುದುರೆಯ ರಕ್ಷಣೆಗಾಗಿ ಹಿಂದೆ ಹೊರಟರು. ಮುನಿಸಮೂಹಗಳಿಂದ ನಿಬಿಡವಾದ ಆ ಸರಯೂ ತೀರದಲ್ಲಿರುವ ಯಜ್ಞಶಾಲೆಯಲ್ಲಿ ಶ್ರೀರಾಮನು ನಾನಾವಿಧವಾದ ಇತಿಹಾಸಗಳನ್ನು ಕೇಳುತ್ತಾ ಕುಳಿತಿದ್ದನು.

ಆಗ ಶ್ರೀರಾಮನು ಕೃಷ್ಣಾಜಿನವನ್ನು ಧರಿಸಿದ್ದನು. ಸಮಸ್ತ ಇಂದ್ರಿಯ ನಿಗ್ರಹ ಮಾಡಿದ್ದನು. ಕೈಯಲ್ಲಿ ಕುಶಗಳನ್ನು ಹಿಡಿದಿದ್ದನು. ಯಜ್ಞದಲ್ಲಿ ಉಚಿತ

ವಾದ ಕಾರ್ಯಗಳನ್ನು ಕಾಲಕಾಲಕ್ಕೆ ನೆರವೇರಿಸುತ್ತಿದ್ದನು. ಸೂರ್ಯನಂತೆ ಪ್ರಕಾಶಮಾನನಾದ ಶ್ರೀರಾಮನು ಗುರುಗಳ ಸನ್ನಿಧಿಯಲ್ಲೇ ಯಾವಾಗಲೂ ಕುಳಿತಿರುವನು. ಭರತ, ಲಕ್ಷ್ಮಣ ಇವರೇ ಮೊದಲಾದ ಸಮಸ್ತ ಭಟರೂ ಯಜ್ಞಕಂಟಕಗಳನ್ನು ಪರಿಹಾರ ಮಾಡಲು ಪುಷ್ಪಮಾಲಿಕೆಗಳನ್ನು ಧರಿಸಿ ಸಿದ್ಧರಾಗಿ ಕುಳಿತಿದ್ದರು. ಶ್ರೀರಾಮನ ತಾಯಿಯು ಯಜ್ಞಶಾಲೆಯಲ್ಲಿ ಕುಳಿತಿದ್ದಳು ಇಷ್ಟರಲ್ಲಿ ಸಮಸ್ತ ತಪಸ್ವಿಗಳೂ ಶ್ರೀರಾಮನು ಯಜ್ಞಮಾಡುವನೆಂಬ ವರ್ತಮಾನವನ್ನು ಕೇಳಿ ಪತ್ನೀಪುತ್ರರಿಂದೊಡಗೂಡಿ ಸರಯೂತೀರಕ್ಕೆ ಬಂದರು. ಅವರಲ್ಲಿ ಕೆಲವರು ಫಲಭಕ್ಷಣಮಾಡುವವರು, ಕೆಲವರು ಪರ್ಣಾಹಾರಮಾಡುವವರು, ಕೆಲವರು ಅಯಾಚಿತ ವೃತ್ತಿಯವರು, ಕೆಲವರು ನಿರಹಾರಮಾಡುವವರು, ಕೆಲವರು ಪಂಚಾಗ್ನಿಮಧ್ಯದಲ್ಲಿ ತಪಸ್ಸಮಾಡುವವರು ಇದ್ದರು. ಇವರೆಲ್ಲರಿಗೂ ಪ್ರತಿದಿವಸವೂ ಯಥಾಯೋಗ್ಯ ಮರ್ಯಾದೆಗಳು ಸ್ವಲ್ಪವೂ ತಪ್ಪದೆ ನಡೆಯುತ್ತಿದ್ದವು. ಈ ಅಪೂರ್ವವಾದ ಯಾಗವನ್ನು ನೋಡಲು ಕೋಟ್ಯಂತರ ಬ್ರಾಹ್ಮಣರು ನೆರೆದರು. ಶ್ರೀರಾಮನು ಕಾಮಧೇನುವನ್ನು ಪೂಜಿಸಿ ಸಮಸ್ತ ಪ್ರಾಣಿಗಳನ್ನು ತೃಪ್ತಿಪಡಿಸುವಂತೆ ಪ್ರಾರ್ಥನೆ ಮಾಡಿದನು. ಪಾಕಶಾಲೆಯಲ್ಲಿ ವಾಸಮಾಡಿದ ಆ ಇಂದ್ರಸಧೇನುವು ಅತಿಥಿಸತ್ಕಾರಗಳಿಗೆ ಇಷ್ಟವಾದ ಪದಾರ್ಥಗಳನ್ನು ಸ್ವಲ್ಪವೂ ತಡಮಾಡದೆ ಕೊಡುತ್ತಿತ್ತು. ಅಡಿಗೆ ಮನೆಯಲ್ಲಿ ಬೆಂಕಿಯ ಸಂಪರ್ಕವೇ ಇರಲಿಲ್ಲ. ಭಕ್ಷ್ಯಭೋಜ್ಯಗಳಿಂದ ಮಹರ್ಷಿಗಳು ಬ್ರಾಹ್ಮಣರು, ಸ್ತ್ರೀಯರು ಇವರು ಮೊದಲುಗೊಂಡು ಪಕ್ಕಿ, ಇಲಿ, ಈ ಪ್ರಾಣಿಗಳವರೆಗೂ ಎಲ್ಲರೂ ತೃಪ್ತರಾದರು. ಅವರೆಲ್ಲರೂ ಸೀತಾ–ರಾಮರಿಗೆ ಯಥೇಷ್ಟ ಆಶೀರ್ವಾದಗಳನ್ನು ಮಾಡಿದರು. ಸೀತೆಯೇ ಮೊದಲಾದ ಸಮಸ್ತ ರಾಜಸ್ತ್ರೀಯರೂ ಪ್ರತಿನಿತ್ಯವೂ ತಾವೇ ಪಂಕ್ತಿಗಳಲ್ಲಿ ಸಂಚಾರಮಾಡುತಾ, ಬ್ರಾಹ್ಮಣರಿಗೆ ಬೇಕಾದ ಪದಾರ್ಥಗಳನ್ನು ತಾವೇ ತಂದು ಬಡಿಸುವರು. ಶ್ರೀರಾಮನು ಲಕ್ಷ್ಮಣನನ್ನು ಕರೆಸಿ "ಎಲೈ ಸೌಮಿತ್ರಿಯೇ, ನೀನು ಯಾವ ದಾರಿಯಲ್ಲಿ ಯಾರನ್ನು ಕಂಡರೂ ಬಹುಮಾನ ಮಾಡಿ ಈ ಯಜ್ಞಶಾಲೆಗೆ ಕರೆದುಕೊಂಡು ಬರುವಂತೆ ಸೇವಕರಿಗೆ ಆಜ್ಞಾಪಿಸು. ಮಾರ್ಗದಲ್ಲಿ ಯಾವ ವಿಷಯದಲ್ಲೂ ನೀವು ಕೋಪಮಾಡಬೇಡಿರೆಂದು ದೂತರಿಗೆ ತಿಳುಹು. ನೀನು ಸ್ತ್ರೀಯರು, ಬಾಲಕರು, ವಟುಗಳು, ಇವರೇ ಮೊದಲಾದವರಿಗೆ ಅವಮಾನ ಮಾಡಬೇಡ. ಯಾರಾದರೂ ಯಾವ ಅಮೌಲ್ಯವಸ್ತುವನ್ನಪೇಕ್ಷಿಸಿದರೂ ನಮ್ಮ ಅಪ್ಪಣೆಯಿಲ್ಲದೆಯೇ ಆ ವಸ್ತುವನ್ನು ಕೊಟ್ಟು ಅವರಿಗೆ ಸಂತೋಷಗೊಳಿಸು. ಪಶುಪಕ್ಷಿಗಳಿಗಾದರೂ ಸಂ

ತೋಷವನ್ನುಂಟು ಮಾಡು. ಅಯೋಧ್ಯೆ, ಕಾಮಧೇನು, ಚಿಂತಾಮಣಿ, ಪುಷ್ಪಕ, ಖಜಾನೆ, ಇವುಗಳಲ್ಲಿ ಯಾವ ವಸ್ತುವನ್ನು ಯಾಚಕರು ಬಯಸಿದರೂ ಅವನ್ನು ಕೊಟ್ಟುಬಿಡು. ಎಲೈ ಲಕ್ಷ್ಮಣನೇ, ನೀನು ಯಾರಿಗಾದರೂ ಸ್ವಲ್ಪ ಅಸಂತೋಷ ಪಡಿಸಿದ ವರ್ತಮಾನವು ನನ್ನ ಕಿವಿಗೆ ಬಿದ್ದರೆ, ನಿನ್ನ ವಿಷಯದಲ್ಲಿ ನನಗೆ ಬಹಳ ಸಿಟ್ಟು ಬಂದೀತು. ಮತ್ತು ನೀನು ಬ್ರಾಹ್ಮಣರಿಗೆ, ಅವಮಾನ ಇಲ್ಲವೆ ಇಚ್ಛಾಭಂಗ ಮಾಡಿದ ಸಂಗತಿಯು ನನಗೆ ತಿಳಿದಿದ್ದೀ ಆದರೆ, ನಿನ್ನ ಮುಖದರ್ಶನ ಮಾಡದೆ, ದೇಹಾಂತ ಪ್ರಾಯಶ್ಚಿತ್ತವನ್ನು ವಿಧಿಸೇನು. ಬಹು ಎಚ್ಚರಿಕೆಯಿಂದ ನಡಕೊಳ್ಳತಕ್ಕದ್ದು" ಎಂದು ಆಜ್ಞಾಪಿಸಿದನು. ಲಕ್ಷ್ಮಣನು ತಂದೆಗೆ ಸಮಾನನಾದ ಶ್ರೀರಾಮನ ವಚನವನ್ನು ಶಿರಸಾವಹಿಸಿ, ಆದರಂತೆಯೇ ನಡೆದುಕೊಂಡನು.

ಶ್ರೀರಾಮನ ಯಜ್ಞೀಯಾಶ್ವವು ಪೂರ್ವದೇಶವನ್ನು ಪ್ರವೇಶಿಸಿತು. ಶತ್ರುಘ್ನನು ಸೇನಾಸಮೇತನಾಗಿ ಆ ತುರಗವನ್ನೇ ಹಿಂಬಾಲಿಸಿ, ಗಂಗಾನದೀತೀರಕ್ಕೆ ಸೇರಿದನು. ಆ ಕುದುರೆಯು ಬ್ರಹ್ಮಾವರ್ತದಲ್ಲೆಲ್ಲಾ ಸಂಚರಿಸಿ ಜಾಹ್ನವೀ ದಡಕ್ಕೆ ಬಂತು. ಅಷ್ಟರಲ್ಲೆ ಮಹತ್ತರವಾದ ವೃಷ್ಟಿಯು ಆಗಿ, ಭಾಗೀರಥಿಯು ಪೂರ್ಣವಾಗಿ ಪ್ರವಹಿಸಲಾರಂಭಿಸಿತು. ನಾವೆಗಳೂ ಕೂಡಾ ನದಿಯಲ್ಲಿ ಹೋಗದಂತಾದವು. ಇದನ್ನೆಲ್ಲಾ ನೋಡಿ ಶತ್ರುಘ್ನನು ಹೆದರಿ, 'ನದಿಯು ಇಳಿದ ನಂತರ ಮುಂದಕ್ಕೆ ಪ್ರಯಾಣ ಮಾಡೋಣವೆಂದರೆ ಕಾಲಾತಿಕ್ರಮಣವಾಗುವದು. ನನ್ನ ಸ್ಥಿತಿಯು ಮೊದಲನೇ ಕವಳಕ್ಕೆ ನೊಣ ಬಂದಂತಾಯಿತಲ್ಲ, ಏನು ಮಾಡಲಿ' ಎಂದು ಮನಸ್ಸಿನಲ್ಲಿ ಯೋಚಿಸುತ್ತಾ, ಶ್ರೀರಾಮನ ಪುಣ್ಯದಿಂದಲೇ ಈ ನದಿಯನ್ನು ದಾಟುವೆನೆಂದು ನಿಶ್ಚಯಮಾಡಿ, ಭಾಗೀರಥಿಯ ಎದುರಿಗೆ ಸ್ತಬ್ಧನಾಗಿ ನಿಂತನು. ಎಲ್ಲಾ ಜನರೆದುರಿಗೆ ಭಾಗೀರಥಿಯನ್ನು ಪೂಜೆ ಮಾಡಿ, ಕೈ ಜೋಡಿಸಿ ನಮ್ರಭಾವದಿಂದ ನಿಂತು ಶತ್ರುಘ್ನನು—'ಎಲೈ ಜಾಹ್ನವಿಯೇ, ಶ್ರೀರಾಮನಲ್ಲಿ ಸತ್ಯವಿದ್ದದ್ದೇ ನಿಶ್ಚಯವಾದರೆ ಸೇನಾಸಮೇತನಾದ ನನಗೆ ಮಾರ್ಗವನ್ನು ಕೊಡು. ಮುಂದೆ ಬಹಳದೂರ ಪ್ರಯಾಣ ಮಾಡಬೇಕಾಗಿದೆ.' ಎಂದು ಪ್ರಾರ್ಥಿಸಿದನು. ಈ ಮಾತುಗಳನ್ನು ಕೇಳಿ ಗಂಗೆಯು ಎರಡು ಭಾಗವಾಗಿ ಶತ್ರುಘ್ನನಿಗೆ ಮಾರ್ಗವನ್ನು ಕೊಟ್ಟಳು. ದೇವತೆಗಳು ಪರಮಾಶ್ಚರ್ಯಪಟ್ಟರು. ಶತ್ರುಘ್ನನ ಸೈನ್ಯವು ಸುರಕ್ಷಿತವಾಗಿ ದಾಟಿದನಂತರ ಭಾಗೀರಥಿಯು ಮೊದಲಿನಂತೆ ಪ್ರವಹಿಸಲಾರಂಭಿಸಿತು. ಶ್ರೀರಾಮನ ಈ ಮಹಿಮೆಗಳನ್ನೆಲ್ಲಾ ನೋಡಿ ಸೇನಾಜನರು ಪರಮ ಸಂಭ್ರಮದಿಂದ ಜಯಘೋಷಮಾಡಿದರು. ಅನಂತರ ಶತ್ರುಘ್ನನು ಮಗಧ ದೇಶಕ್ಕೆ ಬಂದನು.

ಇದೇ ದೇಶಕ್ಕೆ ಕೀಕಟವೆಂದು ನಾಮಧೇಯವುಂಟು. ಈ ವರ್ತಮಾನವನ್ನು ಕೇಳಿ ಮಗಧಾಧಿಪನು ಸೇನಾಸಮೇತನಾಗಿ ಬಂದು, ಶತ್ರುಘ್ನನನ್ನು ಪರಮ ವಿಶ್ವಾಸದಿಂದ ಸತ್ಕಾರಮಾಡಿ, ಕಾಣಿಕೆಗಳನ್ನು ಸಮರ್ಪಿಸಿ, ತನ್ನ ಪಟ್ಟಣದ ಜನರನ್ನೆಲ್ಲಾ ಅಯೋಧ್ಯೆಗೆ ಕಳುಹಿದನು. ತಾನೂ ಶತ್ರುಘ್ನನೊಡನೆ ಅಶ್ವವನ್ನು ಹಿಂಬಾಲಿಸಿದನು. ಇದೇ ಮೇರೆಗೆ ಸಮಸ್ತ ಸಾಮಂತರಾಜರೂ ತಮ್ಮ ಸದ್ವರ್ತನಗಳಿಂದ ಕೀರ್ತಿಯನ್ನು ಪಡೆದರು. ಯಾವ ರಾಜನೂ ರಾಮಾಶ್ವವನ್ನು ಕಟ್ಟಲಿಲ್ಲ. ಇಂದ್ರಾದಿದೇವತೆಗಳೂ ಕೂಡ ಅದರ ಕಡೆಗೆ ಕ್ರೂರ ದೃಷ್ಟಿಯಿಂದ ನೋಡಲಿಲ್ಲ. ಅನಂತರ ಅಂಗ, ವಂಗ, ಮೊದಲಾದ ಅನೇಕ ದೇಶಗಳನ್ನು ದಾಟಿ, ಆಂಧ್ರ ದ್ರವಿಡ, ಮೊದಲಾದ ದೇಶಗಳನ್ನು ನೋಡುತ್ತಾ, ಚೋಳದೇಶದ ಮಾರ್ಗವಾಗಿ ಅಶ್ವವು ರಾಮೇಶ್ವರಕ್ಕೆ ಪ್ರಯಾಣಮಾಡಿತು. ಶತ್ರುಘ್ನನೂ ಅದರ ಹಿಂದೆಯೇ ಸೇನಾಸಮೇತನಾಗಿ, ಆಯಾಯ ದೇಶದ ರಾಜರುಗಳಿಂದ ಕಪ್ಪ-ಕಾಣಿಕೆಗಳನ್ನು ಸ್ವೀಕರಿಸುತ್ತ ಅಶ್ವವನ್ನು ಹಿಂಬಾಲಿಸಿದನು.

ಅಶ್ವವು ತಾಂಬ್ರಪರ್ಣೀ ತೀರದ ಮಾರ್ಗವಾಗಿ, ಕೇರಳವೇ ಮೊದಲಾದ ದೇಶಗಳನ್ನು ಪ್ರವೇಶಿಸಿ ಅನುಕ್ರಮದಿಂದ ಗೋಕರ್ಣಕ್ಕೆ ಬಂದು ಸೇರಿತು. ಅ ಮೇಲೆ ಕೃಷ್ಣಾನದಿಯನ್ನು ದಾಟಿ ಕರ್ನಾಟಕ, ಕೊಂಕಣ ಮೊದಲಾದ ದೇಶಗಳನ್ನು ಪ್ರವೇಶಿಸಿ, ಸಾಭ್ರಮತೀ ನದಿಯ ಮಾರ್ಗದಿಂದ ಗುಜ್ಜರ ದೇಶವನ್ನು ಹೊಂದಿ ಮುಂದೆ ಪ್ರಭಾಸತೀರ್ಥದ ಬಳಿಗೆ ಬಂತು. ಸೌವೀರ, ಮಾಥುರ, ಸೌರಾಷ್ಟ್ರ, ಮರುದೇಶ, ಧನ್ವದೇಶ, ಸಾರಸ್ವತ, ಮತ್ಸ್ಯ, ಮಾಳವ, ಶೂರಸೇನ, ಪಾಂಚಾಲ, ಕುರುಕ್ಷೇತ್ರ, ಕುರುಜಾಂಗಲ, ಕೈಕೇಯ, ಕಾಶ್ಮೀರ, ಭಿಲ್ಲದೇಶ, ಗೌಡ, ಶಕ ಇವೇ ಮೊದಲಾದ ಸಮಸ್ತ ದೇಶಗಳನ್ನೆಲ್ಲ ಸುತ್ತಿ, ಆ ಕುದುರೆಯು ಜ್ವಾಲಾಮುಖೀ ಕ್ಷೇತ್ರಕ್ಕೆ ಬಂತು. ಅಲ್ಲಿಂದ ಹರಿದ್ವಾರದ ಮಾರ್ಗವಾಗಿ, ಬದರಿಕಾಶ್ರಮವನ್ನು ಪ್ರವೇಶಿಸಿ, ಹಿಮಾಲಯದ ಹತ್ತಿರ ಇರುವ ದೇಶಗಳಲ್ಲಿ ಸಂಚರಿಸುತ್ತ ಮಾನಸ ಸರೋವರಕ್ಕೆ ಪ್ರಯಾಣ ಮಾಡಿತು. ಅನಂತರ ಹರಿಹರಕ್ಷೇತ್ರದ ಮಾರ್ಗವಾಗಿ ಮಿಥಿಲಾ ನಗರಕ್ಕೆ ಬಂದು, ಆರ್ಯಾವರ್ತದ ಮಾರ್ಗವಾಗಿ, ಕಾಶಿ, ತ್ರಿವೇಣಿ, ಶೃಂಗಬೇರಪುರ, ಇವೇ ಮೊದಲಾದ ಸ್ಥಳಗಳನ್ನು ದಾಟಿ ತಮಸಾನದಿಯ ದಾರಿಯಿಂದ, ನೈಮಿಷಾರಣ್ಯ, ಗೋಮತಿ ಇತ್ಯಾದಿ ಕ್ಷೇತ್ರಗಳಿಗೆ ಹೋಗಿ ಆ ಪ್ರತಾಪಶಾಲಿಯಾದ ಅಶ್ವವು ಸರಯೂ ತೀರಕ್ಕೆ ಏಳುತಿಂಗಳು ತುಂಬುವದರೊಳಗೆ ಬಂದು ನಿಂತಿತು.

ಆ ತುರಗದ ಹಿಂದೆ ಅನೇಕದೇಶದ ರಾಜರೂ ನೇನಾಸಮೇತನಾದ ಶತ್ರುಘ್ನನೂ ಸುರಕ್ಷಿತನಾಗಿ ಬಂದರು. ಯಜ್ಞೀಯಾಶ್ವವು ಬಂದ ವರ್ತಮಾನವನ್ನು ಕೇಳಿ, ಶ್ರೀ ರಾಮನು ಬಹು ವಿಜೃಂಭಣೆಯಿಂದ ಆ ತುರಗವನ್ನು ಎದುರುಗೊಂಡು, ವಿಧ್ಯುಕ್ತ ಪ್ರಕಾರವಾಗಿ ಪೂಜಿಸಿ ಯಜ್ಞಮಂಟಪಕ್ಕೆ ಕರತಂದನು. ಆ ಕಾಲದಲ್ಲಿ ದೊಡ್ಡ ಉತ್ಸವವು ನಡೆಯಿತು. ಯಜ್ಞಮಂಟಪವು ಹತ್ತುಯೋಜನ ವಿಸ್ತೀರ್ಣವಾಗಿದ್ದರೂ ಜನಗಳಿಗೆ ಸಾಲದಾಯಿತು. ಎಷ್ಟೋ ಜನರು ಸಮುದಾಯಗಳಲ್ಲಿ ಮರೆಯಾದ ತಮ್ಮ ಬಂಧುಗಳು, ಮಕ್ಕಳು ಇವರನ್ನು ಹುಡುಕಲಾರಂಭಿಸಿದರು. ಹದಿನೈದು, ಇಪ್ಪತ್ತು ದಿವಸಗಳಾದರೂ ಅವರಿಗೆ ತಮ್ಮ ಜನಗಳ ದರ್ಶನವಾಗಲಿಲ್ಲ. ಅನಂತರ ಅವರೆಲ್ಲರೂ ಲಕ್ಷ್ಮಣನಿಗೆ ತಮ್ಮ ಸ್ಥಿತಿಯನ್ನು ತಿಳುಹಿದರು. ಆಗ ತನ್ನ ಗೃಹದಲ್ಲಿ ಪೋಷಿತರಾದ ಆ ಅನಾಥರನ್ನು ಅವರವರ ಬಂಧುಗಳೊಡನೆ ಕಳುಹಿಸಿದನು. ಶ್ರೀ ರಾಮಚಂದ್ರನ ಪ್ರಭಾವದಿಂದ ಯಾವ ಪ್ರಾಣಿಗೂ ಎಳ್ಳಷ್ಟಾದರೂ ತೊಂದರೆಯು ಸಂಭವಿಸಲಿಲ್ಲ. ಆ ಯಜ್ಞಶಾಲೆಯಲ್ಲಿ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳದಂತೆ ಮಹಾ ಕೋಲಾಹಲವಾಯಿತು.

ಶಬ್ದ್ಯಮಕರ್ಣವೆಂಬ ಯಜ್ಞೀಯಾಶ್ವವು ದಿಗ್ವಿಜಯ ಮಾಡಿ ಬಂದಕೂಡಲೆ ಋತ್ವಿಜರು ಅಶ್ವಮೇಧವನ್ನು ಪ್ರಾರಂಭಿಸಿದರು. ಅಷ್ಟರಲ್ಲಿ ಪಾರ್ವತೀ-ಪರಮೇಶ್ವರರು ವೃಷಭಾರೂಢರಾಗಿ ಬಂದರು. ಲಕ್ಷ್ಮಣ-ಸುಗ್ರೀವ ಎದುರುಗೊಂಡು ಉಚಿತೋಪಚಾರಗಳಿಂದ ಸತ್ಕರಿಸಿ ಯಜ್ಞಮಂಟಪಕ್ಕೆ ಅವರನ್ನು ಕರೆತಂದರು. ಪಾರ್ವತೀ-ಶಂಕರರು ಅಗ್ನಿಕುಂಡದ ಬಳಿಯಲ್ಲಿ ಬರುವಷ್ಟರೊಳಗೆ ಶ್ರೀ ರಾಮನು ಎದ್ದು, ಎದುರಾಗಿ ಸ್ವಲ್ಪ ಪ್ರಯಾಣ ಮಾಡಿ, ಅವರನ್ನು ರತ್ನದ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಮತ್ತು ಆ ಗೌರೀ-ಶಂಕರರ ಪಾದಪ್ರಕ್ಷಾಲನೆ ಮಾಡಿದನು. ಆಗ ಸೀತೆಯು ಸುವರ್ಣದ ಝಾರಿಯಿಂದ ನೀರು ಹಾಕಿದಳು. ಈ ಉತ್ಸವವನ್ನು ಸಭೆಯವರೆಲ್ಲ ರೆಪ್ಪೆಹಾಕದೆ ನೋಡುತ್ತಿದ್ದರು. ದೇವತೆಗಳು ಸ್ತಬ್ಧರಾಗಿ ನೋಡುತ್ತ ನಿಂತಿದ್ದರು. ಆ ಕಾಲದಲ್ಲಿ ಸಮಸ್ತರೂ ಶ್ರೀ ರಾಮಸೀತೆಯರನ್ನು ಸ್ತೋತ್ರಮಾಡಿದರು. ಶ್ರೀ ರಾಮನು ಸಮಸ್ತ ಬ್ರಾಹ್ಮಣರನ್ನೂ, ಮುನಿಗಳನ್ನೂ, ಸುಮಂಗಲೆಯರನ್ನೂ ಪೂಜಿಸುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿದನು. ಶಂಕರನು "ಎಲೈ ಭೂಪತಿಯೇ, ನಿನ್ನ ದರ್ಶನದಿಂದ ನಾನು, ಸೀತಾ, ನನ್ನ ತಮ್ಮಂದಿರು, ನನ್ನ ಕುಲ, ಇವರೆಲ್ಲರೂ ಕೃತಾರ್ಥರಾಗಿರುವೆವು" ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಸ್ವಲ್ಪ ನಗುತ್ತ ಶಂಕರನು 'ಎಲೈ ರಾಮಚಂದ್ರ

ನೇ, ನಾನು ನಿನ್ನ ಮಾಯೆಗೆ ಅಧೀನನಾಗಿರುವೆನು. ನಿನ್ನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನು. ಆತನಿಂದ ಮರೀಚ್ಯಾದಿಗಳು ಜನಿಸಿದರು. ಮರೀಚಿಗೆ ಕಶ್ಯಪರು, ಅವರಿಗೆ ಸೂರ್ಯನು ಮಗನಾಗಿ ಅವತರಿಸಿದನು. ಈ ನಿನ್ನ ವಂಶಕ್ಕೆ ಮೂಲಪುರುಷನಾದ ಸೂರ್ಯನು ನಿನಗೆ ಮೊಮ್ಮಗನ ಮೊಮ್ಮಗನಾಗ ಬೇಕಲ್ಲವೆ? ಹೀಗಿರಲು, ನನಗೆ ದೊಡ್ಡಸ್ತಿಕೆಯನ್ನು ಕೊಟ್ಟು ಯಾಕೆ ಮೋಹಗೊಳಿಸುವೆ? ಎಲೈ ಪ್ರಭುವೆ, ನೀನು ದೇವತೆಗಳಿಗಾಗಿ ಜನ್ಮ ಸ್ವೀಕಾರ ಮಾಡಿರುವೆ. ನೀನು ಲೋಕಶಿಕ್ಷಣೆಗಾಗಿ ಯಜ್ಞಾದಿಕರ್ಮಗಳನ್ನು ಮಾಡಬೇಕೆಂದು ಉದ್ಯುಕ್ತನಾಗಿದ್ದೀ, ಎಂದನು. ಈ ಮಾತುಗಳನ್ನು ಕೇಳಿ ಶ್ರೀ ರಾಮನು ಸ್ವಲ್ಪ ನಕ್ಕು, ಯಜ್ಞಕುಂಡದ ಸಮೀಪಕ್ಕೆ ಹೋದನು. ಅಷ್ಟರಲ್ಲಿ ಸಾವಿರಾರು ಗಂಧರ್ವರು, ಕಿನ್ನರರು, ಸಿದ್ಧರು, ಯಕ್ಷರು, ಅಪ್ಸರಸ್ಸಮೂಹವು, ಲೋಕಪಾಲರು, ದಿಕ್ಪಾಲರು, ರಸಾತಲವಾಸಿಗಳು, ನವಗ್ರಹಗಳು, ಷಡ್ಋತುಗಳು, ಅರವತ್ತು ಸಂವತ್ಸರಗಳು, ನಕ್ಷತ್ರಗಳು, ಯೋಗಗಳು, ಕರಣಗಳು, ತಿಥಿಗಳು, ರಾಶಿಗಳು, ಪರ್ವತಗಳು, ವೃಕ್ಷಗಳು, ಸಮುದ್ರಗಳು, ಸರೋವರಗಳು ಇವುಗಳೆಲ್ಲ ಮನುಷ್ಯರೂಪಗಳನ್ನು ಧರಿಸಿ ಯಜ್ಞಕುಂಡದ ಬಳಿಗೆ ಬಂದರು. ಸಂಪಾತಿ, ಗುಹಕ, ಮಾರುತಿಯ ಮಗನಾದ ಮಕರಧ್ವಜ, ಸಮಸ್ತ ರಾಕ್ಷಸರಿಂದ ಯುಕ್ತನಾದ ವಿಭೀಷಣ ಇವರೆಲ್ಲರೂ ಅಲ್ಲಿಗೆ ಬಂದರು. ಅವರೆಲ್ಲರಿಗೂ ಯಥಾಯೋಗ್ಯ ಸನ್ಮಾನಗಳನ್ನು ಕೊಟ್ಟು, ಶ್ರೀ ರಾಮನು ತನ್ನ ಜೊತೆಗೆ ಕುಳ್ಳಿರಿಸಿಕೊಂಡನು. ಅಷ್ಟರಲ್ಲಿ ಯಾವ ಕುಂಭೋದರ ಮಹರ್ಷಿಗಳು ಪೂರ್ವದಲ್ಲಿ ಶ್ರೀ ರಾಮನಿಗೆ ತೀರ್ಥಯಾತ್ರೆ, ಅಶ್ವಮೇಧಾದಿಗಳನ್ನು ಮಾಡುವಂತೆ ಹೇಳಿದ್ದರೋ, ಅವರು ಅಯೋಧ್ಯೆಯ ಗಡಿಯ ಬಳಿಗೆ ಬಂದರು.

ಆ ಮಹರ್ಷಿಗಳನ್ನು ನೋಡಿದೊಡನೆ ದೂತರು ಬಹಳ ಹೆದರಿದರು. ಮತ್ತು, “ಈ ಬ್ರಾಹ್ಮಣನು ಶ್ರೀ ರಾಮನಲ್ಲಿ ಇನ್ನು ಯಾವ ತಪ್ಪುಗಳನ್ನು ಎಣಿಸುವನೋ?” ಎಂದು ಪರಸ್ಪರ ಮಾತನಾಡಿದರು. ಆದರೆ ಕುಂಭೋದರನು ಆ ದೂತರನ್ನು ನೋಡದೆ ಶ್ರೀ ರಾಮನ ಯಜ್ಞಮಂಟಪಕ್ಕೆ ಪ್ರಯಾಣ ಮಾಡಿದನು. ಈ ಮುಷಿಗಳನ್ನು ನೋಡಿದೊಡನೆ ದ್ವಾರಪಾಲಕರು ಭಯದಿಂದ ಓಡಿಹೋಗಿ ‘ಮಹಾಸ್ವಾಮಿ ರಾಮಚಂದ್ರ, ಭೋ ಯುವರಾಜಲಕ್ಷ್ಮಣ, ಇಕೋ, ಶ್ರೀ ರಾಮನಿಗೆ ಪೂರ್ವದಲ್ಲಿ ದೋಷಕೊಟ್ಟ ಕುಂಭೋದರ–ಮುನಿಗಳು ಬರುತ್ತಿರುವರು.’ ಎಂದರು. ಆ ಕ್ಷಣದಲ್ಲಿಯೇ ಶ್ರೀ ರಾಮನು ಸಮಸ್ತ ಯಜ್ಞಕಾರ್ಯಗಳನ್ನೂ ಸ್ವಲ್ಪ

ನಿಲ್ಲಿಸಿ, ಲಕ್ಷ್ಮಣನೊಡನೆ ಆ ಮಹಾಮುನಿಯನ್ನು ಎದಿರುಗೊಳ್ಳಲು ಹೊರಟನು. ಮತ್ತು ಯಜ್ಞಶಾಲೆಯ ಬಾಗಿಲಿಗೆ ಬಂದ ಆ ಮಹರ್ಷಿಯನ್ನು ಕೈಹಿಡಿದು ಕರೆತಂದು ಅಗ್ನಿಕುಂಡದ ಬಳಿಯಲ್ಲಿ ಸಿದ್ಧಪಡಿಸಿದ್ದ ಸಿಂಹಾಸನದ ಮೇಲೆ ಕುಳಿತುಕೊಳ್ಳಬೇಕೆಂದು ಕೈಜೋಡಿಸಿ ಬೇಡಿಕೊಂಡನು. ಆ ಮುನಿಯು ತರುಣನೂ, ತೇಜಸ್ವಿಯೂ, ಜಟಾಧಾರಿಯೂ, ಪಾವಗಳಲ್ಲಿ ಕಡಾವಿಗೆಗಳನ್ನು ಧರಿಸಿದವನೂ, ಭಸ್ಮದಿಂದ ಶುಭ್ರವಾದ ದೇಹವುಳ್ಳವನೂ ಆಗಿದ್ದನು. ಆತನು ದಂಡಕಮಂಡಲುಗಳನ್ನು ಭೂಮಿಯ ಮೇಲೆ ಇಟ್ಟು ಶ್ರೀರಾಮನಿಗೆ ನಮಸ್ಕರಿಸಿದನು. ಆಗ ರಾಮಚಂದ್ರನು ಆ ಮಹರ್ಷಿಯನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, 'ಎಲೈ ಮುನಿವರ್ಯರೆ, ನಾನು ರಾವಣಾದಿಗಳನ್ನು ಕೊಲ್ಲೋಣದರಿಂದ ಬ್ರಹ್ಮಘಾತುಕನಾಗಿರುವೆನು. ಇಂಥಾ ಪಾಪಿಗೆ ನೀನು ನಮಸ್ಕಾರ ಮಾಡಬಹುದೆ?' ಎಂದು ಪ್ರಶ್ನೆಮಾಡಿದನು. ಈ ಮಾತುಗಳನ್ನು ಕೇಳಿ ಕುಂಭೋದರನು "ಎಲೈ ದೀನದಯಾಳುವೆ, ಕರುಣಾನಿಧಿಯೆ, ನಾನು ನಿನಗೆ ದೊಡ್ಡ ಅಪರಾಧಿಯಾಗಿರುವೆನು. ಸ್ವಪ್ರಯೋಜನಕ್ಕಾಗಿ ನಿನ್ನನ್ನು ನಾನು ದೂಷಿಸಲಿಲ್ಲ. 'ಈ ಲೋಕದಲ್ಲಿ ಸಮಸ್ತ ಜನರಿಗೂ ಉಪಕಾರವಾಗಲಿ, ಅವರಿಗೆ ನಿನ್ನ ನಡವಳಿಕೆಗಳು ತಿಳಿಯಲಿ, ಅವರು ಕೃತಕೃತ್ಯರಾಗಲಿ, ದೋಷಾಚರಣೆ ಮಾಡುವ ವಿಷಯದಲ್ಲಿ ಅವರಿಗೆ ಭಯವುಂಟಾಗಿ ಅವರು ಸನ್ಮಾರ್ಗದಲ್ಲಿ ವರ್ತಿಸಲಿ, ಎಂದು ನಿನ್ನಲ್ಲಿ ದೋಷಾರೋಪಣೆ ಮಾಡಿದೆನು. ಎಲೈ ಭಕ್ತವತ್ಸಲನೇ, ನೀನು ಪ್ರಯಾಣ ಮಾಡಿದ ಸ್ಥಳಗಳಲ್ಲೆಲ್ಲ ಅನೇಕ ತೀರ್ಥಗಳನ್ನು ನಿರ್ಮಾಣಮಾಡಿರುವೆ. ನಿನ್ನ ಜೊತೆಗೆ ಯಾತ್ರೆಮಾಡಿದ ಅನೇಕ ಬ್ರಾಹ್ಮಣರಿಗೆ, 'ಯಥಾನಾಂಗ ಯಾತ್ರೆಯನ್ನು ಹ್ಯಾಗೆ ಮಾಡಬೇಕು' ಎಂಬುದು ತಿಳಿದಿರುವದು. ಅಯಾದೇಶಗಳಲ್ಲಿ ಅನೇಕರು ನಿನ್ನ ದರ್ಶನದಿಂದ ಕೃತಕೃತ್ಯರಾಗಿರುವರು. ನಿನ್ನಲ್ಲಿ ದೋಷಾರೋಪಣೆ ಮಾಡಿದ್ದರಿಂದ ಜನಗಳೆಲ್ಲರೂ 'ಆ ಕುಂಭೋದರನ ಪುಣ್ಯದಿಂದ ಶ್ರೀ ರಾಮನ ದರ್ಶನವು ಸಂಸಾರಿಗಳಾದ ನಮಗೆ ಘಟಿಸಿತು' ಎಂದು ಹೇಳುತ್ತಿರುವರು. ನೀನು ಈಗ ತೀರ್ಥ-ಯಾತ್ರೆ ಮಾಡಿದ್ದರಿಂದ ಮುಂದೆ ಸಮಸ್ತ ಜನರೂ ದೋಷಪರಿಹಾರಕ್ಕೋಸ್ಕರ ಶ್ರೀರಾಮನೇ ತೀರ್ಥಾಟನ ಮಾಡಿರುವನು. ನಮ್ಮ ಪಾಡೇನು' ಎಂದು ಯಾತ್ರೆಮಾಡುವರು. ಎಲೈ ರಾಮನೇ, ನೀನು ಸರ್ವೇಶ್ವರನಾಗಿರುವೆ. ನೀನು ಪರಿಪೂರ್ಣನೆಂತಲೂ, ಪರಬ್ರಹ್ಮನೆಂತಲೂ ನಾನು ಬಲ್ಲೆನು. ನಿನಗೆ ದೋಷವೆಲ್ಲಿಯದು? ಚಿತ್ರಗಾರನು ಗೋಡೆಯ ಮೇಲೆ ಚಿತ್ರಗಳನ್ನೆಲ್ಲ ಬರೆದು ತಾನೇ ಬಟ್ಟೆಯಿಂದ ಒರೆಸಿದರೆ, ಅವನಿಗೆ ದೋಷ ಬರುವದೇ

ಹ್ಯಾಗೆ? ಸೃಷ್ಟಿ ಸ್ಥಿತಿ-ಲಯುಗಳೆಲ್ಲ ನಿನ್ನ ಆಜ್ಞೆಯಿಂದಲೇ ನಡೆಯುವವು. ನೀನೇ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ವ್ಯಕ್ತರೂಪಗಳಿಂದ ಈ ಸಮಸ್ತ ಕಾರ್ಯಗಳನ್ನೂ ನಡೆಸುವೆ. ಇಂಥ ನಿನಗೆ ದೋಷ ಸಂಬಂಧವು ಹ್ಯಾಗೆ ಆದೀತು? ನೀನು ನೀರಿನಲ್ಲಿರುವ ಕಮಲದ ಎಲೆಯಂತೆ ನಿರ್ಲಿಪ್ತನಾಗಿದ್ದೀ. ನಿನ್ನ ಸಂತೋಷಕ್ಕಾಗಿಯೇ ನಾವು ಸದಾ ತೀರ್ಥಾಟನ ಮಾಡುತ್ತಿರುವೆವು. ತೀರ್ಥಗಳಲ್ಲಿ ನೀನೇ ತೀರ್ಥರೂಪನಾಗಿರುವೆ. ನಿನ್ನ ಪಾದಾಂಗುಷ್ಠದಿಂದಲೇ ಗಂಗೆಯು ಉತ್ಪನ್ನಳಾಗಿರುವಳಷ್ಟೆ?" ಎಂದು ಬಹುವಿಧ ಭಾಷಣಗಳಿಂದ ಶ್ರೀ ರಾಮನನ್ನು ಸಂತೋಷಗೊಳಿಸಿ ಅಷ್ಟೋತ್ತರಶತನಾಮಗಳಿಂದ ಮತ್ತೆ ಶ್ರೀ ರಾಮನನ್ನು ಈ ಮೇರೆಗೆ ಸ್ತೋತ್ರ ಮಾಡಿದನು.—ಸರ್ವ ಪ್ರಾಣಿಗಳಿಗೂ ಈಶ್ವರನೇ, ಸರ್ವಮಯನೇ, ಸಮಸ್ತ ಭೂತಗಳನ್ನೂ ಸಂರಕ್ಷಣೆ ಮಾಡುವದಕ್ಕಾಗಿಯೇ ನಿರವಯವನಾದ ನೀನು ಆಕಾರವನ್ನು ಹೊಂದುತ್ತೀ. ಸಂಸಾರದ ಭಯವನ್ನು ನಾಶಮಾಡುವವನೇ, ಜನರ ದುಸ್ಸಹ ದುಃಖಕಾಲದಲ್ಲಿ ಅವತಾರ ಮಾಡಿ ಸಮಸ್ತ ಸಜ್ಜನರನ್ನೂ ರಕ್ಷಿಸುವವನೇ, ದುರ್ಜನರನ್ನು ಶಿಕ್ಷಿಸುವವನೇ! ಜ್ಞಾನರೂಪನೇ, ಸಮಸ್ತ ಭೂತಗಳಲ್ಲೂ ವಾಸಮಾಡಿರುವವನೇ, ಸಾಧುಸಜ್ಜನರಲ್ಲಿ ವಿಶ್ವಾಸಿಯಾದವನೇ, ಉತ್ಪತ್ತಿರಹಿತನೇ, ಅನಂತನೇ, ಭೂತಸೃಷ್ಟಿಗೆ ಕಾರಣನೇ, ಸಮಸ್ತ ದೇವತೆಗಳಲ್ಲೂ, ಗಂಧರ್ವರಲ್ಲೂ, ಮುನಿಗಳಲ್ಲೂ ವಾಸವಾಗಿರುವವನು ನೀನೇ ಅಲ್ಲವೆ? ಶೇಷನೇ ಲಕ್ಷ್ಮಣನಾದನು. ಶಂಖ-ಚಕ್ರಗಳೇ ಭರತ-ಶತ್ರುಘ್ನರಾದರು. ಸಮಸ್ತ ದೇವತೆಗಳೇ ವಾನರರಾಗಿ ಅವತರಿಸಿದರು. ಸಾಕ್ಷಾದ್ವಿಷ್ಣುವಾದ ನೀನೇ ಶ್ರೀ ರಾಮರೂಪದಿಂದ ಅವತಾರಮಾಡಿರುವೆ. ಹೇ ಸ್ವಾಮಿಯೇ, ನೀನು ಸಮಸ್ತಲೋಕಗಳಿಗೂ ಉಪಕಾರಮಾಡಬೇಕೆಂದೇ ಈ ಅವತಾರವನ್ನು ಧರಿಸಿರುವೆ. ಎಲೈ ಪರಮಾತ್ಮನೇ, ನಿನ್ನ ನಾಮಸ್ಮರಣೆ ಮಾಡುವ, ನಿನ್ನ ಮೂರ್ತಿಯನ್ನು ಧ್ಯಾನಿಸುವ ಪ್ರಾಣಿಯು ಎಂಥ ಪಾತಕಿಯಾದರೂ ಈ ಕಷ್ಟತರ ಸಂಸಾರವನ್ನು ದಾಟಿ ಕೃತಾರ್ಥನಾಗುವನು. ನಿನ್ನ ಗುಣಗಳನ್ನು ಹೊಗಳುವ ಮನುಷ್ಯನು ಎಷ್ಟು ನೀಚನಾದರೂ ಪರಿಶುದ್ಧನಾಗುವನು. ವಿಶೇಷತಃ ಕಲಿಯುಗದಲ್ಲಂತೂ ನಿನ್ನ ನಾಮಸ್ಮರಣೆಯ ಹೊರತಾಗಿ ಮತ್ತೊಂದು ಮೋಕ್ಷದಾಯಕವಾದ ಮಾರ್ಗವೇ ಇಲ್ಲ. ಹೇ ಸಹಸ್ರ ಮುಖನೇ, ಸಹಸ್ರ ನಯನನೇ, ಹೇ ಸುರಪತಿಯೇ, ಸೀತಾಮನೋವಲ್ಲಭನೇ, ಸಹಸ್ರ ಬಾಹುವೇ, ಮೇಘವರ್ಣನೇ, ವಿಶ್ವತೋಮುಖನೇ, ಅಚ್ಯುತನೇ, ನಿನಗೆ ನನ್ನ ಅನಂತ ನಮಸ್ಕಾರಗಳಿರಲಿ"

ಈ ಪ್ರಕಾರ ಗದ್ಗದಿತಾಂತಃಕರಣನಾಗಿ ಶ್ರುತ್ಯುಕ್ತವಾದ ಅನೇಕ ವಿಶೇಷಣಗಳಿಂದ ಆ ಮುನಿಯು ಮಾಡಿದ ಈ ಸ್ತೋತ್ರವನ್ನು ಯಾವ ಮನುಷ್ಯನು ಭಕ್ತಿಯಿಂದ ಪಠಣಮಾಡುವನೋ ಆತನ ಸಮಸ್ತ ಇಷ್ಟಾರ್ಥಗಳನ್ನೂ ಶ್ರೀ ರಾಮನು ನೆರವೇರಿಸುವನು. ಆತನ ಸಮಸ್ತ ಪಾಪಗಳೂ ಶ್ರೀ ರಾಮನ ಕೃಪೆಯಿಂದ ಪರಿಹಾರವಾಗುವವು.

## ೨ನೆಯ ಪ್ರಕರಣ.

### ಯಜ್ಞವರ್ಣನ.

ಶ್ರೀರಾಮನು ಕುಂಭೋದರ ಮಹರ್ಷಿಗಳನ್ನು ಯಥಾವಿಧಿ ಸತ್ಕರಿಸಿದನಂತರ ಋತ್ವಿಜರು ಶ್ಯಾಮಕರ್ಣವೆಂಬ ಯಜ್ಞೀಯಾಶ್ವವನ್ನು ಯೂಪಸ್ತಂಭಕ್ಕೆ ಕಟ್ಟಿದರು. ಮತ್ತು ಅದರ ಸಮಸ್ತ ಅವಯವಗಳನ್ನು ವೇದೋಕ್ತ ಮಂತ್ರಗಳಿಂದ ಅಭಿಮಂತ್ರಿಸಿ, ಖಡ್ಗದಿಂದ ಛೇದಿಸಿದರು. ಬಳಿಕ ಆಜ್ಯಹೋಮಗಳೂ ಅಂಗಹೋಮಗಳೂ ನಡೆದವು. ಸವಿತೃಹೋಮಗಳಾದಮೇಲೆ ಗೋಘೃತಯುಕ್ತವಾದ ವಸೋರ್ಧಾರಾಹೋಮವು ನಡೆಯಿತು. ಆಗ ಧಾರಾಕಾರವಾಗಿ ಆಜ್ಯವು ಅಗ್ನಿಯಲ್ಲಿ ಸುರಿಯುತ್ತಿತ್ತು. ಈ ಯಜ್ಞವು ನಡೆಯುವ ಕಾಲದಲ್ಲಿ ಅಂತರಿಕ್ಷವು ಹೊಗೆಯಿಂದ ತುಂಬಿತ್ತು; ಇದುವರೆಗೂ ಆ ಯಜ್ಞಕುಂಡದ ಬಳಿಯಲ್ಲಿ ಹೊಗೆಯು ದೃಗ್ಗೋಚರವಾಗುತ್ತಿರುವದು. ಚೈತ್ರಮಾಸದಲ್ಲಿ ಈ ಅಶ್ವಮೇಧ ಯಜ್ಞವು ನಡೆಯಿತು. ಮಹರ್ಷಿಗಳು ಆ ಯಜ್ಞಕಾರ್ಯಗಳನ್ನು ಯಥಾವಿಧಿಯಿಂದ ನಡಿಸುತ್ತಿದ್ದರು. ಶ್ರೀ ರಾಮನು ಪ್ರತಿದಿವಸವೂ ಪ್ರಾತಃಕಾಲದಲ್ಲಿ ಶಯನದಿಂದೆದ್ದು ಸೀತಾಸಮೇತನಾಗಿ, ಶಂಕರ, ಪಾರ್ವತಿ, ಬ್ರಹ್ಮ, ದೇವತೆಗಳು, ಗುರುಗಳು, ಮುನಿಗಳು, ತಾಯಿ, ಯಜ್ಞಶಾಲೆಯಲ್ಲಿರುವ ಸಮಸ್ತ ಬ್ರಾಹ್ಮಣರು ಇವರೆಲ್ಲರಿಗೂ ಪ್ರತ್ಯೇಕ ನಮಸ್ಕಾರ ಮಾಡುತ್ತಿದ್ದನು. ಅನಂತರ ರಾಮತೀರ್ಥದಲ್ಲಿ ಸ್ನಾನ ಮಾಡಿ ನಿತ್ಯ ಕಾರ್ಯಗಳನ್ನು ಮುಗಿಸಿಕೊಂಡು, ಶಂಕರನನ್ನು ಪೂಜಿಸುವನು. ಮತ್ತು ಕಾಮಧೇನುವಿನ ಅನುಗ್ರಹದಿಂದ ಪ್ರಾಪ್ತವಾದ ಉಪಹಾರಗಳನ್ನು ಸೀತಾ-ರಾಮರು ಸಮ

ಸ್ತ ಋಷಿಗಳಿಗೂ ದೇವತೆಗಳಿಗೂ ಗುರುಗಳಿಗೂ ಯಥೇಷ್ಟವಾಗಿ ಬಡಿಸುತ್ತಿದ್ದರು. ಅನಂತರ ಸಮಸ್ತ ಋತ್ವಿಜರೂ ತಮ್ಮ ನಿತ್ಯ ಕಾರ್ಯಗಳನ್ನು ಮುಗಿಸಿಕೊಂಡು ಯಜ್ಞಶಾಲೆಯುಲ್ಲಿ ನಡೆಯುತಕ್ಕ ಹೋಮಗಳನ್ನು ಯಥಾವಿಧಿಯಾಗಿ ನಡೆಸುವರು. ಆಗ ಸಮಸ್ತ ದೇವತೆಗಳೂ ತಮ್ಮ ತಮ್ಮ ಹವಿಸ್ಸುಗಳನ್ನು ಯಜ್ಞಕುಂಡಕ್ಕೆ ಬಂದು ತಾವೇ ಸ್ವೀಕರಿಸುತ್ತಿದ್ದರು. 'ಆಹಾವಯ, ಅಸ್ತುಶ್ರೌಷಟ್' ಎಂಬ ಧ್ವನಿಗಳು ಮೇಘಗರ್ಜನೆಯಂತೆ ಸಮಸ್ತರಿಗೂ ಕೇಳಲಾರಂಭಿಸಿದವು. ಆ ಯಜ್ಞಶಾಲೆಯ ಮಧ್ಯದಲ್ಲಿ ಒಂದು ದೊಡ್ಡ ಅಗ್ನಿಕುಂಡವಿತ್ತು. ಅದರ ಸಮೀಪದಲ್ಲಿ ಋತ್ವಿಜರು ಕುಳಿತಿದ್ದರು. ಮುನಿಗಳು, ರಾಜರು, ಪಂಡಿತರು, ಸ್ತ್ರೀಯರು, ಇವರೇ ಮೊದಲಾದ ಸಮಸ್ತ ಮಂಡಲಿಗಳೂ ತಮ್ಮ ತಮ್ಮ ಯೋಗ್ಯಸ್ಥಾನಗಳಲ್ಲಿ ವ್ಯವಸ್ಥಿತ ರೀತಿಯಿಂದ ಕುಳಿತಿದ್ದರು. ಮಧ್ಯಾಹ್ನಕಾಲದ ಆಹುತಿಗಳು ಮುಗಿದ ಬಳಿಕ ಸಮಸ್ತರೂ ಮಾಧ್ಯಾಹ್ನಿಕ ಕೃತ್ಯಗಳನ್ನು ನೆರವೇರಿಸಲು ತೆರಳಿದರು. ಅನಂತರ ಲಕ್ಷ್ಮಣನು ಭೋಜನ ಶಾಲೆಯಲ್ಲಿ ಮಾಂಡವಿ, ಶ್ರುತಕೀರ್ತಿ, ಊರ್ಮಿಳಾ ಇವರ ಸಹಾಯದಿಂದ ಶೀಘ್ರವಾಗಿ ಭೋಜನ ವ್ಯವಸ್ಥೆಯನ್ನು ನಡೆಸಿದ್ದನು. ಅಲ್ಲಿ ಎಲ್ಲಿ ನೋಡಿದರೂ ರತ್ನಖಚಿತವಾದ ಮಣೆಗಳು, ಸುವರ್ಣದ ಭೋಜನ ಪಾತ್ರೆಗಳು, ಅವುಗಳಲ್ಲಿ ಷಡ್ರಸಯುಕ್ತವಾದ ಭಕ್ಷ್ಯ-ಭೋಜ್ಯಗಳು ಕಂಗೊಳಿಸುತ್ತಿದ್ದವು. ಅನಂತರ ಬ್ರಾಹ್ಮಣರೂ, ಮುನಿಗಳೇ ಮೊದಲಾದ ಅತಿಥಿಗಳೆಲ್ಲರೂ ಭೋಜನಶಾಲೆಗೆ ಬಂದು ತಮತಮಗೆ ಯೋಗ್ಯವಾದ ಆಸನಗಳಲ್ಲಿ ಕುಳಿತರು. ಬ್ರಾಹ್ಮಣರ ಭೋಜನವು ಪ್ರಾರಂಭವಾಯಿತು. ಆಗ ರಾಮ,-ಲಕ್ಷ್ಮಣ,-ಭರತ,-ಶತ್ರುಘ್ನರು ಕೈಜೋಡಿಸಿಕೊಂಡು "ಎಲೈ ದ್ವಿಜೋತ್ತಮರೆ, ಯಥೇಚ್ಛ ಭೋಜನ ಮಾಡಬೇಕು. ಸಂಕೋಚ ಮಾಡಿಕೊಳ್ಳಬೇಡಿರಿ. ಇಷ್ಟವಿಲ್ಲದ ಪದಾರ್ಥವನ್ನು ಚಲ್ಲಿಬಿಡಿರಿ. ಬೇಕಾದ ಪದಾರ್ಥವನ್ನು ಮತ್ತೆಮತ್ತೆ ತರಿಸಿಕೊಳ್ಳಿರಿ." ಎಂದು ಪ್ರಾರ್ಥನೆ ಮಾಡಿದರು. ಮತ್ತು ಸೀತಾ, ಮಾಂಡವಿ, ಶ್ರುತಕೀರ್ತಿ, ಊರ್ಮಿಳಾ ಇವರೆಲ್ಲರೂ ಬಹು ಸಂತೋಷದಿಂದ ದೇವಬ್ರಾಹ್ಮಣರಿಗೆ ರುಚಿಕರಗಳಾದ ಪದಾರ್ಥಗಳನ್ನು ತಂದುತಂದು ಬಡಿಸುತ್ತಿದ್ದರು. ಸುಮಂತ್ರನೇ ಮೊದಲಾದ ಮಂತ್ರಿಗಳು ಬ್ರಾಹ್ಮಣರೆಲ್ಲರಿಗೂ ಘಾಳಿಬೀಸುತ್ತಿದ್ದರು. ಇನ್ನೂ ಕೆಲವರು ಕೇಸರಿ, ಪಚ್ಚಕರ್ಪೂರಗಳಿಂದ ಘಮಘಮಾಯಮಾನವಾದ ನೀರನ್ನು ಬಡಿಸುತ್ತಿದ್ದರು.

ಭೋಜನವಾದ ಮೇಲೆ ಬ್ರಾಹ್ಮಣರಿಗೆ ಕೈತೊಳೆಯಲು ದೂತರು ಬಿಸಿನೀರುಗಳನ್ನು ಸಿದ್ಧಪಡಿಸಿದ್ದರು. ಅನಂತರ ಬ್ರಾಹ್ಮಣರು, ದೇವತೆಗಳು, ಮುನಿಗಳು

ಇವರೆಲ್ಲರೂ ತಾಂಬೂಲ, ಪುಷ್ಪಾದಿಗಳನ್ನೂ ಪುಷ್ಕಳ ದಕ್ಷಿಣೆಗಳನ್ನೂ ಸ್ವೀಕರಿಸಿ, ತಮ್ಮ ಬಿಡಾರಗಳಿಗೆ ತೆರಳಿದರು. ಬಳಿಕ ರಾಜಮಂಡಲಿಯವರ ಭೋಜನವು ಅತಿ ವಿಜೃಂಭಣೆಯಿಂದ ನಡೆಯಿತು. ಅನಂತರ ವೈಶ್ಯರು, ಶೂದ್ರರು ಇವರೆಲ್ಲರೂ ಭೋಜನ ಮಾಡಿ ತೃಪ್ತರಾದರು. ಕೊನೆಗೆ ಚಾಂಡಾಲಾದಿ ಅಸ್ಪೃಶ್ಯ ಜಾತಿಯವರೂ ಭಕ್ಷ್ಯ-ಭೋಜ್ಯಗಳಿಂದ ಸಂತುಷ್ಟರಾದರು. ಈ ರೀತಿಯಿಂದ ಸಮಸ್ತ ಪ್ರಾಣಿಗಳೂ ತೃಪ್ತರಾದರೆಂಬ ವರ್ತಮಾನವನ್ನು ಕೇಳಿ ಶ್ರೀ ರಾಮನು ಸಂತೋಷದಿಂದ ಸೀತಾಸಮೇತನಾಗಿ ಭೋಜನ ಮಾಡಿದನು. ಆಕಾಲದಲ್ಲಿ ಲಕ್ಷ್ಮಣ-ಭರತ-ಶತ್ರುಘ್ನರೂ, ಆಪ್ತರೂ, ಬಂಧುಗಳೂ ಭೋಜನಕ್ಕೆ ಕುಳಿತಿದ್ದರು. ಅನಂತ ಶ್ರೀ ರಾಮನು ಸಭಾಮಂಟಪದಲ್ಲಿ ಕುಳಿತು, ಸಾಮಂತರಾಜರು, ಮುನಿಗಳು, ಇವರುಗಳೊಡನೆ, ಕಥಾ, ಪುರಾಣ, ಗಾಯನ, ಶಾಸ್ತ್ರ ಇವೇ ಮೊದಲಾದ ಕುಶಲವಿದ್ಯೆಗಳನ್ನು ಕೇಳುತ್ತ ನೋಡುತ್ತ ಪರಮಾನಂದದಿಂದ ಕಾಲಕಳೆದನು. ಸಾಯಂಕಾಲದಲ್ಲಿ ಸಮಸ್ತ ಋಷಿಗಳೂ ಸಾಯಂಕಾಲದ ನಿಯಮಗಳನ್ನೆಲ್ಲ ತೀರಿಸಿಕೊಂಡು ಯಜ್ಞಮಂಟಪಕ್ಕೆ ಬಂದರು. ಅನಂತರ ಸಾಯಂಸವನವು ನಡೆಯಿತು. ಶ್ರೀ ರಾಮನು ಸಮಸ್ತ ಪರಿಜನರಿಗೂ ವಿಶ್ರಾಂತಿ ಹೊಂದಲು ಅಪ್ಪಣೆಮಾಡಿ, ತಾನು ಕೃಷ್ಣಾಜಿನದ ಹಾಸಿಗೆಯಲ್ಲಿ ತನ್ನ ಇಷ್ಟದೇವತೆಗಳನ್ನು ಸ್ಮರಿಸಿ ಮಲಗಿದನು. ಆಗ ಸೀತೆಯು ಶ್ರೀ ರಾಮನ ಬಳಿಯಲ್ಲೇ ಶಯನ ಮಾಡಿದಳು. ಈ ರೀತಿ ಆ ಯಜ್ಞಸಮಾರಂಭದಲ್ಲಿ ಪ್ರತಿದಿವಸವೂ ಉತ್ಸವಗಳು ನಡೆಯುತ್ತಿದ್ದವು.

ಶ್ರೀ ರಾಮನು ಸುತ್ಯಾದಿವಸದಲ್ಲಿ ಸಭಾಸದರನ್ನೆಲ್ಲ ಪೂಜಿಸಿ, ಪ್ರತಿಪತ್ತಿಥಿಯಿಂದ ಕೂಡಿದ ಶುಭಮುಹೂರ್ತದಲ್ಲಿ ಧ್ವಜಾರೋಪಣ ಮಾಡಿದನು. ಶ್ರೀ ರಾಮನ ಅಶ್ವಮೇಧಯಾಗವು ಒಂದು ವರ್ಷ ಪರ್ಯಂತವೂ ನಡೆದದ್ದರಿಂದ ಚೈತ್ರ ಶುಕ್ಲಪ್ರತಿಪತ್ತಿಥಿಯಲ್ಲಿ ಈ ಧ್ವಜಾರೋಪಣವಿಧಿಯು ನಡೆಯಿತು. ಧ್ವಜಾರೋಪಣವಾದನಂತರ ವಸಿಷ್ಠರು ಅವಭೃತ ಸ್ನಾನಕ್ಕೆ ಹೊರಡಲು ಸಿದ್ಧನಾಗುವಂತೆ ಶ್ರೀ ರಾಮನಿಗೆ ಸೂಚಿಸಿದರು. ಬಿಸಿಲಿನ ತಾಪವು ಹೆಚ್ಚುವದೆಂದು ಶ್ರೀ ರಾಮನು ಸಕಲಪರಿವಾರದೊಡನೆ ಶೀಘ್ರವಾಗಿ ಹೊರಟನು. ರಾಮಚಂದ್ರನ ಅಪ್ಪಣೆಯಂತೆ ಲಕ್ಷ್ಮಣನು ಅವಭೃತಸನ್ನಾಹಗಳನ್ನೆಲ್ಲ ಸಿದ್ಧಗೊಳಿಸಿದ್ದನು. ನಾನಾವಿಧವಾದ ವಾದ್ಯಗಳು ಮೊಳಗಿದವು. ಆ ಕಾಲದಲ್ಲಿ ನಡೆಸತಕ್ಕ ಕಾರ್ಯಗಳನ್ನೆಲ್ಲ ನೆರವೇರಿಸಿ ಋತ್ವಿಜರು ಸಿದ್ಧರಾದರು. ಬಳಿಕ ಸೀತಾ-ರಾಮರು ಪರಿ

ದಾತ ಸಮೇತರಾಗಿ ಋತ್ವಿಜರೊಡನೆ ಸರಯೂ ತೀರದಲ್ಲಿರುವ ರಾಮತೀರ್ಥ ಕ್ಕೆ ಪ್ರಯಾಣಮಾಡಿದರು. ಆ ಕಾಲದಲ್ಲಿ ಶ್ರೀ ರಾಮನ ಮೇಲೆ ಅನೇಕರು ಪುಷ್ಪಗಳನ್ನು ವರ್ಷಿಸಿದರು. ಸೀತಾ-ರಾಮರನ್ನು ನೋಡಲು ಬಂದ ಜನಗಳ ಕೋಲಾಹಲವು ಬಹಳವಾಗಿತ್ತು. ಕೆಲವು ದೂತರು ಆ ಸಮ್ಮರ್ದವನ್ನು ಕಡಿಮೆ ಮಾಡಬೇಕೆಂದು ಜನಗಳನ್ನು ಶಿಕ್ಷಿಸಲಾರಂಭಿಸಿದರು. ಇದನ್ನೆಲ್ಲ ನೋಡಿ ಶ್ರೀ ರಾಮನು-'ಎಲೈ ಲಕ್ಷ್ಮಣನೆ, ಆ ಪರ್ಯುತ್ಸುಕರಾದ ಜನರನ್ನು ನಮ್ಮ ವಿಮಾನದ ಮೇಲೆ ಕುಳ್ಳಿರಿಸು. ಅವರು ಸಾವಧಾನವಾಗಿ ನಮ್ಮನ್ನು ನೋಡಲಿ' ಎಂದು ಆಜ್ಞಾಪಿಸಿದನು. ಲಕ್ಷ್ಮಣನು ಅಣ್ಣನ ಅಪ್ಪಣೆಯಂತೆ ಎಲ್ಲರನ್ನೂ ಪುಷ್ಪಕದಲ್ಲಿ ಕುಳ್ಳಿರಿಸಿದನು. ಅನಂತರ ಸೀತಾ-ರಾಮರನ್ನು ನೋಡಿ ಆ ಜನರು ಪರಮಸಂತುಷ್ಟರಾದರು. ಅಷ್ಟರಲ್ಲಿ ಇತರ ರಾಜಪತ್ನಿಯರನ್ನೂ ವಿಮಾನದಲ್ಲಿ ಕುಳ್ಳಿರಿಸಬೇಕೆಂಬ ಇಚ್ಛೆಯು ಸೀತೆಗೆ ಉಂಟಾಯಿತು. ಆಗ ಲಕ್ಷ್ಮಣನು ಆ ರಾಜಮಹಿಳೆಯರನ್ನು ಪುಷ್ಪಕದಲ್ಲಿ ಕುಳ್ಳಿರಿಸಿ ಸೀತೆಯ ಮನೋರಥವನ್ನು ಪೂರ್ಣಮಾಡಿದನು. ಅಲ್ಲಲ್ಲಿ ವಾದ್ಯಗಳ ಧ್ವನಿಗಳು ಕೇಳುತ್ತಿದ್ದವು. ಬ್ರಾಹ್ಮಣರು ವೇದಪಾರಾಯಣ ಮಾಡುತ್ತಿದ್ದರು. ಈ ವಿಧವಾದ ಸಂಭ್ರಮದಿಂದ ಸೀತಾ-ರಾಮರು ರಾಮತೀರ್ಥದ ಬಳಿಗೆ ನಡೆದರು. ಅಲ್ಲಿ ಯಥಾವಿಧಿಯಿಂದ ಜಲೇಷ್ಟಿಯನ್ನು ಋತ್ವಿಜರು ನಡೆಸಿದರು. ಅನಂತರ ಸೀತಾ-ರಾಮರು ರಾಮತೀರ್ಥದಲ್ಲಿ ಇಳಿದರು. ಅನೇಕ ಪುಣ್ಯತೀರ್ಥಗಳಿಂದ ತರಿಸಿದ್ದ ಸುವರ್ಣ ಕುಂಭಗಳಲ್ಲಿರುವ ಜಲಗಳಿಂದ ಮಹರ್ಷಿಗಳು ಆ ದಂಪತಿಗಳಿಗೆ ವೇದಮಂತ್ರಗಳನ್ನುಚ್ಚರಿಸುತ್ತ ಅಭಿಷೇಕ ಮಾಡಿದರು. ಲಕ್ಷ್ಮಣನೇ ಮೊದಲಾದ ಸಮಸ್ತ ರಾಜಪುತ್ರರೂ, ಸ್ತ್ರೀಯರೂ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿದರು.

ಅವಭೃತ ಸ್ನಾನವಾದ ಮೇಲೆ ಶ್ರೀ ರಾಮನು ಶುದ್ಧ ರೇಶ್ಮೆಯ ವಸ್ತ್ರಗಳನ್ನು ಧರಿಸಿದನು. ರತ್ನಖಚಿತಗಳಾದ ಕುಂಡಲುಗಳು ಆತನ ಕಿವಿಗಳಲ್ಲಿ ಥಳಥಳನೆ ಹೊಳೆಯುತ್ತಿದ್ದವು. ಹಸ್ತಗಳಲ್ಲಿ ಸುವರ್ಣದ ಕಂಕಣಗಳು ಪ್ರಕಾಶಿಸುತ್ತಿದ್ದವು. ಮುತ್ತಿನ ಸರಗಳು, ಪುಷ್ಪಹಾರಗಳು ಆತನ ಕಂಠವನ್ನಲಂಕರಿಸುತ್ತಿದ್ದವು. ಚಿಂತಾಮಣಿ ಕೌಸ್ತುಭ ಇವುಗಳಿಂದ ಹೃದಯವು ವಿರಾಜಮಾನವಾಗಿತ್ತು. ಸರ್ವಾಂಗ-ಸುಂದರನಾದ ಶ್ರೀ ರಾಮನು ಸೀತಾದೇವಿಯೊಡನೆ ರಾಮತೀರ್ಥದ ಬಳಿಯಲ್ಲಿ ಸಿದ್ಧಪಡಿಸಿದ ಸಿಂಹಾಸನದ ಮೇಲೆ ಕುಳಿತನು. ಇಂಥಾ ಶ್ರೀ ರಾಮನನ್ನು ನೋಡಿ ಜನರು ತಮ್ಮ ಕಣ್ಣುಗಳಿಗೆ ಪಾರಣೆಯನ್ನು ಮಾಡಿಸಿದರು. ಆ ಕಾ

ದಾರ ಶಿರೋಮಣಿಯಾದ ಶ್ರೀ ರಾಮನು ಋತ್ವಿಜರಿಗೆ ದಕ್ಷಿಣೆಗಳನ್ನೂ, ಆಕಳು, ಭೂಮಿ ಇವೇ ಮೊದಲಾದ ಮಹಾದಾನಗಳನ್ನೂ ಕೊಟ್ಟು ಸಂತೋಷಗೊಳಿಸಿದನು. ರಘುನಾಥನು ಸರ್ವಾಲಂಕಾರ ಭೂಷಿತವಾದ ಕಾಮಧೇನುವನ್ನು ಗುರುಗಳಾದ ವಸಿಷ್ಠರಿಗೆ ಕೊಡಲು ಉದ್ದೇಶಿಸಿದನು. ಇದನ್ನು ತಿಳಿದು ವಸಿಷ್ಠರು ಮನಸ್ಸಿನಲ್ಲಿ 'ನಮ್ಮ ಆಶ್ರಮದಲ್ಲಿ ನಂದಿನೀಧೇನುವಿರುವದಷ್ಟೆ! ಈ ಕಾಮಧೇನುವನ್ನು ತೆಗೆದುಕೊಂಡು ನಾನೇನು ಮಾಡಲಿ?' ಎಂದು ಯೋಚನೆ ಮಾಡಿದರು. ಮತ್ತು ಶ್ರೀ ರಾಮನನ್ನು ನೋಡಿ 'ಎಲೈ ರಘುನಂದನನೆ, ಈ ಕಾಮಧೇನುವನ್ನು ನನಗೇಕೆ ದಾನ ಕೊಡುವೆ? ಇದರಿಂದ ನನಗೆ ತೃಪ್ತಿಯಾಗಲಾರದು. ಏನನ್ನಾದರೂ ದಾನ ಮಾಡಬೇಕೆಂದು ನಿನಗೆ ಇಚ್ಛೆ ಇದ್ದರೆ, ಸರ್ವಾಲಂಕಾರ-ಭೂಷಿತಳಾದ ಸೀತೆಯನ್ನು ನನಗೆ ದಾನಮಾಡು. ನನಗೆ ಸೀತೆಯನ್ನು ಹೊರತಾಗಿ ಇನ್ನೇನು ಕೊಟ್ಟರೂ ತೃಪ್ತಿಯಾಗಲಾರದು' ಎಂದು ಮಾತಾಡಿದರು.

ಈ ಮಾತುಗಳನ್ನು ಕೇಳಿದೊಡನೆ ಸಮಸ್ತಜನರೂ ಗಾಬರಿಯಿಂದ ಹಾ ಹಾ ಕಾರ ಮಾಡಿದರು. ಕೆಲವರು 'ವಸಿಷ್ಠರಿಗೇನೋ ಹುಚ್ಚು ಹಿಡಿಯಿತು' ಎಂದರು. ಮತ್ತೆ ಕೆಲವರು 'ಈ ಗುರುಶಿಷ್ಯರ ಪರೀಕ್ಷೆಯು ಈಗ ತಿಳಿಯತಕ್ಕದ್ದು' ಎಂದು ಮಾತನಾಡಿದರು. ಈ ರೀತಿಯಾಗಿ ಜನಗಳು ಅನೇಕ ವಿಧವಾದ ತರ್ಕಗಳನ್ನು ಮಾಡುತ್ತಿದ್ದರು. ಅಷ್ಟರಲ್ಲಿ ರಾಮಚಂದ್ರನು ಸ್ವಲ್ಪನಕ್ಕು ಸೀತೆಯ ಮುಖವನ್ನು ನೋಡಿ 'ಎಲೈ ಜಾನಕಿಯೆ, ಇಲ್ಲಿ ಬಾ, ಈಗ ನಮ್ಮ ಗುರುಗಳ ಸಂತೋಷಕ್ಕಾಗಿ ನಿನ್ನನ್ನು ಅವರಿಗೆ ದಾನ ಮಾಡುವೆನು' ಎಂದನು. ಈ ಮಾತುಗಳನ್ನು ಕೇಳಿ ಸೀತಾದೇವಿಯು ಶ್ರೀ ರಾಮನ ಎದುರಿಗೆ ಬಂದು ನಿಂತಳು. ಶ್ರೀ ರಾಮನು ಸೀತೆಯ ಹಸ್ತಗ್ರಹಣ ಮಾಡಿ, 'ಗುರುಶ್ರೇಷ್ಠರೇ, ಪತ್ನೀದಾನಕ್ಕೆ ಸಂಕಲ್ಪ ಮಾಡಿಸಿರಿ' ಎಂದನು. ವಸಿಷ್ಠರು ಯಥಾ ಶಾಸ್ತ್ರವಾಗಿ ಸಂಕಲ್ಪಮಾಡಿಸಿ ಸೀತೆಯನ್ನು ದಾನಹಿಡಿದರು. ಸಮಸ್ತ ದೇವತೆಗಳಿಗೂ ಪರಮಾಶ್ಚರ್ಯವಾಯಿತು. ಎಲ್ಲರೂ ವಸಿಷ್ಠರನ್ನು ನೋಡಲಾರಂಭಿಸಿದರು. ಆಗ ವಸಿಷ್ಠರು 'ಎಲೈ ಜನಕನಂದಿನಿಯೆ, ನಮ್ಮ ಹಿಂದೆ ಬಂದು ನಿಲ್ಲು. ಇನ್ನು ಮೇಲೆ ನೀನು ನಮ್ಮಲ್ಲೇ ಇರಬೇಕು. ನಾವು ನಿನ್ನನ್ನು ಮಗಳಂತೆ ಕಾಪಾಡುವೆವು' ಎಂದರು.

ಸೀತಾದೇವಿಯು ಗುರುಗಳ ಆಜ್ಞೆಯಂತೆ ನಡೆದುಕೊಂಡಳು. ಮತ್ತು ಶ್ರೀ ರಾಮನನ್ನು ನೋಡುತ್ತಾ ಕಣ್ಣುಗಳಲ್ಲಿ ನೀರು ಸುರಿಸಿದಳು. ಆಗ ಶ್ರೀರಾಮನು 'ಭೋ ಗುರುವರ್ಯರೇ, ಈ ಕಾಮಧೇನುವನ್ನು ಮೊದಲೆ ಸೀತೆಗೆ ಕೊಟ್ಟಿರುವೆನು.

ಆದ್ದರಿಂದ ಈ ಹಸುವನ್ನು ತಾವು ದಾನ ತೆಗೆದುಕೊಳ್ಳಿರಿ.' ಎಂದು ಆ ಧೇನುವನ್ನು ವಸಿಷ್ಠರ ಬಳಿಯಲ್ಲಿ ನಿಲ್ಲಿಸಿದನು. ಶ್ರೀರಾಮನ ಉದಾರವಾದ ಈ ಮಾತುಗಳನ್ನು ಕೇಳಿ, ವಸಿಷ್ಠರು ಗದ್ಗದಿತ ಕಂಠದಿಂದ—"ಎಲೈ ವತ್ಸ, ರಾಮಚಂದ್ರ, ನಿನ್ನ ಉದಾರ ಬುದ್ಧಿಯು ಸೂರ್ಯವಂಶಕ್ಕೆ ಅಲಂಕಾರವಾಗಿರುವದು. ಈ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲ. ನಿನ್ನ ಅಂತಃಕರಣದ ನೈರ್ಮಲ್ಯವನ್ನು ನೋಡಬೇಕೆಂದೇ ನಾನು ಸೀತೆಯನ್ನು ದಾನವಾಗಿ ಬೇಡಿದೆನು. ಇನ್ನು ನೀನು ಎಂಟು ಭಾಗ ಸುವರ್ಣವನ್ನು ನನಗೆ ಕೊಟ್ಟು, ಸೀತಾದೇವಿಯನ್ನು ನಿನ್ನ ಸನ್ನಿಧಿಗೆ ಕರೆದುಕೊಳ್ಳಬಹುದು. ಇನ್ನು ಮುಂದೆ ಸೀತೆ, ರಾಜ್ಯ, ಐಶ್ವರ್ಯ ಇವುಗಳನ್ನು ನಾನು ಯಾರಿಗೂ ಕೊಡುವದಿಲ್ಲವೆಂದು ಶಪಥ ಮಾಡು." ಎಂದು ಹೇಳಿದರು. ಬಳಿಕ ಶ್ರೀರಾಮನು ಸೀತಾದೇವಿಯನ್ನು ತೂಕ ಮಾಡಿಸಿ, ಆ ತೂಕದ ಎಂಟರಷ್ಟು ಸುವರ್ಣವನ್ನು ಗುರುಗಳಿಗೆ ಸಮರ್ಪಿಸಿದನು. ಋತ್ವಿ ಇತರ ಸಮಸ್ತ ಬ್ರಾಹ್ಮಣರನ್ನು ದಾನ-ಧರ್ಮಗಳಿಂದ ಸಂತೋಷಗೊಳಿಸಿ ಅಶ್ವಮೇಧಯಾಗವನ್ನು ಸಮಾಪ್ತಿ ಮಾಡಿದನು. ಋತ್ವಿಜರಿಗೆ ವಸ್ತ್ರ, ಆಭರಣ, ಉಂಗುರ ಇವೇ ಮೊದಲಾದ ಅನೇಕ ದ್ರವ್ಯಗಳನ್ನು ಸಮರ್ಪಿಸಿ, ಶ್ರೀರಾಮನು ಅವರ ಪಾದಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿದನು. ಅವರು ಶ್ರೀರಾಮನಿಗೆ ಅನಂತ ಆಶೀರ್ವಾದಗಳನ್ನು ಮಾಡಿದರು. ಸಾಮಂತರಾಜರೇ ಮೊದಲಾದ ಎಲ್ಲಾ ಮಿತ್ರವರ್ಗದವರಿಗೂ ವಸ್ತ್ರಾಭರಣಗಳೇ ಮೊದಲಾದ ಯೋಗ್ಯವಾದ ಮರ್ಯಾದೆಗಳಿಂದ ಶ್ರೀ ರಾಮನು ಸಂತೋಷವನ್ನುಂಟುಮಾಡಿದನು. ಈ ರೀತಿ ಬಹು ವಿಜೃಂಭಣೆಯಿಂದ ಅವಭೃತ ಸ್ನಾನವು ಸಮಾಪ್ತವಾಯಿತು.

ಅವಭೃತಸ್ನಾನವಾದ ಬಳಿಕ ಆನಂದಪೂರ್ಣನಾದ ಶ್ರೀ ರಾಮನನ್ನು ಸ್ತೋತ್ರಮಾಡಿ, ಶಂಕರನೇ ಮೊದಲಾದ ದೇವತೆಗಳು—'ಎಲೈ ಶ್ರೀ ರಾಮನೇ, ಅಶ್ವಮೇಧವನ್ನು ಸಾಂಗವಾಗಿ ನೆರವೇರಿಸಿದ ನಿನ್ನನ್ನು ನೋಡಿ, ನಾವು ಈ ದಿವಸ ಧನ್ಯರಾದೆವು. ಇಂಥಾ ದಿವಸವು ಮುಂದೆ ಯಾವಾಗಲೂ ನಮಗೆ ಒದಗಲಾರದು. ಆದ್ದರಿಂದ ಎಲೈ ಜಗನ್ನಾಥನೇ, ಈ ದಿವಸಕ್ಕೂ, ಈ ತಿಂಗಳಿಗೂ, ಈ ಸ್ಥಾನಕ್ಕೂ ಉತ್ತಮವಾದ ವರವನ್ನು ಕೊಡು. ನೀನು ತೀರ್ಥ-ಯಾತ್ರೆ ಮಾಡುವಾಗಲೂ, ವನವಾಸ ಮಾಡುವಾಗಲೂ ಯಾವ ಯಾವ ತೀರ್ಥಗಳನ್ನೂ, ಲಿಂಗಗಳನ್ನೂ ಸ್ಥಾಪಿಸಿರುವೆಯೋ, ಅವೆಲ್ಲವೂ ಪರಮ ಮಂಗಳಕರಗಳೆಂದು ಸಮಸ್ತ ಲೋಕಗಳೂ ತಿಳಿದಿರುವವು.' ಎಂದು ಪ್ರಾರ್ಥಿಸಿದರು. ಈ ಮಾತಗಳನ್ನು ಕೇಳಿ, ಶ್ರೀರಾಮನು ಮರಳ

ಹಾಸದಿಂದ ಯುಕ್ತನಾಗಿ 'ಇಂದಿನಿಂದ ಈ ಚೈತ್ರಮಾಸವು ಎಲ್ಲಾ ತಿಂಗಳುಗಳಲ್ಲಿ ಯೂ ಶ್ರೇಷ್ಠವಾದದ್ದಾಗಲಿ. ನಾನು ಇದೇ ತಿಂಗಳಲ್ಲಿ ಜನಿಸಿರುವೆನಾದ್ದರಿಂದ, ಇ ದೇ ಮಾಸದಲ್ಲಿ ನನ್ನ ಅಭಿಷೇಕಸ್ನಾನವು ನಡೆದಿರುವದರಿಂದ ಈ ತಿಂಗಳನ್ನು ಸ ರ್ವರೂ ಮಾನ್ಯಮಾಡಲಿ. ಈ ಮಾಸದಲ್ಲಿ ಮಾಡುವ ದಾನ-ಧರ್ಮಗಳು ಇತರ ಮಾಸಗಳ ದಾನಗಳಿಗಿಂತಲೂ ಹತ್ತರಷ್ಟು ಫಲದಾಯಕಗಳಾಗಲಿ. ಎಲ್ಲಾ ವ ರ್ಷಗಳಲ್ಲೂ ಈ ಚೈತ್ರ ಶುದ್ಧ ಪಾಡ್ಯವು ಶ್ರೇಷ್ಠಪದವಿಯನ್ನು ಹೊಂದಲಿ. ಈ ದಿ ವಸಕ್ಕಿಂತಲೂ ಶ್ರೇಷ್ಠನಾದ ಮುಹೂರ್ತಗಳು ಯಾವವೂ ಇಲ್ಲವೆಂದು ಸಮಸ್ತ ಜ ನರೂ ತಿಳಿಯಲಿ. ಈ ದಿವಸ ಮಾಡಿದ ಕಾರ್ಯಗಳು ಸಫಲವಾಗಲಿ. ನದಿಗಳ ಲ್ಲೆಲ್ಲಾ ಈ ಸರಯೂ ನದಿಯು ಈ ದಿವಸದಿಂದ ಶ್ರೇಷ್ಠವಾಗಲಿ. ಈ ನದಿಯಲ್ಲಿ ನಾನು ಸ್ಥಾಪಿಸಿದ ರಾಮತೀರ್ಥವು ಸಮಸ್ತ ತೀರ್ಥಗಳಿಗೂ ಶಿರೋರತ್ನವಾಗಿರು ವದು. ಈ ತೀರ್ಥದೊಳಗೆ ಚೈತ್ರಮಾಸದಲ್ಲಿ ಪ್ರತಿದಿನವೂ ಸ್ನಾನಮಾಡಬೇಕು. ಇದಕ್ಕಿಂತಲೂ ಶ್ರೇಷ್ಠವಾದ ಪುಣ್ಯಕಾರ್ಯಗಳು ಯಾವವೂ ಇಲ್ಲ. ಮಾಘಮಾಸ ದಲ್ಲಿ ಪ್ರಯಾಗ ಸ್ನಾನವು ಹ್ಯಾಗೆ ಶ್ರೇಷ್ಠವೋ, ಕಾರ್ತಿಕಮಾಸದಲ್ಲಿ ಕಾಶಿಯ ಪಂ ಚಗಂಗಾ ಸ್ನಾನವು ಹ್ಯಾಗೆ ಶ್ರೇಷ್ಠವೋ, ದ್ವಾರಕೆಯಲ್ಲಿರುವ ಚಕ್ರಕಾ ತೀರ್ಥ ದ ಸ್ನಾನವು ವೈಶಾಖಮಾಸದಲ್ಲಿ ಹ್ಯಾಗೆ ಶ್ರೇಷ್ಠವೋ, ಹಾಗೆ ಚೈತ್ರಮಾಸದಲ್ಲಿ ಈ ರಾಮತೀರ್ಥದಲ್ಲಿ ಸ್ನಾನಮಾಡೋಣವು ಮೋಕ್ಷಪ್ರದವಾಗಿರುವದು. ಈ ನನ್ನ ಅಯೋಧ್ಯೆಯು ಎಲ್ಲಾ ನಗರಗಳಿಗಿಂತಲೂ ಶ್ರೇಷ್ಠವಾದದ್ದು. ಕಾಶೀಕ್ಷೇತ್ರಕ್ಕಿಂ ತಲೂ ಇಲ್ಲಿ ನೂರು ಭಾಗ ಹೆಚ್ಚು ಮಹಿಮೆ ಇರುವದು. ಇದುವರೆಗೂ ಮಾರ್ಗ ಶಿರಮಾಸವನ್ನು ಶ್ರೇಷ್ಠವೆಂದು ತಿಳಿದಿದ್ದರು. ಇನ್ನು ಚೈತ್ರಮಾಸವೇ ಮುಖ್ಯವಾ ಗುವದು.' ಎಂದು ಮಾತನಾಡಿದನು.

ಈ ವಚನಗಳನ್ನು ಕೇಳಿ ಪಾರ್ವತಿಯು ಸೀತೆಯನ್ನು ಕುರಿತು—ದೇವೀ, ನೀನು 'ವರಪ್ರದಾನಮಾಡಬೇಕು, ಎಂದು ಪ್ರಾರ್ಥಿಸಿದಳು. ಜನಕನಂದಿನಿಯು ಪರಮ ಹರ್ಷದಿಂದ "ಈ ಪೃಥ್ವಿಯ ಮೇಲಿರುವ ಅನೇಕ ತೀರ್ಥಗಳಲ್ಲಿ ಈ ದಿವ ಸ ನಾನು ಸ್ನಾನಮಾಡಿದ ತೀರ್ಥವು ಶ್ರೇಷ್ಠವೆಂದೆಣಿಸಲಿ. ಈ ತೀರ್ಥದಲ್ಲಿ ಚೈತ್ರ ಶುದ್ಧ ತದಿಗೆಯಿಂದ ವೈಶಾಖ ಶುದ್ಧ ತದಿಗೆಯ ವರೆಗೆ ಯಾವ ಸ್ತ್ರೀಯರು ಸೀತಾಗೌರೀ ಎಂಬ ಸ್ನಾನವನ್ನು ಮಾಡುವರೋ, ಅವರು ಸಮಸ್ತ ಸೌಭಾಗ್ಯ ಗಳನ್ನು ಹೊಂದುವರು. ಎಲ್ಲಿಯ ವರೆಗೂ ರಾಮತೀರ್ಥವು ಪ್ರಸಿದ್ಧವಾಗಿರುವ ದೋ, ಅಲ್ಲಿಯ ವರೆಗೂ ಈ ತೀರ್ಥವೂ ಮಹಾ ಮಹಿಮೆಯುಳ್ಳದ್ದೆಂದು

ತಿಳಿಯಬೇಕು" ಎಂದು ಮಾತನಾಡಿದಳು. ಅನಂತರ ವಸಿಷ್ಠರು 'ರಾಮಚಂದ್ರನೆ ಇನ್ನು ಹೊತ್ತಾಯಿತು. ಯಜ್ಞಮಂಟಪಕ್ಕೆ ನಡೆ' ಎಂದರು. ಗುರುಗಳ ಅಪ್ಪಣೆಯಂತೆ ಶ್ರೀ ರಾಮನು ಸೀತಾಸಮೇತನಾಗಿ ರಥದಲ್ಲಿ ಕುಳಿತು, ಪೂರ್ವದಂತೆ ಅತಿ ವಿಜೃಂಭಣೆಯಿಂದ ಯಜ್ಞಶಾಲೆಗೆ ಪ್ರಯಾಣ ಮಾಡಿದನು. ಅಲ್ಲಿ ಶ್ರೀ ರಾಮನು ರಥದಿಂದ ಇಳಿದು ಅಗ್ನಿಯನ್ನು ಯಜ್ಞಕುಂಡದಲ್ಲಿರಿಸಿದನು. ಮತ್ತು ಪೂರ್ಣಾಹುತಿಯಾದನಂತರ ವಸ್ತ್ರ, ಮಾಲ್ಯ, ಅಲಂಕಾರಗಳೇ ಮೊದಲಾದ ಪೂಜಾ ದ್ರವ್ಯಗಳಿಂದ ಅಗ್ನಿಯನ್ನು ಪೂಜಿಸಿದನು. ಬಳಿಕ ಯಜ್ಞಪಾತ್ರಗಳನ್ನು ವಿಸರ್ಜನೆ ಮಾಡಿ, ಶ್ರೀ ರಾಮನು 'ಎಲೈ ಲಕ್ಷ್ಮಣನೇ, ಈ ಋತ್ವಿಜರನ್ನು ಧನಾಗಾರಕ್ಕೆ ಕರೆದುಕೊಂಡು ಹೋಗು. ಇವರು ಯಾವ ಯಾವ ದ್ರವ್ಯಗಳನ್ನು ಅಪೇಕ್ಷಿಸುವರೋ, ಅವೆಲ್ಲವನ್ನೂ ರಥದಲ್ಲಿರಿಸಿಕೊಂಡು ಅವರವರ ಆಶ್ರಮಗಳಿಗೆ ಹೋಗಿ ಆ ಪದಾರ್ಥಗಳನ್ನು ತಲ್ಪಿಸಿ ಬರತಕ್ಕದ್ದು,' ಎಂದು ಆಜ್ಞಾಪಿಸಿದನು. ಲಕ್ಷ್ಮಣನು ಅಣ್ಣನ ಆಜ್ಞೆಯಂತೆ ಋತ್ವಿಜರನ್ನು ಸಂತೋಷಗೊಳಿಸಿದನು. ಅನಂತರ ಶ್ರೀರಾಮ–ಲಕ್ಷ್ಮಣ–ಭರತ–ಶತ್ರುಘ್ನರು ತಮ್ಮ ತಮ್ಮ ವಸ್ತ್ರಾಭರಣಗಳನ್ನು ಧರಿಸಿ, ಸಿಂಹಾಸನಗಳ ಮೇಲೆ ಕುಳಿತರು. ಆಗ ಅನೇಕ ಸಾಮಂತ ರಾಜರು ಶ್ರೀ ರಾಮನ ದರ್ಶನ ಮಾಡಿಕೊಂಡು, ಕಾಣಿಕೆಗಳನ್ನು ಒಪ್ಪಿಸಿದರು. ಸಮಸ್ತ ರಾಜರಿಗೂ, ಬ್ರಾಹ್ಮಣರಿಗೂ ಯಥಾಯೋಗ್ಯ ಮರ್ಯಾದೆಗಳನ್ನು ಮಾಡಿ, ಶ್ರೀ ರಾಮನು ಗಜಾರೂಢನಾಗಿ ಅಯೋಧ್ಯೆಗೆ ಪ್ರಯಾಣಮಾಡಿದನು. ಆ ಕಾಲದಲ್ಲಿ ಪಟ್ಟಾಭಿಷೇಕದ ಸಮಯದಲ್ಲಿ ನಡೆದಂತೆ ಸಮಸ್ತ ರಾಜಸತ್ಕಾರಗಳೂ ನಡೆದುವು. ಶ್ರೀ ರಾಮನು ಪುರಪ್ರವೇಶ ಮಾಡುವಾಗ ಅಯೋಧ್ಯೆಯು ಅಲಂಕೃತವಾಗಿ ನವವಧುವಿನಂತೆ ಕಾಣುತ್ತಿತ್ತು. ರಾಜಮಾರ್ಗಗಳಲ್ಲಿ ಪ್ರಜೆಗಳು ಮಾಡುವ ಸತ್ಕಾರಗಳನ್ನು ಸ್ವೀಕರಿಸುತ್ತ ಶ್ರೀ ರಾಮನು ಸಭಾಮಂಟಪವನ್ನು ಪ್ರವೇಶಿಸಿ ಸಿಂಹಾಸನದ ಮೇಲೆ ಕುಳಿತನು. ಆಗ ಸಮಸ್ತ ರಾಜರೂ ವಂದಿಸಿದರು. ಸ್ತುತಿಪಾಠಕರು ರಘುನಾಥನ ಸ್ತುತಿಗಳನ್ನು ಕೂಗಿ ಹೇಳುತ್ತಿದ್ದರು. ಯಜ್ಞಕ್ಕೆ ಬಂದ ಸಮಸ್ತ ರಾಜರಿಗೂ ಯಥಾಯೋಗ್ಯ ಮರ್ಯಾದೆಗಳನ್ನು ಮಾಡಿ, ತಮ್ಮ ತಮ್ಮ ಸ್ಥಳಗಳಿಗೆ ಪ್ರಯಾಣ ಮಾಡಲು ಅನುಜ್ಞೆ ಮಾಡಿದನು. ಬ್ರಹ್ಮ, ಶಂಕರ, ಇಂದ್ರ, ಋಷಿಗಳು, ಬ್ರಾಹ್ಮಣರು, ರಾಜರು ಇವರೆಲ್ಲರೂ ಶ್ರೀ ರಾಮನ ಅನುಜ್ಞೆಯನ್ನು ಪಡೆದು ತಮ್ಮ ಸ್ಥಳಗಳಿಗೆ ಪ್ರಯಾಣ ಬೆಳಸಿದರು. ಶ್ರೀ ರಾಮನು ಇಪ್ಪತ್ತು ವರ್ಷಗಳಿಗೊಂದು ಸಲ ಇಂಥಾ ಯಜ್ಞವನ್ನು ತಪ್ಪದೆ ಮಾಡುತ್ತಿದ್ದನು. ಈ ರೀತಿಯಾಗಿ ಶ್ರೀ ರಾಮನು

ಧರ್ಮಾಚರಣೆಮಾಡಿ ಸಮಸ್ತ ಪ್ರಜೆಗಳನ್ನೂ ತೃಪ್ತಿಗೊಳಿಸುವನು. ಈ ಯಾಗ ಕಾಂಡವು ಪರಮ ಪವಿತ್ರವಾದದ್ದು- ಇದನ್ನು ಭಕ್ತಿಯಿಂದ ಪಠಣ ಮಾಡಲು, ಮನುಷ್ಯನ ಸರ್ವ ಪಾಪಗಳೂ ಪರಿಹೃತವಾಗುವವು- ಮಹತ್ಪುಣ್ಯವು ಲಭ್ಯವಾಗುವದು.

ಯಾಗಕಾಂಡಸ್ಸಮಾಪ್ತಃ

# ವಿಲಾಸಕಾಂಡ.

## ಸೀತಾ—ರಾಮರ ವಿಲಾಸ.

ಶ್ರೀಂಕರನು ಹೇಳುತ್ತಾನೆ. "ಎಲೈ ಪಾರ್ವತಿಯೆ" ಈ ಕಾಂಡದಲ್ಲಿ ಶ್ರೀರಾಮನ ವಿಲಾಸ ಚರಿತ್ರೆಯನ್ನು ವಿಸ್ತರಿಸುವೆನು. ರಾಮಚಂದ್ರನ ಚರಿತ್ರೆಯನ್ನು ಸಮಗ್ರವಾಗಿ ಹೇಳಲು ಆದಿಶೇಷನಿಗೂ ಸಾಧ್ಯವಿಲ್ಲ. ಆದರೂ ಇಲ್ಲಿ ಮುಖ್ಯ ಮುಖ್ಯ ವಿಷಯಗಳನ್ನು ನಿನಗೆ ಸಂಗ್ರಹ ಮಾಡಿ ತಿಳಿಸುವೆನು. ಶ್ರೀರಾಮನ ವಾಸಗೃಹವು ಅತಿ ರಮಣೀಯವಾಗಿತ್ತು. ಎಲ್ಲಿ ನೋಡಿದರೂ ಸುವರ್ಣದ ಬೆಳಕೇ ಹೊರತು ಬೇರೆಕಾಣಿಸುತ್ತಿರಲಿಲ್ಲ. ಆತನ ಶಯನ ಮಂದಿರದಲ್ಲಿ ಸರ್ವೋತ್ತಮವಾದ ಅಲಂಕಾರಗಳು ಕಂಗೊಳಿಸುತ್ತಿದ್ದವು. ಆ ಮಂದಿರದ ಗೋಡೆಗಳ ಮೇಲೆ ಅನೇಕ ತರದ ಚಿತ್ರಗಳನ್ನು ಬರೆದಿದ್ದರು. ಅವು ಎದ್ದು ಬರುತ್ತವೆಯೋ ಎಂಬಂತೆ ಕಾಣುತ್ತಿದ್ದವು. ಭೂಮಿಯು ಸ್ಫಟಿಕ ಶಿಲೆಗಳಿಂದ ರಂಜಿತವಾಗಿತ್ತು. ಆ ಶಿಲೆಗಳ ಮಧ್ಯದಲ್ಲಿ ಇಂದ್ರ—ನೀಲಮಣಿಗಳನ್ನು ಸೇರಿಸಿದ್ದರು. ಅಲ್ಲಿ ಸುವರ್ಣದ ಚೌಕಟ್ಟುಗಳಿಂದ ಪ್ರಕಾಶಿಸುವ ನಾಲ್ಕು ನಿಲವುಗನ್ನಡಿಗಳಿದ್ದವು. ಎಲ್ಲಿ ನೋಡಿದರೂ ಮುತ್ತಿನ ಗೊಂಚಲುಗಳು ಹೊಳೆಯುತ್ತಿದ್ದವು. ಸುವರ್ಣಮಯ ಮಂಚಗಳು ಅಲ್ಲಲ್ಲಿ ನವರತ್ನಖಚಿತಗಳಾಗಿದ್ದವು. ಅವು ನಾನಾವಿಧವಾದ ಲೇಪುಗಳಿಂದಲೂ ದಿಂಬುಗಳಿಂದಲೂ ಶೋಭಿಸುತ್ತಿದ್ದವು. ಆ ಮಂಚಗಳ ನಾಲ್ಕು ಭಾಗಗಳಲ್ಲೂ ರತ್ನಮಯವಾದ ದೀಪಗಳನ್ನಿರಿಸಿದ್ದರು. ಅಲ್ಲಲ್ಲಿ ಸುವರ್ಣದ ಕಲಶಗಳಲ್ಲಿ ನೀರು ತುಂಬಿ ಇರಿಸಿದ್ದರು ನಿಪುಣರಾದ ಸೇವಕರು ಸೀತಾ—ರಾಮರಿಗೆ ಅತಿ ಮನೋಹರವಾದ ಪುಷ್ಪಶಯ್ಯೆಯನ್ನು ನಿರ್ಮಿಸಿದ್ದರು. ಪಂಜರಗಳಲ್ಲಿ ಅನೇಕ ಕೃತ್ರಿಮ ಪಕ್ಷಿಗಳು ಕಂಗೊಳಿಸುತ್ತಿದ್ದವು. ಅವು ಪರಿಚಿತರಿಗೂ ಕೂಡ ಭ್ರಾಂತಿಯನ್ನುಂಟುಮಾಡುತ್ತಿದ್ದವು. ಮತ್ತು ಅನೇಕ ಗಿಳಿಗಳು ಶ್ರೀ ರಾಮನನ್ನು ನಾನಾ ವಿಧವಾದ ಸ್ತೋತ್ರಗಳಿಂದ ಸಂತೋಷಗೊಳಿಸುತ್ತಿದ್ದವು. ಇಂಥಾ ರಮಣೀಯವಾದ ಶಯನ ಮಂದಿರದಲ್ಲಿ ಶ್ರೀ ರಾಮನು ಸೀತೆಯೊಡನೆ ಅನೇಕ ಸುಖಗಳನ್ನನುಭವಿಸಿದನು.

ಸೀತಾದೇವಿಯು ತನ್ನ ಅನೇಕ ವಿಧವಾದ ಆಟಗಳಿಂದಲೂ ವಾಕ್ಚಾತುರ್ಯಗಳಿಂದಲೂ ಶ್ರೀ ರಾಮನನ್ನು ಸಂತೋಷಿಸುತ್ತಿದ್ದಳು. ಒಂದಾನೊಂದು ದಿವಸ

ಶ್ರೀ ರಾಮನು ಸೀತಾದೇವಿಯ ಸೌಂದರ್ಯವನ್ನೂ, ಶ್ರೇಷ್ಠವಾದ ಗುಣಗಳನ್ನೂ ನೋಡಿ ಹರ್ಷಭರಿತನಾಗಿ—'ಎಲೈ ಜಾನಕಿಯೆ, ಬ್ರಹ್ಮನು ನಿನ್ನನ್ನು ಹ್ಯಾಗೆ ನಿರ್ಮಾಣ ಮಾಡಿದ ನೋ, ಅದು ಎಷ್ಟು ವಿಚಾರಮಾಡಿದರೂ ನನಗೆ ತಿಳಿಯದು. ನಿನ್ನಂಥಾ ರೂಪವತಿ ಯೂ ಗುಣವತಿಯೂ ಆದ ಲಲನೆಯನ್ನು ಜಗದಲ್ಲಿ ನಾನು ಎಲ್ಲಿಯೂ ಕಾಣಲಿಲ್ಲ. ಪ್ರಿ ಯಳೆ, ನಿನ್ನ ಕಾಲಿನ ಉಗುರುಗಳು ಚಂದ್ರನನ್ನು ಅಣಕಿಸುತ್ತಿರುವವು. ಪಾದಗಳು ಎ ಷ್ಟು ಮೃದುವಾಗಿರುವವು. ಈ ನಿನ್ನ ಪಾದಗಳನ್ನು ನೋಡಿದರೆ ಅರಳಿದ ಕಮಲಗಳು ನಾಚಿಕೆಯಿಂದ ಬಾಡಿ ಇರವು. ಎಲೈ ಸುಂದರಿಯೇ, ನಿನ್ನ ಮುಖವು ಎಷ್ಟು ಮನೋ ಹರವಾಗಿದೆ!! ಶರತ್ಕಾಲದ ಪೂರ್ಣಿಮೆಯ ಚಂದ್ರನು ಇದಕ್ಕೆ ಸರಿಬಾರನು. ನಿನ್ನ ನಾ ಸಿಕವನ್ನು ನೋಡಿ, ಚಂಪಕ ಕುಸುಮವು ನಾಚುವದು. ನಿನ್ನ ಗಮನವನ್ನು ರಾಜಹಂ ಸೆಗಳು ತಲೆಬಾಗಿಸುವವು. ನಿನ್ನ ವೇಣೀಪಾಶವು ಆದಿಶೇಷನನ್ನು ಹೀಯಾಳಿಸುವದು. ದಂ ತಗಳಿಗೆ ದಾಳಿಂಬ ಬೀಜಗಳು ಸರಿಹೋಲವು. ನಿನ್ನ ದೇಹಕಾಂತಿಯನ್ನು ನೋಡಿ, ಮಾವಿನ ಚಿಗುರು ನಾಚಿಕೆಯಿಂದ ಕ್ರಮೇಣ ಹಸುರಾಗಿರುವದು. ಎಂದು ನಾನಾ ವಿಧವಾಗಿ ಪ್ರೋತ್ಸಾಹಮಾಡಿ, ಸೀತಾದೇವಿಯನ್ನು ಆಲಿಂಗನ ಮಾಡಿಕೊಂಡನು.

ಶ್ರೀ ರಾಮನ ಈ ಸ್ತೋತ್ರ ವಚನಗಳನ್ನು ಕೇಳಿ, ಸೀತೆಯು ಲಜ್ಜಿತಳಾಗಿ ಪತಿ ಯ ತೊಡೆಯ ಮೇಲೆ ಮುಖದಾಡಿಸಿಕೊಂಡು ಕೈಳಿತಳು; ಮತ್ತು ಪ್ರಸನ್ನ ವದನನಾದ ಶ್ರೀ ರಾಮನನ್ನು ಕುರಿತು—'ಪ್ರಾಣನಾಥನೇ, ನಿನ್ನ ನಿಜಸ್ವರೂಪವನ್ನು ತಿಳಿಯಬೇಕೆಂದು ನನಗೆ ಕುತೂಹಲವಿರುವದು. ದಯವಿಟ್ಟು ನನಗೆ ಅದನ್ನು ತಿಳಿಸುವವನಾಗು. ಎಂದು ಪ್ರಶ್ನೆ ಮಾಡಿದಳು. ಆಗ ಶ್ರೀ ರಾಮನು—'ಪ್ರಿಯಳೇ, ನಿನಗೆ ಯಾವ ವಿಷಯವನ್ನೂ ಮರೆಮಾಚುವದಿಲ್ಲೆಂದು ಮೊದಲೇ ಹೇಳಿರುವೆನಷ್ಟೇ? ಪರಮ ಸೌಖ್ಯವನ್ನುಂಟುಮಾಡುವ ಈ ನನ್ನ ಸ್ವರೂಪವನ್ನು ತಿಳುಹುವೆನು, ಸಾವಧಾನವಾದ ಮನಸ್ಸಿನಿಂದ ಕೇಳು. ಸಚ್ಚಿ ದಾನಂದವೆಂಬ ಸಾಗರದಿಂದ ಆತ್ಮನೆಂಬ ಒಂದು ಬಿಂದುವು ಸ್ವೇಚ್ಛೆಯಿಂದ ಹೊರಬಿತ್ತು. ಬುದ್ಧಿಯ ಉದರದಲ್ಲಿ ಅದು ಉತ್ಪನ್ನವಾಯಿತು. ಶುದ್ಧಸತ್ವಾಂತಃಕರಣವೇ ಅದಕ್ಕೆ ಜನ ಕನು. ಅದಕ್ಕೆ ತುರ್ಯಾವಸ್ಥೆ, ಜಾಗ್ರದವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತ್ಯವಸ್ಥೆ ಎಂಬ ನಾಲ್ಕು ರೂಪಗಳಿರುವವು. ಅದಕ್ಕೆ ಹೃದಯಾಕಾಶವೇ ವಾಸಸ್ಥಾನವು. ಮನೋವೆ ಗವೇ ಸಂಚಾರ ಮಾಡುವಿಕೆ. ಎಂದು ಸ್ವಸ್ವರೂಪವನ್ನು ಉಪದೇಶಿಸಿದನು. ಮತ್ತು ಈ ನ ನ್ನ ಸ್ವರೂಪವನ್ನು ನಾಸ್ತಿಕರಿಗೆ ತಿಳಿಸಬೇಡೆಂದು ಹೇಳಿದನು. ಸೀತಾದೇವಿಯು.

ರಾಮಚಂದ್ರನ ಉಪದೇಶದಿಂದ ಸ್ವಸ್ವರೂಪವನ್ನು ತಿಳಿದು, ಪರಮಾನಂದವನ್ನು ಹೊಂದಿದಳು. ಈ ರೀತಿ ಅನೇಕ ವಿನೋದ-ವಚನಗಳನ್ನಾಡುತ್ತ, ಸೀತಾ-ರಾಮರು ಹಂಸತೂಲಿಕಾ ತಲ್ಪದಲ್ಲಿ ಮಲಗಿ ನಿದ್ರೆಮಾಡಿದರು.

ಬಂದಿಗಳು ಶ್ರೀ ರಾಮನನ್ನು ಎಚ್ಚರಗೊಳಿಸಲಿಕ್ಕೆಂದು, ಎರಡುತಾಸು ರಾತ್ರಿ ಇರುವಾಗಲೇ ಶಯನಾಗರದ ಬಳಿಗೆ ಬಂದು, ನಾನಾವಿಧವಾದ ಸ್ತೋತ್ರ-ಗಾಯನಗಳನ್ನು ಮಾಡಿದರು. ಆ ಅನೇಕ ಮಂಗಳವಾದ್ಯಗಳು ಧ್ವನಿಮಾಡಿದವು. ಅಷ್ಟರಲ್ಲಿ ಸೀತೆಯು ಶಯನದಿಂದ ಎದ್ದು, ಪತಿಯ ಚರಣಗಳಿಗೆರಗಿ, ತನ್ನ ಕರ್ತವ್ಯಗಳನ್ನು ನೆರವೇರಿಸಲು ಅಂತಃಪುರವನ್ನು ಪ್ರವೇಶಿಸಿದಳು. ಶ್ರೀ ರಾಮನು ವಸಿಷ್ಠಾದಿಗಳಿಗೆ ನಮಸ್ಕರಿಸಿ, ರಾಮತೀರ್ಥದಲ್ಲಿ ಸ್ನಾನಮಾಡಿದನು. ಮತ್ತು ಸಂಧ್ಯಾವಂದನೆ, ದೇವತಾರ್ಚನೆ, ವೇದಪಾರಾಯಣ, ಇವುಗಳನ್ನು ಸಾಂಗಮಾಡಿಕೊಂಡು, ಕುಲಗುರುಗಳಾದ ವಸಿಷ್ಠರ ಬಳಿಗೆ ಬಂದನು. ಸೀತೆಯು ಸ್ನಾನ, ಗೌರೀಪೂಜೆ, ಗೋಪೂಜೆ, ಇವುಗಳನ್ನೆಲ್ಲ ತೀರಿಸಿಕೊಂಡು, ಅತ್ತೆಯರಿಗೆ ನಮಸ್ಕರಿಸಿ ಶ್ರೀ ರಾಮನ ಬಳಿಗೆ ಬಂದು ವಿನಯದಿಂದ ವಂದಿಸಿ ಕುಳಿತಳು. ಶ್ರೀ ರಾಮನು ತಾಯಿ, ಬಂಧುಗಳು, ತಮ್ಮಂದಿರು, ಮಂತ್ರಿಗಳು ಇವರೊಡನೆ ಕುಲಗುರುಗಳಾದ ವಸಿಷ್ಠರ ಮುಖದಿಂದ ಪುರಾಣವನ್ನು ಕೇಳಿದನು. ಅನಂತರ ಗುರುಗಳಿಗೂ, ಗುರುಪತ್ನಿಯರಾದ ಅರುಂಧತೀದೇವಿಯರಿಗೂ ಯಥಾಯೋಗ್ಯ ಮರ್ಯಾದೆಗಳನ್ನು ಮಾಡಿ, ಇತರ ಸಭಾಸದರನ್ನೂ ಯೋಗ್ಯ ಸಂಭಾವನೆಗಳಿಂದ ಸಂತೋಷಪಡಿಸಿದರು.

ಇತ್ತ ಸೀತಾದೇವಿಯು ಸಖಿಯರೊಡನೆ ಕಾಮಧೇನುವನ್ನು ಪೂಜಿಸಿ ನೈವೇದ್ಯವನ್ನು ಸಮರ್ಪಿಸಿ, ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಉತ್ತಮವಾದ ಭಕ್ಷ್ಯ-ಭೋಜ್ಯಗಳನ್ನು ದಯಮಾಡು, ಎಂದು ಪ್ರಾರ್ಥಿಸಿದಳು. ಸಂತುಷ್ಟವಾದ ಆ ಧೇನುವು ಸಮಸ್ತ ಪಕ್ವಾನ್ನಗಳನ್ನೂ, ಭಕ್ಷ್ಯಗಳನ್ನೂ ನಿಮಿಷಮಾತ್ರದಲ್ಲಿ ಸೀತಾದೇವಿಗೆ ಸಮರ್ಪಿಸಿತು. ಆ ಭೋಜನ ಸಾಮಗ್ರಿಗಳನ್ನು ಸಖಿಯರೊಡನೆ ಸುವರ್ಣದ ಪಾತ್ರೆಗಳಲ್ಲಿ ತುಂಬಿಕೊಂಡು, ಬ್ರಾಹ್ಮಣೋತ್ತಮರು ಕುಳಿತ ಪಂಕ್ತಿಯ ಬಳಿಗೆ ಬಂದಳು. ಸೀತಾದೇವಿಯು ಪಂಕ್ತಿಯ ಹತ್ತಿರಕ್ಕೆ ಬಂದೊಡನೆ ಸರ್ವರೂ ಸ್ತಬ್ಧರಾಗಿ ಆ ಜಗನ್ಮಾತೆಯನ್ನು ನೋಡಲಾರಂಭಿಸಿದರು. ಆ ದಶರಥನ ಸೊಸೆಯಂದಿರು ಒಬ್ಬರಹಿಂದೊಬ್ಬರು ಭಕ್ಷ್ಯಭೋಜ್ಯಗಳನ್ನು ಬಡಿಸಲುಪಕ್ರಮಿಸಿದರು. ಅವರ ದೇಹಗಳಲ್ಲಿ ಅಮೌಲ್ಯವಾದ ಆಭರಣಗಳು ಝಗಝಗಿಸುತ್ತಿ-

ಕ್ಷವು- ಅವರು ಮುತ್ತಿನ ಹಾರಗಳನ್ನೂ, ನವರತ್ನದ ಪದಕಗಳನ್ನೂ ಧರಿಸಿದ್ದರು- ಅವರ ಕಾಲುಗಳಲ್ಲಿರುವ ನೂಪುರಗಳ ಧ್ವನಿಯು ಘಲ್ ಘಲ್ಲನೆ ಕೇಳಿಸುತ್ತಿತ್ತು- ಆಸ್ತ್ರೀಯರ ಸೌಂದರ್ಯವನ್ನೂ, ವೈಭವವನ್ನೂ, ಎಷ್ಟು ಹೇಳಿದರೂ ತೀರದು. ಜಾನಕಿಯ ಸೌಂದರ್ಯವನ್ನು ವರ್ಣಿಸ ಎವಂತೂ ಆದಿಶೇಷನಿಂದಲೂ ಆಗದೆಂದು ಹೇಳಬಹುದು-

## ಸೀತಾ-ರಾಮರ ದಿನಚರ್ಯೆ.

ಅನಂತರ ಶ್ರೀ ರಾಮನು ಎಲ್ಲ ಬಂಧು ಜನರಿಗೂ ತಾಂಬೂಲವನ್ನು ಸಮರ್ಪಿಸಿ ತಾನು ಸೀತಾದೇವಿಯು ಸಿದ್ಧಪಡಿಸಿದ್ದ ತಾಂಬೂಲವನ್ನು ಸ್ವೀಕರಿಸುವನು- ಬಳಿಕ ಶ್ರೇಷ್ಠವಾದ ವಸ್ತ್ರಾಭರಣಗಳನ್ನು ಧರಿಸಿ ಶಸ್ತ್ರಾಸ್ತ್ರಗಳನ್ನು ಕೈಕೊಂಡು, ಲಕ್ಷ್ಮಣ-ಭರತ-ಶತ್ರುಘ್ನರೊಡನೆ ಕೌಸಲ್ಯೆಯ ಮಂದಿರಕ್ಕೆ ಬರುವನು- ಅಲ್ಲಿ ಅತನು ತನ್ನ ತಾಯಿಗೆ ನಮಸ್ಕರಿಸಿ, ಸಮಸ್ತಪರಿವಾರಸಮೇತನಾಗಿ ಸಭಾಮಂಟಪವನ್ನು ಪ್ರವೇಶಿಸಿ ದೇವತೆ ಗುರುಗಳು ಇವರನ್ನು ವಂದಿಸಿ ಸಿಂಹಾಸನವನ್ನೇರಿ ರಾಜ್ಯಕಾರ್ಯಗಳನ್ನು ಯಥಾಯೋಗ್ಯರೀತಿಯಿಂದ ನಡೆಸಲುಪಕ್ರಮಿಸುವನು- ಇತ್ತಲಾ ಸೀತಾದೇವಿಯು ಎಲ್ಲ ಸಖಿಯರೊಡನೆ ಉಪಹಾರಾದಿಗಳನ್ನು ಸ್ವೀಕರಿಸಿ ಗುರುಪತ್ನಿಯರೇ ಮೊದಲಾದ ಎಲ್ಲ ತರುಣಿಯರಿಗೂ ತಾಂಬೂಲವನ್ನು ಕೊಟ್ಟು, ತಾನೂ ಊರ್ಮಿಳೆಯೇ ಮೊದಲಾದ ತಂಗಿಯರೊಡನೆ ತಾಂಬೂಲ ಚರ್ವಣ ಮಾಡುವಳು- ಅನಂತರ ದಿವ್ಯ ವಸ್ತ್ರಾಲಂಕಾರಗಳನ್ನು ಧರಿಸಿ, ಸಖಿಯರೊಡನೆ ಜಲಕ್ರೀಡೆಗಾಗಿ ಉಪವನಕ್ಕೆ ಹೊರಡುವಳು- ಸೀತಾದೇವಿಯು ಉಪವನಕ್ಕೆ ಬರುವ ಸಂಗತಿಯನ್ನು ತಿಳಿದು ವನಪಾಲಕರು ಕಾರಂಜಿಗಳಿಗೆಲ್ಲ ನೀರು ತುಂಬಿಸುವರು- ಆ ರಾಜಪತ್ನಿಯು ಸಖಿಯರೊಡನೆ ಜಲಮಂದಿರವನ್ನು ಪ್ರವೇಶಿಸಿ ಮಂಟಪದ ಮೇಲೆ ಕುಳಿತುಕೊಳ್ಳು[illegible] ಇತ್ತ ಶ್ರೀ ರಾಮನು ಸಮಸ್ತ [illegible]ಗಳನ್ನೂ ಮುಗಿಸಿ ತಮ್ಮಂದಿರೊಡನೆ [illegible] ಕ್ಕೆ [illegible]ರಡ [illegible] ನಾನಾ ವಾದ್ಯಗಳನ್ನು ಬಾರಿಸುವರು- [illegible] ಶ್ರೀ ರಾಮನಿಗೆ [illegible] ಮುಂದೆ ನಡೆಯುವರು- ಶ್ರೀ ರಾಮನ [illegible] ಸೀತೆಯು [illegible]ರ್ಣದ ಪಾತ್ರೆಯಲ್ಲಿ ನೀರನ್ನು ತೆಗೆದುಕೆ[illegible] ಸಖಿಯರೊಡನೆ ಶ್ರೀ ರಾಮನಿಗೆ ಎದುರಾಗಿ ಬರುವಳು-

ಶ್ರೀ [illegible] ಸೀತೆಯೊಡನೆ ವಾಹನದಿಂದ ಇಳಿದು, [illegible] ತಮ್ಮ ಗೃಹಗಳಿಗೆ [illegible]ಯಾಣಮಾಡುವಂತೆ ಅಪ್ಪಣೆ

ಮಾಡಿ, ತಮ್ಮಂದಿರೊಡನೆ ಒಳಕ್ಕೆ ಪ್ರವೇಶಿಸುವನು. ಆಗ ದಾಸಿಯರ ಗಲಬಲವು ಹೆಚ್ಚಾಗುತ್ತಿತ್ತು. ಶ್ರೀ ರಾಮನು ಪರಮ ಹರ್ಷದಿಂದ ಸೀತಾ ದೇವಿಯು ಕೈಯಲ್ಲಿರುವ ನೀರನ್ನು ಸ್ವೀಕರಿಸಿ ಆಚಮನ ಮಾಡಿ, ಆಕೆಯೊಡನೆ ಜಲಮಂದಿರದ ಮುಖ್ಯ ಶಾರಂಜಿಯ ಬಳಿಯಲ್ಲಿರುವ ಸ್ಫಟಿಕ ಶಿಲೆಯಮೇಲೆ ಕುಳಿತು, ಲಕ್ಷ್ಮಣನನ್ನು ಕುರಿತು 'ತಮ್ಮಾ, ನೀನು ಭರತ–ಶತ್ರುಘ್ನರೊಡನೆ ಮಾಧ್ಯಾಹ್ನಿಕ ಕಾರ್ಯಗಳನ್ನು ನಡೆಸಲು ಅಂತ:ಪುರಕ್ಕೆ ನಡೆ. ಊರ್ಮಿಳೆಯು ಬ್ರಾಹ್ಮಣಭೋಜನದ ಅನುಕೂಲಗಳನ್ನು ಸಿದ್ಧಪಡಿಸಿಕೊಂಡ ಕೂಡಲೆ, ನೀನು ನಮಗೆ ತಿಳಿಸತಕ್ಕದ್ದು' ಎಂದು ಹೇಳಿ ಎಲ್ಲರನ್ನೂ ತಮ್ಮ ತಮ್ಮ ಕಾರ್ಯಗಳಿಗೆ ಕಳುಹಿಸುವನು. ಅವರು ಅಣ್ಣನ ಆಜ್ಞೆಯಂತೆ ಎಲ್ಲ ಸಾಮಗ್ರಿಗಳನ್ನೂ ಸಿದ್ಧಪಡಿಸಲುದ್ಯುಕ್ತರಾಗುವರು. ಇಷ್ಟರಲ್ಲಿ ದಾಸಿಯರು ಅನೇಕ ಸುಗಂಧ ದ್ರವ್ಯಗಳಿಂದ ಮಿಶ್ರಿತವಾದ ಜಲವನ್ನು ಸಿದ್ಧಪಡಿಸುವರು. ಶ್ರೀ ರಾಮನು ಸೀತೆಯೊಡನೆ ಜಲಯಂತ್ರಗಳ ಸಹಾಯದಿಂದ ಜಲಕ್ರೀಡೆಗಳನ್ನು ಆಡುವನು. ಆಗ ಎಲ್ಲ ದೂತಿಯರೂ ಈ ವಿಲಾಸಗಳನ್ನು ನೋಡುತ್ತ ದೂರದಲ್ಲಿ ನಿಂತುಕೊಳ್ಳುವರು.

ಅಷ್ಟರಲ್ಲಿ ಲಕ್ಷ್ಮಣನು ಶ್ರೀ ರಾಮನನ್ನು ಭೋಜನಕ್ಕೆ ಕರೆಯಲುಬರುವನು. ಆಗ ದಾಸಿಯರು ಸೌಮಿತ್ರಿಯನ್ನು 'ಒಳಗೆ ಹೋಗಲಾಗದು; ಸೀತಾ–ರಾಮರು ಜಲಕ್ರೀಡೆಯಲ್ಲಿರುವರು, ಎಂದು ಬಾಗಿಲಲ್ಲಿ ತಡೆದು ಅಂಜುತ್ತ ಅಂಜುತ್ತ ಈ ವೃತ್ತಾಂತವನ್ನು ಶ್ರೀ ರಾಮನಿಗೆ ತಿಳುಹುವರು. ಬಳಿಕ ಸೀತಾ–ರಾಮರು ಶುದ್ಧೋದಕಗಳಿಂದ ಸ್ನಾನ ಮಾಡಿ ರಾಜ್ಯಯೋಗ್ಯ ವಸ್ತ್ರಗಳನ್ನು ಧರಿಸಿ, ತಾವು ಉಟ್ಟಿದ್ದ ವಸ್ತ್ರವನ್ನು ದಾಸಿಯರಿಗೆ ಕೊಡುವರು. ಅನಂತರ ಎಲ್ಲರೊಡನೆ ಶ್ರೀ ರಾಮನು ಭೋಜನ ಶಾಲೆಗೆ ಬಂದು, ತಮ್ಮಂದಿರೊಡನೆ ವಿಲಾಸಕರವಾದ ಮಾತುಗಳನ್ನಾಡುತ್ತ ಭೋಜನ ಮಾಡುವನು. ಸೀತಾದೇವಿಯೂ ಪತಿಯ ಭೋಜನವಾದ ಬಳಿಕ ಆತನಿಗೆ ತಾಂಬೂಲಾದಿಗಳನ್ನು ಕೊಟ್ಟು, ಊರ್ಮಿಳೆಯೇ ಮೊದಲಾದ ತನ್ನ ತಂಗಿಯರೊಡನೆ ಊಟಮಾಡುವಳು. ಬಳಿಕ ತನ್ನ ಕಾರ್ಯಗಳನ್ನೆಲ್ಲ ಮುಗಿಸಿಕೊಂಡು, ಸಖಿಯರೊಡನೆ ಶಯನಾಗರಕ್ಕೆ ಹೋಗಿ, ಪಗಡೆ ಮೊದಲಾದ ಆಟಗಳನ್ನು ಆಡುವಳು. ಅಷ್ಟರಲ್ಲಿ ತನ್ನ ಶಯನಮಂದಿರದ ಕಡೆಗೆ ಬರುತ್ತಿದ್ದ ಶ್ರೀ ರಾಮನನ್ನು ನೋಡಿ, ಸಖಿಯರನ್ನು ಹೊರಗೆ ಕಳುಹಿ, ಸೀತಾದೇವಿಯು ಬಾಗಿಲಿಗೆ ಬಂದ ಶ್ರೀ ರಾಮನ ಪಾದಗಳಿಗೆ ವಂದಿಸಿ, ಕೈ ಹಿಡಿದು ಮಂಚದ ಮೇಲೆ ಕುಳ್ಳಿರಿಸುವಳು. ಬಳಿಕ ನಸುನಗುತ್ತ, ಸುಗಂಧಗಳಿಂದ ಘಮಘಮಿಸುವ ಜಲವನ್ನಿತ್ತು, ಮಡಿಚಿಟ್ಟಿದ್ದ ತಾಂಬೂ

-ಲವನ್ನು ಆತನಿಗೆ ಸಮರ್ಪಿಸುವಳು- ಅನಂತರ ಶ್ರೀ ರಾಮನು ಸೀತೆಯೊಡನೆ ಸ್ವಲ್ಪ ನಿದ್ರೆ ಮಾಡುವನು- ಜಾಗರೂಕಳಾಗಿದ್ದ ಸೀತೆಯು ಪತಿಯು ನಿದ್ರೆಯಿಂದ ಎದ್ದೊಡನೆ ಉದಕ, ಉಪಹಾರ, ಗಂಧ, ಪುಷ್ಪ ಇವೇ ಮೊದಲಾದವನ್ನು ಸಮರ್ಪಿಸಿ, ಆತನೊಡನೆ ಪ್ರಾಕ್ಷಾಮಂಟಪವನ್ನು ಪ್ರವೇಶಿಸುವಳು- ಅಲ್ಲಿ ಅನೇಕ ವಿಧವಾದ ಪಕ್ಷಿಗಳು, ಮೃಗಗಳು ಇವುಗಳೊಡನೆ ಬಹಳ ಹೊತ್ತು ವಿಲಾಸದಿಂದ ಕಾಲ ಕಳೆಯುವರು. ಆ ಮೇಲೆ ನಗರಿಯ ಸೌಂದರ್ಯವನ್ನು ನೋಡಬೇಕೆಂದು ಇಚ್ಛಿಸಿ ಸೀತಾ-ರಾಮರು ಉನ್ನತವಾದ ಅಂತಃಪುರದ ಮೇಲುಭಾಗಕ್ಕೆ ಪ್ರಯಾಣ ಮಾಡುವರು- ನಗರಿಯ ರಮಣೀಯಕತೆಯೆಲ್ಲವೂ ಕಾಣಲು ಅನುಕೂಲತೆಗಳಿದ್ದವು-

ಸೀತೆಗೆ ಆ ನಗರಿಯ ಕಾಂತಿಯನ್ನೂ ಜನಗಳ ಗುಂಪುಗಳನ್ನೂ ನೋಡಿ ಬಹಳ ಸಂತೋಷವಾಗುವದು- ಶ್ರೀ ರಾಮನು ಅಲ್ಲಲ್ಲಿ ಕಾಣುವ ಚಮತ್ಕಾರದ ವಿಷಯಗಳನ್ನು ಸೀತೆಗೆ ತೋರಿಸುತ್ತಿದ್ದನು. ಆ ಸಮಯದಲ್ಲಿ ಎಷ್ಟೋ ಬಡವರ ಕೋರಿಕೆಗಳು ಕೈಗೂಡುತ್ತಿದ್ದವು- ಒಮ್ಮೆ ವಸ್ತ್ರಾಭರಣಗಳಿಲ್ಲದೆ, ಬಡತನವನ್ನನುಭವಿಸುತ್ತ, ಒಂದು ಚಿಕ್ಕ ಮಗುವನ್ನು ಎತ್ತಿಕೊಂಡು ಬೀದಿಯಲ್ಲಿ ಅಳುತ್ತ ನಿಂತಿರುವ ಒಬ್ಬ ಬ್ರಾಹ್ಮಣಸ್ತ್ರೀಯು ಸೀತೆಯ ದೃಷ್ಟಿಗೆ ಬಿದ್ದಳು- ಒಡನೆ ಕರುಣಾಸಾಗರಳಾದ ಜಾನಕಿಯು ಆ ತರುಣಿಯನ್ನು ಕರೆಸಿ, 'ನಿನಗೇಕೆ ಇಂಥಾ ಅವಸ್ಥೆಯು ಸಂಭವಿಸಿರುವದು, ಎಂದು ಕೇಳಿದಳು. ಆ ಬಾಲ ತರುಣಿಯು 'ತಾಯಿಯೆ, ಪತಿಯು ನನ್ನನ್ನು ತಂದೆಯ ಮನೆಯಲ್ಲಿ ಬಿಟ್ಟು, ತಾನು ತೀರ್ಥ-ಯಾತ್ರೆಗಾಗಿ ತೆರಳಿದನು- ನನ್ನ ತಂದೆಯು ದೈವಯೋಗದಿಂದ ಮರಣ ಹೊಂದಿದನು- ತಮ್ಮಂದಿರಿಬ್ಬರು ಅವಂತೀ ನಗರದಲ್ಲಿ ಗುರುಕುಲವಾಸ ಮಾಡುತ್ತಿರುವರು. ನನ್ನ ಪೋಷಣೆ ಮಾಡುವವರು ಯಾರೂ ಇಲ್ಲ. ಅದ್ದರಿಂದ ಈ ಚಿಕ್ಕ ಮಗುವನ್ನು ಕಟ್ಟಿಕೊಂಡು ಹೀಗೆ ಅಲೆಯುತ್ತಿರುವೆನು ಎಂದಳು- ಈ ಮಾತುಗಳನ್ನು ಕೇಳಿದೊಡನೆ ಸೀತೆಯ ಮನಸ್ಸು ನೀರಾಯಿತು- ಆ ಜಾನಕಿಯು ತಾನು ಧರಿಸಿದ್ದ ಸಮಸ್ತ ಆಭರಣಗಳನ್ನೂ ಮೇಲೆ ಹೊದ್ದಿದ್ದ ಶ್ರೇಷ್ಠವಾದ ವಸ್ತ್ರವನ್ನೂ ಆಕೆಗೆ ಕೊಟ್ಟು, ಎಲೈ ತರುಣಿಯೆ, ನೀನು ಲಕ್ಷ್ಮಣನಬಳಿಗೆ ಹೋಗಿ ಸಾವಿರ ವರಹಗಳನ್ನು, ನನ್ನ ಅಪ್ಪಣೆಯಾಗಿದೆ, ಎಂದು ಬೇಡು" ಎಂದಳು. ಆ ಬ್ರಾಹ್ಮಣ ಪುತ್ರಿಯು ಸೀತೆಯ ಅಪ್ಪಣೆಯಂತೆ ಲಕ್ಷ್ಮಣನ ಸನ್ನಿಧಿಗೆ ಹೋಗಿ ಸೀತೆಯ ಆಜ್ಞೆಯನ್ನು ತಿಳುಹಿದಳು. ಲಕ್ಷ್ಮಣನೂ ಆ ಬಡವಿಯ ಮಾತಿನ ಮೇಲೆ ವಿಶ್ವಾಸವಿಟ್ಟು ಸಾವಿರ ವರಹಗಳನ್ನು ಕೊಟ್ಟನು. ಸೀತಾದೇವಿಯು ರಾಜ್ಯಾಧಿಕಾರಿಗಳಿಗೆ ಇನ್ನು ಮೇಲೆ ಯಾವ ಸ್ತ್ರೀ ಪುರುಷರು ಅನ್ನ

ವಸ್ತ್ರಗಳಿಲ್ಲದೆ ಅಲೆಯುದಂತೆ ಜಾಗರೂಕರಾಗಿರಬೇಕು' ಎಂದು ಆಜ್ಞೆ ಮಾಡಿದಳು. ಮತ್ತು ಎಲ್ಲ ದೇಶಗಳ ರಾಜರಿಗೂ ಈ ಶಾಸನವನ್ನು ತಿಳಿಯಪಡಿಸಿದಳು. ಜಗನ್ಮಾತೆಯ ಈ ಶಾಸನವನ್ನು ಸರ್ವರೂ ಮಾನ್ಯಮಾಡಿದರು. ಈ ಮೇರೆಗೆ ಸೀತೆಯು ಅನೇಕ ವಿಧವಾದ ಕೌತುಕಗಳನ್ನು ನಡೆಸುವಳು. ಶ್ರೀ ರಾಮನು ರಾಜಕಾರ್ಯಗಳನ್ನೆಲ್ಲ ಮುಗಿಸಿಕೊಂಡು ಸಾಯಂಸಂಧ್ಯಾದಿಗಳನ್ನು ಮಾಡಲು ಅಂತಃಪುರಕ್ಕೆ ಬರುವನು. ಶಿವಪೂಜೆಯೇ ಮೊದಲಾದ ದೇವತಾಕಾರ್ಯಗಳನ್ನು ನೆರವೇರಿಸಿ, ಭೋಜನಾದಿಗಳಾದನಂತರ ಸ್ವಲ್ಪ ಹೊತ್ತು ಹರಿಕಥಾ, ಪುರಾಣಗಳನ್ನು ಕೇಳುತ್ತಿದ್ದು, ಬಳಿಕ ಸೀತಾದೇವಿಯ ಗೃಹದ ಕಡೆಗೆ ತೆರಳುವನು. ಅಲ್ಲಿ ಶ್ರೀ ರಾಮನು ಸ್ವಲ್ಪ ಕಾಲ ವಿಲಾಸ ಮಾಡುತ್ತಿದ್ದು, ಸಕಾಲಕ್ಕೆ ಸೀತೆಯೊಡನೆ ಹಂಸತೂಲಿಕಾತಲ್ಪದಲ್ಲಿ ಶಯನಮಾಡುವನು. ಆಗ ದಾಸಿಯರು ಸೀತಾ–ರಾಮರಿಗೆ ಚಾಮರಗಳಿಂದ ಘಾಳಿ ಹಾಕುವರು. ಈ ರೀತಿ ಸೀತಾ–ರಾಮರು ಪ್ರತಿದಿವಸವೂ ಮನೋಹರವಾದ ಲೀಲೆಗಳಿಂದ ಲೋಕಹಿತಕ್ಕಾಗಿ ಕಾಲ ಕಳೆಯುತ್ತಿದ್ದರು.

## ವ್ಯಾಸರು ಹೇಳಿದ ವ್ರತಾನುಷ್ಠಾನ.

ಒಂದಾನೊಂದು ಕಾಲದಲ್ಲಿ ವ್ಯಾಸರು ಶ್ರೀ ರಾಮನನ್ನು ನೋಡುವದಕ್ಕಾಗಿಯೂ, ರಾಮತೀರ್ಥದಲ್ಲಿ ಸ್ನಾನ ಮಾಡುವದಕ್ಕಾಗಿಯೂ, ಚೈತ್ರಮಾಸದಲ್ಲಿ ಅಯೋಧ್ಯೆಗೆ ಬಂದರು. ಶ್ರೀ ರಾಮನು ಆ ಮುನಿಶ್ರೇಷ್ಠರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಕಾಮಧೇನುವಿನ ಅನುಗ್ರಹದಿಂದ ಲಬ್ಧವಾದ ದಿವ್ಯಾನ್ನಗಳಿಂದ ಅವರನ್ನು ಸಂತೋಷಗೊಳಿಸಿದನು. ಆಗ ವ್ಯಾಸರು ಸಂತುಷ್ಟರಾಗಿ 'ರಘುನಾಥನೆ, ಇದುವರೆಗೂ ಭೂಮಿಯ ಮೇಲೆ ಅನೇಕ ರಾಜರಾಗಿರುವರು. ಮುಂದೆ ಆಗತಕ್ಕವರಿರುವರು. ನಿನ್ನಂತೆ ರಾಜ್ಯ ಸಂರಕ್ಷಣೆ ಮಾಡುವವರು ಯಾರೂ ಇಲ್ಲ. ನೀನೇ ಧನ್ಯನು' ಎಂದು ನುಡಿದರು. ಶ್ರೀ ರಾಮನು ವ್ಯಾಸರಿಗೆ ನಮಸ್ಕರಿಸಿ, 'ಮಹಾತ್ಮರೆ, ನಾನು ಆಡಿದ ಮಾತನ್ನು ಎಂದಿಗೂ ತಪ್ಪಲಾರೆನು. ಸೀತೆಯನ್ನು ಹೊರತಾಗಿ ಮಿಕ್ಕ ಎಲ್ಲಾ ಸ್ತ್ರೀಯರನ್ನೂ ಕೌಸಲ್ಯೆಯಂತೆ ತಿಳಿಯುವೆನು. ಕೋಪದಿಂದ ಒಬ್ಬನನ್ನು ಸಂಹರಿಸಬೇಕೆಂದು ತೆಗೆದುಕೊಂಡ ಅದೇ ಬಾಣದಿಂದಲೇ ಅವನನ್ನು ಸಂಹರಿಸುವೆನು, ಬೇರೊಂದು ಬಾಣವನ್ನು ಮುಟ್ಟಲಾರೆನು. ಈ ರೀತಿ ಮೂರು ನಿಯಮಗಳನ್ನು ಮಾಡಿರುವೆನು. ಅವು ಯಾವಾಗಲೂ ಭಂಗವಾಗದಂತೆ ತಾವು ಆಶೀರ್ವಾದ ಮಾಡಿರಿ' ಎಂದು ಪ್ರಾರ್ಥಿಸಿ

ದನು. ವ್ಯಾಸರು 'ಹಾಗೆಯೆ ಆಗಲಿ' ಎಂದು ಆಶೀರ್ವದಿಸಿ—'ರಾಮಚಂದ್ರನೆ, ಏಕಪತ್ನೀ ವ್ರತವನ್ನು ಕಾಪಾಡುವದು ಬಹಳ ಕಠಿಣ! ಇಂಥಾ ಐಶ್ವರ್ಯ, ಚಕ್ರವರ್ತಿಯ ಪದವಿ, ಪೂರ್ಣಯೌವನ, ಇಷ್ಟು ಅನರ್ಥ ಸಾಧನಗಳಿದ್ದೂ ನೀನು ಈ ವ್ರತವನ್ನು ನಿಯಮದಿಂದ ನಡೆಸುವೆಯಲ್ಲ!! ಅಹಹ!!! ನೀನೇ ಧನ್ಯನು. ಈ ವ್ರತದ ಫಲವು ನಿನಗೆ ಮುಂದಿನ ಜನ್ಮದಲ್ಲಿ ಅಂದರೆ ಕೃಷ್ಣಾವತಾರದಲ್ಲಿ ದೊರೆಯುವದು. ಆಗ ನಿನಗೆ ಅನೇಕ ಪತ್ನಿಯರಾಗುವರು' ಎಂದು ಮಾತನಾಡಿದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು 'ಸ್ವಾಮೀ, ಈ ಫಲವನ್ನು ಹೊಂದಲು ವ್ರತವ್ಯಾವದಾದರೂ ಇರುವದೆ? ಇದ್ದರೆ ಅದನ್ನು ನನಗೆ ದಯವಿಟ್ಟು ಹೇಳಿರಿ. ನಾನು ಅದನ್ನು ಮಾಡುವೆನು' ಎಂದನು. ಆಗ ಮಹರ್ಷಿಗಳು 'ಶ್ರೀ ರಾಮನೇ, ಕೇಳು. ಸೀತೆಯ ಭಾರದಷ್ಟು ಸುವರ್ಣದಿಂದ ಒಂದೊಂದರಂತೆ ಹದಿನಾರು ಪ್ರತಿಮೆಗಳನ್ನು ಸಿದ್ಧಮಾಡಿಸಿ, ಅವುಗಳನ್ನು ಸರಯೂತೀರದಲ್ಲಿ ಬ್ರಾಹ್ಮಣರಿಗೆ ದಾನ ಮಾಡು. ಈ ವ್ರತದ ಫಲವನ್ನು ಖಂಡಿತವಾಗಿ ಮುಂದಿನ ಜನ್ಮದಲ್ಲಿ ಹೊಂದುವೆ' ಎಂದು ಹೇಳಿದರು.

ಶ್ರೀ ರಾಮನು ಆ ವ್ರತವನ್ನು ಯಥಾಸಾಂಗವಾಗಿ ನೆರವೇರಿಸಲು ಸೀತಾಸಮೇತನಾಗಿ ಸರಯೂ ತೀರಕ್ಕೆ ಪ್ರಯಾಣಮಾಡಿದನು. ಅಲ್ಲಿ ವಸ್ತ್ರಾಭರಣಗಳಿಂದ ಪ್ರಕಾಶಮಾನಗಳಾದ ಆ ಹದಿನಾರು ಪ್ರತಿಮೆಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ಆ ದಾನದಿಂದ ಬ್ರಾಹ್ಮಣರು ಬಹಳ ಹರ್ಷಗೊಂಡು, 'ಈ ವ್ರತದಿಂದ ಶ್ರೀ ರಾಮನಿಗೆ ಒಂದಕ್ಕೆ ಸಾವಿರದಷ್ಟು ಫಲವಾಗಲಿ' ಎಂದು ಹರಸಿದರು. ಸೀತಾರಾಮರು ಕೆಲವು ದಿವಸಗಳವರೆಗೆ ಸರಯೂ ತೀರದಲ್ಲಿ ವಾಸವಾಗಿದ್ದರು. ಆಗ ಚೈತ್ರ ಸ್ನಾನಕ್ಕಾಗಿ ದೇವತೆಗಳು, ಗಂಧರ್ವರು, ಮುನಿಗಳು ಇವರೆಲ್ಲರೂ ಬರುತ್ತಿದ್ದರು. ಒಂದು ದಿವಸ ದೇವತಾಸ್ತ್ರೀಯರು ಶ್ರೀ ರಾಮನ ಸೌಂದರ್ಯವನ್ನು ನೋಡಿ ಮೋಹಿತರಾಗಿ, ಸೀತೆಯು ನಿದ್ರೆಮಾಡುವ ಸಮಯವನ್ನು ನೋಡಿ, ಸುಂದರವಾದ ವೇಷಗಳನ್ನು ಧರಿಸಿ ಶ್ರೀ ರಾಮನ ಬಳಿಗೆ ಬಂದರು. ದ್ವಾರಪಾಲಕರು ಆ ತರುಣಿಯರನ್ನು ಒಳಗೆ ಬಿಡದೆ ತಡೆದರು. ಆ ತರುಣಿಯರು, ಈಗ ಶ್ರೀ ರಾಮನ ದರ್ಶನವಾಗದೆ ಹೋದರೆ, ನಾವೆಲ್ಲರೂ ಸರಯೂ ನದಿಯನ್ನು ಪ್ರವೇಶಿಸಿ ಪ್ರಾಣತ್ಯಾಗ ಮಾಡುವೆವೆಂದು ಪ್ರತಿಜ್ಞೆ ಮಾಡಿದರು. ದೂತರು ಈ ಕ್ರೂರ ಕೃತ್ಯವನ್ನು ಶ್ರೀ ರಾಮನಿಗೆ ವಿಜ್ಞಾಪಿಸಿದರು. ಆಗ ಶ್ರೀ ರಾಮನು ಆ ತರುಣಿಯರನ್ನು ಒಳಕ್ಕೆ ಬಿಡುವಂತೆ ಆಜ್ಞಾಪಿಸಿದನು. ಬಳಿಕ ಆ ದೇವತಾಸ್ತ್ರೀಯರು ಒಳಗೆ ಬಂದು ಶ್ರೀ ರಾ

ಮುನಿಗೆ ನಮಸ್ಕರಿಸಿ, ನಾಚಿಕೆಯಿಂದ ತಲೆಗಳನ್ನು ಬಗ್ಗಿಸಿನಿಂತುಕೊಂಡರು. ಈ ತರುಣಿಯರನ್ನು ನೋಡಿ, ಶ್ರೀ ರಾಮನು 'ಕನ್ಯಾಮಣಿಗಳೇ, ಇಂಥಾ ರಾತ್ರಿಯಲ್ಲಿ ಇಲ್ಲಿಗೆ ಬರಲು ಕಾರಣವೇನು?' ಎಂದು ಪ್ರಶ್ನೆ ಮಾಡಿದನು. ಆಗ ಆಸ್ತ್ರೀಯರು 'ಜಗನ್ನಾಥನೆ, ಸರ್ವಜ್ಞನಾದ ನಿನಗೆ ನಾವು ಬಂದಉದ್ದೇಶವನ್ನು ಬೇರೆ ಹೇಳಬೇಕೆ? ಎಂದು ಹೇಳಿ ನಾಚಿಕೆಯಿಂದ ಸುಮ್ಮನಾದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು 'ಎಲೈ ಲಲನೆಯರೆ, ನಾನು ಏಕ ಪತ್ನೀ ವ್ರತವನ್ನು ಹೊಂದಿರುವೆನು. ಈ ಜನ್ಮದಲ್ಲಿ ನೀವೆಲ್ಲರೂ ನನಗೆ ತಾಯಿಯರು. ಮುಂದೆ ಕೃಷ್ಣಾವತಾರದಲ್ಲಿ ನಿಮ್ಮೆಲ್ಲರ ಇಚ್ಛೆಯನ್ನು ಪೂರ್ಣಮಾಡುವೆನು. ಆಗ ನಿಮ್ಮೊಡನೆ ರಾಸಕ್ರೀಡೆಯೇ ಮೊದಲಾದ ಅನೇಕ ವಿಲಾಸಗಳನ್ನಾಡುವೆನು. ನೀವು ನಿರಾಶರಾಗಬೇಡಿರಿ. ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ನೀವೆಲ್ಲರೂ ಮುಂದಿನ ಜನ್ಮವನ್ನು ನಿರೀಕ್ಷಿಸುತ್ತಿರಿ' ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಆ ತರುಣಿಯರು ಅಲ್ಲಿಂದ ಬಹಳ ವ್ಯಾಕುಲರಾಗಿ ತೆರಳಿದರು. ಇಷ್ಟರಲ್ಲಿ ಮಾಯಾನಗರಿಯಿಂದ ಸ್ನಾನಕ್ಕಾಗಿ ಒಬ್ಬ ಸ್ತ್ರೀಯು ಅಲ್ಲಿಗೆ ಬಂದಳು.

### ಸೀತಾ-ರಾಮರ ವಿನೋದ.

ಆ ಲಲನೆಯನ್ನು 'ಗುಣವತಿ' ಎಂದು ಕರೆಯುವರು. ಈ ಬ್ರಾಹ್ಮಣ ಪುತ್ರಿಯ ವೃತ್ತಾಂತವನ್ನು ಹೇಳುವೆನು ಕೇಳು. ಕೃತಯುಗದಲ್ಲಿ ಅತ್ರಿಗೋತ್ರೋತ್ಪನ್ನನಾದ ಒಬ್ಬ ಬ್ರಾಹ್ಮಣನಿದ್ದನು. ಆತನು ಯಾವಾಗಲೂ ಅತಿಥಿಸತ್ಕಾರ, ಅಗ್ನಿಹೋತ್ರ ಇವುಗಳಲ್ಲಿ ನಿರತನಾಗಿದ್ದನು. ಆ ಬ್ರಾಹ್ಮಣನಿಗೆ ಮಕ್ಕಳಿರಲಿಲ್ಲ. ಕೆಲವು ಕಾಲದ ಮೇಲೆ ಆತನಿಗೆ ಈ ಗುಣವತಿಯೇ ಮಗಳಾಗಿ ಹುಟ್ಟಿದಳು ಆ ಬ್ರಾಹ್ಮಣನು ತನ್ನ ಮಗಳನ್ನು ಚಂದ್ರನೆಂಬ ಒಬ್ಬ ತನ್ನ ಶಿಷ್ಯನಿಗೆ ಕೊಟ್ಟು ವಿವಾಹ ಮಾಡಿದನು. ಮತ್ತು ಗಂಡುಮಕ್ಕಳಿಲ್ಲದ್ದರಿಂದ, ಅಳಿಯನನ್ನು ಮನೆಯಲ್ಲಿಯೇ ಇರಿಸಿಕೊಂಡಿದ್ದನು. ಒಂದಾನೊಂದು ದಿವಸ ಆ ಅಳಿಯ-ಮಾವಂದಿರು ಸಮಿತ್ಕುಶಗಳನ್ನು ತರುವದಕ್ಕಾಗಿ ಹಿಮತ್ಪರ್ವತದ ಸಮೀಪದಲ್ಲಿರುವ ಅಡವಿಗೆ ಹೋದರು. ಅಲ್ಲಲ್ಲಿ ಸಂಚಾರಮಾಡುತ್ತಿರಲು, ಅವರಿಗೆ ಒಂದು ರಾಕ್ಷಸಿಯು ಎದುರಾಯಿತು. ಅದನ್ನು ನೋಡಿ ಅವರಿಬ್ಬರೂ ನಡುಗಲಾರಂಭಿಸಿದರು. ಇಷ್ಟರಲ್ಲಿ ಯಮನಂತೆ ಭಯಂಕರವಾದ ಆರಾಕ್ಷಸಿಯು ಅವರನ್ನು ಕೊಂದಿತು. ವಿಷ್ಣುದೂತರು ಆ ಬ್ರಾಹ್ಮಣರಿಬ್ಬರನ್ನು ವೈಕುಂಠಕ್ಕೆ ಕರೆದೊಯ್ದರು. ಇದು ಆ ಮಹಾತ್ಮರು ಮಾಡಿದ ಸೂರ್ಯೋಪಾಸನೆಯೇ ಮೊದಲಾದ ಸತ್ಕಾರ್ಯಗಳ ಫಲವು. ಅವರು

ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ಪ್ರಯಾಣ ಮಾಡಿದ ಬಳಿಕ ಈ ವರ್ತಮಾನವು ಗುಣವತಿಗೆ ತಿಳಿಯಿತು. ಆ ಅಬಲೆಯು ಬಹಳ ದುಃಖಪಟ್ಟಳು. ಮತ್ತು ದೈವ ಯೋಗವು ಯಾರಿಗೂ ತಪ್ಪಿದ್ದಲ್ಲವೆಂದು ತಿಳಿದು ಸಮಾಧಾನಹೊಂದಿದಳು. ತನ್ನ ಲ್ಲಿದ್ದ ಸರ್ವಸ್ವವನ್ನೂ ವೆಚ್ಚಮಾಡಿ, ಅವರ ಔರ್ಧ್ವದೈಹಿಕ ಕ್ರಿಯೆಗಳನ್ನು ನೆರ ವೇರಿಸಿದಳು. ಆ ತರುಣಿಯು ಭಿಕ್ಷಾವೃತ್ತಿಯಿಂದ ಜೀವನಮಾಡುತ್ತಾ, ಅದೇ ಸ್ಥಳದಲ್ಲೇ ವಾಸಮಾಡಿ, ಯಾವಾಗಲೂ ಅನೇಕ ವ್ರತಗಳನ್ನಾಚರಿಸುತ್ತಿದ್ದಳು. ಅವುಗಳಲ್ಲಿ ಏಕಾದಶಿ, ಕಾರ್ತಿಕ-ಮಾಘ-ಚೈತ್ರಮಾಸಗಳಲ್ಲಿ ತೀರ್ಥಸ್ನಾನ, ವಿಷ್ಣು ಪೂಜೆ, ಇವು ನಿತ್ಯವಾಗಿದ್ದವು. ಒಂದಾನೊಂದು ದಿವಸ ಪೌರಾಣಿಕರ ಮುಖ ದಿಂದ ರಾಮತೀರ್ಥದಲ್ಲಿ ಚೈತ್ರಸ್ನಾನದ ಮಹಾತ್ಮ್ಯೆಯನ್ನು ಕೇಳಿ ಆಕೆಯು ಅಲ್ಲಿ ಗೆ ಬಂದಿದ್ದಳು. ಅನೇಕ ದಿವಸಗಳವರೆಗೂ ರಾಮತೀರ್ಥದಲ್ಲಿ ಸ್ನಾನಮಾಡಿದ ಳು. ಪೂಜಾದ್ರವ್ಯಗಳನ್ನು ತೆಗೆದುಕೊಂಡು ಶ್ರೀ ರಾಮನನ್ನು ನೋಡಬೇಕೆಂದು ಅನೇಕಸಲ ಸರಯೂತೀರಕ್ಕೆ ಬಂದಿದ್ದಳು. ಒಂದು ದಿವಸ ದೂತರು ಶ್ರೀ ರಾ ಮನ ಅಜ್ಞೆಯಿಂದ ಗುಣವತಿಯನ್ನು ಒಳಗೆ ಬಿಟ್ಟರು. ಸೀತಾ-ಲಕ್ಷ್ಮಣರಿಂದ ಯು ಕ್ತನಾದ ಶ್ರೀರಾಮನ ಶ್ಯಾಮಸುಂದರ ಮೂರ್ತಿಯನ್ನು ನೋಡಿ ಆ ತರುಣಿಯು ಪ ರಮಾನಂದದಿಂದ ಸ್ತುತಿಸಿದಳು. ಶ್ರೀ ರಾಮನು ಆ ದೀನಳಾದ ಬ್ರಾಹ್ಮಣ ಪುತ್ರಿ ಯನ್ನು ನೋಡಿ 'ಎಲೈ ಧರ್ಮಾಚರಣಧುರಂಧರಳಾದ ಗುಣವತಿಯೆ, ನಿನ್ನ ಮನಸ್ಸಿ ನ ಕೋರಿಕೆ ಏನಿರುವದು? ಹೇಳು' ಎಂದು ಪ್ರಶ್ನೆಮಾಡಿದನು. ಆಗ ಆ ಗುಣವತಿ ಯು ಕಣ್ಣುಗಳಲ್ಲಿ ನೀರುತಂದು "ಹೇ ರಾಜಾಧಿರಾಜನೆ, ನಿನ್ನ ಸಾವಿರಾರು ಜನ ದಾಸಿಯರಲ್ಲಿ ಈ ಅನಾಥಳನ್ನು ಸೇರಿಸಿಕೊಂಡು ಉದ್ಧಾರಮಾಡು' ಎಂದು ನುಡಿ ದಳು. ಈ ಮಾತುಗಳನ್ನು ಕೇಳಿ ರಘುನಂದನನು 'ಎಲೈ ಗುಣವತಿಯೇ, ನೀನು ಬ್ರಾಹ್ಮಣಪುತ್ರಿಯಾಗಿರುವೆಯಲ್ಲ!! ಇಂಥ ನೀನು ಈಗ ನನಗೆ ದಾಸಿಯಾಗುವದು ಯುಕ್ತವಲ್ಲ. ಅದ್ದರಿಂದ ನೀನು ದ್ವಾಪರಯುಗದಲ್ಲಿ ಸತ್ರಾಜಿತನಮಗಳಾಗಿಜನಿಸು. ಆಗ ನಿನಗೆ ಸತ್ಯಭಾಮೆ ಎಂದು ಹೆಸರುಬರುವದು. ನಿನ್ನನ್ನು ಮುಖ್ಯಪತ್ನಿಯನ್ನಾ ಗಿ ಸ್ವೀಕರಿಸುವೆನು. ದೇವಶರ್ಮನೇ ಸತ್ರಾಜಿತನಾಗಿ ಅವತರಿಸುವನು. ಇವೇ ಮೊದಲಾದ ವಚನಗಳಿಂದ ಶ್ರೀ ರಾಮನು ಗುಣವತಿಯನ್ನು ಸಂತೈಸಿದನು. ಬಳಿ ಕ ಗುಣವತಿಯು ಶ್ರೀ ರಾಮನ ಅಪ್ಪಣೆಯನ್ನು ಪಡೆದು, ಪರಮಸಂತೋಷದಿಂದ ಅಲ್ಲಿ ಕೆಲವು ದಿವಸಗಳಿದ್ದು, ಮುಂದೆ ಗಂಗಾಸ್ನಾನಕ್ಕಾಗಿ ಹರಿದ್ವಾರಕ್ಕೆ ತೆರಳಿ ದಳು. ಅಲ್ಲಿ ಅನೇಕ ದಿವಸಗಳವರೆಗೆ ಸ್ನಾನಮಾಡುತ್ತಿದ್ದು, ಕೊನೆಗೆ ಜ್ವರಪೀಡಿ

ತಳಾಗಿ ದೇಹತ್ಯಾಗವಮಾಡಿದಳು. ವಿಷ್ಣು ದೂತರು ಆ ಸ್ತ್ರೀಯನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ವೈಕುಂಠಕ್ಕೆ ಕರೆದುಕೊಂಡು ಹೋದರು. ಹಾಗೆ ಆ ಗುಣವತಿಯು ಸತ್ರಾಜಿತನಿಗೆ ಮಗಳಾಗಿ ಅವತರಿಸಿದಳು. ಶ್ರೀ ಕೃಷ್ಣನು ಪೂರ್ವದಲ್ಲಿ ಮಾಡಿದ ಪ್ರತಿಜ್ಞೆಯಂತೆ ಆ ಸತ್ಯಭಾಮೆಯನ್ನು ವಿವಾಹವಮಾಡಿಕೊಂಡನು.

ಒಂದಾನೊಂದು ಕಾಲದಲ್ಲಿ ಪಿಂಗಳಾ ಎಂಬ ವೇಶ್ಯೆಯು ಸೀತೆಯೊಡನೆ ರಾಮಚಂದ್ರನು ಮಂಚದ ಮೇಲೆ ಮಲಗಿರಲು, ತನ್ನ ಕಾಲುಗಳಲ್ಲಿರುವ ನೂಪುರಗಳನ್ನು ತೆಗೆದು, ಯಾರಿಗೂ ಗೊತ್ತಿಲ್ಲದಂತೆ, ಶ್ರೀ ರಾಮನ ಪಾದಸ್ಥಾನಕ್ಕೆ ಬಂದಳು. ಆದರೂ ಆ ವೇಶ್ಯೆಗೆ ಸೀತೆಯ ಹೆದರಿಕೆಯು ಬಹಳವಾಗಿತ್ತು. ಆಕೆಯು ಸರ್ವಾಲಂಕಾರಗಳನ್ನೂ ಧರಿಸಿ, ಪುಷ್ಪಹಾರಗಳನ್ನು ಮುಡಿದು ದ್ವಾರಪಾಲಕರೊಬ್ಬರಿಗೂ ತಿಳಿಯದಂತೆ ಶ್ರೀ ರಾಮನ ಚರಣಕಮಲಗಳ ಬಳಿಗೆ ಬಂದು ನಿಂತಳು. ಆಕೆಯು ಶ್ರೀ ರಾಮನನ್ನು ಎಚ್ಚರಗೊಳಿಸಿ, 'ನನ್ನನ್ನು ಸಂರಕ್ಷಣೆ ಮಾಡು' ಎಂದು ಪಾದಾಕ್ರಾಂತಳಾದಳು. ಆಗ ಶ್ರೀ ರಾಮನು ತನ್ನ ಪ್ರತಿಜ್ಞೆಯನ್ನು ತಿಳುಹಿ 'ಎಲೈ ಪಿಂಗಳೆ, ನೀನು ಕಂಸನ ಗೃಹದಲ್ಲಿ ಕುಬ್ಜಾ ಎಂಬ ಹೆಸರಿನಿಂದ ದಾಸಿಯಾಗಿರು. ಅಲ್ಲಿ ನಿನ್ನ ಇಷ್ಟಾರ್ಥವನ್ನು ಪೂರ್ಣಮಾಡುವೆನು' ಎಂದು ಹೇಳಿ ಸೀತಾದೇವಿಯ ಭಯದಿಂದ ಆ ವೇಶ್ಯೆಯನ್ನು ಜಾಗ್ರತೆ ಹೊರಗೆ ಪ್ರಯಾಣಮಾಡುವಂತೆ ಆಜ್ಞೆ ಮಾಡಿದನು. ಮತ್ತು ದ್ವಾರಪಾಲರು ಸ್ವಲ್ಪವೂ ಎಚ್ಚರಿಕೆ ಇಲ್ಲದೆ ಆ ವೇಶ್ಯೆಯನ್ನು ಒಳಗೆ ಬಿಟ್ಟರೆಂದು ಅವರಿಗೆ ದಂಡನ ಮಾಡಿ, ಸೀತೆಗೆ ನಡೆದ ವೃತ್ತಾಂತವನ್ನು ತಿಳುಹಿದನು. ಈ ಮಾತುಗಳನ್ನು ಕೇಳಿ ಸೀತೆಯು ಕೋಪದಿಂದ ಹಾಸಿಗೆಯನ್ನು ಬಿಟ್ಟು ದೂರ ನಡೆದು ರಾಮನನ್ನು ಬಹಳ ವಿಧವಾಗಿ ನಿಂದಿಸಿ, 'ನಾನು ಈಗಲೇ ಸರಯೂ ನದಿಯಲ್ಲಿ ಹಾರಿಕೊಳ್ಳುವೆನು' ಎಂದು ಹೊರಟಳು. ಶ್ರೀ ರಾಮನು ಅನೇಕ ವಿಧವಾಗಿ ಸಮಾಧಾನ ಮಾಡುತ್ತ ಸೀತಾದೇವಿಯ ಹಿಂದೆ ಹೊರಟನು. ಮತ್ತು 'ನೀನು ಏನು ಪ್ರಮಾಣಮಾಡೆಂದರೂ ನಾನು ಮಾಡಲು ಸಿದ್ಧನಾಗಿರುವೆನು' ಎಂದು ಹೇಳಿಕೊಂಡನು. ಆ ಮಾತುಗಳಾವವೂ ಸೀತೆಗೆ ನಂಬಿಗೆಯಾಗಲಿಲ್ಲ. ಆಗ ಆಕೆಯು—'ಶ್ರೀ ರಾಮನೆ, ಅಗ್ನಿ, ಯಮ, ವರುಣ, ಭೂಮಿ, ಜಲ, ಇವೇ ಮೊದಲಾದ ಎಲ್ಲರೂ ನಿನ್ನ ಪಕ್ಷಪಾತಿಗಳಾಗಿರುವರು. ಹೀಗಿರುವದರಿಂದ ನೀನು ಯಾವ ಪ್ರಮಾಣ ಮಾಡಲೂ ಹಿಂಜರಿಯುವವನಲ್ಲ. ಆದರೆ ನೀನು ಗುರುಗಳ ಸನ್ನಿಧಿಯಲ್ಲಿ 'ಮನಸ್ಸಿನಿಂದಲಾದರೂ ಆ ವೇಶ್ಯೆಯ ಸಂಗವನ್ನು ನಾನು ಮಾಡಿದವನಲ್ಲ' ಎಂದು ಪ್ರಮಾಣಮಾಡಿದರೆ, ನನಗೆ ಸಮಾಧಾನವಾಗುವ

ದು' ಎಂದಳು. ಬಳಿಕ ಶ್ರೀ ರಾಮನು ಲಕ್ಷ್ಮಣನನ್ನು ಕರೆಸಿ, ಈ ಕೂಡಲೆ ಕುಲ ಗುರುಗಳನ್ನು ಕರೆತರಲು ಆಜ್ಞಾಪಿಸಿದನು. ಲಕ್ಷ್ಮಣನು ರಥಾರೂಢನಾಗಿ ಅ ಯೋಧ್ಯೆಗೆ ತೆರಳಿ, 'ತಮ್ಮ ಶಿಷ್ಯ ಲಕ್ಷ್ಮಣನು ಬಂದಿರುವನೆ' ಎಂದು ಗುರುಗ ಳಿಗೆ ತಿಳುಹಿರಿ' ಎಂದು ದ್ವಾರಪಾಲಕರಿಗೆ ಸೂಚಿಸಿದನು. ಆಗ ಅರುಂಧತೀವಸಿ ಷ್ಠರು 'ಈ ಮಧ್ಯರಾತ್ರಿಯಲ್ಲಿ ಲಕ್ಷ್ಮಣನು ಏನು ಕಾರಣದಿಂದ ಬಂದಿರಬಹುದು' ಎಂದು ಯೋಚಿಸುತ್ತ ಹೊರಗೆ ಬಂದರು. ಲಕ್ಷ್ಮಣನು ಅವರ ಪಾದಗಳಿಗೆರಗಿ ಅಣ್ಣನ ವಿಜ್ಞಾಪನೆಯನ್ನು ತಿಳುಹಿದನು. ಆತನಿಂದಲೂ ವಸಿಷ್ಠರ ಸಂಶಯವು ಪ ರಿಹಾರವಾಗಲಿಲ್ಲ. ಅಲ್ಲಿಗೇ ಹೋಗಿ ವಿಚಾರಿಸೋಣ ಎಂದು, ಅರುಂಧತೀ-ವಸಿ ಷ್ಠರು ಆಗಲೇ ವಾಹನವನ್ನೇರಿ ಶ್ರೀ ರಾಮನ ಬಳಿಗೆ ಹೊರಟರು. ಲಕ್ಷ್ಮಣನೂ ಅವರ ಹಿಂದೆ ತೆರಳಿದನು.

ಗುರುಗಳು ಸರಯೂ ತೀರಕ್ಕೆ ಬಂದೊಡನೆ ಶ್ರೀ ರಾಮನು ಅವರನ್ನು ಶ್ರೇ ಷ್ಠವಾದ ಆಸನದ ಮೇಲೆ ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ವೇ ಶ್ಯಾವೃತ್ತಾಂತವನ್ನೂ, ಸೀತೆಯ ದುರಾಗ್ರಹವನ್ನೂ ನಿವೇದಿಸಿ, 'ಈ ಜನ್ಮದಲ್ಲಿ ಸೀತೆಯನ್ನು ಹೊರತಾಗಿ, ಮತ್ತೆ ಯಾರನ್ನೂ ನಾನು ಸ್ಪರ್ಶ ಮಾಡಿದವನಲ್ಲ' ಎಂ ದು ಪ್ರಮಾಣ ಮಾಡಿದನು. ಈ ಮಾತುಗಳನ್ನು ಕೇಳಿ ಸೀತೆಯು ಬಹು ಲಜ್ಜಿತಳಾ ದಳು. ಮತ್ತು ಶ್ರೀ ರಾಮನು ಪವಿತ್ರನೆಂದು ತಿಳಿದಳು. ಅನಂತರ ಜಾನಕಿ ಯು ಎಲ್ಲರಿಗೂ ನಮಸ್ಕರಿಸಿ, 'ನನ್ನ ಅಪರಾಧಗಳನ್ನು ಕ್ಷಮಿಸಿರಿ' ಎಂದು ಬೇಡಿ ಕೊಂಡಳು. ಅರುಂಧತಿಗೆ ದಿವ್ಯ ವಸ್ತ್ರಾಭರಣಗಳನ್ನು ಸಮರ್ಪಿಸಿದಳು. ಅನಂ ತರ ಸಮಸ್ತರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಸೀತಾ-ರಾಮರು ತಮ್ಮ ಶಯನಗಳಲ್ಲಿ ಸುಖದಿಂದ ಮಲಗಿದರು. ಪ್ರಾತಃಕಾಲದಲ್ಲಿ ಸೀತೆಯು ಪಿಂಗಳೆಯನ್ನು ಕರೆಸಿ, ಬಹಳ ಧಿಕ್ಕಾರ ಮಾಡಿದಳು. ಮತ್ತು 'ನಿನ್ನ ಶರೀರವು ಮೂರು ಡೊಂಕಾಗಲಿ' ಎಂದು ಶಪಿಸಿದಳು. ಆಗ ಪಿಂಗಳೆಯು ಸೀತೆಯನ್ನು ಬ ಹು ವಿಧವಾಗಿ ಪ್ರಾರ್ಥಿಸಿದಳು. ಅನಂತರ ಸೀತಾದೇವಿಯು 'ನಿನ್ನನ್ನು ಶ್ರೀ ಕೃ ಷ್ಣನು ಉದ್ಧರಿಸುವನು' ಎಂದು ವರವನ್ನಿತ್ತು, ಆ ವೇಶ್ಯೆಯನ್ನು ಸಂತೋಷ ಗೊಳಿಸಿದಳು.

## ಲೋಪಾಮುದ್ರಾ-ಸೀತೆಯರ ವಿನೋದ.

ಒಂದಾನೊಂದು ಕಾಲದಲ್ಲಿ ಸೀತಾ-ರಾಮರು ಪರಿವಾರ ಸಮೇತರಾಗಿ ಸೂರ್ಯಗ್ರಹಣ-ಪುಣ್ಯಕಾಲದ ನೆವದಿಂದ ಕುರುಕ್ಷೇತ್ರಕ್ಕೆ ಹೋಗಿದ್ದರು. ಅ

ಗ್ರಹಣಕಾಲದಲ್ಲಿ ಶ್ರೀ ರಾಮನು ಸ್ನಾನಮಾಡಿ, ಅನೇಕ ಮಹರ್ಷಿಗಳಿಗೆ ನಾನಾ ದಾನಗಳನ್ನು ಸಮರ್ಪಿಸುತ್ತ ಕುಳಿತಿದ್ದನು. ಸೀತಾದೇವಿಯೂ ಸುಮಂಗಲೆಯ ರೊಡನೆ ಸೇರಿ ದಾನ-ಧರ್ಮಾದಿಗಳನ್ನು ಮಾಡಿ, ವಿನೋದದಿಂದ ಕುಳಿತಿದ್ದಳು. ಆಗ ಲೋಪಾಮುದ್ರೆಯು 'ಸೀತೆ, ಶ್ರೀ ರಾಮನ ಚರಿತ್ರೆಗಳನ್ನು ಹೇಳು! ಕೇಳೋಣ' ಎಂದಳು. ಆಗ ಸೀತಾದೇವಿಯು ತನ್ನ ವಿವಾಹ ಮೊದಲು ಈ ಕುರುಕ್ಷೇತ್ರ ಯಾತ್ರೆಗೆ ಬರುವ ವರೆಗೂ ನಡೆದ ಶ್ರೀ ರಾಮನ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದಳು. ಇವನ್ನೆಲ್ಲ ಕೇಳಿ, ಲೋಪಾಮುದ್ರೆಯು 'ಜಾನಕಿ, ಶ್ರೀ ರಾಮನ ಕಾರ್ಯಗಳೆಲ್ಲ ಬಹಳ ಶ್ರೇಷ್ಠವಾದವುಗಳೇ ಸರಿ. ಆದರೆ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಲು ಆತನು ಹೆಣಗಿದ ಆಯಾಸ ವ್ಯರ್ಥವಾದದ್ದಾಗಿ ತೋರುವದು. ಇಷ್ಟು ಶ್ರಮಪಡುವದಕ್ಕಿಂತ ನನ್ನ ಪತಿಗಳಾದ ಅಗಸ್ತ್ಯರನ್ನು ಪ್ರಾರ್ಥಿಸಿದ್ದರೆ, ಅವರು ಒಂದೇ ಬೊಗಸೆಯಿಂದ ಸಮುದ್ರವನ್ನೆಲ್ಲ ಕುಡಿದು ಬಿಡುತ್ತಿದ್ದರು' ಎಂದು ಮಾತನಾಡಿದಳು.

ಈ ಮಾತುಗಳನ್ನು ಕೇಳಿ ಸೀತೆಯು ಬಹಳ ಗರ್ವದಿಂದ 'ಹೇ, ತಾಯಿ, ನನ್ನ ಪತಿಯಾದ ಶ್ರೀ ರಾಮನು ಮಾಡಿದ ಕಾರ್ಯವೇ ಸರ್ವೋತ್ತಮವೆಂದು ತಿಳಿಯಿರಿ. ಹಾಗಲ್ಲದೆ ಆತನು ಬಾಣದಿಂದ ಸಮುದ್ರವನ್ನು ಬತ್ತಿಸಿದ್ದರೆ ಅನೇಕ ಜಲಜಂತುಗಳು ಮರಣಹೊಂದುತ್ತಿದ್ದವು. ಆತನು ಆಕಾಶ ಮಾರ್ಗದಿಂದ ಹಾರಿಹೋಗಿದ್ದದ್ದಾದರೆ, ರಾವಣನು ಆತನನ್ನು 'ಮನುಷ್ಯನು' ಎಂದು ತಿಳಿಯುತ್ತಿರಲಿಲ್ಲ. ಮಾರುತಿಯ ಭುಜದ ಮೇಲೆ ಕುಳಿತು ಆತನು ಲಂಕೆಗೆ ಹೋಗಿದ್ದರೆ, ಲಂಕೆಯಲ್ಲಿ ಎಲ್ಲರೂ ಆಂಜನೇಯನನ್ನೇ ಸ್ತೋತ್ರಮಾಡುತ್ತಿದ್ದರು. ಆತನು ಸಮುದ್ರದಲ್ಲಿ ಈಜಿಕೊಂಡು ಹೋಗಿದ್ದರೆ, ಬ್ರಾಹ್ಮಣಮಾತ್ರನನ್ನು ದಾಟಿದ ದೋಷಕ್ಕೆ ಗುರಿಯಾಗುತ್ತಿದ್ದನು. ಇವೆಲ್ಲವನ್ನೂ ಬಿಟ್ಟು ಆ ರಘುವೀರನು ನಿಮ್ಮ ಪತಿಯನ್ನು ಪ್ರಾರ್ಥಿಸಿ, ಸಮುದ್ರವನ್ನು ನಿಮ್ಮ ಪತಿಗೆ ಪಾನಮಾಡಿಸಿದ್ದೇ ಆಗಿದ್ದರೆ, ಬ್ರಾಹ್ಮಣನ ಮೂತ್ರವನ್ನು ಬ್ರಾಹ್ಮಣನಿಗೆ ಪಾನಮಾಡಿಸಿದ ಮಹಾಪಾತಕಕ್ಕೆ ಹೊಣೆಯಾಗುತ್ತಿದ್ದನು. ಇದರಿಂದ ಆತನಿಗೆ ಸೂರ್ಯ ಚಂದ್ರರಿರುವ ವರೆಗೂ ಅಪಕೀರ್ತಿಯು ತಪ್ಪುತ್ತಿರಲಿಲ್ಲ. ಆದ್ದರಿಂದ ಶ್ರೀ ರಾಮನು ಮಾಡಿದ ಕಾರ್ಯವೇ ಯುಕ್ತವಾದದ್ದು. ಅಂಥ ಕಾರ್ಯವನ್ನು ಯಾರೂ ಮಾಡಲಾರರು. ಮಾಡಲು ಸಾಧ್ಯವೂ ಇಲ್ಲ' ಎಂದು ಹೇಳಿದಳು. ಮತ್ತು ಎಲ್ಲ ಸ್ತ್ರೀಯರ ಕಡೆಗೂ ನೋಡಿ, ಸ್ವಲ್ಪ ನಗುತ್ತ ಲೋಪಾಮುದ್ರೆಯು ಬಹಳ ಖಿನ್ನಳಾಗಿರುವಳೆಂದು ತಿಳಿದು, 'ತಾಯೇ, ನಾನು ವಿನೋದ

ಕ್ಕಾಗಿ ಹೇಳಿದ ಮಾತುಗಳಿಗೆ ನೀನು ಎಂದಿಗೂ ಕೋಪಮಾಡಬೇಡ. ನನ್ನ ಪತಿಯಾದ ಶ್ರೀ ರಾಮನಲ್ಲಿ ಎಷ್ಟು ಸಾಮರ್ಥ್ಯವಿರುವದೋ ಅದೆಲ್ಲ ನಿನ್ನ ಪತಿಯ ಆಶೀರ್ವಾದದ ಫಲವೇ ಹೊರತು ಮತ್ತೆ ಬೇರೆ ಇಲ್ಲ. ಇದನ್ನು ನಾನು ಬಲ್ಲೆನು. ಮತ್ತು ಜ್ಞಾನಿಗಳ ಸಾಮರ್ಥ್ಯವನ್ನು ನಾನು ಚೆನ್ನಾಗಿ ತಿಳಿದಿರುವೆನು ಎಂದು ಮಾತನಾಡಿ ಲೋಪಾಮುದ್ರೆಯನ್ನು ಸಂತೋಷಗೊಳಿಸಿದಳು. ಪರ್ವಕಾಲವು ತೀರಿದ ಬಳಿಕ ಸಮಸ್ತರೂ ಸ್ನಾನ, ಸಂಧ್ಯಾ, ದಾನ, ಧರ್ಮಗಳನ್ನು ಮಾಡಿ, ಭೋಜನ ಮಾಡಿದರು. ಅನಂತರ ಎಲ್ಲರೂ ಪರಮ ಸಂತೋಷದಿಂದ ತಮ್ಮ ತಮ್ಮ ಸ್ಥಳಗಳಿಗೆ ಪ್ರಯಾಣ ಮಾಡಿದರು. ಈ ರೀತಿ ಶ್ರೀ ರಾಮನು ಸೀತೆಯೊಡನೆ ಅನೇಕ ಸುಖಗಳನ್ನನುಭವಿಸುತ್ತ ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿದನು.

ವಿಲಾಸಕಾಂಡಸ್ಸಮಾಪ್ತಃ



# ಜನ್ಮಕಾಂಡ.

—:o:—

## ೧ನೆಯ ಪ್ರಕರಣ—ಕುಶ-ಲವರ ಜನ್ಮ.

ಅನಂತರ ಶ್ರೀ ರಾಮನು ಸೀತೆಯೊಡನೆ ಅನೇಕ ದಿವಸಗಳ ವರೆಗೆ ವಿಲಾಸದಿಂದ ಕಾಲಕಳೆದನು. ಒಂದಾನೊಂದು ದಿವಸ ದಾಸಿಯ ಮುಖದಿಂದ "ಸೀತಾದೇವಿಯು ಗರ್ಭಿಣಿಯಾಗಿರುವಳು" ಎಂದು ಕೇಳಿ, ಶ್ರೀ ರಾಮನು ಪರಮ ಸಂತೋಷಭರಿತನಾಗಿ, ಲಕ್ಷಾಂತರ ದಾನಗಳನ್ನು ಬ್ರಾಹ್ಮಣರಿಗೆ ಅರ್ಪಿಸಿ, ಅವರಿಂದ ಆಶೀರ್ವಾದವನ್ನು ಹೊಂದಿದನು. ಮತ್ತು ಎರಡನೆಯ ತಿಂಗಳಲ್ಲಿ ಕುಲಗುರುಗಳಾದ ವಸಿಷ್ಠರ ಆಜ್ಞೆಯಂತೆ ಪುಂಸವನವನ್ನು ವಿಧಿವಿಹಿತವಾಗಿ ನೆರವೇರಿಸಿದನು. ಆಗ ಸುಮೇಧಾ-ಜನಕರೇ ಮೊದಲಾದ ಸಮಸ್ತ ಬಂಧುಗಳನ್ನೂ ಕರೆಸಿದ್ದನು. ಜನಕ ಮಹಾರಾಜನು ಪುಂಸವನಕಾಲದಲ್ಲಿ ಸೀತಾ-ರಾಮರಿಗೆ ಅನೇಕ ವಸ್ತ್ರಾಭರಣಗಳನ್ನು ಕೊಟ್ಟನು. ತನ್ನ ಮಗಳ ಪುಂಸವನ ಸಮಾರಂಭವನ್ನು ನೋಡಿ ಸುಮೇಧೆಯೂ ಬಹಳ ಸಂತೋಷಪಟ್ಟಳು. ಆ ಉತ್ಸವವು ತೀರಿದಬಳಿಕ ಜನಕಮಹಾರಾಜನು ಅಯೋಧ್ಯೆಯಲ್ಲಿ ಕೆಲವು ದಿವಸಗಳವರೆಗೂ ಇದ್ದು, ಅನಂತರ ಸೀತಾ-ರಾಮರ ಅನುಮತಿಯಿಂದ ಮಿಥಿಲಾನಗರಕ್ಕೆ ಪ್ರಯಾಣ ಮಾಡಿದನು.

ಒಂದು ದಿವಸ ಸೀತೆಯು 'ಉಪವನದಲ್ಲಿ ತಮ್ಮೊಡನೆ ಕೆಲವು ದಿವಸ ವಾಸಮಾಡಬೇಕು' ಎಂದು ಶ್ರೀ ರಾಮನಿಗೆ ವಿಜ್ಞಾಪಿಸಿದಳು. ಆತನೂ ಸೀತೆಯ ಇಚ್ಛೆಯಂತೆ ಉಪವನಕ್ಕೆ ಪ್ರಯಾಣ ಸನ್ನಾಹವನ್ನು ಸಿದ್ಧಪಡಿಸುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿದನು. ಆಗ ಸೌಮಿತ್ರಿಯು—'ಅಣ್ಣನವರೆ, ಸನ್ನಾಹಗಳೆಲ್ಲವೂ ಸಿದ್ಧವಾಗಿವೆ. ಹೊರಡುವ ಕಾಲವಾವುದು?' ಎಂದು ಪ್ರಶ್ನೆಮಾಡಿದನು. ಬಳಿಕ ಶ್ರೀರಾಮನು ವಸಿಷ್ಠರನ್ನು ಕರೆಸಿ, ಅವರ ಅಪ್ಪಣೆಯಂತೆ ಶುಭಮುಹೂರ್ತದಲ್ಲಿ ಸೀತೆಯೊಡನೆ ಅತಿ ಸಂಭ್ರಮದಿಂದ ಉಪವನಕ್ಕೆ ಹೊರಡಲು ಸಿದ್ಧನಾದನು. ಶ್ರೀ ರಾಮನು ಸೀತೆಯೊಡನೆ ಉಪವನವನ್ನು ನೋಡಲು ಹೊರಡುವನೆಂದು ತಿಳಿದು, ನಗರವಾಸಿಗಳೆಲ್ಲರೂ ಬೀದಿಗಳಲ್ಲಿ ನಿಬಿಡವಾಗಿ ನಿಂತಿದ್ದರು. ಉಪ್ಪರಿಗೆಗಳಲ್ಲಿ ನಿಂತಿರುವ ಪೌರಕನ್ಯೆಯರು ಸೀತಾ-ರಾಮರ ಮೇಲೆ ಪುಷ್ಪಗಳನ್ನು ವರ್ಷಿಸಿ

ದರು. ಶ್ರೀರಾಮನು ಸೀತಾದೇವಿಯ ಇಚ್ಛೆಯಂತೆ ಆಕೆಯೊಡನೆ ಸಿಬಿಕೆಯನ್ನೇರಿ ಹೊರಟದ್ದನು. ಸೀತಾ-ರಾಮರು ಕುಳಿತಿರುವ ಆ ವಾಹನದ ಎರಡೂ ಪಕ್ಕಗಳ ಲ್ಲೂ ದಾಸಿಯರು ಚಾಮರಗಳನ್ನು ಬೀಸುತ್ತಿದ್ದರು. ಬಂದಿಗಳು ಜಯ ಜಯಕಾರ ಮಾಡುತ್ತಿದ್ದರು. ಈ ರೀತಿ ಅವರು ರಾಜವೈಭವದಿಂದ ನಗರವನ್ನು ದಾಟಿ, ಉಪ ವನದ ಹಾದಿಯನ್ನು ಹಿಡಿದರು.

ಅನಂತರ ಸ್ವಲ್ಪಕಾಲದೊಳಗೆ ನಾನಾ ತರದ ವೃಕ್ಷಗಳಿಂದ ಕೂಡಿದ ಉಪವ ನವನ್ನು ಅವರು ಸೇರಿದರು. ಇಷ್ಟರಲ್ಲಿ ಸೀತಾ-ರಾಮರ ವನವಿಹಾರದ ಸಲುವಾ ಗಿ ಮೊದಲಕ್ಕೆ ಏರ್ಪಾಡುಗಳನ್ನೆಲ್ಲಾ ನಡೆಸಿದ್ದರು. ಆ ಉಪವನದಲ್ಲಿ ನಾನಾತರದ ಪಕ್ಷಿಗಳು, ವೃಕ್ಷಗಳು ಅಲ್ಲಲ್ಲಿಯ ಜಲಾಶಯಗಳು ಇವುಗಳನ್ನು ನೋಡಿ, ಸೀತಾದೇ ವಿಗೆ ಬಹಳ ಹರ್ಷವಾಯಿತು. ನಾಗಸಂಪಗೆ, ಕೇತಕಿ, ಬಕುಳ, ಜಾಜಿ, ಕುಂದ, ಸೇವಂತಿಕಾ, ಸುರಂಗ, ಮಲ್ಲಿಕಾ ಇವೇ ಮೊದಲಾದ ಹೂವಿನ ಗಿಡಗಳನ್ನೂ, ಬ ಳ್ಳಿಗಳನ್ನೂ, ಮಾವು, ಹಲಸು, ಕಿತ್ತಳೆ, ನಿಂಬೆ, ನೇರಳೆ, ತೆಂಗು, ಅಡಿಕೆ ಇವೇ ಮೊದಲಾದ ಫಲವೃಕ್ಷಗಳನ್ನೂ, ನೋಡುತ್ತಾ ಅಲ್ಲಲ್ಲಿ ನಾನಾ ವಿಧವಾದ ವಿಲಾ ಸಗಳಿಂದ ಸಂತೋಷಹೊಂದಿ, ಸೀತಾ-ರಾಮರು ಅಯೋಧ್ಯೆಗೆ ಹಿಂತಿರುಗಿ ಬಂದ ರು. ಆಗಲೂ ಪಟ್ಟಣವು ಎಲ್ಲಿ ನೋಡಿದರೂ ಮನೋರಂಜಕವಾದ ಅಲಂಕಾರ ಗಳಿಂದ ಪ್ರಕಾಶಮಾನವಾಗಿತ್ತು. ಅನಂತರ ಸೀತೆಯ ಗರ್ಭಕ್ಕೆ ಏಳುತಿಂಗಳುತುಂಬ ಲು, ಶ್ರೀ ರಾಮನು ಸೀಮಂತೋನ್ನಯನ ಸಂಸ್ಕಾರವನ್ನು ವಿಧಿಪೂರ್ವಕ ನೆರವೇರಿ ಸಿದನು. ಆಗ ಜನಕಮಹಾರಾಜನೂ ಬಂದಿದ್ದನು. ಪೌರಜನರೂ ಶ್ರೀ ರಾಮನ ಬಂಧುಗಳೂ ಯೋಗ್ಯ ಸತ್ಕಾರಗಳಿಂದ ಸೀತಾ-ರಾಮರನ್ನು ಸಂತೋಷಗೊಳಿಸಿ ದರು.

ಇವೇ ಮೇರೆಗೆ ಇನ್ನೂ ಕೆಲವು ದಿವಸಗಳು ಕಳೆಯಲು, ಶ್ರೀ ರಾಮನು ಜನ ಕಮಹಾರಾಜನನ್ನು ಕುರಿತು—ಸ್ವಾಮಿ, ನನ್ನ ಮನಸ್ಸಿನಲ್ಲಿ ಏನೋ ಒಂದು ವಿಚಾ ರವು ಉಂಟಾಗಿದೆ. ಅದಕ್ಕೆ ಸರಿಯಾದ ಉತ್ತರವೇ ತಿಳಿಯದು. ತಾವು ಹಿರಿಯ ರೂ ಅನುಭವಜ್ಞರೂ ಇರುವದರಿಂದ ತಮ್ಮಲ್ಲಿ ನಾನು ಸಂಕೋಚವಿಲ್ಲದೆ ಹೇ ಳುವೆನು. ಸೀತಾದೇವಿಯನ್ನು ಬಿಟ್ಟು ನಾನು ಒಂದು ಕ್ಷಣವಾದರೂ ಇರಲಾರೆ ನು. ಐದನೇತಿಂಗಳಿನಿಂದ ಬೇರೆ ಶಯ್ಯೆಯಲ್ಲಿ ಶಯನಮಾಡಬೇಕೆಂದು ಶಾಸ್ತ್ರ ನಿಯಮವಿರುವದು. ಸೀತೆಯು ಇಲ್ಲಿ ಇದ್ದಳೆಂದರೆ ಒಂದುವೇಳೆ ನನಗೆ ವಿಹಾರೇ ಚ್ಛೆಯು ಹುಟ್ಟಬಹುದು. ಸೀತೆಯಾದರೂ ನನಗೆ ಪ್ರತಿಬಂಧಮಾಡಲಾರಳು. ಶಾಸ್ತ್ರ

ವಚನವನ್ನು ಮಾತ್ರ ಮಾನ್ಯ ಮಾಡದೇ ತೀರಬೇಕು. ಶಾಸ್ತ್ರದಲ್ಲಂತು ಪ್ರಸೂತಿ ಕಾಲಪ್ತೆ ಐದು ತಿಂಗಳಿರುವಾಗಲೇ ಸ್ತ್ರೀ ಸಂಗಮವನ್ನು ಸರ್ವಥಾ ವರ್ಜ್ಯ ಮಾಡಬೇಕೆಂತಲೂ, ಹೀಗೆ ಮಾಡದಿದ್ದರೆ ಸಮಸ್ತ ಪುಣ್ಯವೂ ಕ್ಷೀಣವಾಗುವದೆಂತಲೂ ಹೇಳಿರುವದು. ಈ ಕಾಲದಲ್ಲಿ ನನಗೆ ಈ ರೀತಿ ತೋಚುವದು; ಅದೇನಂದರೆ, ನಾನು ಯಾವದಾದ ರೂ ಒಂದು ನಿಮಿತ್ತದಿಂದ ಸೀತೆಯನ್ನು ವಾಲ್ಮೀಕಿಋಷಿಗಳ ಆಶ್ರಮದ ಬಳಿಗೆ ಕಳಿ ಸುವೆನು. ಸೀತಾದೇವಿಯು ಜನನವಾದ ಬಳಿಕ ಐದುವರ್ಷಗಳವರೆಗೆ ಅಲ್ಲೇ ಇರಬೇಕೆಂದು ನನ್ನ ಅಭಿಪ್ರಾಯವಿದೆ. ಅಪವಾದದ ಹೆದರಿಕೆಯಿಂದ ಶ್ರೀ ರಾಮ ನು ಸೀತಾದೇವಿಯನ್ನು ಬಿಟ್ಟನೆಂಬ ಲೋಕವಾರ್ತೆಯನ್ನು ಉಂಟುಮಾಡುವದಕ್ಕಾ ಗಿ ಈ ಕೆಲಸ ಮಾಡಬೇಕೆಂದಿರುವೆನು. ಆಗ ನೀವು ಕುಟುಂಬ ಸಮೇತರಾಗಿ ವಾ ಲ್ಮೀಕಿಗಳ ಆಶ್ರಮದಲ್ಲಿ ವಾಸಮಾಡಬೇಕು; ಮತ್ತು ನಿಮ್ಮ ಮಗಳ ಪ್ರಸೂತಿ ಕಾಲ ಕ್ಕೆ ಯೋಗ್ಯವಾದ ಸಾಮಗ್ರಿಗಳನ್ನೆಲ್ಲಾ ಸಿದ್ಧಪಡಿಸಿಕೊಳ್ಳಬೇಕು." ಎಂದು ಮಾ ತನಾಡಿದನು.

ಜನಕಮಹಾರಾಜನು ಶ್ರೀ ರಾಮನ ಈ ವಚನಗಳನ್ನು ಒಪ್ಪಿಕೊಂಡನು. ಸೀತಾದೇವಿಯು ಯಾವ ಸ್ಥಳಕ್ಕೆ ಹೋಗಬೇಕೆಂದು ನಿಶ್ಚಯವಾಗಿರುವದೋ, ಆ ಸ್ಥಳವು ಬಹಳ ರಮಣೀಯವಾದದ್ದು. ಅಲ್ಲಿ ಸಿಗದೆ ಇರತಕ್ಕ ಪದಾರ್ಥ ಗಳೇ ಇಲ್ಲ. ಸಾಕ್ಷಾತ್ ಲಕ್ಷ್ಮಿಯೇ ಅಲ್ಲಿ ವಾಸಮಾಡುವಾಗ, ಯಾವ ಪದಾ ರ್ಥಗಳಿಗೆ ತಾನೆ ಕೊರತೆ ಬಂದೀತು! ಜನಕಮಹಾರಾಜನು ಪರಿವಾರ ಸಮೇತ ನಾಗಿ ವಾಲ್ಮೀಕಿಮಹರ್ಷಿಗಳ ಆಶ್ರಮಕ್ಕೆ ಪ್ರಯಾಣಮಾಡಿ, ನಡೆದ ಸಂಗತಿಯ ನ್ನೆಲ್ಲ ಋಷಿಗಳಿಗೆ ತಿಳುಹಿದನು. ಮಹಾಲಕ್ಷ್ಮಿಯಾದ ಸೀತೆಯೇ ತಮ್ಮ ಆಶ್ರಮಕ್ಕೆ ಬರುವಳೆಂಬ ವಚನವನ್ನು ಕೇಳಿ ವಾಲ್ಮೀಕಿ ಮಹಾ–ಮುನಿಗಳು ಬಹಳ ಸಂತು ಷ್ಟರಾದರು.

## ಸೀತಾ ತ್ಯಾಗ.

ಒಂದಾನೊಂದು ದಿವಸ ಕೌಸಲ್ಯೆಯು 'ಸೀತಾದೇವಿಗೆ ಸೀಮಂತೋಲ್ಲಂಘನ ಮಾ ಡಿಸಬೇಕು' ಎಂದು ಶ್ರೀ ರಾಮನಿಗೆ ಹೇಳಿದಳು. ಆತನು ತಾನು ಯೋಚಿಸಿದ್ದ ವೃತ್ತಾಂತವನ್ನೆಲ್ಲ ಏಕಾಂತದಲ್ಲಿ ತಾಯಿಗೆ ತಿಳುಹಿದನು. ಮತ್ತು ಒಂದು ದಿವಸ ಈ ಸಮಾಚಾರವನ್ನು ವಿಶ್ವಾಸದಿಂದ ತೊಡೆಯ ಮೇಲೆ ಕುಳಿತಿರುವ ಸೀತಾದೇವಿಗೂ ಹೇಳಿದನು. ಸೀತೆಯು ಲೋಕಶಿಕ್ಷಣದ ಸಲುವಾಗಿ ಅವತಾರ ಮಾಡಿದ ಶ್ರೀ ರಾಮನ ಮಾತುಗಳಿಗೆ ಒಡಂಬಟ್ಟಳು. ಮತ್ತು ಐದು ವರ್ಷಗಳಾದ ನಂತರ

ನಿನ್ನನ್ನು ಸನ್ನಿಧಿಗೆ ಬರಮಾಡಿಕೊಳ್ಳುವೆನೆಂಬ ಪತಿಯ ವಚನವನ್ನು ಕೇಳಿದ್ದಕಾದ್ದ ರಿಂದ ಸ್ವಲ್ಪವೂ ಅಸಮಾಧಾನಪಡಲಿಲ್ಲ. ಶ್ರೀ ರಾಮನು 'ಪ್ರಿಯೆ, ನಿನಗೆ ಕುಶ ನೆಂಬ ಪರಾಕ್ರಮಿಯಾದ ಮಗನು ಜನಿಸುವನು. ಮುನಿಯ ತಪಃಪ್ರಭಾವದಿಂದ ಲವನೆಂಬ ಪುತ್ರೋತ್ಪನು ನಿನಗೆ ದೊರಕುವನು. ನಿನ್ನ ಸುಖಕ್ಕೋಸ್ಕರ ಜನಕ ಮಹಾರಾಜನು ಇಂದಿಗೆ ಮೊದಲೇ ಆ ವಾಲ್ಮೀಕಿಮಹರ್ಷಿಗಳ ಆಶ್ರಮದಲ್ಲಿ ವಾಸ ಮಾಡಿರುವನು. ನಿನಗೆ ಮೊದಲು ಬಂದ ವನವಾಸಕ್ಕಿಂತ ಇದೇನೂ ದುಃಖ ದಾಯಕವಲ್ಲ. ಎಲೈ ಜನಕನಂದಿನಿಯೇ, ನೀನು ಸಾತ್ವಿಕರೂಪದಿಂದ ನನ್ನ ಪರ್ಯಂಕದಲ್ಲಿ ವಾಸಮಾಡು. ರಾಜಸ-ತಾಮಸ ಮಿಶ್ರ ರೂಪದಿಂದ ಅಲ್ಲಿಗೆ ಪ್ರಯಾಣ ಮಾಡು' ಎಂದು ಹೇಳಿ ಸೀತಾದೇವಿಯ ಅನುಮತಿಯನ್ನು ಪಡೆದು, ರಾಜ ಸಭೆಗೆ ಬಂದನು.

ಅಲ್ಲಿ ಲಕ್ಷ್ಮಣ-ಭರತ-ಶತ್ರುಘ್ನರೇ ಮೊದಲಾದ ರಾಜಪುತ್ರರೊಡನೆ ಶ್ರೀ ರಾಮನು ಸಿಂಹಾಸನದ ಮೇಲೆ ಕುಳಿತು, ಸ್ವಲ್ಪ ಕಾಲದ ವರೆಗೆ ವಿನೋದವಾಗಿ ಮಾತುಗಳನ್ನಾಡುತ್ತಿದ್ದನು. ಮತ್ತು ತನ್ನ ಗೂಢಚಾರನಾದ ವಿಜಯನನ್ನು ಕರೆ ದು 'ಎಲೈ ವಿಜಯನೆ, ನನ್ನ ವಿಷಯದಲ್ಲಿ ಜನಗಳು ಏನು ಅಭಿಪ್ರಾಯ ಪಡುವರು? ಯಾರಾದರೂ ವಿಷಮಾಭಿಪ್ರಾಯದವರಿದ್ದರೆ ವಂಚನೆ ಮಾಡದೆ ಧೈರ್ಯದಿಂದ ಹೇಳು!' ಎಂದು ಪ್ರಶ್ನೆಮಾಡಿದನು. ಆಗ ಆ ದೂತನು 'ರಾಮಚಂದ್ರನೇ, ನಿನ್ನ ನ್ನು ಸಮಸ್ತ ಪ್ರಜೆಗಳೂ ಸ್ತೋತ್ರಮಾಡುತ್ತಿರುವರು. ಯಾವಾಗಲೂ ನಿನ್ನಂಥ ರಾಜನೇ ನಮಗೆ ದೊರೆಯಲೆಂದು ದೇವರನ್ನು ಪ್ರಾರ್ಥಿಸುತ್ತಿರುವರು. ಆದರೆ ಕೆಲವರು, 'ರಾವಣನ ಮನೆಯಲ್ಲಿ ಏಳು ತಿಂಗಳ ವರೆಗೆ ವಾಸಮಾಡಿದ ತರುಣಿಯ ನ್ನು ಶ್ರೀ ರಾಮನು ಸ್ವೀಕರಿಸಿರುವನು. ಇದೇ ಸ್ವಲ್ಪ ಕಳಂಕಾಸ್ಪದವಾಗಿದೆ' ಎ ನ್ನುವರು. ಒಂದುದಿನ ನಾನು ಒಬ್ಬ ರಜಕನ ಮನೆಯ ಬಳಿಗೆ ಹೋಗುತ್ತಿರಲು, ಅವನು ವ್ಯಭಿಚಾರಿಣಿಯಾದ ತನ್ನ ಹೆಂಡತಿಯನ್ನು ಮನೆಯಿಂದ ಹೊರಗೆ ನೂಕಿ 'ಎಲೈ ನೀಚಳೇ, ನಾನೇನೂ ವ್ಯಭಿಚಾರಿಣಿಯಾದ ನಿನ್ನನ್ನು ಸ್ವೀಕರಿಸಲು, ರಾವ ಣನ ಮನೆಯಲ್ಲಿ ವಾಸಮಾಡಿದ್ದ ಸೀತೆಯನ್ನು ಪಾಣಿಗ್ರಹಣ ಮಾಡಿ, ಅಯೋಧ್ಯೆಗೆ ಕರತಂದ ರಾಮನಲ್ಲ. ನೀನು ನನ್ನ ಮನೆಯ ಬಾಗಿಲಿಗೂ ಬರಕೂಡದು. ಆ ನಿನ್ನ ಜಾರನ ಬಳಿಗೇ ಹೋಗು' ಎಂದನು. ಈ ಮಾತುಗಳನ್ನು ಕೇಳಿ ನನಗೆ ಬಹಳ ವ್ಯಾಕುಲವಾಯಿತು. ತಮ್ಮಮುಂದೆ ಈ ವಿಷಯವನ್ನು ಹ್ಯಾಗೆ ತಿಳಿಸಲೆಂದು ಸಂಕೋಚದಿಂದ ಇದು ವರೆಗೂ ಸುಮ್ಮನಿದ್ದೆನು.' ಎಂದು ವಿಜ್ಞಾಪಿಸಿದನು.

ವಿಜಯನ ಈ ಮಾತುಗಳನ್ನು ಕೇಳಿ ಶ್ರೀ ರಾಮನು ಬಹಳ ಖಿನ್ನನಾಗಿ 'ಎಲೈ ಲಕ್ಷ್ಮಣನೇ, ಸೀತಾದೇವಿಯನ್ನು ವಾಲ್ಮೀಕಿ ಮುನಿಗಳ ಆಶ್ರಮದ ಬಳಿಗೆ ಕರೆದುಕೊಂಡು ಹೋಗಿ, ಅಲ್ಲಿ ಆಕೆಯನ್ನು ಸಂಹರಿಸಿ, ಗುರುತಿಗಾಗಿ ಸೀತೆಯ ಮುಂಗೈಯನ್ನು ಕತ್ತರಿಸಿಕೊಂಡು ಬರತಕ್ಕದ್ದು' ಎಂದು ಆಜ್ಞಾಪಿಸಿದನು. ಶ್ರೀ ರಾಮನ ಈ ಮಾತುಗಳನ್ನು ಕೇಳಿ ಲಕ್ಷ್ಮಣನೇ ಮೊದಲಾದ ಭ್ರಾತೃಗಳು ದುಃಖಿಸಲಾರಂಭಿಸಿದರು. ಅವರನ್ನು ನೋಡಿ ಶ್ರೀ ರಾಮನು 'ಎಲೈ ತಮ್ಮಂದಿರಾ, ನೀವು ಹೀಗೆ ಶೋಕ ಮಾಡಿ ನನ್ನ ಮಾತಿಗೇನಾದರೂ ವಿರೋಧಕಾರಿಯಾದ ಉತ್ತರವನ್ನು ಹೇಳಿದಿರಾದರೆ, ನನ್ನನ್ನು ವಧಮಾಡಿದ ಪಾತಕಕ್ಕೆ ಖಂಡಿತವಾಗಿ ನೀವು ಗುರಿಯಾಗುವಿರಿ' ಎಂದು ಮಾತನಾಡಿದನು. ಆತನ ಈ ಮಾತುಗಳನ್ನು ಕೇಳಿ ಎಲ್ಲರೂ ನಿಶ್ಚೇಷ್ಟಿತರಾದರು. ಶ್ರೀ ರಾಮನು ಆ ದಿವಸ ರಾಜಕಾರ್ಯಗಳು ಮುಗಿದ ಬಳಿಕ ಎಲ್ಲರಿಗೂ ನಿರೂಪ ಕೊಟ್ಟು, ಲಕ್ಷ್ಮಣನಿಗೆ 'ನಾಳೆ ಪ್ರಾತಃಕಾಲದಲ್ಲಿ ಸೀತೆಯನ್ನು ಖಂಡಿತವಾಗಿ ವನಕ್ಕೆ ಕರೆದುಕೊಂಡು ಹೋಗಬೇಕು' ಎಂದು ಆಜ್ಞಾಪಿಸಿ, ಕೈಕೇಯಿಯ ಮನೆಯ ಕಡೆಗೆ ನಡೆದನು.

ಇತ್ತಲಾ ಸೀತಾದೇವಿಯು ಕೈಕೇಯಿಯ ಮನೆಯ ಕಡೆಗೆ ಅದೇ ದಿವಸವೇ ಬಂದಿದ್ದಳು. ಮಾತಿನ ಸಂದರ್ಭದಲ್ಲಿ ಕೈಕೇಯಿಯು 'ಸೀತೆ, ನೀನು ರಾವಣನನ್ನು ನೋಡಿರುವೆಯಷ್ಟೆ ? ಅವನನ್ನು ಈ ಗೋಡೆಯ ಮೇಲೆ ಬರೆದು ತೋರಿಸು, ನೋಡೋಣ' ಎಂದಳು. ಆಗ ಜಾನಕಿಯು 'ಅತ್ತೆಯವರೆ, ನಾನು ಅವನ ದೇಹವನ್ನೂ, ಮುಖವನ್ನೂ ನೋಡಿದವಳಲ್ಲ. ಜನಸ್ಥಾನದಲ್ಲಿ ಕಪಟ ಸನ್ಯಾಸಿಯ ವೇಷದಿಂದ ನಮ್ಮ ಪರ್ಣಶಾಲೆಗೆ ಭಿಕ್ಷೆಗೆ ಬಂದಾಗ ಪೂಜ್ಯಬುದ್ಧಿಯಿಂದ ಅವನ ಕಾಲಿನ ಹೆಬ್ಬೆರಳನ್ನು ಮಾತ್ರ ನೋಡಿದ್ದೆನು' ಎಂದು ಹೇಳಿದಳು. ಅದಕ್ಕೆ ಕೈಕೇಯಿಯು 'ಅವನ ಅಂಗುಷ್ಠವನ್ನೇ ನನಗೆ ಬರೆದು ತೋರಿಸು' ಎಂದು ಆಗ್ರಹ ಮಾಡಲು, ಜಾನಕಿಯು ಗೋಡೆಯ ಮೇಲೆ ಅದನ್ನು ಬರೆದಳು. ಸ್ವಲ್ಪ ಹೊತ್ತಿನ ಮೇಲೆ ಸೀತೆಯನ್ನು ಅಂತಃಪುರಕ್ಕೆ ಕಳುಹಿಸಿ, ಆ ಕೈಕೇಯಿಯು ಅಂಗುಷ್ಠದ ಲಕ್ಷಣವನ್ನು ನೋಡಿ, ಅದಕ್ಕನುರೂಪವಾದ ರಾವಣನ ಆಕೃತಿಯನ್ನು ತನ್ನ ಬುದ್ಧಿಶಕ್ತಿಯಿಂದ ಕ್ಷಣಮಾತ್ರದಲ್ಲಿ ಬರೆದಳು. ಅದು ರಾವಣನ ರೂಪಕ್ಕೆ ಸ್ವಲ್ಪವೂ ವ್ಯತ್ಯಸ್ತವಾಗಿರಲಿಲ್ಲ. ಅಷ್ಟರಲ್ಲಿ ಶ್ರೀ ರಾಮನು ತಾಯಿಯ ದರ್ಶನಕ್ಕಾಗಿ ಒಳಗೆ ಪ್ರವೇಶಿಸಿದನು. ಕೈಕೇಯಿಯು ಶ್ರೀ ರಾಮನಿಗೆ ಯೋಗ್ಯವಾದ ಪೀ

ಠವನ್ನು ಕೊಟ್ಟು, ತಾನೂ ಆತನ ಬಳಿಯಲ್ಲಿ ಕುಳಿತು ಮಾತನಾಡುತ್ತಿದ್ದಳು. ಶ್ರೀ ರಾಮನು ಗೋಡೆಯ ಮೇಲೆ ಕಾಣುತ್ತಿರುವ ರಾವಣನ ಚಿತ್ರವನ್ನು ನೋಡಿ, 'ಈ ಚಿತ್ರವನ್ನು ಬರೆದವರು ಯಾರು' ಎಂದು ಪ್ರಶ್ನೆಮಾಡಿದನು. ಆಗ ಕೈಕೇಯಿಯು 'ರಾವಣನ ಚಿತ್ರವನ್ನು ಬರೆಯುವವರಿನ್ನಾರು; ಜಾನಕಿ. ಅವಳದೇ ಈ ಪ್ರತಾಪ! ಯಾರ ಮನಸ್ಸಿನಲ್ಲಿ ಯಾವ ಯೋಚನೆ ಇರುವದೋ, ಅವರ ಕಾರ್ಯಗಳಲ್ಲೂ ಅದೇ ಹೊರಬೀಳುವದು' ಎಂದು ಉತ್ತರಕೊಟ್ಟಳು ಈ ಮಾತುಗಳನ್ನು ಕೇಳಿದೊಡನೆ ಶ್ರೀ ರಾಮನು ಬಹಳ ಸಿಟ್ಟಿನಿಂದ 'ನಾಳೆ ಬೆಳಿಗ್ಗೆ ಸೀತೆಯನ್ನು ಖಂಡಿತವಾಗಿ ಅರಣ್ಯಕ್ಕೆ ಕಳುಹಿಸುವ ಪ್ರಯತ್ನ ಮಾಡುವೆನು' ಎಂದು ತಾಯಿಯ ಎದುರಿಗೆ ಪ್ರತಿಜ್ಞೆ ಮಾಡಿ, ಸ್ವಲ್ಪ ಹೊತ್ತು ಮಾತನಾಡುತ್ತ ಕುಳಿತಿದ್ದು, ಬಳಿಕ ಅಲ್ಲಿಂದ ಹೊರಟನು.

ಶ್ರೀ ರಾಮನ ಈ ಮಾತುಗಳನ್ನು ಕೇಳಿ ಕೈಕೇಯಿಗೆ ಬಹಳ ಸಮಾಧಾನವಾಯಿತು. ಶ್ರೀ ರಾಮನು ನಿತ್ಯಕೃತ್ಯಗಳನ್ನು ತೀರಿಸಿಕೊಂಡು ಸೀತಾದೇವಿಯ ಮಂದಿರಕ್ಕೆ ತೆರಳಿದನು. ಅಲ್ಲಿ ಸೀತೆಯು ಸಿದ್ಧಪಡಿಸಿಟ್ಟಿದ್ದ ತಾಂಬೂಲವನ್ನು ಸವಿದು, ಕೈಕೇಯಿಯ ಅಂತಃಪುರದಲ್ಲಿ ನಡೆದ ಸಮಾಚಾರಗಳೆಲ್ಲವನ್ನೂ ತಿಳುಹಿದನು. ಈ ಮಾತುಗಳನ್ನು ಕೇಳಿ ಜಾನಕಿಯು ಆಶ್ಚರ್ಯಗೊಂಡು ಆ ದಿವಸ ನಡೆದ ತನ್ನ ಸಮಾಚಾರವನ್ನು ಪತಿಗೆ ತಿಳುಹಿದಳು. ಅನಂತರ ಅವರಿಬ್ಬರೂ ಕೈಕೇಯಿಯ ಕೌಟಿಲ್ಯಕ್ಕೆ ಆಶ್ಚರ್ಯಪಟ್ಟರು. ಶ್ರೀ ರಾಮನು 'ಪ್ರಿಯೆ, ನೀನು ಏನನ್ನು ಅಪೇಕ್ಷಿಸುವೆ?' ಎಂದನು. ಆಗ ಜಾನಕಿಯು 'ಪ್ರಭೋ, ಉಪವನ ವಿಹಾರಕ್ಕೆ ಹೋಗಬೇಕೆಂದಿರುವೆನು' ಎಂದು ತಿಳುಹಿದಳು. ಈ ಬಯಕೆಯನ್ನು ನಾಳೆ ಪ್ರಾತಃಕಾಲದಲ್ಲಿ ನಿನಗೆ ಕೈಗೂಡಿಸಿ ಕೊಡುವೆನೆಂದು ಹೇಳಿ ಶ್ರೀ ರಾಮನು ಸೀತೆಯೊಡನೆ ನಿದ್ರೆ ಮಾಡಿದನು.

ಬೆಳಿಗ್ಗೆ ಶ್ರೀ ರಾಮನ ಅಪ್ಪಣೆಯಂತೆ ಲಕ್ಷ್ಮಣನು ರಥವನ್ನು ಸಿದ್ಧಗೊಳಿಸಿದ್ದನು. ಅಷ್ಟರಲ್ಲಿ ಜಾನಕಿಯು ಕೌಸಲ್ಯೆಯೇ ಮೊದಲಾದ ಎಲ್ಲಾ ಹಿರಿಯರ ಅಪ್ಪಣೆಯನ್ನು ಪಡೆದು, ಅರುಂಧತಿಯ ಪಾದಗಳಿಗೆ ನಮಸ್ಕರಿಸಿ, ಮೆಲ್ಲನೆ ರಥದ ಬಳಿಗೆ ಬಂದು ಅತಿಪ್ರಯಾಸದಿಂದ ರಥವನ್ನೇರಿದಳು. ಲಕ್ಷ್ಮಣನು ಶ್ರೀ ರಾಮನ ಆಜ್ಞೆಯಂತೆ ವಾಲ್ಮೀಕಿಮಹರ್ಷಿಗಳ ವನದ ಬಳಿಗೆ ರಥವನ್ನು ನಡೆಸಿದನು. ಕಣ್ಣುಗಳಲ್ಲಿ ನೀರು ಸುರಿಸುತ್ತಿರುವ ಸೀತಾ—ಲಕ್ಷ್ಮಣರನ್ನು ನೋಡಿ, ಪುರಜನರು ಬಹಳ ವ್ಯಸನ ಪಟ್ಟರು. ಲಕ್ಷ್ಮಣನು ದಕ್ಷಿಣದಿಕ್ಕಿಗೆ ಅತಿವೇಗದಿಂದ ರಥವನ್ನು

ಓಡಿಸಿದನು. ದಾರಿಯಲ್ಲಿ ತಮಸಾ, ಗೌತಮೀ, ಜಾಹ್ನವೀ, ಯಮುನಾ, ಮಂದಾಕಿನೀ ಇವೇ ಮೊದಲಾದ ಪುಣ್ಯನದಿಗಳನ್ನು ದಾಟಿ ಚಿತ್ರಕೂಟಪರ್ವತದ ಬಳಿಗೆ ರಥವು ಬಂದು ನಿಂತಿತು. ಅಲ್ಲಿ ಸೀತಾದೇವಿಯನ್ನು ಒಂದು ವೃಕ್ಷದ ಕೆಳಗೆ ಇಳಿಸಿ, ಲಕ್ಷ್ಮಣನು 'ತಾಯೆ, ಶ್ರೀ ರಾಮನ ಆಜ್ಞೆಯಂತೆ ನಿನ್ನನ್ನು ಈ ತಪೋವನದ ಬಳಿಯಲ್ಲಿ ಬಿಟ್ಟಿರುವೆನು. ಇನ್ನು ನೀವು ಈ ಆಶ್ರಮಕ್ಕೆ ಪ್ರಯಾಣ ಮಾಡಿರಿ. ಮಾತೃಶ್ರೀಯವರೇ, ಆಜ್ಞಾಧಾರಕನಾದ ನಾನು ಇದಕ್ಕಿಂತಲೂ ಹೆಚ್ಚು ಹೇಳಲು ಶಕ್ತನಲ್ಲ' ಎಂದು ವಿಜ್ಞಾಪಿಸಿ, ಅತಿ ದುಃಖದಿಂದ ರಥದ ಮೇಲೆ ಕುಳಿತು ಅಯೋಧ್ಯೆಯ ಕಡೆಗೆ ತೆರಳಿದನು. ಸೀತಾದೇವಿಯು ತಮ್ಮ ಆಶ್ರಮದ ಬಳಿಗೆ ಬಂದಿರುವ ವಾರ್ತೆಯನ್ನು ಶಿಷ್ಯರಿಂದ ತಿಳಿದು, ವಾಲ್ಮೀಕಿಮುನಿಗಳು ಅಲ್ಲಿಗೆ ಬಂದರು. ಅವರು ಜಾನಕಿಯನ್ನು ಸಮಾಧಾನಗೊಳಿಸಿ, ತಮ್ಮ ಆಶ್ರಮಕ್ಕೆ ಕರೆತಂದರು. ಋಷಿಪತ್ನಿಯರು ಸೀತಾದೇವಿಗೆ ಆರತಿ ಮಾಡಿದರು. ಬಹಳ ಸಂತೋಷದಿಂದ ಸೀತಾದೇವಿಯು ಆಶ್ರಮವನ್ನು ಪ್ರವೇಶಿಸಿದಳು. ಋಷಿಗಳ ಮುಖದಿಂದ 'ಈಕೆಯು ಸಾಕ್ಷಾತ್ ಲಕ್ಷ್ಮಿಯ ಸ್ವರೂಪಳಿರುವಳು' ಎಂದು ಕೇಳಿ ಮುನಿಪತ್ನಿಯರು ಸೀತೆಯನ್ನು ಆಶ್ರಮೋಚಿತವಾದ ಉಪಚಾರಗಳಿಂದ ಸತ್ಕರಿಸಿದರು. ಮೊದಲೇ ಅಲ್ಲಿಗೆ ಬಂದಿದ್ದ ಸುಮೇಧಾ-ಜನಕರು ಸೀತೆಗೆ ರಾಜೋಪಚಾರಗಳನ್ನು ಮಾಡುತ್ತಿದ್ದರು.

ಇತ್ತಲಾ ಲಕ್ಷ್ಮಣನು ಸೀತೆಯನ್ನು ಅರಣ್ಯದಲ್ಲಿ ಬಿಟ್ಟು ಅಯೋಧ್ಯೆಗೆ ತೆರಳಿದನಷ್ಟೆ! ಶ್ರೀ ರಾಮನ ಆಜ್ಞೆಯನ್ನು ಪೂರ್ಣವಾಗಿ ನಡೆಸಲಿಲ್ಲವಾದ್ದರಿಂದ ಆತನು ಅಯೋಧ್ಯೆಗೆ ಹೋಗಲು ಹೆದರಿದನು. ಮತ್ತು ಈ ಯಮುನಾತೀರದಲ್ಲಿ ಅಗ್ನಿಪ್ರವೇಶ ಮಾಡಬೇಕೆಂದು ನಿಶ್ಚಯ ಮಾಡಿದನು. ಕಾಷ್ಟಗಳನ್ನು ಕೂಡಹಾಕಲು ಅಲ್ಲಲ್ಲಿ ಸಂಚರಿಸುತ್ತ, ಬ್ರಹ್ಮನ ಅಪ್ಪಣೆಯಂತೆ ವಿಶ್ವಕರ್ಮನು ಹೆಗಲ ಮೇಲೆ ಕೊಡಲಿಯನ್ನಿಟ್ಟುಕೊಂಡು ಅರಣ್ಯದಲ್ಲಿ ಬರುವದನ್ನು ಕಂಡನು. ಅವನನ್ನು ನೋಡಿ ಸೌಮಿತ್ರಿಯು 'ಎಲೈ ಸತ್ಪುರುಷನೆ, ನಾನು ಅಗ್ನಿಪ್ರವೇಶ ಮಾಡಬೇಕೆಂದಿರುವೆನು. ನನಗೆ ತಕ್ಕಷ್ಟು ಕಾಷ್ಟಗಳನ್ನು ಒದಗಿಸಿಕೊಡು. ನಿನಗೆ ಬೇಕಾದಷ್ಟು ಮೂಲ್ಯವನ್ನು ಕೊಡುವೆನು' ಎಂದು ಪ್ರಾರ್ಥನೆಮಾಡಿದನು. ಈ ಮಾತುಗಳನ್ನು ಕೇಳಿ ಆ ಮನುಷ್ಯನು 'ಎಲೈ ರಾಜತನಯನೆ, ನೀನು ಇಂಥಾ ಅರಣ್ಯದಲ್ಲಿ ದೇಹತ್ಯಾಗಮಾಡುವದಕ್ಕೆ ಕಾರಣವೇನು?' ಎಂದು ಕೇಳಿದನು. ಆಗ ಲಕ್ಷ್ಮಣನು ತನ್ನ ಪೂರ್ವ ವೃತ್ತಾಂತವನ್ನು ತಿಳುಹಿ, ಮತ್ತು ಕಾಷ್ಟಗಳನ್ನು ಕೂಡಿಸಿಕೊ

ದೆಂದು ಕೇಳಿಕೊಂಡನು. ಬಳಿಕ ವಿಶ್ವಕರ್ಮನು ತನ್ನ ಮಾಯೆಯಿಂದ ಸೀತೆಯು ಮುಂಗಯ್ಯಂತೆ ಕಾಣುವ ಒಂದು ಮುಂಗಯ್ಯನ್ನು ನಿರ್ಮಾಣಮಾಡಿ, ಲಕ್ಷ್ಮಣನಿಗೆ ಕೊಟ್ಟನು. ಲಕ್ಷ್ಮಣನು ಆ ಹಸ್ತವನ್ನು ತೆಗೆದುಕೊಂಡು ಮೆಲ್ಲಮೆಲ್ಲನೆ ಅಯೋಧ್ಯೆ ಯನ್ನು ಪ್ರವೇಶಿಸಿದನು. ಮತ್ತು ಸಭೆಯಲ್ಲಿ ಸಿಂಹಾಸನದ ಮೇಲೆ ಕುಳಿತಿರುವ ಶ್ರೀ ರಾಮನಿಗೆ ಆ ಹಸ್ತವನ್ನು ತೋರಿಸಿದನು. ಆ ಹಸ್ತದಲ್ಲಿರುವ ಕಂಕಣವೇ ಮೊದಲಾದ ಆಭರಣಗಳನ್ನು ನೋಡಿ, ಇದು ಸೀತೆಯ ಹಸ್ತವೇ ನಿಜವೆಂದು ಎಲ್ಲ ರೂ ಒಡಂಬಟ್ಟರು. ಅನಂತರ ಶ್ರೀ ರಾಮನು ಆ ಹಸ್ತವನ್ನು ಕೈಕೇಯಿ, ರಜಕ, ವಿಜಯನೇ ಮೊದಲಾದ ಸಮಸ್ತ ಪ್ರಜೆಗಳಿಗೂ ತೋರಿಸುವಂತೆ ಆಜ್ಞಾಪಿಸಿದನು. ಕೈಕೇಯಿಯು ಸೀತೆಯ ಹಸ್ತವನ್ನು ನೋಡಿ ಮನಸ್ಸಿನಲ್ಲೀ ಬಹಳ ಸಂತೋಷ ಗೊಂಡಳು. ಶ್ರೀ ರಾಮನು ಸಮಸ್ತ ಉಪಭೋಗಗಳನ್ನೂ ತ್ಯಾಗಮಾಡಿ, ಉ ದಾಸೀನ ಸ್ಥಿತಿಯಿಂದ ಅಯೋಧ್ಯೆಯಲ್ಲಿ ವಾಸಮಾಡಿದನು.

ಜಾನಕಿಯು ವಾಲ್ಮೀಕಿಮುನಿಗಳ ಆಶ್ರಮದಲ್ಲಿ ಸುಖದಿಂದ ವಾಸಮಾಡುತ್ತ ಶುಭಲಗ್ನದಲ್ಲಿ ಸಕಲ ರಾಜಲಕ್ಷಣಗಳಿಂದ ದೇದೀಪ್ಯಮಾನನಾದ ಗಂಡು ಮಗನ ನ್ನು ಹೆತ್ತಳು. ಆ ಮಗುವನ್ನು ನೋಡಿ, ಜನಕ, ಸುಮೇಧಾ, ವಾಲ್ಮೀಕಿ ಇವರೆ ಲ್ಲರೂ ಪರಮ ಸಂತೋಷಗೊಂಡರು. ಅಷ್ಟರಲ್ಲಿ ಶ್ರೀ ರಾಮನು ಪುಷ್ಪಕವಿಮಾನ ನದಲ್ಲಿ ಕುಳಿತು ಆಕಾಶ ಮಾರ್ಗದಿಂದ ಅಲ್ಲಿಗೆ ಬಂದನು. ಆ ರಾತ್ರಿಯಲ್ಲಿ ರಾಮ ಚಂದ್ರನು ವನಕ್ಕೆ ಹೊರಟನೆಂಬ ಸಮಾಚಾರವು ಯಾರಿಗೂ ಅಯೋಧ್ಯೆಯಲ್ಲಿ ತಿಳಿಯಲಿಲ್ಲ. ಸೀತಾದೇವಿಯ ಎದುರಿಗೆ ಪುತ್ರರತ್ನವನ್ನು ನೋಡಿ ಶ್ರೀ ರಾಮನು ಪರಮಾನಂದಭರಿತನಾದನು. ಮತ್ತು ಆಗಲೇ ವಾಲ್ಮೀಕಿ ಮುನಿಗಳ ಅಪ್ಪಣೆ ಯಂತೆ ಜಾತಕರ್ಮಸಂಸ್ಕಾರವನ್ನು ಅತಿ ವಿಜೃಂಭಣೆಯಿಂದ ನಡೆಸಿದನು. ಆ ಕಾಲದಲ್ಲಿ ಬ್ರಾಹ್ಮಣರು ಮಿತಿಯಿಲ್ಲದಷ್ಟು ಗೋ-ಭೂದಾನಗಳನ್ನು ಶ್ರೀ ರಾಮ ನಿಂದ ಹೊಂದಿದರು. ಆ ಮಗುವಿಗೆ ಮುನಿಗಳು ಕುಶನೆಂದು ನಾಮಕರಣ ಮಾಡು ವೆವೆಂದು ಶ್ರೀ ರಾಮನಿಗೆ ತಿಳುಹಿದರು. ಅನಂತರ ರಘುನಾಥನು ಯಾರಿಗೂ ತಿಳಿ ಯದಂತೆ ಅಯೋಧ್ಯೆಗೆ ಪ್ರಯಾಣ ಮಾಡಿದನು. ಶ್ರೀ ರಾಮನ ಕೋರಿಕೆಯಂತೆ ಋಷಿಗಳು ರಾಮನು ತಪೋವನಕ್ಕೆ ಬಂದಿದ್ದನೆಂಬ ಸುದ್ದಿಯನ್ನು ಯಾರಿಗೂ ಪ್ರಕಟಗೊಳಿಸಲಿಲ್ಲ.

ಕೆಲವು ದಿವಸಗಳು ಕಳೆಯಲು, ಶ್ರೀ ರಾಮನು ನೂರು ಅಶ್ವಮೇಧಗಳನ್ನು ಮಾಡಬೇಕೆಂದು ಅಪೇಕ್ಷಿಸಿ, ಯಜ್ಞಶಾಲೆಯನ್ನು ಭಾಗೀರಥೀ ತೀರದಲ್ಲಿ ಕಟ್ಟು

ವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿದನು. ಭೂಶುದ್ಧಿಯಾದ ಬಳಿಕ ಶ್ರೀರಾಮನು ಸುವರ್ಣದ ಸೀತೆಯನ್ನು ಮಾಡಿಸಿ ಅಶ್ವಮೇಧಕ್ರತುವನ್ನು ಪಕ್ರಮಿಸಿದನು. ಆ ಕ್ರತುಸಮಾರಂಭವು ಹಿಂದಿನಂತೆ ಅತಿ ವಿಜೃಂಭಣೆಯಿಂದ ನಡೆಯಿತು. ಪ್ರತಿ ನವಮಿ ತಿಥಿಯಲ್ಲಿಯೂ ಶ್ರೀರಾಮನು ಅವಭೃತಸ್ನಾನಮಾಡುತ್ತಿದ್ದನು. ಹೀಗೆ ಅನೇಕ ಅಶ್ವಮೇಧಗಳು ನಡೆಯುತ್ತಿದವು. ಇದರಿಂದ ಶ್ರೀರಾಮನ ಕೀರ್ತಿಯು ಎಲ್ಲ ಕಡೆಯಲ್ಲಿಯೂ ಹಬ್ಬಿತು. ಆಗ ಅನೇಕ ಲಕ್ಷ ಬ್ರಾಹ್ಮಣರು ಭಕ್ಷ್ಯ-ಭೋಜ್ಯಗಳಿಂದ ತೃಪ್ತರಾಗಿ ಗಂಗಾತೀರದಲ್ಲಿ ವಾಸವಾಗಿದ್ದರು. ಪ್ರತಿಯಜ್ಞದ ಕೊನೆಯಲ್ಲಿಯೂ ಶ್ರೀರಾಮನು ಸುವರ್ಣದ ಸೀತೆಯನ್ನು ವಸಿಷ್ಠರಿಗೆ ದಾನಮಾಡುತ್ತಿದ್ದನು. ಪ್ರತಿ ಅಶ್ವಮೇಧದಲ್ಲಿಯೂ ಶತ್ರುಘ್ನನು ಯಜ್ಞಿಯಾಶ್ವವನ್ನು ಕಾಪಾಡಲು ಹೊರಡುತ್ತಿದ್ದನು. ಈ ರೀತಿಯಾಗಿ ಶ್ರೀರಾಮನ ತೊಂಭತ್ತೊಂಭತ್ತು ಯಜ್ಞಗಳು ಸಾಂಗವಾಗಿ ನೆರವೇರಿದವು. ಬಳಿಕ ನೂರನೇ ಯಜ್ಞವನ್ನು ಮಾಡಲು ಲೋಕಾಭಿರಾಮನಾದ ರಘುನಾಥನು ಸಂಕಲ್ಪಮಾಡಿದನು.

ಇತ್ತಲಾ ವಾಲ್ಮೀಕಿಮುನಿಗಳು ಹತ್ತು ದಿವಸಗಳ ವರೆಗೂ ಆ ಮಗುವನ್ನು ರಾಮರಕ್ಷಾಮಂತ್ರದಿಂದ ಯಾವ ಬಾಧೆಗಳೂ ಬರದಂತೆ ಕಾಪಾಡಿದರು. ಅನಂತರ ಶುಭಮುಹೂರ್ತದಲ್ಲಿ ಮುನಿಗಳು ಆ ಬಾಲಕನಿಗೆ ಕುಶನೆಂದು ನಾಮಕರಣ ಮಾಡಿದರು. ಎಲ್ಲಾ ಮಹರ್ಷಿಗಳೂ ದೀರ್ಘಾಯುಷ್ಮಂತನಾಗೆಂದು ಶಿಶುವನ್ನು ಆಶೀರ್ವದಿಸಿದರು. ಆ ಬಾಲಕನು ದಿನ ದಿನಕ್ಕೆ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಹೊಂದುತ್ತಿದ್ದನು. ಆ ಬಾಲಕನ ಬಾಲಲೀಲೆಗಳನ್ನು ನೋಡಿ, ಸೀತೆ, ಜನಕ, ಸುಮೇಧಾ ಇವರು ಬಹಳ ಆನಂದಪಡುತ್ತಿದ್ದರು. ಒಂದು ದಿವಸ ಸೀತೆಯು ತೊಟ್ಟಿಲಲ್ಲಿ ಮಲಗಿರುವ ತನ್ನ ಮಗುವನ್ನು ಸ್ವಲ್ಪ ನೋಡಿಕೊಂಡಿರುವಂತೆ ವಾಲ್ಮೀಕಿ ಮುನಿಗಳಿಗೆ ಹೇಳಿ, ತಾನು ಸಖಿಯೊಡನೆ ತಮಸಾ ನದಿಯಲ್ಲಿ ಸ್ನಾನಮಾಡಲು ಹೊರಟಳು. ದಾರಿಯಲ್ಲಿ ಐದು ಮರಿಗಳನ್ನು ಹೆಗಲ ಮೇಲೆ ಹಾಕಿಕೊಂಡು ಓಡಿ ಹೋಗುತ್ತಿರುವ ಒಂದು ಕಪಿಯನ್ನು ಕಂಡು, ಜಾನಕಿಯು 'ಈ ಕೋತಿಗಾದರೂ ತನ್ನ ಮಕ್ಕಳ ಮೇಲೆ ಎಷ್ಟು ವಿಶ್ವಾಸವಿರುವದು!! ಮರಿಗಳನ್ನು ಹೊಟ್ಟೆಗೆ ಅಪ್ಪಿಕೊಂಡು, ಹೆಗಲುಗಳ ಮೇಲೆ ಹಾಕಿಕೊಂಡು ಎಷ್ಟು ಸಂತೋಷದಿಂದ ಹೋಗುವದಲ್ಲ!! ಇರುವ ಒಬ್ಬ ಮಗನನ್ನೂ ಮನೆಯಲ್ಲಿ ಬಿಟ್ಟು ಏಕಾಂಗಿಯಾಗಿ ಬಂದ ನನಗೆ ಸ್ವಲ್ಪವಾದರೂ ನಾಚಿಕೆ ಇಲ್ಲವಲ್ಲ!' ಎಂದು ಯೋಚಿಸಿ, ಅಲ್ಲಿಂದ ಆಶ್ರಮಕ್ಕೆ ಹಿಂತಿರುಗಿ ಮಗುವನ್ನು ಎತ್ತಿಕೊಂಡು ನದೀತೀರಕ್ಕೆ ಬಂದಳು.

ಆಗ ವಾಲ್ಮೀಕಿಮುನಿಗಳು ಏನೋ ಕೆಲಸಕ್ಕಾಗಿ ಸ್ವಲ್ಪ ಹೊರಕ್ಕೆ ಬಂದಿದ್ದರು. ಈ ಸಮಾಚಾರವು ಅವರಿಗೆ ತಿಳಿಯಲಿಲ್ಲ. ಮುನಿಗಳು ತೊಟ್ಟಿಲಲ್ಲಿ ನೋಡುವಷ್ಟರೊಳಗೆ ಮಗು ಇರಲಿಲ್ಲ. ಅವರು ಸೀತೆಗೆ ಈ ವೃತ್ತಾಂತವು ತಿಳಿಯಿತೆಂದರೆ, ಆ ಪತಿವ್ರತೆಯು ಏನು ಶಾಪ ಕೊಡುವಳೋ! ಎಂಬ ಗಾಬರಿಯಿಂದ ತಮ್ಮ ಸಮೀಪದಲ್ಲಿ ಬಿದ್ದಿದ್ದ ಲವಗಳಿಂದ ಕುಶನಂತೆ ಸುಂದರನಾದ ಮಗನನ್ನು ನಿರ್ಮಿಸಿ ತೊಟ್ಟಿಲಲ್ಲಿ ಮಲಗಿಸಿದರು. ಸೀತಾದೇವಿಯು ಸ್ನಾನ ಮಾಡಿ ನದಿಯಿಂದ ಆಶ್ರಮಕ್ಕೆ ಬಂದು, ತೊಟ್ಟಿಲಲ್ಲಿ ಮಲಗಿರುವ ಮಗುವನ್ನು ನೋಡಿ ಬೆರಗಾದಳು. ಮತ್ತು ತನ್ನ ಮಗನಂತೆ ಸುಂದರವಾದ ಈ ಮಗುವು ಯಾರದೆಂದು , ವಾಲ್ಮೀಕಿಮುನಿಗಳನ್ನು ಪ್ರಶ್ನೆಮಾಡಿದಳು. ಆಗ ಮಹರ್ಷಿಗಳು ನಡೆದ ಸಂಗತಿಯನ್ನೆಲ್ಲ ತಿಳುಹಿ, "ಜಾನಕಿಯೆ, ಕುಶನಂತೆ ಈ ಮಗುವೂ ನಿನಗೆ ಪುತ್ರನಾಗಬೇಕೆಂದು ತಿಳಿ. ನನ್ನ ಕೃಪೆಯಿಂದ ಈ ಎರಡನೇ ಮಗನು ನಿನಗೆ ಪ್ರಾಪ್ತನಾಗಿರುವನು. ಇವನಿಗೆ ಲವನೆಂದು ಹೆಸರಿಟ್ಟಿರುವೆನು" ಎಂದು ಮಾತನಾಡಿದರು. ಆಗಿನಿಂದ ಸಮಸ್ತರೂ ಸೀತಾದೇವಿಗೆ ಕುಶನು ಹಿರಿಯಮಗನೆಂತಲೂ ಲವನು ಚಿಕ್ಕಮಗನೆಂತಲೂ ತಿಳಿದರು. ಆ ಶ್ರೀರಾಮನ ಮಕ್ಕಳಾದ ಕುಶ-ಲವರು ದಿನಕ್ರಮದಿಂದ ಅಭಿವೃದ್ಧಿ ಹೊಂದುತ್ತಿದ್ದರು. ವಾಲ್ಮೀಕಿಮಹರ್ಷಿಗಳು ಆ ರಾಜಕುಮಾರರ ಉಪನಯನ ಸಂಸ್ಕಾರಗಳನ್ನು ಸಕಾಲದಲ್ಲಿ ನೆರವೇರಿಸಿ, ಸಮಸ್ತ ವಿದ್ಯೆಗಳನ್ನೂ ಕಲಿಸಿದರು. ಆ ಮೇಧಾವಿಗಳಾದ ಮಕ್ಕಳು ಧನುರ್ವಿದ್ಯೆಯೇ ಮೊದಲಾದ ಸಮಸ್ತ ವಿದ್ಯೆಗಳಲ್ಲೂ ನಿಪುಣರಾದರು. ಅನಂತರ ವಾಲ್ಮೀಕಿಮುನಿಗಳು ರಾಮಾಯಣವನ್ನು ಅವರಿಗೆ ಕಲಿಸಿದರು. ಅವರ ಕಂಠಸ್ವರವನ್ನು ಕೇಳಿ ಗಂಧರ್ವರೂ ತಲೆಬಾಗಿಸುತ್ತಿದ್ದರು. ಸೀತಾದೇವಿಯು ಆ ಗುಣವಂತರಾದ ಮಕ್ಕಳನ್ನು ನೋಡುತ್ತ, ಬಹು ವಿನೋದದಿಂದ ರಾಮನನ್ನೇ ಧ್ಯಾನ ಮಾಡುತ್ತ ತಪೋವನದಲ್ಲಿ ವಾಸಮಾಡಿದಳು.

## ೩ನೆಯ ಪ್ರಕರಣ.

## ಲಕ್ಷ್ಮಣಾದಿಗಳೊಡನೆ-ಲವನ ಯುದ್ಧ.

ಒಂದಾನೊಂದು ದಿವಸದಲ್ಲಿ ಜಾನಕಿಯು ವಾಲ್ಮೀಕಿ ಮಹಾಮುನಿಗಳಿಗೆ ನಮಸ್ಕರಿಸಿ "ಸ್ವಾಮೀ, ನನಗೆ ಶೀಘ್ರವಾಗಿ ಪತಿಯ ಸಮಾಗಮವನ್ನುಂಟುಮಾಡುವ ಯಾವದಾದರೂ ಶ್ರೇಷ್ಠವಾದ ವ್ರತವನ್ನು ಹೇಳಿರಿ;" ಎಂದು ಪ್ರಾರ್ಥಿಸಿದಳು.

ಆಗ ಮುನಿಗಳು "ಜಾನಕಿಯೇ, ಶ್ರೀ ರಾಮನ ಪಾದುಕೆಗಳನ್ನು ಮಾಡಿಸಿ, ಅದನ್ನು ಪ್ರತಿಪದೆಯಿಂದ ನವಮಿಯ ವರೆಗೂ ಸುವರ್ಣಕಮಲಗಳಿಂದಲೂ ಷೋಡಶೋಪಚಾರಗಳಿಂದಲೂ ಪೂಜಿಸಿದರೆ, ನಿನಗೆ ಶ್ರೀ ರಾಮನ ದರ್ಶನವಾಗುವದು" ಎಂದು ಹೇಳಿದರು. ಈ ಮಾತುಗಳನ್ನು ಕೇಳಿ ಸೀತೆಯು 'ಸುವರ್ಣದ ಕಮಲಗಳು ಶ್ರೀ ರಾಮನ ಉಪವನದಲ್ಲಿರುವವು. ಈ ಕಾಲಕ್ಕೆ ಅವು ನನಗೆ ಹ್ಯಾಗೆ ದೊರೆತಾವು?' ಎಂದು ಚಿಂತಿಸುತ್ತಿದ್ದಳು. ಆಗ ಹತ್ತರ ಕುಳಿತಿದ್ದ ಚಿಕ್ಕ ಮಗನಾದ ಲವನು 'ಜನನಿಯೆ, ಆ ಶ್ರೀ ರಾಮನ ವನದಲ್ಲಿರುವ ಕಮಲಗಳಿಗೋಸ್ಕರ ನೀನು ಇಷ್ಟೇಕೆ ಯೋಚನೆ ಮಾಡುವೆ? ಈ ದಿವಸವೇ ವ್ರತವನ್ನಾರಂಭಿಸು. ನಿನಗೆ ಕಮಲಗಳನ್ನು ತಂದುಕೊಡುವ ಭಾರನನಗಿರಲಿ' ಎಂದು ಮಾತನಾಡಿದನು. ಈ ವಚನಗಳನ್ನು ಕೇಳಿ ಸೀತಾದೇವಿಯು ಅತಿಪ್ರೇಮದಿಂದ ಮಗನನ್ನು ಮುದ್ದಾಡಿ "ಮಗು! ಶ್ರೀ ರಾಮನ ಆ ಉಪವನವನ್ನು ಶೂರರಾದ ಭಟರು ಕಾಯುತ್ತಿರುವರು. ಅವರು ಈ ಚಿಕ್ಕವನಾದ ನಿನ್ನನ್ನು ಒಳಗೆ ಸಹ ಬಿಡಲಾರರು" ಎಂದಳು. ತಾಯಿಯ ಈ ಮಾತುಗಳನ್ನು ಕೇಳಿ ಲವನು "ಅಮ್ಮಾ, ಇದೇನು! ಇಷ್ಟು ಹೆದರಿಸುವೆ? ನಮ್ಮ ಗುರುಗಳ ಅನುಗ್ರಹದಿಂದ ದೇವೇಂದ್ರನನ್ನಾದರೂ ಜಯಿಸಿ, ನಿನ್ನ ಕಾರ್ಯವನ್ನು ಪೂರೈಸುವೆನು. ಈ ಹುಲ್ಲುಕಡ್ಡಿಗಳಂತಿರುವ ಮಾನವರ ಪಾಡೇನು! ನನಗೆ ಆಜ್ಞಾಪಿಸು. ನಿನ್ನ ವ್ರತಕ್ಕೆ ಸಾಕಾಗುವಷ್ಟು ಕಮಲಗಳನ್ನು ತಂದು ಕೊಡುವೆನೋ, ಇಲ್ಲವೋ! ಅದಾದರೂ ಒಂದು ಪರೀಕ್ಷೆಯಾಗಿ ಬಿಡಲಿ" ಎಂದು ಮಾತನಾಡಿದನು.

ಲವನ ಬಲವಾದ ಆಗ್ರಹದಿಂದ ಅವನಿಗೆ ಕಮಲಾಹರಣಕ್ಕೆ ಪ್ರಯಾಣಮಾಡಲು ಸೀತೆಯು ಅಪ್ಪಣೆಮಾಡಿದಳು. ಬಳಿಕ ಲವನು ತಾಯಿಗೂ, ಗುರುಗಳಿಗೂ ನಮಸ್ಕರಿಸಿ ರಥವನ್ನೇರಿ ಅಯೋಧ್ಯೆಯ ಕಡೆಗೆ ಪ್ರಯಾಣ ಮಾಡಿದನು. ಉಪವನದ ಸಮೀಪಕ್ಕೆ ಹೋದಕೂಡಲೆ ರಥವನ್ನು ದೂರದಲ್ಲಿ ನಿಲ್ಲಿಸಿ, ಲವನು ಮೆಲ್ಲಮೆಲ್ಲನೆ ಉಪವನವನ್ನು ಪ್ರವೇಶಿಸಿದನು. ಆಗ ವನರಕ್ಷಕರೆಲ್ಲರೂ ಭೋಜನಕ್ಕೆ ಹೋಗಿದ್ದರು. ಲವನು ತನಗೆ ಬೇಕಾದಷ್ಟು ಹೊಸಹೊಸ ಕಮಲಗಳನ್ನು ಕೊಯ್ದುಕೊಂಡು ರಥಾರೂಢನಾಗಿ ಆಶ್ರಮಕ್ಕೆ ತೆರಳಿದನು. ಸೀತೆಯು ಅವನು ತಂದ ಪುಷ್ಪಗಳನ್ನು ನೋಡಿ ಹಿಗ್ಗಿಹಿಗ್ಗಿ ಹಿಗ್ಗಿದಳು. ಮತ್ತು ಆಕೆಯು ಶ್ರೀರಾಮನ ಚರಣಗಳಿಗೆ ಪರಮಭಕ್ತಿಯಿಂದ ಅವನ್ನು ಅರ್ಪಿಸಿದಳು. ಇದೇ ಮೇರೆಗೆ ಲವನು ಏಳು ದಿವಸಗಳ ವರೆಗೂ ಯಾವ ಪ್ರತಿಬಂಧಗಳೂ ಇಲ್ಲದೆ ಕಮಲಗಳನ್ನು

ಕರುತ್ತಿದ್ದನು. ಆ ಉಪವನದಲ್ಲಿ ಬಹಳ ಹೂಗಳು ಇದ್ದುದರಿಂದ ಯಾವ ದೂತರಿಗೂ ಲವನ ಕೃತ್ಯವು ತಿಳಿಯಲೇ ಇಲ್ಲ. ಎಂಟನೆಯ ದಿವಸ ವನಪಾಲಕರು ಪುಷ್ಪಗಳನ್ನು ತೆಗೆದುಕೊಂಡು ತಪೋವನಕ್ಕೆ ಹೊರಡಲು ಸಿದ್ಧನಾದ ಲವನನ್ನು ಹಿಡಿದರು. ಮತ್ತು 'ಈ ಪುಷ್ಪಗಳನ್ನು ಯಾರ ಅಪ್ಪಣೆಯಿಂದ ಕೊಯ್ದೆ?' ಎಂದು ಪ್ರಶ್ನೆ ಮಾಡಿದರು. ಆಗ ಲವನು 'ಎಲೈ ವನಪಾಲಕರೆ, ಈ ದಿವಸವೇ ನಾನು ಇಲ್ಲಿಗೆ ಬಂದಿದ್ದೇನೆಂದು ನೀವು ತಿಳಿಯಬೇಡಿರಿ. ಈಗ ಏಳು ದಿವಸಗಳಿಂದಲೂ ಇಲ್ಲಿಗೆ ಬಂದು ಪುಷ್ಪಗಳನ್ನು ತೆಗೆದುಕೊಂಡು ಹೋಗುತ್ತಿರುವೆನು. ಇರಲಿ. ನನ್ನನ್ನು ಬಿಡಿರಿ. ಮುಂದೆ ನಾನು ಪ್ರಯಾಣ ಮಾಡುವೆನು' ಎಂದನು.

ಈ ಮಾತುಗಳನ್ನು ಕೇಳಿ, ದೂತರು 'ಹೋಗುವದೆಲ್ಲಿಗೆ ? ನೀನು ರಾಮನಿಗೆ ಅಪರಾಧಿಯಾಗಿರುವೆ. ನಿನ್ನನ್ನು ಶಿಕ್ಷೆ ಮಾಡಿಸಲು ಶ್ರೀ ರಾಮನ ಬಳಿಗೆ ಕರೆದು ಕೊಂಡು ಹೋಗುವೆವು' ಎಂದು ಮಾತನಾಡಿದರು. ಆಗ ಲವನು 'ನಿರಪರಾಧಿ ಯಾದ ಸೀತೆಯನ್ನು ಅರಣ್ಯಕ್ಕೆ ಕಳುಹಿದ ರಾಮನ ವಿಷಯದಲ್ಲಿ ನನಗೆ ಸ್ವಲ್ಪ ವಾದರೂ ಹೆದರಿಕೆ ಇಲ್ಲ. ನಾನು ನಿಮ್ಮ ಜೊತೆಗೆ ಬರುವದಿಲ್ಲ' ಎಂದು ಹೇಳಿ ಮುಂದೆ ಹೊರಟನು. ಆಗ ಕ್ರೂರರಾದ ಭಟರು ಲವನ ಸುತ್ತಲೂ ಮುತ್ತಿದರು. ಆ ರಾಜಕುಮಾರನು ತನ್ನ ಧನುಸ್ಸನ್ನು ಟಂಕರಿಸಿ ತೀಕ್ಷ್ಣವಾದ ಬಾಣಗಳಿಂದ ಆ ದೂತರನ್ನು ಶ್ರೀ ರಾಮನ ಎದುರಿಗೆ ಬೀಳುವಂತೆ ಹೊಡೆದನು. ಯಜ್ಞಮಂಟಪ ದಲ್ಲಿ ಬಿದ್ದು ಮೂರ್ಛಿತರಾದ ದೂತರು ಸ್ವಲ್ಪ ಹೊತ್ತಿನ ಮೇಲೆ ಎಚ್ಚರಗೊಂ ಡು ನಡೆದ ವೃತ್ತಾಂತವನ್ನೆಲ್ಲ ಶ್ರೀ ರಾಮನಿಗೆ ಅರಿಕೆ ಮಾಡಿದರು. ಇದು ರಾಮ ನಿಗೆ ಬಹಳ ಆಶ್ಚರ್ಯವಾಗಿ ಕಂಡಿತು. ಆ ಬಾಲಕನು ಯಾರಿರಬಹುದೆಂದು ಶ್ರೀ ರಾಮನು ಎಷ್ಟು ಯೋಚಿಸಿದರೂ ನಿಶ್ಚಯವಾಗಲಿಲ್ಲ. ಅನಂತರ ಶ್ರೀ ರಾಮನು ಸಾವಿರಜನ ದೂತರನ್ನು ಉಪವನದ ರಕ್ಷಣೆಗಾಗಿ ಕಳುಹಿದನು. ಒಂಬತ್ತನೇ ದಿ ವಸ ಲವನು ಪ್ರತಿದಿವಸದಂತೆ ಉಪವನಕ್ಕೆ ಬಂದು ಪುಷ್ಪಗಳನ್ನು ಸ್ವೀಕರಿಸಿ ತ ಪೋವನಕ್ಕೆ ಹೊರಟನು. ಆಗ ಸೇನಾನಾಯಕರು ಲವನನ್ನು ತಡೆದರು. ಆ ಲ ವಕುಮಾರನು, 'ಎಲೈ ಸೇನಾಧಿಪತಿಗಳಿರಾ, ನನ್ನ ದಾರಿಗೆ ಸರ್ವಥಾ ಪ್ರತಿಬಂಧ ಮಾಡಬೇಡಿರಿ. ಶ್ರೀ ರಾಮನು ಅನ್ಯಾಯದ ಕಾರ್ಯ ಮಾಡಿದ್ದರಿಂದ ಅವನಿಗೆ ಎಂದಿಗೂ ಜಯವಾಗಲಾರದು. ನೀವು ನನ್ನೊಡನೆ ಯುದ್ಧ ಮಾಡಿ ಅನ್ಯಾಯವಾ ಗಿ ಮರಣಹೊಂದಬೇಡಿರಿ. ನಿಮ್ಮ ರಾಜನು ನಿಮಗೆ ಶ್ರೇಷ್ಠನಾದಾನು. ನಾನು ಅಧರ್ಮಾಚರಣೆ ಮಾಡಿದ ಅತನನ್ನು ಸ್ವಲ್ಪವೂ ಮೆಚ್ಚಲಾರೆನು' ಎಂದನು.

ಈ ಮಾತುಗಳನ್ನು ಕೇಳಿ ರಾಮಭಕ್ತರಾದ ಆ ದೂತರಿಗೆ ಬಹಳ ಸಿಟ್ಟು ಬಂತು. ಅವರು ಲವನ ಮೇಲೆ ನಾನಾವಿಧವಾದ ಅಸ್ತ್ರಗಳನ್ನು ಪ್ರಯೋಗಿಸಿದರು. ಆ ಶೂರನಾದ ಲವನು ಅವರ ಬಾಣಗಳನ್ನು ಸ್ವಲ್ಪವೂ ಗಣನೆಗೆ ತರದೆ, ತನ್ನ ಅಸ್ತ್ರಗಳಿಂದ ಅವರೆಲ್ಲರನ್ನೂ ಶ್ರೀ ರಾಮನ ಯಜ್ಞಮಂಟಪಕ್ಕೆ ಹಾರಿಸಿ ತಪೋವನಕ್ಕೆ ಪ್ರಯಾಣಮಾಡಿದನು. ಮತ್ತು ತಾಯಿಯ ಮುಂದೆ ಕಮಲಗಳನ್ನಿಟ್ಟು, ನಡೆದ ವೃತ್ತಾಂತವನ್ನೆಲ್ಲ ತಿಳುಹಿದನು. ಮಗನ ಪರಾಕ್ರಮವನ್ನು ಕೇಳಿ ಸೀತೆಗೆ ಪರಮಾನಂದವಾಯಿತು. ಮತ್ತು ಸೀತೆಯು ವಾಲ್ಮೀಕಿ ಮಹರ್ಷಿಗಳ ಅಪ್ಪಣೆಯಂತೆ ಆ ದಿವಸ ವ್ರತವನ್ನು ಮುಗಿಸಿದಳು. ಇತ್ತಲಾ ರಾಮದೂತರು "ಸ್ವಾಮೀ, ರಾಮಚಂದ್ರಾ, ಆ ವೀರಪುರುಷನು ವಾಲ್ಮೀಕಿಮಹರ್ಷಿಗಳ ಶಿಷ್ಯನಂತೆ. ಆತನು ತಮ್ಮನ್ನು ಬಹುವಿಧವಾಗಿ ನಿಂದಿಸಿ, ನಮಗೆ ಈ ದುರ್ಗತಿಯನ್ನಿತ್ತನು" ಎಂದು ಅರಿಕೆ ಮಾಡಿದರು. ಅನಂತರ ಶ್ರೀ ರಾಮನು ದೂತರೊಡನೆ ವಾಲ್ಮೀಕಿಮಹರ್ಷಿಗಳಿಗೆ 'ತಮ್ಮ ಶಿಷ್ಯನು ನಮಗೆ ಅಪರಾಧಿಯಾಗಿರುವನು. ಆದ್ದರಿಂದ ಅವನನ್ನು ಕರೆದುಕೊಂಡು ನಮ್ಮ ಯಜ್ಞಶಾಲೆಗೆ ಬರಬೇಕು. ಯಜ್ಞ ಮುಗಿಯುವದರೊಳಗೆ ವಿಚಾರಮಾಡಬೇಕಾಗಿದೆ. ಉದಾಸಮಾಡಬಾರದು' ಎಂದು ಹೇಳಿ ಕಳುಹಿದನು. ದೂತರು ತಪೋವನಕ್ಕೆ ಬಂದು ಶ್ರೀ ರಾಮನ ಅಪ್ಪಣೆಯನ್ನು ಮಹರ್ಷಿಗಳಿಗೆ ತಿಳುಹಿದರು. ವಾಲ್ಮೀಕಿಮಹರ್ಷಿಗಳು ದೂತರನ್ನು ಮುಂದೆ ಕಳುಹಿ, ಶಿಷ್ಯರೊಡನೆ ತಾವೂ ಹೊರಡಲು ಸನ್ನಾಹಗಳನ್ನು ಸಿದ್ಧಪಡಿಸುತ್ತಿದ್ದರು.

ಶ್ರೀ ರಾಮನು ನೂರನೇ ಅಶ್ವಮೇಧಯಾಗದ ಕುದುರೆಯನ್ನು ಭೂ ಪ್ರದಕ್ಷಿಣೆಗಾಗಿ ಬಿಟ್ಟಿದ್ದನಷ್ಟೆ? ಅದರ ಹಿಂದೆ ಶತ್ರುಘ್ನನು ವಿಮಾನಾರೂಢನಾಗಿ ಸಂಚಾರ ಮಾಡುತ್ತಿದ್ದನು. ಆ ಯಜ್ಞೀಯಾಶ್ವವು ನಾಲ್ಕೂ ದಿಕ್ಕುಗಳನ್ನು ಸುತ್ತಿ, ಶ್ರೀ ರಾಮನ ಯಜ್ಞಶಾಲೆಯ ಕಡೆಗೆ ಬರುತ್ತಿತ್ತು. ಈ ಕೊನೆಯ ಯಜ್ಞವನ್ನು ನೋಡಲಿಕ್ಕೂ, ಶ್ರೀ ರಾಮನಿಗೆ ಸಹಾಯ ಮಾಡಲಿಕ್ಕೂ, ಅನೇಕ ಬ್ರಾಹ್ಮಣರು ಮುನಿಗಳು, ರಾಜಪುತ್ರರು, ಸ್ತ್ರೀಯರು ಯಜ್ಞಮಂಟಪಕ್ಕೆ ಬರುತ್ತಿದ್ದರು. ಅವರೊಡನೆ ಶಿಷ್ಯಸಮೇತರಾದ ವಾಲ್ಮೀಕಿಮಹರ್ಷಿಗಳೂ ಹೊರಟರು. ಜನಕ-ಸುಮೇಧೆಯರೂ ಅಯೋಧ್ಯೆಗೆ ಪ್ರಯಾಣ ಮಾಡಿದರು. ಆಗ ಸೀತೆಯು ಸಿಬಿಕೆಯೊಳಗೆ ಕುಳಿತು ಹೊರಟಳು. ಈ ವರ್ತಮಾನವು ಯಾರಿಗೂ ತಿಳಿದಿರಲಿಲ್ಲ. ಯಜ್ಞಶಾಲೆಗೆ ಸ್ವಲ್ಪ ದೂರದಲ್ಲಿ ಒಂದು ಪರ್ಣಶಾಲೆಯನ್ನು ನಿರ್ಮಿಸಿದ್ದ

ವೆ. ವಾಲ್ಮೀಕಿಮಹಾಮುನಿಗಳು ಶಿಷ್ಯರೊಡನೆ ಆ ಪರ್ಣಶಾಲೆಯನ್ನು ಪ್ರವೇಶಿಸಿ, ಸೀತೆಯನ್ನು ಕೆಲವುಕಾಲ ಗುಪ್ತವಾಗಿರಿಸಿದರು. ಅವರು ಕುಶ-ಲವರಿಗೆ ನಾನಾವಿಧವಾದ ಆಭರಣಗಳನ್ನೂ ವಸ್ತ್ರಗಳನ್ನೂ ಧಾರಣಮಾಡಿಸಿ, ಅವರನ್ನು ಕುರಿತು- "ಎಲೈ ರಾಜಕುಮಾರಕರೇ, ಶ್ರೀ ರಾಮನ ಯಜ್ಞಮಂಟಪದ ಬಳಿಯಲ್ಲಿ ರಾಮಾಯಣವನ್ನು ಜನ್ಮಕಾಂಡದ ವರೆಗೆ ನೀವು ಗಾನಮಾಡಿರಿ. ಯಾರು ಕೇಳಿದರೂ ಜನ್ಮಕಾಂಡದಿಂದ ಮುಂದೆ ನನ್ನ ಅಪ್ಪಣೆಯಿಲ್ಲದೆ ನೀವು ಹೇಳಬಾರದು. ಶ್ರೀರಾಮನು ಪರಮಹರ್ಷದಿಂದ ನಿಮಗೇನಾದರೂ ಬಹು ಮಾನವನ್ನು ಕೊಟ್ಟರೆ, ಅದನ್ನು ನೀವುಸ್ವೀಕರಿಸಬೇಡಿರಿ' ಎಂದು ಆಜ್ಞಾಪಿಸಿ ಅವರನ್ನು ಯಜ್ಞಮಂಟಪದ ಕಡೆಗೆ ಕಳುಹಿದರು. ಗುರುಗಳ ಅಪ್ಪಣೆಯಂತೆ ಅವರು ಅಲ್ಲಲ್ಲಿ ರಾಮಾಯಣವನ್ನು ಗಾಯನ ಮಾಡುತ್ತಿದ್ದರು. ಅವರ ಗಾಯನದ ಧ್ವನಿಯು ಶ್ರೀ ರಾಮನ ಕಿವಿಗೆ ಬಿತ್ತು. ಜನರೆಲ್ಲರೂ ಆ ರಾಜಕುಮಾರರನ್ನು ಶ್ಲಾಘಿಸಿದರು. ಶ್ರೀ ರಾಮನು ಆ ಬಾಲಕರನ್ನು ತನ್ನ ಯಜ್ಞಮಂಟಪಕ್ಕೆ ಕರೆಸಿ, ಉಚಿತವಾದ ಆಸನದ ಮೇಲೆ ಕುಳ್ಳಿರಿಸಿದನು. ಆ ಹುಡುಗರನ್ನು ನೋಡಿ ಜನರಿಗೆ ಬಹಳ ಆಶ್ಚರ್ಯವಾಯಿತು.

ಅವರಿಬ್ಬರಲ್ಲೂ ಶ್ರೀ ರಾಮನ ಹೋಲಿಕೆಯೇ ಕಾಣುತ್ತಿತ್ತು. ಲವನ ಬಾಣದಿಂದ ಪೀಡಿತನಾದ ಒಬ್ಬ ದೂತನು 'ಮಹಾರಾಜಾ, ಈ ಬಾಲಕನೇ ಆ ದಿವಸ ನಮ್ಮನ್ನು ಕಂಠಗತಪ್ರಾಣರನ್ನು ಮಾಡಿದವನು. ಈತನೇ ನಿಮ್ಮನ್ನು ಬಹಳ ದೂಷಿಸಿದನು' ಎಂದು ಬೆರಳಿನಿಂದ ಆ ಲವನನ್ನು ತೋರಿಸಿದನು. ಈ ಮಾತುಗಳನ್ನು ಕೇಳಿ, ಶ್ರೀ ರಾಮನು ಅವರ ಮೇಲೆ ಕೋಪ ಮಾಡಲಿಲ್ಲ. ರಾಮಾಯಣವನ್ನು ಗಾಯನ ಮಾಡುವಂತೆ ಅವರಿಗೆ ಅಪ್ಪಣೆ ಮಾಡಿದನು. ಅವರ ಹೇಳುವ ಪದ್ಧತಿ, ಕಂಠಧ್ವನಿ, ಆ ಕಾವ್ಯದ ಸರಳವಾದ ವಿಷಯರಚನೆ ಇವುಗಳನ್ನು ನೋಡಿ ಶ್ರೀ ರಾಮನಿಗೆ ಬಹಳ ಹರ್ಷವಾಯಿತು. ಅಷ್ಟರಲ್ಲಿ ಸಂಧ್ಯಾಕಾಲವು ಸನ್ನಿಹಿತವಾಗಲು ಶ್ರೀ ರಾಮನು 'ಎಲೈ ಬಾಲಕರೆ, ರಾಮಾಯಣವನ್ನು ಬಹಳ ಮಧುರವಾಗಿ ಗಾನಮಾಡಿದಿರಿ. ನಾಳೆ ಪ್ರಾತಃಕಾಲಕ್ಕೆ ಬಂದು ಮುಂದಿನ ಇತಿಹಾಸವನ್ನು ಗಾನಮಾಡಿ ನಮ್ಮ ಮನಸ್ಸು ಸಂತೋಷಗೊಳಿಸಿರಿ. ಎಲೈ ಲವನೆ, ನೀನು ನನಗೆ ಅಪರಾಧಿಯಾಗಿದ್ದರೂ, ನಿನ್ನ ಗಾಯನ ಶಕ್ತಿಯನ್ನು ನೋಡಿ ನನಗೆ ಬಹಳ ಸಮಾಧಾನವಾಗಿದೆ. ಈಗ ನಿನ್ನ ಅಪರಾಧವನ್ನು ಕ್ಷಮಿಸಿರುವೆನು. ಇನ್ನು ಏನೂ ಭಯವಿಲ್ಲದೆ ನಿಮ್ಮ ಬಿಡಾರಗಳಿಗೆ ಪ್ರಯಾಣಮಾಡಿರಿ' ಎಂದು ಹೇಳಿದನು.

ಈ ಮಾತುಗಳನ್ನು ಕೇಳಿ, ಲವನು—'ಎಲೈ ರಾಮಚಂದ್ರನೇ, ನಾನು ನಿನ್ನ ದರ್ಶನದ ಸಲುವಾಗಿಯೇ ಈ ಅಪರಾಧವನ್ನು ಮಾಡಿದೆನು. ಇಂಥಾ ಅಪರಾಧಿಯಾದ ನನ್ನನ್ನು ತಾವು ಸನ್ನಿಧಿಗೆ ಕರೆಸಿದ್ದರಿಂದ ತಮ್ಮ ಪಾದಗಳ ದರ್ಶನವಾಯಿತು. ಮತ್ತು ಗಾಯನದಿಂದ ನಮ್ಮ ಕೀರ್ತಿಯೂ ವಿಸ್ತೃತವಾಯಿತು.' ಎಂದು ಮಾತನಾಡಿ ಆಶ್ರಮಕ್ಕೆ ಹೊರಟನು. ಆಗ ಶ್ರೀರಾಮನು ಆ ಬಾಲಕರಿಗೆ ಹತ್ತು ಸಾವಿರ ವರಹಾಗಳನ್ನು ಕೊಡುವಂತೆ ಆಜ್ಞೆ ಮಾಡಿದನು. ಈ ವಚನಗಳನ್ನು ಕೇಳಿ ಆ ಬಾಲಕರು—'ರಾಮಚಂದ್ರನೇ, ನಾವು ಅರಣ್ಯವಾಸಿಗಳು; ಗಡ್ಡೆ-ಗೆಣಸುಗಳೇ ನಮ್ಮ ಆಹಾರ, ವಲ್ಕಲಗಳೇ ನಮ್ಮ ವಸ್ತ್ರಗಳು, ಹೀಗಿರಲು, ತಮ್ಮ ದ್ರವ್ಯವನ್ನು ತೆಗೆದುಕೊಂಡು ನಾವೇನು ಮಾಡೋಣ? ನೀನು ಪೂರ್ಣ ಕೃಪಾದೃಷ್ಟಿಯಿಂದ ನೋಡಿದರೆ ಸಾಕು. ಯಾವ ಐಶ್ವರ್ಯವೂ ನಮಗೆ ಬೇಡ.' ಎಂದು ಹೇಳಿ ವೇಗದಿಂದ ತಮ್ಮ ಪರ್ಣಶಾಲೆಗೆ ಬಂದರು. ಕುಶನು ಸಭೆಯಲ್ಲಿ ನಡೆದ ವೃತ್ತಾಂತವನ್ನು ತಾಯಿಗೆ ತಿಳಿಸಿ, ತಾನು ನದಿಗೆ ಸ್ನಾನಮಾಡಲು ಪ್ರಯಾಣ ಮಾಡಿದನು. ಇತ್ತ ಲವನು ಋಷಿಪುತ್ರರೊಡನೆ ಆಟವಾಡುತ್ತಾ ಶ್ರೀ ರಾಮನ ಯಜ್ಞದ ಕುದುರೆಯನ್ನು ಕಂಡು, ಅದನ್ನು ಸುತ್ತಲೂ ಬೆಳೆದಿದ್ದ ಹಸಿಯ ಬಳ್ಳಿಗಳಿಂದ ಒಂದು ಮರಕ್ಕೆ ಕಟ್ಟಿ, ಮೊದಲಿನಂತೆ ಬಾಲಕರೊಡನೆ ಆಟವಾಡಲು ಉದ್ಯುಕ್ತನಾದನು. ಅಷ್ಟರಲ್ಲಿ ಶತ್ರುಘ್ನನೇ ಮೊದಲಾದ ವೀರರು ಪುಷ್ಪಕವಿಮಾನದಲ್ಲಿ ಕುಳಿತು, ಆ ಹುಡುಗರಿದ್ದಲ್ಲಿಗೆ ಬಂದರು. ಶತ್ರುಘ್ನನು ಈ ಬಾಲಕರ ಚೇಷ್ಟೆಯನ್ನು ಕಂಡು ನಕ್ಕು ಮರಕ್ಕೆ ಕಟ್ಟಿದ್ದ ಯಜ್ಞಿಯಾಶ್ವವನ್ನು ಬಿಚ್ಚಲು ದೂತರಿಗೆ ಆಜ್ಞೆ ಮಾಡಿದನು. ಆ ಸೇವಕರು ಕುದುರೆಯ ಬಳಿಗೆ ಬಂದೊಡನೆ, ಲವನು ಒಂದು ದರ್ಭೆಗೆ ವಾಯುಮಂತ್ರದಿಂದ ಅಭಿಮಂತ್ರಿಸಿ, ಆ ಸೇನಾಜನರ ಮೇಲೆ ಪ್ರಯೋಗಿಸಿದನು. ಆಗ ಪುಷ್ಪಕವಿಮಾನದೊಡನೆ ಸಮಸ್ತರನ್ನೂ ಆ ವಾಯುವ್ಯಾಸ್ತ್ರವು ಅಂತರಿಕ್ಷಕ್ಕೆ ಹಾರಿಸಿತು.

ಈ ಅದ್ಭುತ ಕಾರ್ಯವನ್ನು ಕೇಳಿ, ಶ್ರೀ ರಾಮನು ಸುಗ್ರೀವ, ಅಂಗದ, ಸುಮಂತ್ರ, ಭರತನೇ ಮೊದಲಾದ ಸಮಸ್ತರನ್ನೂ ಯುದ್ಧಕ್ಕಾಗಿ ಕಳುಹಿಸಿದನು. ತನ್ನ ಸಂಗಡ ಯುದ್ಧಮಾಡಬೇಕೆಂದು ಬರುತ್ತಿರುವ ಆ ವೀರರನ್ನು ನೋಡಿ, ಲವನು ಧನುಸ್ಸನ್ನು ಕೈಯಲ್ಲಿ ಧರಿಸಿ, ಎದುರಾಗಿ ಹೋದನು. ಮತ್ತು "ನಾನು ಈ ಆಪ್ತರಾದ ಭರತಾದಿಗಳೊಡನೆ ಹ್ಯಾಗೆ ಯುದ್ಧಮಾಡಲಿ? ಯುದ್ಧಮಾಡದೆ ಆಶ್ರಮಕ್ಕೆ ತೆರಳಿದರೆ ಗುರುಗಳಿಗೆ ಅಪಯಶಸ್ಸು ಬರುವದು. ಇವರೊಡನೆ ಕಾದಿದರೆ ಬಂಧು

ಗಳೆಲ್ಲ ಹತರಾಗುವರಲ್ಲ" ಎಂದು ಚಿಂತಿಸಿ, ಆತನು ಈ ಎರಡು ಅನರ್ಥಗಳೂ ತನಗೆ ಬರದಂತೆ ಮೋಹನಾಸ್ತ್ರವನ್ನು ಪ್ರಯೋಗಿಸಿದನು. ಆಗ ಭರತನೇ ಮೊದಲಾದ ಸಮಸ್ತರೂ ಮೂರ್ಛಿತರಾದರು. ಅನಂತರ ಲವನು ಸುಗ್ರೀವ, ಅಂಗದ, ಭರತ, ಮಾರುತಿ ಇವರನ್ನು ತಾಯಿಗೆ ತೋರಿಸಲು ಕರೆತಂದನು. ಆಗ ಅವರಿಗೆ ದೇಹ ಭಾನವಿರಲಿಲ್ಲ. ಅವರನ್ನು ನೋಡಿ ಸೀತಾದೇವಿಯು ಆಶ್ಚರ್ಯಪಟ್ಟು, ಪರ್ಣಶಾಲೆಯಲ್ಲಿ ಅವರನ್ನು ರಾಪಾಡಿದಳು. ಈ ವರ್ತಮಾನವನ್ನು ಕೇಳಿ ಶ್ರೀ ರಾಮನು ವಿಸ್ಮಿತನಾಗಿ ಲಕ್ಷ್ಮಣನನ್ನು ಕುರಿತು—'ತಮ್ಮಾ ಲಕ್ಷ್ಮಣಾ, ಇಂಥ ಪರಾಕ್ರಮವನ್ನು ಯಾರಲ್ಲಿಯೂ ನೋಡಿರಲಿಲ್ಲ. ಈಗ ಏನು ಮಾಡತಕ್ಕದ್ದು?' ಎಂದು ಮಾತನಾಡಿದನು.

ಅಣ್ಣನ ಈ ಮಾತುಗಳನ್ನು ಕೇಳಿ, ಲಕ್ಷ್ಮಣನು 'ಮಹಾಸ್ವಾಮಿ, ಯೋಚನೆ ಮಾಡಬಾರದು. ನಾನು ಈಗಲೇ ಹೋಗಿ ಆ ಬಾಲಕನನ್ನು ತಮ್ಮ ಸನ್ನಿಧಿಗೆ ಕರೆತರುವೆನು' ಎಂದು ನುಡಿದು, ರಥವನ್ನೇರಿ ಪರ್ಣಶಾಲೆಯ ಬಳಿಗೆ ಬಂದನು. ಲವನು ಈ ಸಂಗತಿಯನ್ನು ಕೇಳಿ, ಧನುರ್ಧಾರಿಯಾಗಿ ಲಕ್ಷ್ಮಣನ ಎದುರಿಗೆ ನಿಂತನು. ಈ ಸುಕುಮಾರದೇಹವುಳ್ಳ ಬಾಲಕನನ್ನು ನೋಡಿ ಲಕ್ಷ್ಮಣನು "ಎಲೈ ಬ್ರಹ್ಮಚಾರಿಯೇ, ನನ್ನ ಮೇಲೆ ಇಷ್ಟು ನಿಷ್ಠುರತೆ ಬರಬೇಡ. ಬಾಲಕನೊಡನೆ ಯುದ್ಧ ಮಾಡುವದು ವೀರನಾದ ನನಗೆ ಯೋಗ್ಯವಾದದ್ದಲ್ಲ. ನಿನ್ನ ಮುಖದಿಂದ ರಾಮಾಯಣವನ್ನು ಕೇಳಬೇಕೆಂದು ಶ್ರೀ ರಾಮನ ಬಯಕೆ ಇರುತ್ತದೆ. ಆದ್ದರಿಂದ ನಿನ್ನನ್ನು ನಾನು ಕೊಲ್ಲುವದಿಲ್ಲ. ನಮ್ಮ ವೀರರಾದ ಸೇನಾಪತಿಗಳನ್ನು ಸಮರ್ಪಿಸಿ, ಯಜ್ಞಾಶ್ವವನ್ನು ಬಿಡಿಸಿಕೊಂಡು ಬಂದು ಶ್ರೀ ರಾಮನಿಗೆ ಶರಣಾಗತನಾಗು. ಇಲ್ಲವಾದರೆ ನಿನ್ನ ಪ್ರಾಣಗಳು ಉಳಿಯಲಿಕ್ಕಿಲ್ಲ" ಎಂದು ಮಾತನಾಡಿದನು.

ಈ ಮಾತುಗಳನ್ನು ಕೇಳಿ ಲವನು 'ಎಲೈ ಸೌಮಿತ್ರಿಯೇ, ನಾನು ರಾಮನನ್ನೂ, ನಿನ್ನನ್ನೂ ಬಲ್ಲೆನು. ಸೀತಾದೇವಿಯಂಥ ಅಬಲೆಯನ್ನು ವಂಚಿಸುವದಕ್ಕಲ್ಲವೆ ನಿಮ್ಮ ಶೌರ್ಯ? ನನ್ನ ಮೇಲೆ ಅದು ತಿಲಮಾತ್ರವಾದರೂ ನಡೆಯಲಾರದು. ಸೀತೆಯ ದುಃಖವನ್ನು ಪರಿಹಾರಮಾಡುವದಕ್ಕಾಗಿಯೇ ಋಷಿಗಳು ನನ್ನನ್ನು ಸೃಷ್ಟಿಸಿರುವರು. ನಿಮ್ಮಿಬ್ಬರನ್ನೂ ಸೋಲಿಸಿ, ಈ ದಿವಸ ಸೀತೆಯ ದುಃಖವನ್ನು ಪರಿಹರಿಸುವೆನು. ಅಹಹ! ಆ ಪತಿವ್ರತೆಯನ್ನು ನೀವು ವ್ಯರ್ಥವಾಗಿ ಮೋಸಗೊಳಿಸಿದಿರಲ್ಲ? ಆ ಮಹಾತ್ಮಳ ಉಷ್ಣವಾದ ನಿಃಶ್ವಾಸಗಳಿಂದ ನಿಮ್ಮ ಸಾಮರ್ಥ್ಯವು ದಗ್ಧವಾಗಿದೆಯೆಂದು ತಿಳಿಯತಕ್ಕದ್ದು.' ಎಂದು ಮಾತನಾಡಿದನು. ಈ ಮರ್ಮ

ಭೇದಕ ವಚನಗಳನ್ನು ಕೇಳಿ ಲಕ್ಷ್ಮಣನು ಬಹಳ ಕೋಪದಿಂದ ಲವನ ಮೇಲೆ ಶಸ್ತ್ರಾಸ್ತ್ರಗಳ ಮಳೆಗರೆದನು. ಲವನು ಅವನ್ನೆಲ್ಲ ತನ್ನ ಬಾಣದಿಂದ ತಡೆದು, ಲಕ್ಷ್ಮಣನನ್ನು ಹೊರತಾಗಿ ಮಿಕ್ಕ ಸೇನೆಯನ್ನೆಲ್ಲ ಶ್ರೀ ರಾಮನ ಎದುರಿಗೆ ಬೀಳು ವಂತೆ ಮಾಡಿದನು. ಆ ಸೈನಿಕರು—'ರಾಮಚಂದ್ರಾ, ಆ ವೀರನಮುಂದೆ ನಮ್ಮ ಪರಾಕ್ರಮಗಳೇನೂ ನಡೆಯುವಂತಿಲ್ಲ. ಲಕ್ಷ್ಮಣನಿಗೆ ನೀನು ಜಾಗ್ರತೆ ಸಹಾಯ ಮಾಡು' ಎಂದು ಬೇಡಿಕೊಂಡರು. ಈ ಮಾತುಗಳನ್ನು ಕೇಳಿ ಶ್ರೀ ರಾಮನಿಗೂ ಸ್ವಲ್ಪ ಯೋಚನೆಯುಂಟಾಯಿತು.

ಇತ್ತ ಲವನಿಗೂ ಲಕ್ಷ್ಮಣನಿಗೂ ಭಯಂಕರವಾದ ಯುದ್ಧವು ನಡೆಯಿತು. ಲವನ ಬಾಣಗಳು ಲಕ್ಷ್ಮಣನ ಶರೀರವನ್ನು ಭೇದಿಸುತ್ತಿದ್ದವು. ಲಕ್ಷ್ಮಣನ ಒಂದು ಬಾಣವಾದರೂ ಲವನಿಗೆ ತಗಲಲಿಲ್ಲ. ಬಳಿಕ ಲಕ್ಷ್ಮಣನು ಬ್ರಹ್ಮಾಸ್ತ್ರದಿಂದ ಲವ ನನ್ನು ಕಟ್ಟಿ, ಕುದುರೆಯೊಡನೆ ಶ್ರೀ ರಾಮನ ಬಳಿಗೆ ಆತನನ್ನು ಕರೆತಂದನು. ಆಗ ರಾಮಚಂದ್ರನು 'ಎಲೈ ಲಕ್ಷ್ಮಣನೆ, ಈ ಬ್ರಾಹ್ಮಣ-ಕುಮಾರನನ್ನು ನಾಶಮಾಡು. ಇವನಿಂದ ನಮಗೆ ಪ್ರತಿಕೂಲವೇ ಹೊರತು ಅನುಕೂಲವೇನೂ ಕಾಣುವದಿಲ್ಲ' ಎಂದನು. ಅದಕ್ಕೆ ಲಕ್ಷ್ಮಣನು 'ಅಣ್ಣಾ, ಈ ಮುನಿಪುತ್ರನ ಮೇಲೆ ಯಾವ ಅಸ್ತ್ರಗ ಳ ಆಟವೂ ನಡೆಯುವದಿಲ್ಲ. ಬ್ರಹ್ಮಾಸ್ತ್ರದ ದಾಕ್ಷಿಣ್ಯಕ್ಕಾಗಿ ಈತನು ಸುಮ್ಮನಿ ರುವನು. ಆದಕಾರಣ ಈತನಿಗೆ ಯಾತರಿಂದ ಮರಣವಾಗುವದೆಂಬದನ್ನು ತಾ ವೇ ವಿಚಾರಿಸಬೇಕು' ಎಂದು ವಿಜ್ಞಾಪಿಸಿದನು. ಈ ಮಾತುಗಳನ್ನು ಕೇಳುತ್ತಲಿ ದ್ದ ಲವನು, 'ಅವರೇಕೆ ವಿಚಾರಿಸಬೇಕು? ನನ್ನ ಮೇಲೆ ನೂರು ಬಿಂದಿಗೆ ನೀರು ಸುರಿದರೆ ನಾನು ಮರಣ ಹೊಂದುವೆನು' ಎಂದು ನುಡಿದನು. ಆಗ ಲಕ್ಷ್ಮಣನು ಆ ಲವಕುಮಾರನನ್ನು ಒಂದು ದೊಡ್ಡ ಬಂಡೆಯ ಮೇಲೆ ಕುಳ್ಳಿರಿಸಿ, ನೀರು ಸುರಿಸಲಾ ರಂಭಿಸಿದನು. ಲವನು ನೀರು ಸುರಿದ ಹಾಗೆಲ್ಲ ಪರ್ವತದಂತೆ ಬೆಳೆಯುತ್ತಿದ್ದನು. ಅದನ್ನು ನೋಡಿ ಸೌಮಿತ್ರಿಯು 'ಎಲೈ ವೀರನೇ, ನೀನು ನಮಗೆ ಸುಳ್ಳು ಹೇಳಿ ರುವೆ. ಇದೇನು? ನಿನ್ನ ದೇಹವು ಇಷ್ಟು ಉನ್ನತವಾಗುತ್ತಿರುವದು?' ಎಂದ ನು. ಆಗ ಲವನು "ಏನಯ್ಯಾ ಲಕ್ಷ್ಮಣನೆ, ನೀನು ಇಷ್ಟು ಯೋಚಿಸಲಿಲ್ಲವಲ್ಲ! ಎಣ್ಣೆ ತೀರಿದ ಮೇಲೆ ದೀಪವು ಅವಸಾನ ಕಾಲದಲ್ಲಿ ಹ್ಯಾಗೆ ದೊಡ್ಡದಾಗುವ ದೋ, ಅದರಂತೆ ನನ್ನ ದೇಹವು ಮರಣಕಾಲಕ್ಕೆ ಈ ಸ್ಥಿತಿಯಲ್ಲಿರುವದು. ಇನ್ನು ಸ್ವಲ್ಪ ನೀರು ಹಾಕು. ಆಟ ಮುಗಿಯುವದು" ಎಂದು ಮಾತನಾಡಿದನು. ಆ ತನ ಮಾತಿನಂತೆ ಇನ್ನು ಸ್ವಲ್ಪ ನೀರು ಸುರಿಯಲು, ಲವನ ದೇಹವು ಸಂಪೂರ್ಣ

ವಾಗಿ ಉಬ್ಬಿತು. ಬ್ರಹ್ಮಾಸ್ತ್ರವು ಚೂರು ಚೂರಾಯಿತು. ಆಮೇಲೆ ಕೇಳುವದೇನು!!! ಲಕ್ಷ್ಮಣನೊಡನೆ ಮುಷ್ಟಿಯುದ್ಧ ಮಾಡಲು ಆ ಋಷಿಶಿಷ್ಯನು ಭುಜಗಳನ್ನು ಚಪ್ಪರಿಸಿನಿಂತನು.

ಇಷ್ಟರಲ್ಲಿ ಕುಶನು ಭಾಗೀರಥಿಯಿಂದ ನೀರುತರುತ್ತಿರುವ ಜನಗಳನ್ನು ನೋಡಿ, 'ಇದೇನು? ಇಷ್ಟು ಜನಗಳು ವೇಗವಾಗಿ ನೀರು ತೆಗೆದುಕೊಂಡು ಎಲ್ಲಿಗೆ ಹೋಗುತ್ತಿರುವಿರಿ?' ಎಂದು ಪ್ರಶ್ನೆಮಾಡಿದನು. ಅವರ ಮುಖದಿಂದ ಲವನ ಸಮಸ್ತ ವೃತ್ತಾಂತವನ್ನು ಕೇಳಿ, ಕುಶನು ಆಶ್ರಮಕ್ಕೆ ಶ್ರೀಘ್ರವಾಗಿ ಬಂದು, ತಮ್ಮಿಬ್ಬರ ಧನುಸ್ಸುಗಳನ್ನು ಸ್ವೀಕರಿಸಿ, ಶ್ರೀ ರಾಮನ ಯಜ್ಞಮಂಟಪದ ಬಳಿಗೆ ತೆರಳಿದನು. ಆತನು 'ಎಲೈ ಲಕ್ಷ್ಮಣನೇ, ಬಾಲಕನ ಸಂಗಡ ಯುದ್ಧಮಾಡುವದೇನು ದೊಡ್ಡಸ್ತಿಕೆ? ನನ್ನ ತಮ್ಮನಾದ ಲವನಿಗೆ ಸಹಾಯ ಮಾಡುವದಕ್ಕೂ, ನಿಮ್ಮಿಬ್ಬರನ್ನು ನೋಲಿಸಲಿಕ್ಕೂ ಬಂದಿರುವ ಈ ನನ್ನೊಡನೆ ಯುದ್ಧಮಾಡು ನೋಡೋಣ, ಎಂದು ಗರ್ಜಿಸಿದನು. ಆಗ ಕುಶನಿಗೂ ಲಕ್ಷ್ಮಣನಿಗೂ ಬಹಳ ದೊಡ್ಡ ಯುದ್ಧವಾಯಿತು. ಲಕ್ಷ್ಮಣನ ಎಲ್ಲ ಬಾಣಗಳೂ ವ್ಯರ್ಥವಾದವು. ಕುಶನು ಮನಸ್ಸಿನಲ್ಲಿ 'ಲಕ್ಷ್ಮಣನು ಶೇಷಾವತಾರವಾಗಿರುವನೆಂದು' ತಿಳಿದು ಗರುಡಾಸ್ತ್ರವನ್ನು ಆ ಶೂರನ ಮೇಲೆ ಪ್ರಯೋಗಿಸಿದನು. ಆ ಅಸ್ತ್ರವನ್ನು ನೋಡಿದೊಡನೆ ಲಕ್ಷ್ಮಣನು ಭೂಮಿಯ ಮೇಲೆ ಮೂರ್ಛಿತನಾಗಿ ಬಿದ್ದನು. ಈ ಭಯಂಕರ ಪ್ರಸಂಗವನ್ನು ನೋಡಿ, ದೀಕ್ಷಿತನಾದ ರಾಮನು ಕೈಯಲ್ಲಿ ಧನುಸ್ಸನ್ನು ಸ್ವೀಕರಿಸಿ ಬ್ರಹ್ಮಾಸ್ತ್ರದಿಂದ ಆ ಗರುಡಾಸ್ತ್ರವನ್ನು ಉಪಶಮನ ಮಾಡಿದನು. ಇದನ್ನು ನೋಡಿ ಕುಶನು ಶ್ರೀ ರಾಮನ ಮೇಲೆ ಸರ್ಪಾಸ್ತ್ರವನ್ನು ಪ್ರಯೋಗಿಸಿದನು. ಮತ್ತು "ರಾಮಚಂದ್ರಾ, ನಾನು ಅಬಲೆಯಾದ ಸೀತಾವಿಯೆಂದು ತಿಳಿಯಬೇಡ. ಆ ಪತಿವ್ರತೆಯಾದ ಸೀತೆಯನ್ನು ಹ್ಯಾಗೆ ಮೋಸಗೊಳಿಸಿದೆಯೋ, ಹಾಗೆ ನನ್ನನ್ನು ಮೋಸಗೊಳಿಸಲಾರೆ. ಈ ದಿವಸ ನಿನಗೆ ನನ್ನ ಗುರುಗಳಾದ ವಾಲ್ಮೀಕಿ ಮಹರ್ಷಿಗಳ ವಿದ್ಯೆಯ ಮಹಿಮೆಯನ್ನು ಸ್ವಲ್ಪ ತೋರಿಸುವೆನು" ಎಂದು ಹೇಳಿ ಶ್ರೀ ರಾಮನೊಡನೆ ಘೋರವಾದ ಯುದ್ಧಮಾಡಿದನು.

ಆ ಯುದ್ಧವನ್ನು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ. ಅಷ್ಟರಲ್ಲಿ ಶ್ರೀ ರಾಮನು ತನ್ನ ಒಬ್ಬ ಮಂತ್ರಿಯನ್ನು ಕರೆದು 'ಅಮಾತ್ಯವರ್ಯನೇ, ನೀನು ವಾಲ್ಮೀಕಿ ಮುನಿಗಳ ಬಳಿಗೆ ಹೋಗಿ, ಈ ಕುಮಾರನು ಯಾರು? ಎಂಬ ಸಮಾಚಾರವನ್ನು ತಿಳಿದುಕೊಂಡು ಬಾ, ಬಳಿಕ ಇವನಿಗೆ ಪ್ರತಿಕಾರ ಮಾಡುವ ಯೋಚನೆ ಮಾ

ಡೋಣ!’ ಎಂದು ಹೇಳಿದನು. ಆ ಮಂತ್ರಿಯು ರಥಾರೂಢನಾಗಿ ಮುನಿಗಳ ಆಶ್ರಮಕ್ಕೆ ಪ್ರಯಾಣ ಮಾಡಿದನು. ಮತ್ತು ವಾಲ್ಮೀಕಿ ಮಹರ್ಷಿಗಳಿಗೆ ವಂದಿಸಿ, ‘ಶ್ರೀ ರಾಮನು ತಮ್ಮ ಶಿಷ್ಯರ ಪೂರ್ವ ವೃತ್ತಾಂತವನ್ನು ಕೇಳಿಕೊಂಡು ಬರುವಂತೆ ಅಪ್ಪಣೆ ಮಾಡಿರುವನು’ ಎಂದು ವಿಜ್ಞಾಪಿಸಿದನು. ಆಗ ಮಹರ್ಷಿಗಳು ‘ಎಲೈ ಮಂತ್ರಿವರ್ಯನೇ, ನಾಳಿನ ದಿವಸ ಬೆಳಗ್ಗೆ ಗಾಯನ ಕಾಲದಲ್ಲಿ ಈ ಸಮಾಚಾರವು ಸ್ಪಷ್ಟವಾಗಿ ತಿಳಿಯುವದೆಂದು ಶ್ರೀ ರಾಮನಿಗೆ ಹೇಳು’ ಎಂದು ಆಜ್ಞಾಪಿಸಿದರು. ಶ್ರೀ ರಾಮನು ಮಂತ್ರಿಯ ವಚನವನ್ನು ಕೇಳಿ ಸ್ವಲ್ಪ ಸಮಾಧಾನ ಹೊಂದಿ, ಆ ಕುಶ-ಲವರನ್ನು ಗುರುಗಳ ಬಳಿಗೆ ಕಳುಹಿಸಿ ಕೊಟ್ಟನು. ವಾಲ್ಮೀಕಿಮಹರ್ಷಿಗಳು ಆ ಕುಮಾರರ ಪರಾಕ್ರಮಕ್ಕೆ ಸಂತೋಷಪಟ್ಟು, ಅವರೊಡನೆ ನಾನಾ ವಿಧವಾದ ಸರಸವಚನಗಳನ್ನಾಡುತ್ತ ಆ ರಾತ್ರಿಯನ್ನು ಕಳೆದರು.



## ೩ನೆಯ ಪ್ರಕರಣ.—ಲಕ್ಷ್ಮಣಾದಿಗಳ ಸಂತತಿ.

—:o:—

ಪ್ರಾತಃಕಾಲದಲ್ಲಿ ಯಜ್ಞಾಂಗಗಳೆಲ್ಲ ಮುಗಿದ ಬಳಿಕ ಶ್ರೀ ರಾಮನು ಆ ಮುನಿಶಿಷ್ಯರನ್ನು ಕರೆಸಿದನು. ತಾಯಿ, ಗುರುಗಳು ಇವರೆಲ್ಲರಿಗೂ ಸಮಸ್ಕರಿಸಿ, ಆ ಲವ-ಕುಶರು ಶ್ರೀರಾಮನ ಸಭೆಗೆ ಬಂದರು. ಮತ್ತು ವಾಲ್ಮೀಕಿ ಮಹರ್ಷಿಗಳ ಆಜ್ಞೆಯಂತೆ ಶ್ರೀರಾಮಚಂದ್ರನ ಸಭೆಯಲ್ಲಿ ಜನ್ಮಕಾಂಡವನ್ನು ಗಾನ ಪದ್ಧತಿಯಿಂದ ಅತಿ ಮನೋಹರವಾಗಿ ಹೇಳಿದರು. ಆದನ್ನು ಕೇಳಿ ಸಮಸ್ತರೂ—‘ಇವರು ರಾಮನ ಮಕ್ಕಳೇ’ ಎಂದು ತಿಳಿದರು. ಅಷ್ಟರಲ್ಲಿ ಭರತ-ಶತ್ರುಘ್ನ-ಲಕ್ಷ್ಮಣರು ಅಲ್ಲಿಗೆ ಬಂದರು. ಶ್ರೀರಾಮನು ಲವ-ಕುಶರಿಗೆ ಆಶ್ರಮಕ್ಕೆ ಪ್ರಯಾಣಮಾಡಲು ಅಪ್ಪಣೆಮಾಡಿ. ಗಂಗಾತೀರದಲ್ಲಿ ಒಂದು ವಿಸ್ತೃತವಾದ ಸಭೆಯನ್ನು ನಿರ್ಮಾಣ ಮಾಡಿಸುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿದನು. ಮತ್ತು ಅಲ್ಲಿಗೆ, ಸೀತಾದೇವಿ, ಲವ, ಕುಶ ಇವರೊಡನೆ ವಾಲ್ಮೀಕಿಮಹರ್ಷಿಗಳು ಬರಬೇಕೆಂದು ಹೇಳಿಕಳುಹಿದನು.

ಮಹರ್ಷಿಗಳು ಶ್ರೀರಾಮನ ಅಭಿಪ್ರಾಯವನ್ನು ತಿಳಿದು, ‘ನಾಳೆ ಸೀತಾದೇವಿಯು ಸಭೆಯಲ್ಲಿ ಪ್ರಮಾಣಮಾಡುವಳು. ಪತಿವ್ರತೆಯರಿಗೆ ಪತಿಗಿಂತಲೂ ದೇವರು ಯಾರಿರುವರು!’ ಎಂದು ಶ್ರೀರಾಮನಿಗೆ ವಿಜ್ಞಾಪಿಸುವಂತೆ ದೂತರಿಗೆ ಹೇಳಿದರು.

ಈ ಮಾತುಗಳನ್ನು ಕೇಳಿ, ಶ್ರೀರಾಮನಿಗೆ ಬಹಳ ಹರ್ಷವಾಯಿತು. ಮರುದಿವಸ ವಾಲ್ಮೀಕಿಮುನಿಗಳು ಸೀತೆಯೇ ಮೊದಲಾದವರೊಡನೆ ಸಭೆಗೆ ಬಂದಿರುವದನ್ನು ತಿಳಿದು, ಶ್ರೀರಾಮನು—"ಭೋ ಮುನಿಗಳೇ, ರಾಜರೇ, ನೀವೆಲ್ಲರೂ ಸಾವಧಾನ ಮನಸ್ಸಿನಿಂದ ಕೇಳಬೇಕು. ಈಗ ಸೀತಾದೇವಿಯು ಪ್ರಮಾಣ ಮಾಡುವಳು. ಅನಂತರ ಆಕೆಯು ಶುದ್ಧಳೋ, ಅಶುದ್ಧಳೋ ಎಂಬದನ್ನು ನೀವು ನಿಶ್ಚಯಮಾಡಬೇಕು" ಎಂದನು. ಇದನ್ನು ಕೇಳಿ ಸಮಸ್ತರೂ ಸೀತಾದೇವಿಯನ್ನು ನೋಡಲು ಕುತೂಹಲ ಉಳ್ಳವರಾದರು. ಅವರು ವಾಲ್ಮೀಕಿ ಮಹರ್ಷಿಗಳ ಹಿಂದೆ ಬರುತ್ತಿರುವ ಸೀತೆಯನ್ನು ನೋಡಿ ಸಂತೋಷಪಟ್ಟರು. ವಾಲ್ಮೀಕಿ ಮಹರ್ಷಿಗಳು ಶ್ರೀರಾಮನ ಎದುರಿಗೆ ಬಂದು, 'ಈ ಸೀತಾದೇವಿಯು ಪರಿಶುದ್ಧಳಿರುವಳು. ಎಲೈ ಶ್ರೀರಾಮನೇ, ಈಕೆಯನ್ನು ನೀನು ನಮ್ಮ ಆಶ್ರಮದ ಬಳಿಯಲ್ಲಿ ಬಿಟ್ಟಿದ್ದೆಯಷ್ಟೇ? ಇರಲಿ. ಈಗ ಸೀತೆಯು, ತಾನು ಪರಿಶುದ್ಧಳೆಂಬದನ್ನು ಸಮಸ್ತರಿಗೂ ತಿಳಿಸಲೋಸುಗ ಪ್ರಮಾಣ ಮಾಡಬೇಕೆಂದಿರುವಳು. ನೀನು ಅಜ್ಞೆ ಕೊಡು" ಎಂದು ಹೇಳಿ, ಶ್ರೀರಾಮನಿಗೆ ಕುಶಲವರು ಹುಟ್ಟಿದ ವೃತ್ತಾಂತವನ್ನು ಯಥಾವಿಸ್ತರವಾಗಿ ತಿಳಿಸಿ, ಇವರು ನಿನ್ನ ಮಕ್ಕಳೆಂದು ನುಡಿದರು. ಮತ್ತು ಅವರು "ರಾಮಚಂದ್ರಾ, ಸೀತೆಯು ಪರಮ ಪವಿತ್ರಳಿರುವಳು. ಈ ವಿಷಯದಲ್ಲಿ ನಾನು ಸುಳ್ಳು ಮಾತುಗಳನ್ನು ಹೇಳಿದವನೇ ಆದರೆ, ನನ್ನ ತಪಸ್ಸಿನ ಫಲವು ಸ್ವಲ್ಪವೂ ನನಗೆ ಸಿಗದೆ ಹೋಗಲಿ. ರಾಮಾ, ಈ ನಿನ್ನ ವೀರರಾದ ಮಕ್ಕಳನ್ನು ನನ್ನ ಮಾತಿನ ಮೇಲೆ ವಿಶ್ವಾಸವಿಟ್ಟು ಸ್ವೀಕರಿಸು.' ಎಂದು ಹೇಳಿ ಆ ಕುಮಾರರನ್ನು ಶ್ರೀರಾಮನ ತೊಡೆಗಳ ಮೇಲೆ ಕುಳ್ಳಿರಿಸಿದರು. ಶ್ರೀ ರಾಮನು ಸೀತೆಯ ಎರಡೂ ಹಸ್ತಗಳನ್ನು ನೋಡಿ, 'ಇದೇನಾಶ್ಚರ್ಯ, ಹಿಂದೆ ಲಕ್ಷ್ಮಣನು ಒಂದು ಹಸ್ತವನ್ನು ಕತ್ತರಿಸಿ ತಂದಿರಲಿಲ್ಲವೆ!' ಎಂದು ಯೋಚಿಸಿ, ಲಕ್ಷ್ಮಣನಿಗೆ ಗುಪ್ತವಾಗಿರಿಸಿದ್ದ ಸೀತೆಯ ಹಸ್ತವನ್ನು ತರುವಂತೆ ಆಜ್ಞಾಪಿಸಿದನು.

ಸೌಮಿತ್ರಿಯು ಆ ಹಸ್ತವನ್ನು ಭಯದಿಂದ ಶ್ರೀರಾಮನ ಎದುರಿಗೆ ತಂದಿರಿಸಿದನು. ಆಗಲೂ ಅದರಲ್ಲಿ ರಕ್ತದ ಬಿಂದುಗಳು ತೊಟ್ಟಿಡುತ್ತಿದ್ದವು. ಇದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಅಷ್ಟರಲ್ಲೇ ಆ ಹಸ್ತವು ಯಾರಿಗೂ ಕಾಣದಂತೆ ಮಾಯವಾಯಿತು. ಶ್ರೀ ರಾಮನು ಎಲ್ಲಾ ಜನಗಳ ಎದುರಿಗೆ 'ಮಹರ್ಷಿಗಳೇ, ಇದೇನಾಶ್ಚರ್ಯ, ಈ ಹಸ್ತವು ಮಾಯವಾದ ವಿಷಯವನ್ನು ನಮಗೆ ತಿಳಿಸಿರಿ' ಎಂದು ಕೇಳಿದನು. ಆಗ ಮಹರ್ಷಿಗಳು ಎಲ್ಲಾ ವೃತ್ತಾಂತವನ್ನೂ ಶ್ರೀ ರಾಮನಿಗೆ ವಿಶದವಾಗಿ ತಿಳುಹಿದರು. ಅನಂತರ ಸೀತಾದೇವಿಯು ಶ್ರೀರಾಮನ ಅ

ಪ್ಪಣೆಯನ್ನು ಪಡೆದು, ಪ್ರಮಾಣಮಾಡಲು ಸಭೆಯ ಎದುರಿಗೆ ಬಂದಳು. ಮತ್ತು ಉತ್ತರಾಭಿಮುಖಳಾಗಿ ನಿಂತು “ಎಲೈಭೂದೇವಿಯೇ, ನಾನು ಶ್ರೀ ರಾಮನನ್ನು ಹೊರತಾಗಿ ಮತ್ತೊಬ್ಬ ಪುರುಷನನ್ನು ಮನಸ್ಸಿನಲ್ಲಾದರೂ ಗಮನಿಸದೆ ಇದ್ದದ್ದು ಸತ್ಯವಾದರೆ, ನನ್ನನ್ನು ನಿನ್ನೊಳಗೆ ಸೇರಿಸಿಕೋ” ಎಂದು ಪ್ರಾರ್ಥಿಸಿದಳು. ಸೀತಾದೇವಿಯ ಈ ಮಾತುಗಳನ್ನು ಕೇಳಿದ ಕೂಡಲೆ, ಭೂಮಿಯು ಬಿರಿದು ಅದರಿಂದ ಒಂದು ಸುವರ್ಣದ ಸಿಂಹಾಸನವು ಮೇಲಕ್ಕೆ ಬಂತು. ಆಗ ಭೂದೇವಿಯು ತನ್ನ ನಿಜರೂಪದಿಂದ ಬಂದು, ಸೀತೆಯನ್ನು ಆಲಿಂಗಿಸಿ, ಆಕೆಯನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದಳು. ಅನಂತರ ಭೂದೇವತೆಯು ಸೀತೆಯೊಡನೆ ಮೆಲ್ಲಮೆಲ್ಲನೆ ಭೂವಿವರವನ್ನು ಪ್ರವೇಶಿಸಲಾರಂಭಿಸಿದಳು.

ಇದನ್ನು ನೋಡಿ ಸಮಸ್ತ ಜನರೂ ಹೆದರಿದರು. ರಾಜಪತ್ನಿಯು ಗುಪ್ತಳಾಗುವಳೆಂದು ಪ್ರಜೆಗಳು ಹಾ ಹಾಕಾರ ಮಾಡಿದರು. ದೇವತೆಗಳು ಸೀತೆಯ ಮೇಲೆ ಪುಷ್ಪವೃಷ್ಟಿಮಾಡಿದರು. ಅಷ್ಟರಲ್ಲಿ ಶ್ರೀರಾಮನು ಸಿಂಹಾಸನದಿಂದ ಎದ್ದು ಬಂದು, ಒಂದು ಹಸ್ತದಿಂದ ಸೀತೆಯನ್ನೂ, ಮತ್ತೊಂದು ಹಸ್ತದಿಂದ ಭೂಮಿಯನ್ನೂ ಹಿಡಿದು ಪ್ರಾರ್ಥನೆ ಮಾಡಿದನು. ಆದರೂ ಭೂದೇವಿಗೆ ಸ್ವಲ್ಪವೂ ಕರುಣ ಬರಲಿಲ್ಲ. ಸೀತೆಯು ಸಂಪೂರ್ಣ ಗುಪ್ತಳಾಗುವ ಸ್ಥಿತಿಯು ಕಾಣಿಸಿತು. ಆಗ ಶ್ರೀ ರಾಮನು ‘ತಮ್ಮಾ, ನನ್ನ ಧನುಸ್ಸನ್ನು ತೆಗೆದುಕೊಂಡು ಬಾ, ಈ ಭೂದೇವಿಯನ್ನು ಹೀರಿಸಿ ಬಿಡುವೆನು’ ಎಂದು ಅತಿಕೋಪದಿಂದ ಆಜ್ಞೆಮಾಡಿ ಧನುಸ್ಸಿಗೆ ಮೌರ್ವಿಯನ್ನು ಕಟ್ಟಿ ಬಾಣವನ್ನು ಹೂಡಲುಪಕ್ರಮಿಸಿದನು. ಆಗ ಅನೇಕ ಉತ್ಪಾತಗಳಾದವು. ಭೂದೇವಿಯು ಥರಥರನೆ ನಡುಗಲಾರಂಭಿಸಿದಳು. ಆಕೆಯು ಸ್ತ್ರೀ ರೂಪವನ್ನು ಧರಿಸಿ, ಶ್ರೀ ರಾಮನಿಗೆ ಸೀತೆಯನ್ನು ಒಪ್ಪಿಸಿ ಶರಣಾಗತಳಾದಳು. ಸೀತಾದೇವಿಯನ್ನು ನೋಡಿ ಸಮಸ್ತರೂ ಆನಂದದಿಂದ ಕೋಲಾಹಲ ಮಾಡಿದರು. ಸಭಾಸದರು ‘ಸೀತೆಯು ಪರಮಪವಿತ್ರಳಿರುವಳು. ನಾವು ಅನ್ಯಾಯವಾಗಿ ಆ ಲೋಕಜನನಿಗೆ ಅಪವಾದದ ಮಾತುಗಳನ್ನಾಡಿದೆವು’ ಎಂದು ಹೇಳಿದರು. ಅನಂತರ ಶ್ರೀ ರಾಮನು ಸಭಾವಿಸರ್ಜನೆ ಮಾಡಿ ನೂರನೇ ಅಶ್ವಮೇಧಯಾಗವನ್ನು ಮುಗಿಸಿದನು. ಮತ್ತು ಸಮಸ್ತರನ್ನೂ ನಾನಾ ವಿಧವಾದ ದಾನ-ಧರ್ಮಗಳಿಂದ ತೃಪ್ತಿಗೊಳಿಸಿ ಅವರವರ ಸ್ಥಳಗಳಿಗೆ ಕಳುಹಿದನು. ಬಳಿಕ ಶ್ರೀ ರಾಮನು ಪತ್ನೀ-ಪುತ್ರರಿಂದೊಡಗೂಡಿ ಅಯೋಧ್ಯೆಗೆ ಬಂದು ಸೇರಿದನು. ಆಗ ಸೀತಾ-ರಾಮರಿಗೆ ಆರತಿಗಳನ್ನು ಪೌರನಾರಿಯರು ಬೆಳಗಿದರು. ಈ ರೀತಿಯಾಗಿ ಶ್ರೀ ರಾಮನು ತನ್ನ ಸದಾಚಾರ

ಗಳಿಂದ ಸಮಸ್ತರಿಗೂ ಉಪದೇಶ ಮಾಡುತ್ತ ಅನೇಕ ಕಾಲದ ವರೆಗೆ ರಾಜ್ಯವನ್ನು ಪಾಲಿಸಿದನು.

ಅನಂತರ ಸೀತಾದೇವಿಯ ತಂಗಿಯರಾದ ಊರ್ಮಿಳೆ, ಮಾಂಡವಿ, ಶ್ರುತಕೀರ್ತಿ, ಈ ರಾಜಕನ್ಯೆಯರೂ ಗರ್ಭಿಣಿಯರಾದರು. ಆಗ ಸೀತಾದೇವಿಯು ಬಹಳ ಉತ್ಸವ ಮಾಡಿದಳು. ಪುಂಸವನವೇ ಮೊದಲಾದ ಶಾಸ್ತ್ರೋಕ್ತ ಕಾರ್ಯಗಳು ನೆರವೇರಿದವು. ಎಲ್ಲಾ ಉತ್ಸವಕಾಲಗಳಲ್ಲೂ ಜನಕಮಹಾರಾಜನು ಬರುತ್ತಿದ್ದನು. ಅವರೆಲ್ಲರನ್ನೂ ಶ್ರೀ ರಾಮನು ವಸ್ತ್ರಾ-ಭರಣಗಳಿಂದ ಆನಂದಗೊಳಿಸಿದನು. ಸೀತೆಯು ಕಾಲಕಾಲಗಳಲ್ಲಿ ತಂಗಿಯರ ಬಯಕೆಗಳನ್ನು ಪೂರ್ತಿಮಾಡುತ್ತಿದ್ದಳು. ನವಮಾಸಗಳು ತುಂಬಿದ ಬಳಿಕ ಯೋಗ್ಯಕಾಲದಲ್ಲಿ ಆ ಮೂವರೂ ರಾಜಪುತ್ರಿಯರು ಪುತ್ರರತ್ನಗಳನ್ನು ಪಡೆದರು. ಶ್ರುತಕೀರ್ತಿಗೆ ಮಾತ್ರ ಇಬ್ಬರು ಮಕ್ಕಳು ಜನಿಸಿದರು. ಕೆಲವು ಕಾಲದ ಮೇಲೆ ಮಾಂಡವಿ, ಊರ್ಮಿಳೆ, ಇವರು ಮತ್ತೆ ಒಬ್ಬೊಬ್ಬ ಪುತ್ರಶ್ರೇಷ್ಠರನ್ನು ಪಡೆದರು. ವಸಿಷ್ಠರು ಲಕ್ಷ್ಮಣನ ಹಿರಿಯ ಮಗನಿಗೆ ಅಂಗದನೆಂತಲೂ, ಕನಿಷ್ಠನಿಗೆ ಚಿತ್ರಕೇತುವೆಂತಲೂ, ಭರತನ ಜ್ಯೇಷ್ಠಪುತ್ರನಿಗೆ ಪುಷ್ಕರನೆಂತಲೂ , ಚಿಕ್ಕವನಿಗೆ ತಕ್ಷನೆಂತಲೂ , ಶತ್ರುಘ್ನನ ಹಿರಿಯ ಮಗನಿಗೆ ಸುಬಾಹುವೆಂತಲೂ, ಕಿರಿಯನಿಗೆ ಯೂಪಕೇತುವೆಂತಲೂ ನಾಮಕರಣ ಮಾಡಿದರು. ಶ್ರೀ ರಾಮನು ಆ ಮಕ್ಕಳ ಜಾತಕರ್ಮ-ನಾಮಕರಣಾದಿ ಸಮಸ್ತ ಕಾರ್ಯಗಳನ್ನೂ ಬಹು ವಿಜೃಂಭಣೆಯಿಂದ ನಡೆಸಿದನು. ಜನಕಮಹಾರಾಜನು ತನ್ನ ಮಕ್ಕಳಿಗೆ ಇಬ್ಬಿಬ್ಬರು ಮಕ್ಕಳಾಗಿರುವದನ್ನು ನೋಡಿ ಸಂತುಷ್ಟನಾದನು.

ಆ ಎಂಟು ಹುಡುಗರೂ ಒಬ್ಬರಿಗಿಂತ ಒಬ್ಬರು ವಯಸ್ಸಿನಲ್ಲಿ ಚಿಕ್ಕವರಿದ್ದರು. ಶ್ರೀ ರಾಮನ ಕೃಪೆಯಿಂದ ಅವರೆಲ್ಲರೂ ಪ್ರಬುದ್ಧರಾದಂತೆ ಸಮಸ್ತರಿಗೂ ಸಂತೋಷವು ಹೆಚ್ಚಿತು. ಶ್ರೀ ರಾಮನು ಅವರೆಲ್ಲರಿಗೂ , ಭೂಷಣ, ಕವಚ ಇವೇ ಮೊದಲಾದ ವಸ್ತುಗಳನ್ನು ಸಮದೃಷ್ಟಿಯಿಂದ ಮಾಡಿಸುತ್ತಿದ್ದನು. ಆ ಮಕ್ಕಳ ಬಾಲಲೀಲೆಗಳನ್ನು ನೋಡಿ ಲಕ್ಷ್ಮಣಾದಿಗಳು ಪರಮಸಂತೋಷವನ್ನು ಹೊಂದಿದರು. ಆ ಹುಡುಗರ ರೂಪ-ಲಾವಣ್ಯಗಳಂತೂ ವರ್ಣಿಸಲಸದಳವಾಗಿದ್ದವು. ಇರಲಿ. ಶ್ರೀ ರಾಮನು ಒಂದು ದಿವಸ ವಸಿಷ್ಠರನ್ನು ಮಕ್ಕಳ ಲಕ್ಷಣಗಳನ್ನು ನೋಡಬೇಕೆಂದು ಪ್ರಾರ್ಥಿಸಿದನು. ಅವರು ಎಲ್ಲಾ ಲಕ್ಷಣಗಳನ್ನೂ ಸಾವಧಾನದಿಂದ ತಿಳಿದು ಶ್ರೀ ರಾಮನಿಗೆ ವಿಶದವಾಗಿ ತಿಳಿಯಹೇಳಿದರು. ಸೀತಾ-ರಾಮರು ಆ ಮಕ್ಕಳ ಬಾಲಕ್ರೀಡೆಗಳನ್ನು ನೋಡುತ್ತ ದಿವಸಗಳನ್ನು ಕ್ಷಣದಂತೆ ಕಳೆದರು. ಅನಂ

ತರ ಯೋಗ್ಯಕಾಲದಲ್ಲಿ ಶ್ರೀ ರಾಮನು ಆ ಮಕ್ಕಳಿಗೆ ಉಪನಯನ ಸಂಸ್ಕಾರಗೆ ಳನ್ನು ನೆರವೇರಿಸಿದನು. ಮತ್ತು ಗುರುಕುಲವಾಸದ ಕ್ರಮವನ್ನು ತಿಳುಹಿ, ಅವ ರೆಲ್ಲರನ್ನೂ ವಸಿಷ್ಠರ ಪಾದಗಳಲ್ಲಿ ಸಮರ್ಪಿಸಿದನು. ಉಪನಯನ ಮಹೋತ್ಸವದ ಕಾಲದಲ್ಲಿ ಶ್ರೀ ರಾಮನು ದಾನ-ಧರ್ಮಗಳನ್ನು ಮಿತಿಯಿಲ್ಲದೆ ಮಾಡಿದನು. ಆ ಬಾಲಕರು ಗುರುಗಳಲ್ಲಿ ಧನುರ್ವಿದ್ಯೆಯೇ ಮೊದಲಾದ ಸಮಸ್ತ ವಿದ್ಯೆಗಳನ್ನೂ ಬಹಳ ಸೂಕ್ಷ್ಮರೀತಿಯಿಂದ ಅಭ್ಯಾಸ ಮಾಡಿದರು. ಈ ರೀತಿ ಶ್ರೀ ರಾಮನು ಪ ತ್ನೀ-ಪುತ್ರರು, ತಮ್ಮಂದಿರು, ಅವರ ಪತ್ನಿಗಳು, ಅವರ ಪುತ್ರರು ಈ ಸಮಸ್ತರೊ ಡನೆ ಸುಖದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು. ಈ ಜನ್ಮಕಾಂಡವು ಭಕ್ತಿ ಯಿಂದ ಕೇಳುವವರಿಗೆ ಸಮಸ್ತ ಫಲದಾಯಕವಾಗಿರುವದು.

ಜನ್ಮಕಾಂಡಸ್ಸಮಾಪ್ತಃ



# ವಿವಾಹಕಾಂಡ.

## ಚಂಪಕಾ–ಸುಮತಿಯರ ಸ್ವಯಂವರ.

ಶ್ರೀರಾಮನು ಧರ್ಮದಿಂದ ರಾಜ್ಯಪಾಲನೆ ಮಾಡುತ್ತಿರಲು, ಒಂದಾನೊಂದು ದಿವಸ ಆತನ ಸಭೆಗೆ ಒಬ್ಬ ದೂತನು ಬಂದನು. ಅವನು ಶ್ರೀ ರಾಮನಿಗೆ ವಂದಿಸಿ, 'ಮಹಾರಾಜರೆ, ಪೂರ್ವದೇಶಕ್ಕೆ ರಾಜನಾದ ಭೂರಿಕೀರ್ತಿಯು ನನ್ನನ್ನು ತಮ್ಮಲ್ಲಿಗೆ ಕಳುಹಿಸಿರುವನು. ಇಕೋ, ಈ ಪತ್ರವನ್ನು ಸಮರ್ಪಿಸಬೇಕೆಂದು ನಮ್ಮ ಪ್ರಭುವಿನ ಆಜ್ಞೆಯಾಗಿರುವದು' ಎಂದು ವಿಜ್ಞಾಪಿಸಿ, ಪತ್ರವನ್ನು ಶ್ರೀ ರಾಮನ ಎದುರಿಗೆ ಇರಿಸಿದನು. ಲಕ್ಷ್ಮಣನು ಶ್ರೀ ರಾಮನ ಅಪ್ಪಣೆಯಂತೆ ಅದನ್ನು ಓದಿದನು. ಅದರಲ್ಲಿ "ಮಹಾರಾಜಾಧಿರಾಜ, ರಾಮಚಂದ್ರಾ, ನನ್ನ ಪೌತ್ರಿಯರಾದ ಚಂಪಕಾ–ಸುಮತಿಯರ ಸ್ವಯಂವರ ಮಹೋತ್ಸವವು ರಾಜಧಾನಿಯಲ್ಲಿ ನಡೆಯಬೇಕಾಗಿರುವದು. ಆಗ ಸಮಸ್ತ ರಾಜರೂ ಸೇರುವರು. ತಾವು ಸಪುತ್ರ- ಸಪರಿವಾರರಾಗಿ ದಯಮಾಡಿಸಿ, ಸಭಾಮಂಟಪವನ್ನು ಅಲಂಕರಿಸಿ, ಮಹೋತ್ಸವವನ್ನು ನೆರವೇರಿಸಬೇಕು" ಎಂಬ ಅಭಿಪ್ರಾಯವು ಬರೆದಿತ್ತು. ಅದನ್ನು ಕೇಳಿ ಶ್ರೀ ರಾಮನು ಬಹಳ ಹರ್ಷಗೊಂಡು ಕುಲಗುರುಗಳ ಅಪ್ಪಣೆಯಂತೆ ಸುಮುಹೂರ್ತದಲ್ಲಿ ಪತ್ನೀ-ಪುತ್ರರೊಡನೆ ಪ್ರಯಾಣ ಬೆಳೆಸಿದನು. ಲಕ್ಷ್ಮಣ–ಭರತ–ಶತ್ರುಘ್ನರೂ ಪರಿವಾರ ಸಮೇತರಾಗಿ ಜೊತೆಗೆ ಹೊರಟರು. ದಾರಿಯಲ್ಲಿ ಅನೇಕ ದೇಶಗಳ ರಾಜರಿಂದ ಸತ್ಕಾರಗಳನ್ನು ಸ್ವೀಕರಿಸುತ್ತ, ಮನೋಹರವಾದ ಪದಾರ್ಥಗಳನ್ನು ನೋಡುತ್ತ ಶ್ರೀ ರಾಮನು ಪರಿವಾರದೊಡನೆ ಭೂರಿಕೀರ್ತಿಯ ದೇಶವನ್ನು ಹೊಂದಿದನು.

ಈ ವರ್ತಮಾನವನ್ನು ಕೇಳಿ ಭೂರಿಕೀರ್ತಿಯು ಪರಮಾನಂದಭರಿತನಾಗಿ, ನಗರವನ್ನು ಅಲಂಕಾರಮಾಡಿಸಿ ಮಂತ್ರಿಗಳೊಡನೆ ಶ್ರೀ ರಾಮನನ್ನು ಎದುರುಗೊಳ್ಳಲು ಸೇನಾಸಮೇತನಾಗಿ ಹೊರಟನು. ಆತನು ಎದುರಾಗಿ ಬರುತ್ತಿರುವ ಶ್ರೀ ರಾಮನ ಪಾದಗಳಿಗೆ ನಮಸ್ಕರಿಸಿ ನಾನಾ ವಿಧದಾಗಿ ಸ್ತೋತ್ರಮಾಡಿದನು. ಅಷ್ಟರಲ್ಲಿ ನಾನಾದೇಶದ ರಾಜರು ಸ್ವಯಂವರಕ್ಕಾಗಿ ಬಂದರು. ಭೂರಿಕೀರ್ತಿಯು ಆ ನರಾಧಿಪರನ್ನೂ ಯಥಾಯೋಗ್ಯ ಸತ್ಕಾರಗಳಿಂದ ಸಂತೋಷಗೊಳಿಸಿ, ಶ್ರೀ

ರಾಮನೇ ಮೊದಲಾದ ಸಮಸ್ತ ರಾಜರನ್ನೂ ನಗರಪ್ರವೇಶ ಮಾಡಿಸಿದನು. ಸೀತಾ-ರಾಮರನ್ನು ನೋಡಬೇಕೆಂದು ಜನರು ಆ ನಗರದ ರಾಜಬೀದಿಯಲ್ಲಿ ಕಿರಪಿಲ್ಲದೆ ನಿಂತಿದ್ದರು. ಅವರು ತಮ್ಮ ಕಾರ್ಯಗಳನ್ನು ಅಲ್ಲಲ್ಲಿಗೇ ನಿಲ್ಲಿಸಿ ಶ್ಯಾಮಸುಂದರನಾದ ಶ್ರೀ ರಾಮನನ್ನು ನೋಡಿ, ಕೌಸಲ್ಯೆಯ ಪುಣ್ಯವನ್ನು ಬಹಳ ಕೊಂಡಾಡಿದರು; ಸೀತಾದೇವಿಯ ಐಶ್ವರ್ಯಕ್ಕೆ ಎಣೆಯಿಲ್ಲವೆಂದು ನುಡಿದರು. ಅಯೋಧ್ಯೆಯ ಜನಗಳ ಸುಕೃತಕ್ಕೆ ಪಾರವೇ ಇಲ್ಲವೆಂದು ಭಾವಿಸಿದರು. ಭೂರಿಕೀರ್ತಿಯು ಶ್ರೀ ರಾಮನಿಗೆ ಸಿದ್ಧಪಡಿಸಿದ್ದ ರಾಜಭವನದಲ್ಲಿ ಆತನನ್ನು ಇಳಿಸಿ, ಸಮಸ್ತೋಪಚಾರಗಳನ್ನೂ ಸಿದ್ಧಪಡಿಸಿ, ಹಾಗೆಯೇ ಸಮಸ್ತ ರಾಜಮಂಡಲಿಯ ಯೋಗ-ಕ್ಷೇಮವನ್ನು ವಿಚಾರಿಸಿ, ಅಂತಃಪುರಕ್ಕೆ ಬಂದನು. ಇತರ ನರಾಧಿಪರು 'ಶ್ರೀ ರಾಮನು ಪುತ್ರಸಮೇತನಾಗಿ ಸ್ವಯಂವರಕ್ಕೆ ಬಂದಿರುವನು' ಎಂದು ತಿಳಿದು, ತಾವು ರಾಜಕನ್ಯಾವಿಷಯದಲ್ಲಿ ನಿರಾಶರಾದರು.

ಮರುದಿವಸ ನಿತ್ಯೋತ್ಸವಗಳೆಲ್ಲ ನಡೆದ ಬಳಿಕ ಭೂರಿಕೀರ್ತಿಯು ಶ್ರೀ ರಾಮನನ್ನು ಮಹದುತ್ಸವದಿಂದ ಸಭಾಮಂಟಪಕ್ಕೆ ಕರೆತಂದನು. ಆಗ ಸಮಸ್ತ ರಾಜರೂ ಶ್ರೀ ರಾಮನ ಚರಣಗಳ ಮೇಲೆ ಮಸ್ತಕಗಳನ್ನಿಟ್ಟು ನಮಸ್ಕರಿಸಿದರು. ಸ್ತುತಿಪಾಠಕರು ಆಯಾ ರಾಜರ ಹೆಸರುಗಳನ್ನು ಶ್ರೀ ರಾಮನಿಗೆ ನಿವೇದಿಸಿದರು. ಬಳಿಕ ಶ್ರೀ ರಾಮನು ಶ್ರೇಷ್ಠವಾದ ಸಿಂಹಾಸನದ ಮೇಲೆ ಕುಳಿತನು. ಸುತ್ತಲೂ ಸಿದ್ಧಪಡಿಸಿದ್ದ ಆಸನಗಳ ಮೇಲೆ ಸಮಸ್ತರಾಜರೂ ರಾಜಪುತ್ರರೂ ಯೋಗ್ಯರೀತಿಯಿಂದ ಕುಳಿತರು. ಕುಶ-ಲವರೇ ಮೊದಲಾದ ಸೂರ್ಯವಂಶದ ರಾಜನಂದನರು ಶ್ರೀ ರಾಮನ ಬಳಿಯಲ್ಲಿ ಶ್ರೇಷ್ಠವಾದ ಆಸನಗಳ ಮೇಲೆ ಕುಳಿತಿದ್ದರು. ಅನಂತರ ಭೂರಿಕೀರ್ತಿಯ ಪೌತ್ರಿಯರಾದ ಚಂಪಕಾ-ಸುಮತಿಯರು ದಾಸಿಯರೊಡನೆ ಸ್ವಯಂವರ ಮಂಟಪವನ್ನು ಪ್ರವೇಶಿಸಿದರು.

ಆ ರಾಜಪುತ್ರಿಯರ ಕಾಂತಿಯಿಂದ ಸಭೆಯು ಝಗಝಗನೆ ಹೊಳೆಯಲಾರಂಭಿಸಿತು. ಈ ಕನ್ಯಾರತ್ನಗಳು ಯಾವ ಪುಣ್ಯಶಾಲಿಗೆ ದೊರಕುವವೋ, ನೋಡಬೇಕೆಂದು ಸಭೆಯಲ್ಲಿ ಒಬ್ಬರಿಗೊಬ್ಬರು ಮಾತನಾಡುತ್ತಿದ್ದರು. ರಾಜಪುತ್ರಿಯಾದ ಚಂಪಕೆಯ ಜೊತೆಗೆ ಬಂದ ದಾಸಿಯು, ಆಯಾ ದೇಶದ ರಾಜರ ಪರಾಕ್ರಮಗಳನ್ನು ಆಕೆಗೆ ತಿಳಿಸುತ್ತ ಸಭೆಯಲ್ಲಿ ಬರುತ್ತಿದ್ದಳು. ಕ್ರಮವಾಗಿ ಆ ದಾಸಿಯು ಲಕ್ಷ್ಮಣ-ಶತ್ರುಘ್ನರ ಬಳಿಗೂ ಬಂದು ಅವರ ಪರಾಕ್ರಮದ ವಿಷಯವಾಗಿ ಸ್ತೋತ್ರ ಮಾಡಿದಳು. ಹಾಗು ಶ್ರೀ ರಾಮನ ಸನ್ನಿಧಿಗೆ ಬಂದು ಆ ಮಹಾನುಭಾ

ವನ ಚರಿತ್ರೆಯನ್ನು ಬಹು ವಿಧವಾಗಿ ತಿಳುಹಿದಳು. ಆದರೂ ಆ ರಾಜ ಕನ್ಯೆಯ ಮನಸ್ಸು ಒಪ್ಪಲಿಲ್ಲ. ಶ್ರೀ ರಾಮನ ಸಮೀಪದಲ್ಲಿ ಕುಳಿತಿದ್ದ ಕುಶನನ್ನು ನೋಡಿ ಈ ರಾಜಪುತ್ರನು ಯಾರೆಂದು ಚಂಪಕೆಯು ದಾಸಿಯನ್ನು ಪ್ರಶ್ನೆ ಮಾಡಿದಳು. ಆಗ ಆದಾಸಿಯು 'ಈತನು ಶ್ರೀ ರಾಮನ ಮಗನು. ಧನುರ್ವೇದದಲ್ಲಿ ಈತನಿಗೆ ಯಾರೂ ಸರಿಹೋಲರು. ಬಾಲ್ಯದಲ್ಲಿ ತಂದೆಯೊಡನೆ ಯುದ್ಧಮಾಡಿ ಆತನಿಗೂ ಆಶ್ಚರ್ಯವನ್ನುಂಟು ಮಾಡಿರುವನು' ಇತ್ಯಾದಿ ಅನೇಕ ಪ್ರಕಾರಗಳಿಂದ ಕುಶನನ್ನೂ ಸ್ತೋತ್ರ ಮಾಡಿದಳು. ಆಗ ಚಂಪಕೆಯು ಪರಮಹರ್ಷದಿಂದ ಆತನ ಕೊರಳಿಗೆ ನವರತ್ನ ಮಾಲಿಕೆಯನ್ನು ಸಮರ್ಪಿಸಿದಳು. ಆಗ ನಾನಾ ವಿಧವಾದ ವಾದ್ಯಗಳು ಘೋರ್ಗರೆದವು. ಭೂರಿಕೀರ್ತಿಯು ತನ್ನ ಮೊಮ್ಮಗಳಾದ ಚಂಪಕೆಯನ್ನು ಕುಶನ ತೊಡೆಯ ಮೇಲೆ ಕುಳ್ಳಿರಿಸಿದನು. ಸಮಸ್ತ ರಾಜಸ್ತ್ರೀಯರೂ ಪಟರಂಧ್ರಗಳಿಂದ ನೋಡುತ್ತಿದ್ದರು. ಅವರೆಲ್ಲರೂ ಈ ವಧೂವರರ ಸಾಮ್ಯವನ್ನು ನೋಡಿ ಆನಂದ ಹೊಂದಿದರು.

ಇತ್ತ ಭೂರಿಕೀರ್ತಿಯ ಮೊಮ್ಮಗಳಾದ ಸುಮತಿಯ ಜೊತೆಗೆ ಬಂದ ದಾಸಿಯು ಸಮಸ್ತ ರಾಜರ ಪ್ರತಾಪಗಳನ್ನೂ ಹೊಗಳುತ್ತ, ಕೊನೆಗೆ ಶ್ರೀ ರಾಮನ ಸಮೀಪದಲ್ಲಿ ಕುಳಿತಿದ್ದ ಲವನ ಬಳಿಗೆ ಬಂದು, ಅವನ ಪರಾಕ್ರಮವನ್ನು ವರ್ಣಿಸಹತ್ತಿದಳು. ಅದೆಲ್ಲವನ್ನೂ ಕೇಳಿ, ರೂಪ, ಲಾವಣ್ಯಗಳಿಗೆ ಮೋಹಿತಳಾದ ಸುಮತಿಯು ತನ್ನ ಕೈಯಲ್ಲಿದ್ದ ನವರತ್ನ ಹಾರವನ್ನು ಲವನ ಕಂಠಕ್ಕೆ ಹಾಕಿದಳು. ಸಭಾಸದರು ವಧೂವರರ ಮೇಲೆ ಪುಷ್ಪಗಳ ವೃಷ್ಟಿ ಮಾಡಿದರು. ಬ್ರಾಹ್ಮಣರು ವಧೂವರರಿಗೆ ಆಶೀರ್ವದಿಸಿದರು. ಭೂರಿಕೀರ್ತಿಯು ತನ್ನ ಮೊಮ್ಮಗಳಾದ ಸುಮತಿಯನ್ನು ಲವನ ತೊಡೆಯ ಮೇಲೆ ಕುಳ್ಳಿರಿಸಿದನು. ಮತ್ತು ಸಭೆಯನ್ನು ಉದ್ದೇಶಿಸಿ—"ಭೋ ರಾಜಪುತ್ರರೆ, ನನ್ನ ಪೌತ್ರಿಯರು ತಮಗೆ ಅನುರೂಪರಾದ ಪತಿಗಳಿಗೆ ನವರತ್ನ ಮಾಲಿಕೆಗಳನ್ನು ಹಾಕಿರುವರು. ಈಗಲೇ ಅವರ ಪಾಣಿಗ್ರಹಣ ಮಹೋತ್ಸವವು ನಡೆಯುವದು. ತಾವು ಆ ಮಹೋತ್ಸವವನ್ನು ಮುಗಿಸಿಕೊಂಡು ತಮ್ಮ ರಾಜ್ಯಗಳಿಗೆ ಪ್ರಯಾಣ ಮಾಡಬಹುದು. ದಯವಿಟ್ಟು ಈ ನನ್ನ ಮಾತುಗಳನ್ನು ನೆರವೇರಿಸಿರಿ" ಎಂದು ಪ್ರಾರ್ಥಿಸಿದನು. ಸಮಸ್ತ ರಾಜರೂ ಭೂರಿಕೀರ್ತಿಯ ವಚನವನ್ನು ಅಂಗೀಕರಿಸಿದರು.

ಅನಂತರ ಎಲ್ಲ ರಾಜರೂ ತಮ್ಮ ಬಿಡಾರಗಳಿಗೆ ಪ್ರಯಾಣ ಮಾಡಿದರು. ಶ್ರೀ ರಾಮನೂ ಪರಿವಾರ ಸಮೇತನಾಗಿ ರಾಜಮಂದಿರಕ್ಕೆ ಪ್ರಯಾಣಮಾಡಿದ

ಸು. ಮರುದಿವಸ ಪ್ರಾತಃಕಾಲಕ್ಕೆ ಭೂರಿಕೀರ್ತಿಯು ರಾಮಚಂದ್ರನ ಬಳಿಗೆ ಬಂದು "ಮಹಾರಾಜನೇ, ನಾನು ನಿನ್ನ ಚರಣಕಮಲಗಳನ್ನು ಆಶ್ರಯಿಸಬೇಕೆಂದು ಇಚ್ಛಿಸುವೆನು. ಆದ್ದರಿಂದ ನೀನು ನನ್ನನ್ನೂ ನನ್ನ ಪೌತ್ರಿಯರನ್ನೂ ಸಂರಕ್ಷಣೆ ಮಾಡು. ವಿವಾಹಕ್ಕೆ ಯೋಗ್ಯವಾದ ಮುಹೂರ್ತವನ್ನು ತಿಳುಹು. ಆ ಕಾಲಕ್ಕೆ ಮಿಕ್ಕ ಸಮಸ್ತ ಕಾರ್ಯಗಳೂ ಮುಗಿಯ ಬೇಕಾಗುತ್ತವೆ" ಎಂದು ಲೋಕರೀತಿಯನ್ನನುಸರಿಸಿ ಪ್ರಾರ್ಥನೆ ಮಾಡಿದನು. ಈ ಮಾತುಗಳನ್ನು ಕೇಳಿ ಶ್ರೀ ರಾಮನು ವಸಿಷ್ಠರನ್ನು ಕರೆಸಿ ವಿವಾಹಕ್ಕೆ ಶುಭ ಮುಹೂರ್ತವನ್ನು ನಿಶ್ಚಯಿಸಿದನು. ಆ ದಿವಸ ಸೀತೆ, ಊರ್ಮಿಳೆ ಇವರೇ ಮೊದಲಾದ ಸಮಸ್ತ ರಾಜಸ್ತ್ರೀಯರೂ ಗಂಧ-ಮಾಲ್ಯಾ-ಭರಣಾದಿಗಳಿಂದ ಪ್ರಕಾಶಿಸುವ ಕುಶ-ಲವರೊಡನೆ ಹೊರಡಲು ಸಿದ್ಧರಾದರು. ಶ್ರೀ ರಾಮಾದಿಗಳು ಮಂಗಳ ಕಾರ್ಯಗಳೆಲ್ಲ ಮುಗಿದ ಬಳಿಕ ವಿವಾಹ ಮಂಟಪದ ಕಡೆಗೆ ಹೊರಟರು. ವಸಿಷ್ಠರ ಅಪ್ಪಣೆಯಂತೆ ವರಪಕ್ಷದ ಸಮಸ್ತ ಸ್ತ್ರೀಯರೂ ನಾನಾ ವಿಧವಾದ ವಸ್ತ್ರಾ-ಭರಣಗಳಿಂದ ಭೂಷಿತರಾಗಿ ಶ್ರೇಷ್ಠವಾದ ರಥಗಳ ಮೇಲೆ ಕುಳಿತು ವಿವಾಹ ಮಂಟಪಕ್ಕೆ ಹೊರಟರು. ಆಗ ನಾನಾ ವಾದ್ಯಗಳು ಘೋರ್ಗರೆದವು. ವರಪಕ್ಷದ ಜನಗಳ ವೈಭವವನ್ನು ನಗರ ವಾಸಿಗಳು ಅತ್ಯಾಶ್ಚರ್ಯದಿಂದ ನೋಡುತ್ತಿದ್ದರು.

ಭೂರಿಕೀರ್ತಿಯು ಪರಿವಾರ ಸಮೇತನಾಗಿ ಶ್ರೀ ರಾಮಾದಿಗಳ ಎದುರಿಗೆ ಬಂದು ತನ್ನ ಅಳಿಯಂದಿರಾದ ಕುಶ-ಲವರನ್ನು, ಪುಷ್ಪ ಮಾಲೆಗಳಿಂದ ಮನೋಹರವಾದ ಮಂಟಪಕ್ಕೆ ಕರೆದುಕೊಂಡು ಹೋದನು. ಕುಶ-ಲವರು ಆ ಮಂಟಪದಲ್ಲಿ ಚಂದ್ರ-ಸೂರ್ಯರಂತೆ ಪ್ರಕಾಶಿಸುತ್ತಿದ್ದರು. ವರಪೂಜೆಯೇ ಮೊದಲಾದ ಸಮಸ್ತ ಕಾರ್ಯಗಳೂ ಯಥಾಸಾಂಗವಾಗಿ ನೆರವೇರಿದವು. ಸೀತಾ, ಊರ್ಮಿಳೆ, ಶ್ರೀ ರಾಮ, ಲಕ್ಷ್ಮಣ ಇವರೇ ಮೊದಲಾದ ಸಮಸ್ತರೂ ಯೋಗ್ಯವಾದ ಆಸನಗಳ ಮೇಲೆ ಕುಳಿತರು. ಕುಲಗುರುಗಳಾದ ವಸಿಷ್ಠರು ಕುಶ-ಲವರ ಸಮೀಪದಲ್ಲಿ ಯಾವಾಗಲೂ ಇರುತ್ತಿದ್ದರು. ಮಧುಪರ್ಕ-ವಿಧಿಯಾದ ಬಳಿಕ ಸೀತಾ-ರಾಮರು ಚಂಪಕಾ-ಸುಮತಿಯರಿಗೆ ನಾನಾ ವಿಧವಾದ ಆಭರಣಗಳನ್ನೂ, ಅಮೌಲ್ಯವಾದ ವಸ್ತ್ರಗಳನ್ನೂ ಸಮರ್ಪಿಸಿದರು. ವಿವಾಹ ಮುಹೂರ್ತಕ್ಕೆ ಸರಿಯಾಗಿ ಕುಶನನ್ನೂ, ಚಂಪಕೆಯನ್ನೂ, ಲವನನ್ನೂ, ಸುಮತಿಯನ್ನೂ ಬೇರೆ ಬೇರೆ ವೇದಿಗಳ ಮೇಲೆ ಕುಳ್ಳಿರಿಸಿದರು. ವಧೂವರರ ಮಧ್ಯೆ ಅಂತಃಪಟವನ್ನು ಹಿಡಿದು ನಾನಾವಿಧವಾದ ಮಂಗಳಾಷ್ಟಕಗಳನ್ನು ಹೇಳಿದರು. ಆ ಋಷಿಗಳ

ಮಂಗಳಧ್ವನಿಯನ್ನು ಕೇಳಿ ಸಮಸ್ತ ಜನರೂ ಸ್ತಬ್ಧರಾದರು. ವಿವಾಹವಿಧಿಯು ಯಥಾಸಾಂಗವಾಗಿ ನೆರವೇರಿತು. ತನ್ನ ಇಬ್ಬರು ಮಕ್ಕಳ ವಿವಾಹವು ಒಂದೇ ಕಾಲದಲ್ಲಿ ನೆರವೇರಿದ್ದಕ್ಕಾಗಿ ಸೀತೆಯು ಬಹಳ ಆನಂದ ಪಟ್ಟಳು. ಭೂರಿಕೀರ್ತಿಯ ಪ್ರಾರ್ಥನೆಯಂತೆ ಶ್ರೀ ರಾಮನು ಒಂದು ತಿಂಗಳವರೆಗೆ ಆ ನಗರದಲ್ಲಿ ವಾಸಮಾಡಿ, ಸೊಸೆಯರನ್ನು ಜೊತೆಗೆ ಕರೆದುಕೊಂಡು ಪರಿವಾರ ಸಮೇತನಾಗಿ ಅಯೋಧ್ಯೆಗೆ ತೆರಳಿದನು.

ಮುಂದೆ ಕೆಲಕಾಲದ ಮೇಲೆ ಶ್ರೀ ರಾಮನ ಜ್ಯೇಷ್ಠಪುತ್ರನಾದ ಕುಶನು ತನ್ನ ಪ್ರಿಯಳಾದ ಚಂಪಕೆಯೊಡನೆ ಸರಯೂ ನದಿಯಲ್ಲಿ ಜಲಕ್ರೀಡೆಗಾಗಿ ಹೋಗುವನು. ಆ ಕಾಲದಲ್ಲಿ ಚಂಪಕೆಯ ಹಸ್ತಗತವಾದ ಕಂಕಣವು ನದಿಯಲ್ಲಿ ಜಾರಿಬೀಳುವದು. ಅದನ್ನು ಕುಮುದನೆಂಬ ನಾಗೇಂದ್ರನ ತಂಗಿಯಾದ ಕುಮುದ್ವತಿಯು ಅಪಹರಿಸುವಳು. ಕುಶನು ಆ ಕಂಕಣವನ್ನು ಹುಡುಕಲು ಬಹಳ ಯತ್ನಮಾಡುವನು. ಅಷ್ಟಾದರೂ ಆ ಕಂಕಣವು ಸಿಗದಿರಲು, ಅತಿಕೋಪದಿಂದ ಸರಯೂ ನದಿಯನ್ನು ತನ್ನ ಬಾಣಗಳಿಂದ ಶೋಷಿಸಲುದ್ಯುಕ್ತನಾಗುವನು. ಈ ಭಯಂಕರ ಕೃತ್ಯವನ್ನು ನೋಡಿ ಸರಯೂ ನದಿಯ ಪ್ರಾರ್ಥನೆಯಿಂದ ಕುಮುದನು ಕುಶನಿಗೆ ಆ ಕಂಕಣವನ್ನೂ ತನ್ನ ತಂಗಿಯಾದ ಕುಮುದ್ವತಿ ಎಂಬ ಕನ್ಯಾರತ್ನವನ್ನೂ ಸಮರ್ಪಿಸಿ ಶರಣಾಗತನಾಗುವನು. ಈ ರೀತಿ ಕುಶನಿಗೆ ಇಬ್ಬರು ಪತ್ನಿಯರಾಗುವರು. ಆ ಕುಮುದ್ವತಿಯ ಉದರದಲ್ಲಿ ಅತಿಥಿ ಎಂಬ ಒಬ್ಬ ಮಗನು ಜನಿಸುವನು. ಅವನಿಂದ ಸೂರ್ಯವಂಶವು ಮುಂದೆ ಶಾಖೋಪಶಾಖೆಗಳಿಂದ ಬೆಳೆಯುವದು. ಚಂಪಕೆಯು ಒಂದು ಹೆಣ್ಣುಮಗುವನ್ನು ಪಡೆಯುವಳು. ಆಕೆಗೆ ಪುತ್ರರಾಗುವದಿಲ್ಲ. ಈ ರೀತಿ ಕುಶನು ಪರಮ ವೈಭವದಿಂದ ರಾಜ್ಯ ರಕ್ಷಣವನ್ನು ಮಾಡಿಕೊಂಡಿರುವನು.

## ಲವನೇ ಮೊದಲಾದ ಏಳುಮಂದಿ ಮಕ್ಕಳ ವಿವಾಹ.

ಒಂದಾನೊಂದು ಕಾಲದಲ್ಲಿ ಶ್ರೀ ರಾಮನು ಪತ್ನೀಪುತ್ರರೊಡನೆ ವಿಮಾನದಲ್ಲಿ ಕುಳಿತು ವನವಿಹಾರಕ್ಕೋಸ್ಕರ ದಂಡಕಾರಣ್ಯಕ್ಕೆ ತೆರಳಿದನು. ಅಗಸ್ತ್ಯ ಮಹರ್ಷಿಗಳ ಆಶ್ರಮವನ್ನು ಕಂಡೊಡನೆ ಆತನು ಪುಷ್ಪಕವನ್ನು ಅಲ್ಲೇ ನಿಲ್ಲಿಸಿ ತಾನು ಪತ್ನೀಪುತ್ರರೊಡನೆ ಆಶ್ರಮವನ್ನು ಪ್ರವೇಶಿಸಿದನು. ಅಗಸ್ತ್ಯರು ಶ್ರೀ ರಾಮನನ್ನು ನೋಡಿ ಪರಮಾನಂದವನ್ನು ಹೊಂದಿದರು. ಅವರು ಅನ್ನಪೂರ್ಣೆಯನ್ನು ಧ್ಯಾನಮಾಡಲು ಆ ಮಹಾದೇವಿಯು ಪ್ರಸನ್ನಳಾಗಿ ಅಗಸ್ತ್ಯರಿಗೆ ಒಂದು ಸುವ

ರ್ಣದ ಪಾತ್ರೆಯನ್ನಿತ್ತು 'ಲೋಪಾಮುದ್ರೆಯು ಭೋಜನ ಮಾಡುವ ವರೆಗೂ ಎಷ್ಟು ಸಾವಿರ ಜನರು ಬಂದರೂ ಈ ಪಾತ್ರೆಯಲ್ಲಿ ಭಕ್ಷ್ಯ-ಭೋಜ್ಯಗಳು ಸಿದ್ಧವಾಗಿರಲಿ' ಎಂದು ವರವನ್ನು ಕೊಟ್ಟು ತಾನು ಅಂತರ್ಹಿತಳಾದಳು. ಅನಂತರ ಶ್ರೀ ರಾಮನ ಸಮಸ್ತ ಪರಿಜನರನ್ನೂ ಅಗಸ್ತ್ಯರು ಉಚಿತ ಮರ್ಯಾದೆಗಳಿಂದ ಸಂತೋಷಗೊಳಿಸಿದರು. ಲೋಪಾಮುದ್ರಾದೇವಿಯು ಸೀತಾ-ರಾಮರೇ ಮೊದಲಾದ ಸಮಸ್ತ ಅತಿಥಿಗಳ ಭೋಜನವಾದನಂತರ ಪತಿಯ ಅಪ್ಪಣೆಯನ್ನು ಪಡೆದು ಭೋಜನ ಮಾಡುತ್ತಿದ್ದಳು. ಹೀಗೆ ಅನೇಕ ದಿವಸಗಳ ವರೆಗೆ ಶ್ರೀ ರಾಮಚಂದ್ರನು ಆ ವನದಲ್ಲಿ ವಿನೋದದಿಂದ ಇದ್ದು, ಒಂದು ದಿವಸ ಅಗಸ್ತ್ಯರೊಡನೆ ವಿಮಾನದಲ್ಲಿ ಕುಳಿತು ಆಕಾಶಮಾರ್ಗದಿಂದ ಸಂಚಾರ ಮಾಡುತ್ತ ಪಂಚಾಪ್ಸರವೆಂಬ ಒಂದು ಸರೋವರವನ್ನು ನೋಡಿದನು.

ರಮಣೀಯವಾದ ಆ ಸರಸ್ಸಿನ ಬಳಿಯಲ್ಲಿ ಶ್ರೀ ರಾಮನು ಪರಿವಾರ ಸಮೇತವಾಗಿ ಒಂದು ದಿವಸ ವಾಸಮಾಡಿದನು. ಆ ದಿವಸ ರಾತ್ರಿ ಸೀತಾಸಮೇತನಾದ ಶ್ರೀ ರಾಮನು ಮಂಚದ ಮೇಲೆ ಕುಳಿತಿರಲು, ಅತಿಮನೋಹರವಾದ ಗಾಯನ ಧ್ವನಿಯು ಕೇಳಬಂತು. ಜನಗಳು ಯಾರೂ ಕಾಣಿಸಲಿಲ್ಲ. ಅಪೂರ್ವವಾದ ಈ ಗಾಯನವನ್ನು ಕೇಳಿ ಆಶ್ಚರ್ಯಗೊಂಡು ಶ್ರೀ ರಾಮನು ಅಗಸ್ತ್ಯರನ್ನು ಕುರಿತು- 'ಈ ಧ್ವನಿಯು ಯಾರದಿರಬಹುದು' ಎಂದು ಕೇಳಿದನು. ಆಗ ಮಹರ್ಷಿಗಳು "ರಾಮಚಂದ್ರನೇ, ಕೇಳು. ಪೂರ್ವದಲ್ಲಿ ಗಂಧರ್ವರಾಜನ ಐದು ಜನ ಪುತ್ರಿಯರು ಈ ಸರೋವರದಲ್ಲಿ ಜಲಕ್ರೀಡೆಗಾಗಿ ಬಂದಿದ್ದರು. ಅದೇ ಸಮಯದಲ್ಲಿ ಏಳು ಜನ ನಾಗಕನ್ಯೆಯರು ಅಕಸ್ಮಾತ್ತಾಗಿ ಇಲ್ಲಿಗೇ ಬಂದರು. ಆ ಕನ್ಯೆಯರಿಗೆ ಪರಸ್ಪರ ಪ್ರೇಮಬೆಳೆಯಿತು. ಮುಂದೆ ಅವರೆಲ್ಲರೂ ಇಲ್ಲಿಗೆ ಪ್ರತಿದಿವಸವೂ ಬರುತ್ತಿದ್ದರು. ಇಲ್ಲಿ ಒಬ್ಬ ಮುನಿಯು ತಪಸ್ಸು ಮಾಡುತ್ತ ಕುಳಿತಿದ್ದನು. ಆತನಿಗೆ ಇವರಿಂದ ತೊಂದರೆಗಳು ಆಗಾಗ್ಗೆ ಸಂಭವಿಸುತ್ತಿದ್ದವು. ಆದಕಾರಣ ತಪಸ್ವಿಯು 'ನೀವು ಇನ್ನು ಮೇಲೆ ಇಲ್ಲಿಗೆ ಬರಬೇಡಿರಿ' ಎಂದು ಆ ಕನ್ಯೆಯರಿಗೆ ಹೇಳಿಕೊಂಡನು. ಆದರೂ ದೇವೇಂದ್ರನ ಬೋಧನೆಯಿಂದ ಋಷಿಯ ಮಾತನ್ನು ಲಕ್ಷಕ್ಕೆ ತರದೆ ಆ ಕನ್ಯೆಯರು ಎಂದಿನಂತೆ ಬರಲಾರಂಭಿಸಿದರು. ಬಳಿಕ ತಪೋನಿಧಿಯು 'ಇವರಿಗೆ ಎಷ್ಟು ಹೇಳಿದರೂ ಬರುವದನ್ನೇನೂ ಬಿಡುವದಿಲ್ಲ. ಇನ್ನು ಶಾಪಕೊಡಬೇಕಾಗಿ ಕಾಣುವದು. ಶಾಪಕೊಟ್ಟರೆ ನನ್ನ ತಪಸ್ಸು ನಾಶವಾಗುವದು' ಎಂದು ಯೋಚಿಸಿ, ಜಲದೇವತೆಯನ್ನು ಕರೆದನು. ಕೂಡಲೆ ಜಲದೇವತೆಯು ನಿಜಸ್ವರೂಪ

ವಸ್ತು ಧರಿಸಿ ಅಲ್ಲಿಗೆ ಬಂದು ಮುನಿಗಳ ಆಜ್ಞೆಯಂತೆ ಆ ಕನ್ಯೆಯರನ್ನು ನಿರ್ಬಂಧದಿಂದ ತನ್ನ ವಾಸಸ್ಥಾನಕ್ಕೆ ಕರೆದೊಯ್ದಳು. ಗಂಧರ್ವರು, ನಾಗರು, ಇವರಾರಿಗೂ ಅಲ್ಲಿಗೆ ಹೋಗಲು ಸಾಮರ್ಥ್ಯವಿಲ್ಲ. ಆ ಮುನಿಯು ತನ್ನ ತಪಃಪ್ರಭಾವದಿಂದ ಉತ್ತಮಲೋಕವನ್ನು ಹೊಂದಿದನು. ಕನ್ಯೆಯರು ಮಾತ್ರ ಇದುವರೆಗೂ ಅಲ್ಲೇ ಇರುವರು. ಅವರು ಈ ರೀತಿಯಾಗಿ ಪ್ರತಿದಿವಸವೂ ಗಾಯನ ಮಾಡುವರು" ಎಂದು ಹೇಳಿದರು.

ಈ ಮಾತುಗಳನ್ನು ಕೇಳಿ ಶ್ರೀ ರಾಮನು 'ಎಲೈ ಲಕ್ಷ್ಮಣನೇ, ನನ್ನ ಧನುಸ್ಸನ್ನು ತೆಗೆದುಕೊಂಡು ಬಾ. ಈಗಲೇ ಆ ಜಲದೇವತೆಯ ಮಂದಿರವನ್ನು ಸುಟ್ಟು ಆ ಕನ್ಯೆಯರನ್ನು ಬಂಧನದಿಂದ ತಪ್ಪಿಸುವೆನು' ಎಂದು, ಲಕ್ಷ್ಮಣನು ತಂದುಕೊಟ್ಟ ಧನುಸ್ಸನ್ನು ಸ್ವೀಕರಿಸಿ ಮೌರ್ವಿಯನ್ನು ಟಂಕರಿಸಿ, ಬಾಣವನ್ನು ಧನುಸ್ಸಿಗೆ ಸೇರಿಸಿದನು. ಆಗ ಭೂಮಿಯು ನಡುಗಿತು. ಜಲದೇವತೆಯು ಗಾಬರಿಗೊಂಡು ತನ್ನ ನಿಜಸ್ವರೂಪವನ್ನು ಧರಿಸಿ ಶ್ರೀ ರಾಮನಿಗೆ ಶರಣಾಗತಳಾಗಿ 'ರಾಮಚಂದ್ರಾ, ಕ್ಷಮಿಸು, ಕ್ಷಮಿಸು. ನಾನು ಆ ಹನ್ನೆರಡುಜನ ಕನ್ಯೆಯರನ್ನೂ ಬಂಧನದಿಂದ ಬಿಡುವೆನು' ಎಂದು ಪ್ರಾರ್ಥಿಸಿದಳು. ಮತ್ತು ಶ್ರೀ ರಾಮ, ಲಕ್ಷ್ಮಣ, ಸೀತಾ, ಅಗಸ್ತ್ಯರು ಇವರೆಲ್ಲರಿಗೂ ನಾನಾವಿಧವಾದ ಪೂಜಾದ್ರವ್ಯಗಳಿಂದ ಸನ್ಮಾನ ಮಾಡಿ, ಜಲದೇವತೆಯು ಶ್ರೀ ರಾಮನಿಂದ ಅಭಯ ವಚನವನ್ನು ಪಡೆದು ಅಂತರ್ಹಿತಳಾದಳು.

ಅಷ್ಟರಲ್ಲಿ ಆ ಕನ್ಯೆಯರ ತಂದೆಗಳಾದ ನಾಗ-ಗಂಧರ್ವರು ಶ್ರೀ ರಾಮನ ಬಳಿಗೆ ಬಂದು, ರಾಮಚಂದ್ರನನ್ನು ಸ್ತುತಿಸಿ, ಬಂಧನದಿಂದ ಮುಕ್ತರಾದ ತಮ್ಮ ಪುತ್ರಿಯರನ್ನು ಕುಶ, ಲವ, ಇವರೇ ಮೊದಲಾದ ಮಕ್ಕಳಿಗೆ ವಿವಾಹಮಾಡಿಕೊಳ್ಳುವಂತೆ ಪ್ರಾರ್ಥಿಸಿದರು. ಶ್ರೀ ರಾಮನು ಅಗಸ್ತ್ಯರ ಸಮ್ಮತಿಯನ್ನು ಕೇಳಿದನು. ಅಗಸ್ತ್ಯರು 'ರಾಮಭದ್ರನೇ, ನಿನ್ನ ನಿರ್ಯಾಣಾನಂತರ ಕುಶನು ಕುಮುದ್ವತಿ ಎಂಬ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವನಿರುವನು. ಆದ್ದರಿಂದ ಅವನನ್ನು ಬಿಟ್ಟು ಮಿಕ್ಕ ಏಳುಮಂದಿ ಮಕ್ಕಳಿಗೆ ಈ ನಾಗಕನ್ಯೆಯರನ್ನು ಕೊಟ್ಟು ವಿವಾಹಮಾಡು. ಯೂಪಕೇತು, ಲವ, ಕುಶ ಇವರ ಹೊರತಾಗಿ ಮಿಕ್ಕ ಐದುಜನ ಕುಮಾರರು ಈ ಐದುಜನ ಗಂಧರ್ವಕನ್ಯೆಯರ ಪಾಣಿಗ್ರಹಣ ಮಾಡಲಿ. ಯೂಪಕೇತುವು ಇನ್ನು ಕೆಲವುಕಾಲಗಳ ಮೇಲೆ ರಾಕ್ಷಸವಿಧಿಯಿಂದ ಒಬ್ಬ ಕನ್ಯೆಯನ್ನು ವಿವಾಹಮಾಡಿಕೊಳ್ಳುವನಿರುವನು' ಎಂದು ಹೇಳಿದರು. ಇದನ್ನು ಕೇಳಿ ಶ್ರೀ ರಾಮನು, ಕನ್ಯೆ

ಯರ ಹೆಸರುಗಳೇನಿರುವವು?' ಎಂದು ನಾಗ-ಗಂಧರ್ವರನ್ನು ವಿಚಾರಿಸಿದನು. ಗಂಧರ್ವನು 'ಚಂದ್ರಿಕೆ, ಚಂಚಲೆ, ಚಂದ್ರವದನೆ, ಚಪಲೆ, ಅಚಲೆ' ಎಂದು ತನ್ನ ಮಕ್ಕಳ ಹೆಸರುಗಳನ್ನು ಹೇಳಿದನು. ನಾಗರಾಜನು 'ಕಂಜಾನನೆ, ಕಂಜನೇತ್ರೆ, ಕಂಜಾಂಘ್ರಿ, ಕಲಾವತಿ, ಕಲಿಕೆ, ಕಮಲೆ, ಮಾಲಿನಿ' ಎಂದು ತನ್ನ ಪುತ್ರಿಯರ ನಾಮಧೇಯಗಳನ್ನು ತಿಳುಹಿದನು. ಶ್ರೀ ರಾಮನು ಅವರೆಲ್ಲರನ್ನೂ ತನ್ನ ಮಕ್ಕಳಿಗೆ ವಿವಾಹಮಾಡಿಕೊಳ್ಳುವೆನೆಂದು ಮಾತುಕೊಟ್ಟು ತನ್ನ ವಿಮಾನದಲ್ಲಿ ಕುಳ್ಳಿರಿಸಿಕೊಂಡನು. ಮತ್ತು 'ಎಲೈ ನಾಗ-ಗಂಧರ್ವರೆ, ನಾವು ಮನುಷ್ಯರಾದ್ದರಿಂದ ನಿಮ್ಮ ಸ್ವರ್ಗಕ್ಕೂ ಪಾತಾಳಕ್ಕೂ ಬರಲು ಅನುಕೂಲವಿಲ್ಲ. ನೀವು ಪುತ್ರಿಯರ ವಿವಾಹಸಮಯಕ್ಕೆ ಅಯೋಧ್ಯೆಗೆ ಬಂದು ನಮ್ಮೆಲ್ಲರ ಮನಸ್ಸನ್ನು ಸಂತೋಷಗೊಳಿಸಬೇಕು' ಎಂದು ಹೇಳಿದನು. ಶ್ರೀ ರಾಮನ ಆ ಮಾತುಗಳನ್ನು ಎಲ್ಲರೂ ಅಂಗೀಕರಿಸಿದರು.

ಅನಂತರ ಶ್ರೀ ರಾಮನು ಆ ನಾಗ-ಗಂಧರ್ವರ ಅಪ್ಪಣೆಯನ್ನು ಪಡೆದು, ಅಗಸ್ತ್ಯರೇ ಮೊದಲಾದ ಸಮಸ್ತರೊಡನೆ ಪುಷ್ಪಕವಿಮಾನದಲ್ಲಿ ಕುಳಿತು ಶೀಘ್ರವಾಗಿ ಅಯೋಧ್ಯೆಗೆ ಬಂದನು. ವಸಿಷ್ಠರೇ ಮೊದಲಾದ ಗುರುಜನರು ವಿವಾಹ ಮುಹೂರ್ತವನ್ನು ನಿಶ್ಚಯಿಸಿದರು. ಅಷ್ಟರಲ್ಲಿ ನಾಗ-ಗಂಧರ್ವರು ಮಾನುಷ ರೂಪಗಳನ್ನು ಧರಿಸಿ, ತಮ್ಮ ಪತ್ನಿಯರೊಡನೆ ಅಯೋಧ್ಯೆಗೆ ಬಂದರು. ಶ್ರೀ ರಾಮನು ಅವರನ್ನು ಉತ್ತಮ ವೈಭವಗಳಿಂದ ಎದುರುಗೊಂಡು, ಯೋಗ್ಯವಾದ ಸ್ಥಳಗಳಲ್ಲಿ ಇಳಿಸಿದನು. ಜೋಯಿಸರು ವೈಶಾಖದಲ್ಲಿ ಎರಡು, ಜ್ಯೇಷ್ಠದಲ್ಲಿ ಎರಡು, ಮಾರ್ಗಶೀರ್ಷದಲ್ಲಿ ಎರಡು, ಮಾಘದಲ್ಲಿ ಮೂರು, ಫಾಲ್ಗುಣದಲ್ಲಿ ಮೂರು ಈ ಮೇರೆಗೆ ವಿವಾಹ ಮುಹೂರ್ತಗಳನ್ನು ನಿಶ್ಚಯಮಾಡಿದರು. ಕುಲಗುರುಗಳು ಮತ್ತು ಜೋಯಿಸರು ಇವರು ಪರಸ್ಪರ ಯೋಚನೆಮಾಡಿ, ಕಂಜಾನನೆಯನ್ನು ಲವನಿಗೂ ಕಂಜಾಕ್ಷಿಯನ್ನು ಅಂಗದನಿಗೂ, ಕಂಜಾಘ್ರಿಯನ್ನು ಚಿತ್ರಕೇತುವಿಗೂ, ಕಮಲಾವತಿಯನ್ನು ಪುಷ್ಕರನಿಗೂ, ಕಲಿಕೆಯನ್ನು ತಕ್ಷನಿಗೂ, ಕಮಲೆಯನ್ನು ಸುಬಾಹುವಿಗೂ, ಮಾಲತಿಯನ್ನು ಯೂಪಕೇತುವಿಗೂ, ಗಂಧರ್ವಪುತ್ರಿಯರಲ್ಲಿ ಚಂದ್ರಿಕೆಯನ್ನು ಅಂಗದನಿಗೂ, ಚಂದ್ರಾಸ್ಯೆಯನ್ನು ಚಿತ್ರಕೇತುವಿಗೂ, ಚಂಚಲೆಯನ್ನು ಪುಷ್ಕರನಿಗೂ, ಚಪಲೆಯನ್ನು ತಕ್ಷನಿಗೂ, ಅಚಲೆಯನ್ನು ಸುಬಾಹುವಿಗೂ ಕೊಟ್ಟು ವಿವಾಹ ಮಾಡಲು ನಿಶ್ಚಯ ಮಾಡಿದರು. ಈ ವಿಚಾರವು ಶ್ರೀ ರಾಮನಿಗೂ ಸಮ್ಮತವಾಯಿತು. ಬಂಧುಬಳಗದವರು ಕೂಡಲೆ

ಆಯಾ ಮುಹೂರ್ತಗಳಲ್ಲಿ ವಿವಾಹಗಳು ಬಹು ವಿಜೃಂಭಣೆಯಿಂದ ನೆರವೇರಿದವು. ಶ್ರೀರಾಮನು ರಾಜರು, ಋಷಿಗಳು, ಬ್ರಾಹ್ಮಣರು, ದಾಸರು, ದಾಸಿಯರು, ಇವರೆಲ್ಲರನ್ನೂ, ಯೋಗ್ಯ ಮರ್ಯಾದೆಗಳಿಂದ ಹರ್ಷಗೊಳಿಸಿ ತಮ್ಮ ತಮ್ಮ ಸ್ಥಳಗಳಿಗೆ ಪ್ರಯಾಣಮಾಡುವಂತೆ ಅಪ್ಪಣೆ ಮಾಡಿದನು.

ನಾಗ, ಗಂಧರ್ವರು ತಮ್ಮ ಸ್ಥಳಗಳಿಗೆ ಹೋಗಲಿಲ್ಲ. ಶ್ರೀರಾಮನ ಸಹವಾಸವು ದೊರೆಯಬೇಕೆಂದು ಅಯೋಧ್ಯೆಯಲ್ಲೇ ವಾಸಮಾಡಿದರು. ಅಯೋಧ್ಯೆಯಲ್ಲಿ ಎಲ್ಲಿನೋಡಿದರೂ ಆನಂದವೇ ತುಂಬಿ ತುಳುಕುತ್ತಿತ್ತು. ತಿರಸ್ಕಾರ, ದುಃಖ ಇವು ಶ್ರೀರಾಮನ ರಾಜ್ಯದಲ್ಲೇ ಇರಲಿಲ್ಲವೆಂದರೆ ಏನೂ ದೋಷವಿಲ್ಲ. ಶ್ರೀರಾಮನು ತನ್ನ ಎಂಟುಜನ ಮಕ್ಕಳಿಗೆ ಬೇರೆ ಬೇರೆ ಅಂತಃಪುರಗಳನ್ನು ನಿರ್ಮಾಣಮಾಡಿಸಿದನು. ಸೀತಾ, ಊರ್ಮಿಳೆ, ಮಾಂಡವಿ, ಶ್ರುತಕೀರ್ತಿ ಇವರು ಪತಿ, ಗುರುಗಳು, ಅತ್ತೆಯರು ಇವರ ಶುಶ್ರೂಷೆಯನ್ನು ಬಹಳ ಭಕ್ತಿಯಿಂದ ಮಾಡುತ್ತಿದ್ದರು. ಈ ಪುಣ್ಯದಿಂದ ಅವರಿಗಾದರೂ ಅಂಥಾ ಸೊಸೆಯರೇ ದೊರಕಿದ್ದರು. ಈ ರೀತಿಯಿಂದ ಸೀತಾರಾಮರು ಮಕ್ಕಳೊಡನೆ ನಾನಾವಿಧವಾದ ವಿಷಯಸುಖಗಳನ್ನುಪಭೋಗಿಸುತ್ತಾ ದೇವ ಬ್ರಾಹ್ಮಣರ ಪೂಜೆಯಲ್ಲಿ ನಿರತರಾಗಿದ್ದರು.

## ಮದನಸುಂದರಿಯ ಸ್ವಯಂವರ.

ಒಂದಾನೊಂದು ಕಾಲವಲ್ಲಿ ದಕ್ಷಿಣದೇಶದ ಅರಸನಾದ ಕಂಬುಕಂಠನೆಂಬವನು ತನ್ನ ಶಿವಕಾಂತಿ ನಗರದಲ್ಲಿ ಮದನಸುಂದರಿ ಎಂಬ ಮಗಳಿಗೆ ಸ್ವಯಂವರ ವಿಧಾನದಿಂದ ವಿವಾಹಮಾಡಲು ನಿಶ್ಚಯಿಸಿದನು. ಸಮಸ್ತ ರಾಜರಿಗೂ ಆದಿವಸಕ್ಕೆ ಬರಲು ಲಗ್ನಪತ್ರಿಕೆಗಳನ್ನು ಕಳುಹಿಸಿ ಕೊಟ್ಟನು. ಆ ರಾಜಪುತ್ರರು—"ಭೂಮಿಕೀರ್ತಿಯ ಪೌತ್ರಿಯರ ಸ್ವಯಂವರಕಾಲದಲ್ಲಿ ತಮಗಾದ ಅಪಮಾನವನ್ನು ಯೋಚಿಸಿ, 'ಶ್ರೀರಾಮನನ್ನು ಕರೆಸುವದಿಲ್ಲವಾದರೆ, ನಾವೆಲ್ಲರೂ ಬರುವೆವು" ಎಂದು ಹೇಳಿಕಳುಹಿಸಿದರು. ಚಂಪಕಾ ಸ್ವಯಂವರ ಕಾಲದಲ್ಲಿ ಈ ಕಂಬುಕಂಠನಿಗೂ ಮಾನಹಾನಿಯಾಗಿತ್ತಾದ್ದರಿಂದ ಆ ಮಾತುಗಳು ರುಚಿಸಿದವು. ಶ್ರೀರಾಮನನ್ನು ಕರೆಸುವದಿಲ್ಲೆಂಬ ವಾರ್ತೆಯನ್ನು ಕೇಳಿ ಎಲ್ಲ ರಾಜರೂ ಸ್ವಯಂವರ ಮಂಟಪಕ್ಕೆ ದಯಮಾಡಿಸಿದರು. ಆ ದಿವಸ ಪ್ರಾತಃಕಾಲದಲ್ಲಿ ಮದನಸುಂದರಿಯು ಮೇಲುಪ್ಪರಿಗೆಯ ಮೇಲೆ ಕುಳಿತಿದ್ದಳು. ಅಲ್ಲಿಗೆ ನಾರದ ಮಹಾಮುನಿಗಳು ದಯಮಾಡಿಸಿದರು. ಆ ಮಹರ್ಷಿಗಳನ್ನು ನೋಡಿ ಮದನಸುಂದರಿಯು ಎದ್ದುನಿಂತು ಅವರ ಪಾದಗಳಿಗೆ ವಂದಿಸಿ 'ಮಹಾಮುನಿಗಳೇ, ಎಲ್ಲಿಗೆ ಪ್ರಯಾಣ

ಮಾಡುವಿರಿ!' ಎಂದು ವಿನಯದಿಂದ ಪ್ರಶ್ನೆಮಾಡಿದಳು. ಆಗ ನಾರದರು "ಎಲೈ ರಾಜಕನ್ಯೆಯೇ, ನಾನು ಜಗಜ್ಜೀವನನಾದ ಶ್ರೀರಾಮನನ್ನು ನೋಡಬೇಕೆಂದು ಹೊರಟೆನು. ಈ ನಗರದ ಬಳಿಯಲ್ಲಿ ಬಹಳ ಸೇನಾಸನ್ನಿವೇಶಗಳನ್ನು ನೋಡಿ, 'ಇಷ್ಟು ಗಲಾಟೆಗೆ ಕಾರಣವೇನು' ಎಂದು ವಿಚಾರಿಸಿದೆನು. ಈ ನಗರದಲ್ಲಿ ರಾಜಪುತ್ರಿಯ ಸ್ವಯಂವರವು ನಡೆಯುವದೆಂದು ತಿಳಿಯಬಂತು. ಹಾಗಾದರೆ ಶ್ರೀರಾಮನು ಇಲ್ಲಿಗೆ ಬಂದಿರಬಹುದೆಂದು ಬಹಳ ಹುಡುಕಿದೆನು. ಆದರೆ ನನ್ನ ಪ್ರಯತ್ನವು ನಿಷ್ಫಲವಾಯಿತು. ಆ ರಾಮಚಂದ್ರನನ್ನು ನಿಮ್ಮ ತಂದೆಯು ದ್ವೇಷದಿಂದ ಕರೆಸಲಿಲ್ಲವೆಂಬ ವರ್ತಮಾನವನ್ನು ಕೇಳಿದೆನು. ಆದ್ದರಿಂದ ನಾನು ಅಯೋಧ್ಯೆಯಕಡೆಗೆ ಹೊರಟಿರುವೆನು. ಹೇ ಸುಂದರೀ, ನೀನು ಸತ್ಯವಾಗಿ ನಿರ್ಭಾಗ್ಯಳು. ಶ್ರೀರಾಮನ ಕುಲಕ್ಕೆ ನೀನು ಸಂಬಧಿಸುವೆಯಾಗಿದ್ದರೆ ನಿನ್ನ ಪುಣ್ಯಕ್ಕೆ ಎಣೆಯೇ ಇರಲಿಲ್ಲ. ಆಹಹ! ಶ್ರೀರಾಮನ ಐಶ್ವರ್ಯವೆಷ್ಟು, ಆತನ ಎಂಟುಮಂದಿ ಮಕ್ಕಳ ಪರಾಕ್ರಮವನ್ನು ಎಷ್ಟೆಂದು ವರ್ಣಿಸಲಿ? ಸೀತೆಯ ಮಕ್ಕಳೆಷ್ಟು ಸುಂದರರು! ಎಷ್ಟು ದಯಾಶಾಲಿಗಳು! ಭಾಗ್ಯವೆನಬೇಕು ರಾಮನದೇ!! ಇರಲಿ. ಹೊತ್ತಾಯಿತು. ನಾನು ಹೊರಡುವೆನು" ಎಂದು ಹೇಳಿ ಮುಂದಕ್ಕೆ ಹೊರಟರು.

ಆಗ ಮದನಸುಂದರಿಯು ನಾರದರ ಪಾದಗಳಿಗೆರಗಿ 'ಸ್ವಾಮಿ, 'ಆ ಲೋಕನಾಥನು ಇಲ್ಲಿಗೆ ಬರುವಂತೆ ಮಾಡಿರಿ' ಎಂದು ಪ್ರಾರ್ಥಿಸಿದಳು. ಬಳಿಕ ನಾರದರು 'ಎಲೈ ರಾಜಕುವರಿಯೇ, ನೀನು ಯೋಚನೆ ಮಾಡಬೇಡ. ನಿನ್ನ ಕೆಲಸವನ್ನು ನಾನು ನೆರವೇರಿಸಿ ಕೊಡುವೆನು' ಎಂದು ಹೇಳಿ ಅಯೋಧ್ಯೆಗೆ ಪ್ರಯಾಣ ಮಾಡಿದರು. ಅಷ್ಟರಲ್ಲಿ ಶತ್ರುಘ್ನನ ಮಗನಾದ ಯೂಪಕೇತುವು ಸ್ವಲ್ಪ ಸೇನೆಯೊಡನೆ ತಮಸಾನದಿಯ ಬಳಿಗೆ ಸ್ನಾನಮಾಡಲು ಬಂದಿದ್ದನು. ಅವನನ್ನು ನೋಡಿ ನಾರದರು ಮದನಸುಂದರಿಯ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಿದರು. ಈ ಮಾತುಗಳನ್ನು ಕೇಳಿ ಯೂಪಕೇತುವಿಗೆ ಬಹಳ ಕೋಪಬಂತು. ಮತ್ತು ಆ ರಾಜಕುಮಾರನು ನಾರದರ ಪಾದಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿ 'ಸ್ವಾಮಿ, ನಾನು ಇಲ್ಲಿಂದಲೇ ಹೊರಟು ತಮ್ಮ ಹಾಗು ಶ್ರೀ ರಾಮನ ಕೃಪೆಯಿಂದ ಆ ಕಂಟಕಂತನ ಸಾಮರ್ಥ್ಯವನ್ನು ನೋಡಿಬರುವೆನು' ಎಂದು ವಿಜ್ಞಾಪಿಸಿ ಸೇನಾಸಮೇತನಾಗಿ ಶಿವಕಾಂತಿನಗರಕ್ಕೆ ಪ್ರಯಾಣ ಬೆಳಸಿದನು. ಅನಂತರ ನಾರದರು ಅಯೋಧ್ಯೆಗೆ ನಡೆದರು. ಶ್ರೀ ರಾಮನು ನಾರದರನ್ನು ಬಹುವಿಧವಾಗಿ ಸತ್ಕರಿಸಿ 'ತಾವು ಐದು ದಿವಸಗಳವರೆಗೆ ಇಲ್ಲೇ ಇದ್ದು ಹೋಗಬೇಕು' ಎಂದು ಪ್ರಾರ್ಥಿಸಿ

ದನು. ನಾರದರು ಶ್ರೀ ರಾಮನ ಆ ಮಾತುಗಳಿಗೆ ಸಮ್ಮತಿಸಿದರು. ಬಳಿಕ ಶ್ರೀ ರಾಮಾದಿಗಳು ಭೋಜನಕ್ಕೆ ತೆರಳಿದರು. ಆಗ ಯೂಪಕೇತುವು ಎಲ್ಲಿ ಕಾಣ ಲಿಲ್ಲ. ಶ್ರೀ ರಾಮನು ಅವನೆಲ್ಲಿರುವನೆಂದು ವಿಚಾರಿಸುವಂತೆ ಲಕ್ಷ್ಮಣನಿಗೆ ಆಜ್ಞಾ ಪಿಸಿದನು. ಸೌಮಿತ್ರಿಯು ವಿಚಾರಿಸುವಲ್ಲಿ 'ಆತನು ಸೇನಾಸಮೇತನಾಗಿ ವನಕ್ಕೆ ಹೋಗಿರುವಂತೆ ತಿಳಿಯಬಂತು. ಅನಂತರ ಸರ್ವರೂ ಭೋಜನ ಮಾಡಿದರು. ಯೂಪಕೇತುವು ರಾತ್ರಿಗೂ ಬರದಿರಲು ಶ್ರೀ ರಾಮಾದಿಗಳಿಗೆ ಬಹಳ ಯೋಚನೆ ಯಾಯಿತು. ಸೀತೆಯೇ ಮೊದಲಾದವರು ಊಟಮಾಡದೆ ಕುಳಿತರು. ಈ ವಾರ್ತೆ ಯನ್ನು ಕೇಳಿ ನಾರದರು ಶ್ರೀ ರಾಮಾದಿಗಳಿಗೆ ಯೂಪಕೇತುವಿನ ಸಮಾಚಾರ ವನ್ನು ತಿಳುಹಿದರು. ಆಗ ರಾಮಾದಿಗಳಿಗೆ ಸ್ವಲ್ಪ ಸಮಾಧಾನವಾಯಿತು. ಮತ್ತು ಶ್ರೀ ರಾಮನ ಆಜ್ಞೆಯಂತೆ ಶತ್ರುಘ್ನ, ಲವ, ಕುಶ ಇವರೆಲ್ಲರೂ ಆತನ ಸಹಾಯ ಕ್ಕಾಗಿ ಸೇನಾಸಮೇತ ಹೊರಟರು.

ಇತ್ತಲಾ ಯೂಪಕೇತುವು ಸ್ವಯಂವರ ಮುಹೂರ್ತಕ್ಕೆ ಸರಿಯಾಗಿ ಕಂಬು ಕಂಠನ ನಗರಿಯನ್ನು ಹೊಂದಿದನು. ಈಗಲೇ ಸ್ವಯಂವರವು ನಡೆಯುವದೆಂಬ ವರ್ತಮಾನವನ್ನು ಕೇಳಿ ಆ ರಾಜಕುಮಾರನು ಕಂಬುಕಂಠನ ಸಭೆಯ ಬಳಿಗೆ ಹೋ ದನು. ಆ ಸಮಯದಲ್ಲಿ ಮದನಸುಂದರಿಯು ತನ್ನ ದಾಸಿಯ ಜೊತೆಗೆ ಹಸ್ತದಲ್ಲಿ ಪುಷ್ಪಮಾಲಿಕೆಯನ್ನು ಧರಿಸಿ ಸಭೆಯೊಳಗೆ ಪ್ರಯಾಣ ಮಾಡುತ್ತಿದ್ದಳು. ಆ ರಾಜ ಪುತ್ರಿಯ ಮನಸ್ಸಿನಲ್ಲಿ 'ನಾನು ಶ್ರೀ ರಾಮನ ಸೊಸೆಯಾಗಲಿಲ್ಲ' ಎಂದು ಬಹಳ ಕೊರತೆಯುಂಟಾಗಿತ್ತು. ಆದರೂ ತಂದೆಯ ಭಯದಿಂದ ಆಕೆಯು ಯಾರಿಗಾದ ರೂ ಸ್ವಯಂವರಮಾಲಿಕೆಯನ್ನು ಹಾಕಬೇಕೆಂದು ಹೊರಟಿದ್ದಳು. ಯೂಪಕೇತು ವು ಈ ಸಂದರ್ಭವನ್ನು ನೋಡಿ ಮೋಹನಾಸ್ತ್ರಪ್ರಯೋಗದಿಂದ ಸಭಾಸದರನ್ನು ಗೊಂಬೆಗಳಂತೆ ಮಾಡಿ, ಮದನ ಸುಂದರಿಯ ಬಳಿಗ ಬಂದು ತನ್ನ ನಾಮಗೋತ್ರ ಗಳನ್ನು ತಿಳುಹಿ ರಥದಲ್ಲಿ ಕುಳ್ಳಿರಿಸಿಕೊಂಡು ಆ ನಗರಿಯ ಹೊರಭಾಗದಲ್ಲಿ ಬಂದು ನಿಂತನು. ಮದನಸುಂದರಿಯು ಪರಮಹರ್ಷದಿಂದ ಯೂಪಕೇತುವಿನ ಕೊರಳಿಗೆ ಪುಷ್ಪಮಾಲಿಕೆಯನ್ನು ಹಾಕಿದಳು. ಮತ್ತು ಯುದ್ಧಕ್ಕೆ ಸಿದ್ಧನಾಗಿರುವ ಪತಿಯನ್ನು ನೋಡಿ 'ಪ್ರಿಯರೇ, ನೀವು ಒಬ್ಬರೇ ಇರುವಿರಿ. ಈ ರಾಜರೊಡನೆ ಯುದ್ಧ ಮಾ ಡುವದು ಅಸಾಧ್ಯವಾದೀತು! ಆದಕಾರಣ ನನ್ನನ್ನು ಅಯೋಧ್ಯೆಯಲ್ಲಿ ಬಿಟ್ಟು, ಶ್ರೀ ರಾಮಾದಿಗಳೊಡನೆ ಇಲ್ಲಿಗೆ ಬಂದು ಯುದ್ಧಮಾಡುವದು ಯುಕ್ತವಾಗಿ ತೋ ರುವದು' ಎಂದು ಪ್ರಾರ್ಥಿಸಿದಳು.

ಆಗ ಯೂಪಕೇತುವು 'ಪ್ರಿಯೇ, ಈ ರಾಜರ ಹೆದರಿಕೆಯು ನನಗೆ ಸ್ವಲ್ಪ ವಾದರೂ ಇಲ್ಲ. ನನ್ನ ಪರಾಕ್ರಮವು ನಿನಗೆ ತಿಳಿಯದ್ದರಿಂದ ಹೀಗೆ ಮಾತಾಡುತ್ತಿದ್ದೀ. ಹೆದರಬೇಡ. ನನ್ನ ಹಸ್ತಕೌಶಲ್ಯವನ್ನಾದರೂ ನೋಡು' ಎಂದು ಹೇಳಿ ಕೈಯಲ್ಲಿ ಧನುಸ್ಸನ್ನು ಸ್ವೀಕರಿಸಿ ಮೋಹನಾಸ್ತ್ರವನ್ನು ಉಪಸಂಹಾರಮಾಡಿದನು. ಬಳಿಕ ಸಮಸ್ತ ರಾಜರೂ ಎಚ್ಚರಹೊಂದಿದರು. ನಡೆದ ಸಂಗತಿಯನ್ನು ತಿಳಿದು ಅವರು ಯೂಪಕೇತುವಿನೊಡನೆ ಯುದ್ಧಮಾಡಲು ನಗರದ ಹೊರಭಾಗಕ್ಕೆ ಬಂದರು. ಯೂಪಕೇತುವು ಎದುರಾಗಿ ಬರುತ್ತಿರುವ ರಾಜರನ್ನು ನೋಡಿ ನಗುನಗುತ್ತ ವಾಯವ್ಯಾಸ್ತ್ರವನ್ನು ಧನುಸ್ಸಿನಲ್ಲಿ ಜೋಡಿಸಿ ಬಿಟ್ಟನು. ಆಗ ಸಮಸ್ತರಾಜರೂ ಒಣಗಿದ ಎಲೆಗಳಂತೆ ಯೋಜನಾಂತರಗಳವರೆಗೆ ಹಾರಿಬಿದ್ದರು. ಇದನ್ನು ನೋಡಿ ಮದನಸುಂದರಿಗೆ ಆಶ್ಚರ್ಯವಾಯಿತು. ಈ ವಾರ್ತೆಯನ್ನು ಕೇಳಿ ಕಂಬುಕಂಠನು ತನ್ನ ಸೇನೆಯೊಡನೆ ಗ್ರಾಮದ ಹೊರಗೆ ಬಂದು ಯೂಪಕೇತುವಿನೊಡನೆ ಯುದ್ಧ ಮಾಡಲು ನಿಂತನು. ಅವನ ರಥದಲ್ಲಿ ಕುಳಿತಿರುವ ತನ್ನ ಮಗಳನ್ನು ನೋಡಿದೊಡನೆ ಕಂಬುಕಂಠನಿಗೆ ಪ್ರಚಂಡವಾದ ಕೋಪಬಂತು. ಯೂಪಕೇತುವು ಒಂದು ಕ್ಷಣದಲ್ಲಿ ಅವನ ಎಲ್ಲ ಸೈನ್ಯವನ್ನು ಯಮಪುರಿಗೆ ಕಳುಹಿದನು. ಕಂಬುಕಂಠನು ಬಹು ಕ್ರೋಧದಿಂದ ಯೂಪಕೇತುವಿನ ಮೇಲೆ ಅನೇಕ ಶಸ್ತ್ರಗಳನ್ನು ಪ್ರಯೋಗಿಸಿದನು. ಅದರಿಂದ ಸ್ವಲ್ಪವಾದರೂ ಪ್ರಯೋಜನವಾಗಲಿಲ್ಲ. ಯೂಪಕೇತುವು ಅವನ ಸಾರಥಿ, ಕುದುರೆಗಳು ಇವೆಲ್ಲವನ್ನು ನಾಶಮಾಡಿ, ರಥವನ್ನು ಮುರಿದು, ಅವನನ್ನು ಪಾಶಗಳಿಂದ ಕಟ್ಟಿ ತನ್ನ ರಥದಲ್ಲಿ ಹಾಕಿಕೊಂಡು ಖಡ್ಗದಿಂದ ಶಿರಚ್ಛೇದ ಮಾಡಲುದ್ಯುಕ್ತನಾದನು. ಆಗ ಮದನಸುಂದರಿಯು 'ನನ್ನ ತಂದೆಯನ್ನು ಕೊಲ್ಲಬಾರದು. ದಯವಿಟ್ಟು ಅತನ ಪ್ರಾಣದಾನಮಾಡಿರಿ' ಎಂದು ಪ್ರಾರ್ಥಿಸಿದಳು.

ಯೂಪಕೇತುವು ಪತ್ನಿಯ ವಚನದಂತೆ ಅವನ ಪ್ರಾಣಗಳನ್ನುಳಿಸಿದನು. ಪ್ರತಿಪಕ್ಷಿಗಳು ಯಾರೂ ಎದುರಿಗೆ ಬರದಿರಲು ಯೂಪಕೇತುವು ಮದನ ಸುಂದರಿಯೊಡನೆ ಅಯೋಧ್ಯೆಗೆ ಪ್ರಯಾಣ ಬೆಳಸಿದನು. ಅಷ್ಟರಲ್ಲಿ ಎದುರಿಗೆ ಉತ್ತರದಿಕ್ಕಿನಿಂದ ಬರುವ ಸೇನೆಯ ದುಂದುಭಿಗಳ ಧ್ವನಿಯನ್ನು ಕೇಳಿ, ಅತನು ತನ್ನ ಹೆಸರಿನ ಒಂದು ಬಾಣವನ್ನು ಆ ಕಡೆಗೆ ಪ್ರಯೋಗಿಸಿದನು. ಅದು ಶತ್ರುಘ್ನನ ಪಾದಗಳ ಮೇಲೆ ಬಿತ್ತು. ತನ್ನ ಮಗನ ಹೆಸರನ್ನು ನೋಡಿ ಶತ್ರುಘ್ನನಿಗೆ ಪರಮ ಸಂತೋಷವಾಯಿತು. ಮತ್ತು ಶತ್ರುಘ್ನನು ತನ್ನ ನಾಮಾಂಕಿತವಾದ ಒಂದು ಬಾಣವನ್ನು ಯೂಪಕೇತುವಿನ ಕಡೆಗೆ ಬಿಟ್ಟನು. ಅದು ಯೂಪಕೇತುವಿನ ತಲೆ

ಯ ಮೇಲೆ ಪುಷ್ಪದಂತೆ ಬಿತ್ತು. ಅದನ್ನು ನೋಡಿ ತನ್ನ ತಂದೆಯು ತನಗೆ ಸಹಾ ಯ ಮಾಡುವದಕ್ಕೋಸ್ಕರ ಬರುತ್ತಿರುವನೆಂದು ತಿಳಿದು ಯೂಪಕೇತುವು ಅತಿವೇ ಗದಿಂದ ಶತ್ರುಘ್ನನಿರುವ ಬಳಿಗೆ ಬಂದು ಆತನಿಗೆ ನಮಸ್ಕರಿಸಿ, ನಡೆದ ವೃತ್ತಾಂತ ವನ್ನು ತಿಳುಹಿ, ಕಂಬುಕಂಠನನ್ನು ಆತನ ಪಾದಗಳಿಗರ್ಪಿಸಿದನು. ಶತ್ರುಘ್ನನು ದಯೆಯಿಂದ ಕಂಬುಕಂಠನನ್ನು ಬಂಧನದಿಂದ ಬಿಡುಗಡೆ ಮಾಡಿಸಿದನು. ಮತ್ತು ಆತನ ಪ್ರಾರ್ಥನೆಯಂತೆ ಎಲ್ಲರೂ ಶಿವಕಾಂತಿ ನಗರದ ಕಡೆಗೆ ತೆರಳಿದರು. ಶತ್ರು ಘ್ನನು ಆ ನಗರದ ಒಳಿಗೆ ಹೋದ ಕೂಡಲೆ ಪಟ್ಟಣದ ಬೈಲು ಭಾಗದಲ್ಲಿ ವಾಸ ಮಾಡಲು ಇಚ್ಛಿಪಟ್ಟನು. ಆ ಕ್ಷಣವೇ ಅಲ್ಲಿ ಪಟಗೃಹಗಳಿಂದ ರಮ್ಯವಾದ ಪ್ರದೇಶಗಳನ್ನು ಸಿದ್ಧಪಡಿಸಿದರುಬಳಿಕ ಶತ್ರುಘ್ನನ ಅಪ್ಪಣೆಯಂತೆ ಕಂಬುಕಂಠನು ಶ್ರೀ ರಾಮನಿಗೆ ಲಗ್ನ ಪತ್ರಿಕೆಯನ್ನು ಬರೆದು ಮಂತ್ರಿಗಳನ್ನು ಅಯೋಧ್ಯೆಗೆ ಕಳುಹಿದನು.

ಶಿವಕಾಂತಿನಗರದಿಂದ ಬಂದ ದೂತರು ಅಯೋಧ್ಯೆಗೆ ಬಂದು ಶ್ರೀ ರಾಮ ನಿಗೆ ಲಗ್ನಪತ್ರಿಕೆಯನ್ನು ಸಮರ್ಪಿಸಿದರು. ಅದನ್ನು ನೋಡಿ ರಾಮಚಂದ್ರನಿಗೆ ಬಹಳ ಸಂತೋಷವಾಯಿತು. ಈ ವಾರ್ತೆಯನ್ನು ಸೀತಾದೇವಿಗೆ ತಿಳುಹಿ ಶುಭ ಮುಹೂರ್ತದಲ್ಲಿ ವಸಿಷ್ಠ, ಅಂತಃಪುರಜನರು, ಪುರಜನರು, ಬಂಧುಗಳು ಇವರೊಡ ನೆ ಶ್ರೀರಾಮನು ಶಿವಕಾಂತಿನಗರಕ್ಕೆ ಹೊರಟನು. 'ತನ್ನ ನಗರದ ಬಳಿಗೆ ಶ್ರೀ ರಾಮಾದಿಗಳು ಬಂದಿರುವರೆಂಬ ವರ್ತಮಾನವನ್ನು ಕೇಳಿ ಕಂಬುಕಂಠನು ಬಹಳ ವಿಜೃಂಭಣೆಯಿಂದ ಅವರನ್ನು ಎದುರುಗೊಂಡು, ಉಚಿತವಾದ ಸತ್ಕಾರಗಳಿಂದ ಪರಿ ಪೂರ್ಣವಾದ ಮಂದಿರಗಳಲ್ಲಿ ವಾಸಮಾಡಿಸಿದನು. ಆ ಕಾಲದಲ್ಲಿ ಶ್ರೀ ರಾಮ ನನ್ನು ನೋಡಬೇಕೆಂದು ಜನಗಳ ಸಮುದಾಯವು ರಾಜಬೀದಿಗಳಲ್ಲಿ ತರಂಗತರಂ ಗಗಳಾಗಿ ನಿಂತಿತ್ತು. ಯೂಪಕೇತುವನ್ನು ಆನೆಯ ಮೇಲೆ ಕುಳ್ಳಿರಿಸಿ ಉತ್ಸವವು ನಡೆಯಿತು. ವಿವಾಹಮಹೋತ್ಸವವು ಸಾಂಗವಾಗಿ ನೆರವೇರಿದ ಬಳಿಕ ಶ್ರೀ ರಾಮನು ಸಮಸ್ತ ಬಂಧುಗಳೊಡನೆ ಅಯೋಧ್ಯೆಗೆ ಪ್ರಯಾಣ ಮಾಡಿದನು. ಆ ಕಾಲದಲ್ಲಿ ಕಂಬುಕಂಠನು ವರಪಕ್ಷದವರಿಗೆ ಅಮೂಲ್ಯವಾದ ಆಭರಣಗಳನ್ನೂ, ವಸ್ತ್ರಗಳನ್ನೂ ಸಮರ್ಪಿಸಿದನು. ಮತ್ತು ತನ್ನ ಮಗಳಾದ ಮದನಸುಂದರಿಯನ್ನು ಯೂಪಕೇತುವಿನೊಡನೆ ಕಳುಹಿದನು. ಈ ರೀತಿ ಶ್ರೀರಾಮನು ಅತಿಸಂಭ್ರಮದಿಂದ ಪತ್ನೀಪುತ್ರರೊಡನೆ ಅಯೋಧ್ಯೆಯನ್ನು ಪ್ರವೇಶಿಸಿದನು. ಆಗ ನಗರವಾಸಿಗಳು ಶ್ರೀ ರಾಮನಿಗೆ ನಾನಾವಿಧವಾದ ಉತ್ಸವಗಳಿಂದ ಸಂತೋಷವನ್ನುಂಟುಮಾಡಿದ ರು. ಶ್ರೀ ರಾಮನು ಶುಭಮುಹೂರ್ತದಲ್ಲಿ ವಧೂವರರೊಡನೆ ಗೃಹಪ್ರವೇಶ ಮಾಡಿ

ದನು. ಯೂಪಕೇತುವಿನ ವಿವಾಹಸಮಾರಂಭವೆಲ್ಲ ಮುಗಿದ ಬಳಿಕ ನಾರದರು ಶ್ರೀ ರಾಮನ ಅಪ್ಪಣೆಯನ್ನು ಪಡೆದು ಪ್ರಯಾಣಮಾಡಿದರು. ಶ್ರೀ ರಾಮನು ಅಯೋಧ್ಯೆಯಲ್ಲಿ ನಾನಾ ಭೋಗಗಳನ್ನು ಅನುಭವಿಸುತ್ತ ಸೀತಾಸಮೇತನಾಗಿ ವಾಸವಾಗಿದ್ದನು.

—ವಿವಾಹಕಾಂಡಃ ಸಮಾಪ್ತಃ—



## ರಾಜ್ಯಕಾಂಡ-ಪೂರ್ವಾರ್ಧ.

### ೧ನೆಯ ಪ್ರಕರಣ.

---

### ದೂರ್ವಾಸರ ತೃಪ್ತಿಯೂ, ನಿದ್ರಾದೇವಿಯ ಸಮಾಧಾನವೂ.

ಶ್ರೀರಾಮನು ಪುತ್ರಮಿತ್ರರೊಡನೆ ಸುಖದಿಂದ ಪ್ರಜಾರಕ್ಷಣೆಮಾಡುತ್ತಿರಲು, ದೂರ್ವಾಸರು ಆತನ ಮಹಿಮೆಯನ್ನು ಭೂಲೋಕದಲ್ಲಿ ಪ್ರಸಿದ್ಧಗೊಳಿಸುವದಕ್ಕಾಗಿ ಆತನ ಮಂದಿರಕ್ಕೆ ದಯಮಾಡಿಸಿದರು. ಆ ಮಹರ್ಷಿಗಳನ್ನು ನೋಡಿ ದೂತರು ಏಕಾಂತ ಗೃಹದಲ್ಲಿ ವಾಸಮಾಡಿದ್ದ ಶ್ರೀರಾಮನಿಗೆ ಈ ವೃತ್ತಾಂತವನ್ನು ತಿಳುಹಿದರು. ಶ್ರೀರಾಮನು ಈ ಮಾತುಗಳನ್ನು ಕೇಳಿದೊಡನೆ ಸಿಂಹಾಸನದಿಂದ ಎದ್ದು ಸಮಸ್ತ ಪೂಜಾದ್ರವ್ಯಗಳನ್ನೂ ಸ್ವೀಕರಿಸಿ, ದೂರ್ವಾಸರು ನಿಂತಿರುವಲ್ಲಿಗೆ ಪಾದಚಾರಿಯಾಗಿ ನಡೆದನು. ಮತ್ತು ವಿಧ್ಯುಕ್ತರೀತಿಯಿಂದ ಆ ಮುನಿಗಳ ಪಾದಗಳನ್ನು ಪೂಜಿಸಿ ಒಳಕ್ಕೆ ಕರೆತಂದನು. ದೂರ್ವಾಸರು ತಮ್ಮ ಅರವತ್ತು ಸಾವಿರ ಮಂದಿ ಶಿಷ್ಯರೊಡನೆ ರಾಜಭವನವನ್ನು ಪ್ರವೇಶಿಸಿ ಉಚಿತವಾದ ಆಸನದ ಮೇಲೆ ಕುಳಿತರು. ಬಳಿಕ ಶ್ರೀರಾಮನು ಸೀತಾಸಮೇತನಾಗಿ ಷೋಡಶೋಪಚಾರಗಳಿಂದ ಆಮುನಿಯನ್ನು ಪೂಜಿಸಿದನು. ದೂರ್ವಾಸರೂ ಕೈಜೋಡಿಸಿಕೊಂಡು ನಿಂತಿರುವ ಶ್ರೀರಾಮನನ್ನು ನೋಡಿ "ಹೇ ರಾಮಚಂದ್ರನೇ, ನಾನು ಒಂದು ಸಾವಿರ ವರ್ಷಗಳಿಂದ ಉಪವಾಸ ಮಾಡಿರುವೆನು. ಈ ದಿವಸ ಪಾರಣೆ ಮಾಡಬೇಕು. ನನ್ನ ಶಿಷ್ಯರೂ ಬಹಳ ಬಳಲಿರುವರು. ಆದ್ದರಿಂದ ಧೇನು, ಮಣಿ, ಅಗ್ನಿ ಇವುಗಳ ಸಂಬಂಧವಿಲ್ಲದ ಷಡ್ರಸಗಳಿಂದ ಯುಕ್ತವಾದ ಅನ್ನವನ್ನು ನಮಗೆ ಸಿದ್ಧಪಡಿಸು. ನಮ್ಮ ಶಿವಪೂಜೆಗೆ ಅಲೌಕಿಕವಾದ ಪುಷ್ಪಗಳು ಬೇಕಾಗುವವು. ನಿನ್ನಲ್ಲಿ ಈ ಎಲ್ಲ ಅನುಕೂಲಗಳು ದೊರೆಯಬಹುದೆಂದು ನಾವು ಇಲ್ಲಿಗೆ ಬಂದಿರುವೆವು. ಯೋಗ್ಯತೆ ಇಲ್ಲವಾದರೆ, ಈಗಲೆ ಖಂಡಿತವಾಗಿ ಹೇಳು. ಮುಂದೆ ಇನ್ನೇನಾದರೂ ಪ್ರಯತ್ನ ಮಾಡಬೇಕಾಗುವದು" ಎಂದು ಮಾತನಾಡಿದರು. ಮಹರ್ಷಿಗಳ ಈ ವಚನಗಳನ್ನು ಕೇಳಿ ಶ್ರೀರಾಮನು 'ಮಹಾನುಭಾವರೇ, ತಮ್ಮ ಅನುಗ್ರಹದಿಂದ ಯಾವ ಪದಾರ್ಥಗಳಿಗೂ ಸಂಕೋಚವಿಲ್ಲ. ತಮ್ಮ ನಿತ್ಯಕೃತ್ಯಗಳೆಲ್ಲ ನೆರವೇರಲಿ' ಎಂದು ವಿಜ್ಞಾಪಿಸಿದನು. ಅನಂರ ದೂರ್ವಾಸರು 'ಸಮಸ್ತ ಪದಾ

ರ್ಥಗಳನ್ನೂ ಸಿದ್ಧಪಡಿಸಿದರು. ಈಗ ಸರಯೂ ನದಿಯಲ್ಲಿ ಸ್ನಾನವಾದಿ ಆಹ್ನಿಕಗೆ ಳನ್ನು ತೀರಿಸಿಕೊಂಡು ಬರುವೆವು' ಎಂದು ಶ್ರೀರಾಮನಿಗೆ ತಿಳುಹಿ ಶಿಷ್ಯರೊಡನೆ ನದಿಗೆ ಪ್ರಯಾಣ ಮಾಡಿದರು.

ಇತ್ತ ಸೀತೆ, ಲಕ್ಷ್ಮಣ, ಭರತ ಇವರೆಲ್ಲರಿಗೂ ಈ ವೃತ್ತಾಂತವು ತಿಳಿಯಿತು. ಆಗ ಅವರು 'ಅಹಹ, ಇದೇನಾಶ್ಚರ್ಯ? ಅಗ್ನಿ, ಧೇನು, ಮಣಿ, ಇವುಗಳ ಸಂಪರ್ಕವಿಲ್ಲದೆ ಭೋಜ್ಯಪದಾರ್ಥಗಳು ಹ್ಯಾಗಾದಾವು? ಮುನಿಗಳಾದರೆ ಬಹಳ ಕೋಪಿಷ್ಠರು!' ಎಂದು ಪರಸ್ಪರ ಮಾತನಾಡಲಾರಂಭಿಸಿದರು. ಅಷ್ಟರಲ್ಲಿ ಶ್ರೀರಾಮನು ಲಕ್ಷ್ಮಣನನ್ನು ಕರೆಸಿ 'ದೇವೇಂದ್ರನಿಗೆ ಒಂದು ಪತ್ರವನ್ನು ಬರೆದು ನನ್ನಲ್ಲಿಗೆ ತೆಗೆದುಕೊಂಡು ಬರತಕ್ಕದ್ದು' ಎಂದು ಅಜ್ಞಾಪಿಸಿ ಬರೆಯತಕ್ಕ ಸಮಾಚಾರಗಳನ್ನು ಹೇಳಿ ಕಳುಹಿದನು. ಲಕ್ಷ್ಮಣನು ಬರೆದು ತಂದ ಪತ್ರವನ್ನು ರಘುನಾಥನು ತನ್ನ ಬಾಣಕ್ಕೆ ಕಟ್ಟಿ, ಅದನ್ನು ಧನುಸ್ಸಿನಲ್ಲಿ ಸೇರಿಸಿ ಮೇಲಕ್ಕೆ ಹೊಡೆದನು. ಅದು ಒಂದು ಕ್ಷಣದಲ್ಲಿ ಸಭಾಮಧ್ಯದೊಳಗೆ ಕುಳಿತಿರುವ ದೇವೇಂದ್ರನ ಎದುರಿಗೆ ಹೋಗಿಬಿತ್ತು. ಆ ಶರವನ್ನು ನೋಡಿ ದೇವೇಂದ್ರನಿಗೆ ಆಶ್ಚರ್ಯವಾಯಿತು. ಮತ್ತು ಅದಕ್ಕೆ ಕಟ್ಟಿರುವ ಪತ್ರವನ್ನು ನೋಡುವಷ್ಟರಲ್ಲಿ ಶ್ರೀರಾಮನ ಮುದ್ರಿಕೆಯು ಗುರುತು ಕಂಗೊಳಿಸಿತು. ಆಗ ದೇವೇಂದ್ರನು ಆ ಪತ್ರವನ್ನು ದೇವತೆಗಳಿಗೆ ಕೇಳಿಸುವಂತೆ ಗಟ್ಟಿಯಾಗಿ ಓದಿದನು. ಅದರಲ್ಲಿ ನೀನು ಕಲ್ಪವೃಕ್ಷ, ಪಾರಿಜಾತ ಇವುಗಳನ್ನು ಈ ಕ್ಷಣದಲ್ಲಿ ನನ್ನ ಸಭೆಗೆ ತೆಗೆದುಕೊಂಡು ಬರತಕ್ಕದ್ದು. ಇಲ್ಲವಾದರೆ ನನ್ನ ಬಾಣಗಳ ವೇಗಕ್ಕೆ ಪಾತ್ರನಾಗಬೇಕಾಗುವದು.' ಎಂಬ ಅರ್ಥವನ್ನು ತಿಳಿದು ದೇವೇಂದ್ರನು ಆಕ್ಷಣವೆ ಎಲ್ಲ ಸಾಮಗ್ರಿಗಳನ್ನು ಸ್ವೀಕರಿಸಿ ಅಯೋಧ್ಯೆಗೆ ತೆರಳಿದನು. ಅಷ್ಟರಲ್ಲಿ ಶ್ರೀರಾಮನ ಬಾಣವು ಸ್ವರ್ಗದಿಂದ ಹಿಂದಕ್ಕೆ ಬಂದಿತ್ತು. ದೇವೇಂದ್ರನು ಬಂದ ವರ್ತಮಾನವನ್ನು ಕೇಳಿ ಲಕ್ಷ್ಮಣನು ಆತನನ್ನು ಎದುರುಗೊಂಡು ಯೋಗ್ಯ ಸತ್ಕಾರಗಳಿಂದ ಸಂತೋಷಗೊಳಿಸಿ, ಎಲ್ಲರನ್ನೂ ಶ್ರೀರಾಮನ ಸಭೆಗೆ ಕರೆತಂದನು. ಶ್ರೀರಾಮನನ್ನು ನೋಡಿ ದೇವೇಂದ್ರನು ಪರಮ ಹರ್ಷದಿಂದ ನಮಸ್ಕರಿಸಿ, ಕಲ್ಪವೃಕ್ಷ, ಪಾರಿಜಾತ ಕುಸುಮಗಳೇ ಮೊದಲಾದ ಸಮಸ್ತ ಸಾಮಗ್ರಿಗಳನ್ನು ಶ್ರೀರಾಮನಿಗೆ ಸಮರ್ಪಿಸಿ ಉಚಿತವಾದ ಆಸನದಲ್ಲಿ ಕುಳಿತನು.

ಇತ್ತ ನದಿಯಲ್ಲಿ ಸ್ನಾನಮಾಡಿ ತಮ್ಮ ನಿತ್ಯ ಕರ್ತವ್ಯಗಳಲ್ಲಿ ನಿರತರಾಗಿದ್ದ ದೂರ್ವಾಸರು ಒಬ್ಬ ಶಿಷ್ಯನನ್ನು ಕರೆದು 'ಎಲೈ ಶಿಷ್ಯನೆ, ಶ್ರೀರಾಮನು ಅಯೋಧ್ಯೆಯಲ್ಲಿ ಏನು ಮಾಡುತ್ತಿರುವನು? ಪದಾರ್ಥಗಳೆಲ್ಲ ಸಿದ್ಧವಾಗಿರುವವೋ? ಇಲ್ಲವೋ?

ನೋಡಿಕೊಂಡು ಬಾ' ಎಂದು ಆಜ್ಞಾಪಿಸಿದರು. ಬಳಿಕಲಾ ಶಿಷ್ಯನು ಅಯೋಧ್ಯೆಗೆ ಬಂದು ನೋಡುವಷ್ಟರಲ್ಲಿ ಶ್ರೀ ರಾಮನು ಸಭೆಯಲ್ಲಿ ಇಂದ್ರ, ಕಲ್ಪವೃಕ್ಷ, ಪಾರಿಜಾತಕುಸುಮಗಳು, ಸಭಾಸದರು ಇವರೊಡನೆ ಪರಮ ಸಂತೋಷದಿಂದ ಕುಳಿತಿದ್ದನು. ಇದೆಲ್ಲವನ್ನೂ ನೋಡಿ, ಶಿಷ್ಯನು ದೂರ್ವಾಸರ ಬಳಿಗೆ ಹೋಗಿ ಸಮಸ್ತ ವಿಷಯವನ್ನೂ ತಿಳುಹಿದನು. ಶಿಷ್ಯನ ಮಾತುಗಳನ್ನು ಕೇಳಿದೊಡನೆ ದೂರ್ವಾಸರು ಅಯೋಧ್ಯೆಗೆ ತೆರಳಿದರು. ಶ್ರೀ ರಾಮನು ನದಿಯಿಂದ ಬಂದ ಮಹರ್ಷಿಗಳನ್ನು ಉಚಿತವಾದ ಆಸನದಲ್ಲಿ ಕುಳ್ಳಿರಿಸಿ ಶಿವಪೂಜೆಗಾಗಿ ಪಾರಿಜಾತಪುಷ್ಪಗಳನ್ನು ಸಮರ್ಪಿಸಿದನು. ಈ ಕುಸುಮಗಳನ್ನು ಅದುವರೆಗೂ ಭೂಲೋಕದಲ್ಲಿ ಯಾರೂ ನೋಡಿರಲಿಲ್ಲ. ಬಳಿಕ ದೂರ್ವಾಸರು ವಿಧ್ಯುಕ್ತವಾದ ಕ್ರಮದಿಂದ ಶಿವಪೂಜೆಯನ್ನು ನೆರವೇರಿಸಿದರು. ಶ್ರೀ ರಾಮನು ಸಮಸ್ತ ಭೋಜನಪದಾರ್ಥಗಳನ್ನು ಸಿದ್ಧಪಡಿಸುವಂತೆ ಸೀತಾದೇವಿಗೆ ಆಜ್ಞಾಪಿಸಿದನು. ಆ ಪತಿವ್ರತೆಯು ಶುದ್ಧವಸ್ತ್ರಗಳನ್ನು ಧರಿಸಿ ಮಂಗಳದ್ರವ್ಯಗಳಿಂದ ಕಲ್ಪವೃಕ್ಷವನ್ನು ಪೂಜಿಸಿ, ಭಕ್ಷ್ಯಭೋಜ್ಯಗಳನ್ನು ಕೊಡಬೇಕೆಂದು ಪ್ರಾರ್ಥನೆ ಮಾಡಿದಳು. ಆ ಕಲ್ಪವೃಕ್ಷವು ನಾನಾವಿಧವಾದ ಸುವರ್ಣಪಾತ್ರೆಗಳನ್ನೂ, ಭಕ್ಷ್ಯಭೋಜ್ಯಗಳನ್ನೂ ಲೆಕ್ಕವಿಲ್ಲದಂತೆ ಸೀತಾದೇವಿಗೆ ಸಮರ್ಪಿಸಿತು. ಬಳಿಕ ದೂರ್ವಾಸರೇ ಮೊದಲಾದ ಸಮಸ್ತ ಋಷಿಗಳೂ ಭೋಜನಕ್ಕೆ ಕುಳಿತರು. ಅಷ್ಟು ಜನರಿಗೂ ಯಾವ ಪದಾರ್ಥವೂ ಕಡಿಮೆಯಾಗದಂತೆ ಕಲ್ಪವೃಕ್ಷವು ಆಗಾಗ್ಗೆ ಹೊಸಹೊಸ ಭಕ್ಷ್ಯಭೋಜ್ಯಗಳನ್ನು ಸಿದ್ಧಪಡಿಸುತ್ತಿತ್ತು. ದೂರ್ವಾಸರು ಅರವತ್ತು ಸಾವಿರ ಶಿಷ್ಯರೊಡನೆ ಪರಮಾನಂದದಿಂದ ಭೋಜನ ಮಾಡಿ, ಕೈತೊಳೆದುಕೊಂಡು ಯೋಗ್ಯವಾದ ಆಸನದಮೇಲೆ ಕುಳಿತು— 'ರಾಮಚಂದ್ರಾ, ನಿನ್ನ ಸಾಹಸದಿಂದ ಕಲ್ಪವೃಕ್ಷ ಪಾರಿಜಾತದ್ರುಮಗಳು ಭೂಲೋಕಕ್ಕೆ ಬಂದವು' ಎಂದು ನಾನಾಪ್ರಕಾರವಾಗಿ ಸ್ತೋತ್ರಮಾಡಿ—ಹೇ ಪ್ರಭೋ, ಆ ವೃಕ್ಷಗಳು ನಿನ್ನ ಅವತಾರ ಸಮಾಪ್ತಿಯಾಗುವವರೆಗೂ ಭೂಲೋಕದಲ್ಲಿರುವವು. ಮುಂದೆ ನಿನ್ನೊಡನೆ ಸ್ವರ್ಗವನ್ನೇ ಸೇರಲಿ' ಎಂದು ಹೇಳಿ, ಶ್ರೀ ರಾಮನ ಅಪ್ಪಣೆಯನ್ನು ಪಡೆದು ತಪೋವನಕ್ಕೆ ಪ್ರಯಾಣ ಮಾಡಿದರು.

ವಿಷ್ಣುದಾಸರು ರಾಮದಾಸರನ್ನು ಕುರಿತು—ಗುರುಗಳೇ, ಈಶ್ವರನ ಅವತಾರಗಳಲ್ಲಿ ರಾಮ-ಕೃಷ್ಣಾವತಾರಗಳೇ ಪೂರ್ಣಾವತಾರಗಳೆಂದು ಹೇಳಿದಿರಷ್ಟೇ. ಆವೆರಡಲ್ಲಿ ಯಾವ ಅವತಾರವು ಶ್ರೇಷ್ಠವಾದದ್ದು.' ಎಂದು ಪ್ರಶ್ನೆ ಮಾಡಿದರು. ಅದಕ್ಕೆ ರಾಮದಾಸರು ಹೇಳುತ್ತಾರೆ:—ಎಲೈ ಶಿಷ್ಯನೇ ಕೇಳು. ಈ ವಿಷಯದಲ್ಲಿ

ಒಂದು ಇತಿಹಾಸವನ್ನು ಹೇಳುವೆನು. ಪೂರ್ವದಲ್ಲಿ ಅಯೋಧ್ಯಾನಗರಿಯಲ್ಲಿ ರಾಮನೆಂಬ ರಾಮೋಪಾಸಕನಿದ್ದನು ದ್ವಾರಕೆಯಲ್ಲಿ ಕೃಷ್ಣನೆಂಬ ಕೃಷ್ಣೋಪಾಸಕನಿದ್ದನು. ಇವರಿಬ್ಬರೂ ಮಾಘಮಾಸದಲ್ಲಿ ಸ್ನಾನಮಾಡಲು ಭಾಗೀರಥಿಗೆ ಪ್ರಯಾಣ ಮಾಡಿದರು. ಅವರು ಕಾಶಿಯಲ್ಲಿ ಪ್ರತಿದಿವಸವೂ ಗಂಗೆಯಲ್ಲಿ ಸ್ನಾನಮಾಡಿ ಪುರಾಣ ಕೇಳುವದಕ್ಕೆ ಹೋಗುತ್ತಿದ್ದರು. ಒಂದಾನೊಂದು ದಿವಸ ಪುರಾಣವೆಲ್ಲ ಮುಗಿದಮೇಲೆ ಇವರಿಬ್ಬರಿಗೂ ಜಗಳಬಿತ್ತು. ರಾಮಾವತಾರವೇ ಶ್ರೇಷ್ಠವೆಂದು ರಾಮೋಪಾಸಕನೂ, ಕೃಷ್ಣಾವತಾರವೇ ಶ್ರೇಷ್ಠವೆಂದು ಕೃಷ್ಣೋಪಾಸಕನೂ ಕೂಗಾಡಲಾರಂಭಿಸಿದರು. ಹೀಗೆ ಅವರಿಬ್ಬರೂ ರಾಮ-ಕೃಷ್ಣರನ್ನು ಪರ್ಯಾಯದಿಂದ ದೂಷಿಸಲಾರಂಭಿಸಿದರು. ಈ ರೀತಿ ಒಂದು ಘಂಟೆಯವರೆಗೂ ವಾದನಡೆಯಿತು. ಪುರಾಣಕ್ಕೆ ಬಂದ ಜನರೆಲ್ಲರೂ ಈ ತಮಾಷೆಯನ್ನು ನೋಡುತ್ತ ಕುಳಿತರು. ಅಷ್ಟರಲ್ಲಿ 'ರಾಮಾವತಾರವೇ ಶ್ರೇಷ್ಠವಾದದ್ದು. ರಾಮಾವತಾರದ ಗುಣಗಳಿಗೆ ಕೃಷ್ಣಾವತಾರದ ಗುಣಗಳು ಏನೂ ಮಹತ್ವದವಲ್ಲ' ಎಂದು ಅಶರೀರವಾಣಿಯಾಯಿತು. ಈ ವಚನಗಳನ್ನು ಕೇಳಿ ಸಮಸ್ತಜನರೂ ಸಂತೋಷದಿಂದ (ಚಪ್ಪಾಳೆ)ಬಾರಿಸಿದರು. ಆಗ ಕೃಷ್ಣೋಪಾಸಕನು ಖಿನ್ನನಾಗಿ ರಾಮೋಪಾಸಕನಿಗೆ ಶರಣಾಗತನಾದನು. ರಾಮೋಪಾಸಕನು ಅತಿ ವಿನಯದಿಂದ ಕೃಷ್ಣೋಪಾಸಕನನ್ನು ವಂದಿಸಿ, ಹತ್ತರ ಕುಳ್ಳಿರಿಸಿಕೊಂಡು 'ಮಿತ್ರನೇ, ನಾನು ವಿನೋದಕ್ಕಾಗಿ ಆಡಿದ ಮಾತುಗಳನ್ನು ನೀನು ಸತ್ಯವೆಂದು ತಿಳಿದೆಯಲ್ಲ! ಎಂದಿಗೂ ಹಾಗೆ ತಿಳಿಯಬಾರದು. ವಿವೇಕಿಗಳು ರಾಮ-ಕೃಷ್ಣರಿಗೆ ಎಂದಿಗೂ ಭೇದವನ್ನೆಣಿಸಲಾರರು. ರಾಮನೇ ಕೃಷ್ಣ. ಕೃಷ್ಣನೇ ರಾಮ. ಮೂಢಜನರು ಇವರಿಗೆ ಭೇದಕಲ್ಪನೆ ಮಾಡುವರು. ಉಪಾಸಕನು ಉಪಾಸ್ಯದೇವತೆಯಲ್ಲಿ ಗೌರವವಿಡುವದು ಯೋಗ್ಯವಾದದ್ದೇ ಸರಿ. ಆದರೆ ಇತರ ದೇವತೆಗಳನ್ನು ದೂಷಿಸುವದು ತಪ್ಪಾದ ಕೆಲಸ' ಎಂದು ಹೇಳಿ ಎಲ್ಲ ಜನರಿಗೂ ಆನಂದವನ್ನುಂಟುಮಾಡಿದನು. ಸಾರಾಂಶ ಏಕಪತ್ನೀವ್ರತ, ಸತ್ಯಸಂಭಾಷಣೆ ಇತ್ಯಾದಿ ಗುಣಗಳಿಂದ ರಾಮಾವತಾರವು ಕೃಷ್ಣಾವತಾರಕ್ಕಿಂತ ಶ್ರೇಷ್ಠವೆನ್ನಬಹುದು. ಇರಲಿ.

ಒಂದಾನೊಂದು ಕಾಲದಲ್ಲಿ ಶ್ರೀ ರಾಮನು ಸಭಾಮಧ್ಯದಲ್ಲಿ ಕುಳಿತಿರಲು, ಆತನ ಎದುರಿಗಿರುವ ಒಂದು ದ್ರಾಕ್ಷೆಯ ಬಳ್ಳಿಯ ಹಂದರದ ಮೇಲೆ ಒಂದು ಬಡವಾದ ಕಾಗೆಯು ಬಂದು ಕೂತು ದೀನಸ್ವರದಿಂದ ಸುಮ್ಮನೆ ಕೂಗಲಾರಂಭಿಸಿತು. ಇದನ್ನು ನೋಡಿ, ಶ್ರೀರಾಮನು 'ಎಲೈ ಕಾಗಿಯೇ, ಯಾಕೆ ಇಷ್ಟು ಒದರುವೆ?

ನಿನಗೇನುಬೇಕು? ನಿನ್ನ ಕಣ್ಣು ಹೊರತು ಮಿಕ್ಕ ಯಾವ ವಸ್ತುವನ್ನು ಕೇಳಿದರೂ ಕೊಡುವೆನು' ಎಂದನು. ಒಡನೆ ಕಾಗೆಯು ಶ್ರೀ ರಾಮನ ಬಳಿಗೆ ಹಾರಿ ಬಂದು, ಆತನ ಪಾದಗಳಿಗೆ ನಮಸ್ಕರಿಸಿ,—'ಸ್ವಾಮಿ, ನನಗೆ ಈ ನೀಚವಾದ ಪ್ರಪಂಚಸುಖಗಳು ಯಾವವೂ ಬೇಕಿಲ್ಲ. ಯಾವಾಗಲೂ ನಿನ್ನ ನಾಮಸ್ಮರಣೆಯಲ್ಲಿ ನನ್ನ ಮನಸ್ಸು ಲೀನವಾಗಿರಲಿ' ಎಂದು ಪ್ರಾರ್ಥಿಸಿತು. ಶ್ರೀ ರಾಮನು ಅದರ ಇಷ್ಟಾರ್ಥವನ್ನು ಪೂರ್ಣಮಾಡಿ, 'ಎಲೈ ಕಾಗೆಯೇ, ನಿನಗೆ ದ್ವೀಪಾಂತರಗಳಲ್ಲಿ ನಡೆದ ಭೂತಭವಿಷ್ಯದ್ವರ್ತಮಾನ ಕಾಲಗಳ ವಿಷಯಗಳು ತಿಳಿಯಲಿ. ನಿನ್ನ ಚೇಷ್ಟೆಗಳಿಂದ ಜನರು ಶುಭಾಶುಭಗಳನ್ನು ಊಹಿಸಲಿ. ನೀನು ಪಿಂಡಗಳನ್ನು ಸ್ಪರ್ಶಮಾಡುವದರಿಂದ ಪ್ರೇತಗಳ ಮನೋಗತಗಳು ಸಿದ್ಧವಾದವೆಂದು ಜನರು ತಿಳಿಯಲಿ. ಗ್ರಾಮದಿಂದ ಅಥವಾ ಮನೆಯಿಂದ ಪ್ರಯಾಣ ಮಾಡುವ ಜನರ ಬಲಭಾಗಕ್ಕೆ ನೀನು ಹಾರಿದೆಯೆಂದರೆ ಅವರ ಕಾರ್ಯಗಳು ಸಿದ್ಧವಾಗಲಿ' ಇತ್ಯಾದಿ ವರಗಳನ್ನು ಕೊಟ್ಟನು. ಕಾಗೆಯು ಶ್ರೀ ರಾಮನ ಅಪ್ಪಣೆಯನ್ನು ಪಡೆದು ಹಾರಿ ಹೋಯಿತು. ಹೀಗೆ ಅನೇಕ ವಿನೋದಗಳನ್ನು ಮಾಡುತ್ತ ಶ್ರೀರಾಮನು ರಾಜ್ಯ ಸಂರಕ್ಷಣೆ ಮಾಡುತ್ತಿದ್ದನು.

ಒಂದಾನೊಂದು ದಿವಸ ಶ್ರೀ ರಾಮನು ಪಾರಿಜಾತವೃಕ್ಷದ ಬುಡದಲ್ಲಿ ಸುವರ್ಣದ ಮಂಚದ ಮೇಲೆ ಬೆಳದಿಂಗಳಿಂದ ಆಹ್ಲಾದಪಡುತ್ತ ಮಲಗಿದ್ದನು. ಆಗ ಸೀತಾದೇವಿಯು ಬಹಿಷ್ಠಳಾಗಿದ್ದಳು. ಆ ದಿವಸ ಅಯೋಧ್ಯಾನಗರಿಯ ಬೈಲುಭಾಗದಲ್ಲಿ ರಾಮಕೀರ್ತನವು ನಡೆದಿತ್ತಾದ್ದರಿಂದ ಎಲ್ಲ ದಾಸದಾಸಿಯರೂ ಅಲ್ಲಿಗೆ ಹೋಗಿದ್ದರು. ಈ ಸಮಯವನ್ನು ನೋಡಿ ಅಯೋಧ್ಯೆಯಲ್ಲಿರುವ ನೂರು ಜನ ಸ್ತ್ರೀಯರು ಶ್ರೀ ರಾಮನ ಸೌಂದರ್ಯಕ್ಕೆ ಬೆರಗಾಗಿ ಆತನನ್ನು ವಶಮಾಡಿಕೊಳ್ಳಬೇಕೆಂದು ಆತನಿರುವ ಸ್ಥಳಕ್ಕೆ ಬಂದರು. ಆಗ ಶ್ರೀ ರಾಮನು ನಿದ್ರೆ ಮಾಡುತ್ತಿದ್ದನು. ಆ ತರುಣಿಯರು ಶ್ರೀ ರಾಮನನ್ನು ಎಚ್ಚರಗೊಳಿಸಬೇಕೆಂದು ಆತನ ಪಾದಗಳನ್ನು ಮುಟ್ಟಿದರು. ಶ್ರೀ ರಾಮನು ತಟ್ಟನೆ ಎದ್ದು ಕುಳಿತು, ಸರ್ವಾಭರಣಭೂಷಿತರಾದ ಸರ್ವಾವಯವಸುಂದರಿಯರಾದ ತರುಣಿಯರನ್ನು ನೋಡಿ ಬೆರಗಾಗಿ, 'ನೀವು ಯಾರು! ಇಂಥ ಸಮಯದಲ್ಲಿ ನೀವು ಇಲ್ಲಿಗೆ ಬಂದ ಕಾರಣವೇನು?' ಎಂದು ಪ್ರಶ್ನೆಮಾಡಿದನು. ಆಗಲಾ ಯುವತಿಯರು ತಲೆಬಾಗಿಸಿ, 'ಜಗನ್ಮೋಹನನೇ, ನೀನು ಎಲ್ಲ ವಿಚಾರಗಳನ್ನೂ ಬಲ್ಲವನೇ ಇದ್ದೀ. ಅಬಲೆಯರಾದ ನಾವು ಬಾಯಿಂದ ಬೇರೆ ಹೇಳಬೇಕೆ' ಎಂದರು. ಶ್ರೀ ರಾಮನು ತನ್ನ ಏಕಪತ್ನೀವ್ರತದ

ನಿಯಮವನ್ನು ತಿಳುಹಿ 'ಎಲೈ ತರುಣಿಯರೇ, ಮನೆಗೆ ತೆರಳಿರಿ. ನನ್ನ ರಾಜ್ಯದಲ್ಲಿ ತಿಲಮಾತ್ರನಾದರೂ ಅಧರ್ಮದ ಗಂಧವಿರಬಾರದು. ನಿಮ್ಮ ಅಪರಾಧಗಳನ್ನೂ ಈ ದಿವಸ ಕ್ಷಮಿಸಿರುವೆನು' ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಆ ತರುಣಿಯರು ಕಣ್ಣುಗಳಲ್ಲಿ ನೀರು ಸುರಿಸುತ್ತ ಶ್ರೀ ರಾಮನ ಪಾದಗಳಮೇಲೆ ಬಿದ್ದರು. ಆಗ ಶ್ರೀ ರಾಮನು 'ಎಲೈ ಸುಂದರಿಯರೆ, ನಾನು ದ್ವಾಪರಯುಗದಲ್ಲಿ ಕೃಷ್ಣಾವತಾರ ಮಾಡುವೆನು. ಆಗ ನೀವೆಲ್ಲರೂ ರಾಜರ ಪುತ್ರಿಯರಾಗಿ ಜನಿಸಿರಿ. ನಿಮ್ಮನ್ನು ಭೌಮಾಸುರನೆಂಬ ರಾಕ್ಷಸನು ಸೆರೆಯಲ್ಲಿಡುವನು. ನಾನು ಆ ರಾಕ್ಷಸನನ್ನು ನಾಶಮಾಡಿ ನಿಮ್ಮೆಲ್ಲರನ್ನೂ ವಿವಾಹ ಮಾಡಿಕೊಳ್ಳುವೆನು. ಈ ಅವತಾರದಲ್ಲಿ ಮಾತ್ರ ಸರ್ವಥಾ ನಿಮ್ಮ ಮನೋರಥವು ನೆರವೇರಲಾರದು' ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ತರುಣಿಯರು ಸಂತೋಷದಿಂದ ತಮ್ಮ ತಮ್ಮ ಮನೆಗೆ ತೆರಳಿದರು.

ಬಳಿಕ ಶ್ರೀ ರಾಮನು ದಾಸದಾಸಿಯರನ್ನು ಎಷ್ಟು ಕೂಗಿದರೂ ಒಬ್ಬರೂ ಮಾತಾಡಲಿಲ್ಲ. ಹೊರಗೆ ಬಂದು ನೋಡುವಷ್ಟರಲ್ಲಿ ಯಾವ ಸ್ಥಳದಲ್ಲಿ ನೋಡಿದರೂ ಯಾರೂ ಕಾಣಿಸಲಿಲ್ಲ. ಅನಂತರ ಶ್ರೀ ರಾಮನು ಲಕ್ಷ್ಮಣನನ್ನು ಕೂಗಿದನು. ಶ್ರೀ ರಾಮನ ಈ ಧ್ವನಿಯನ್ನು ಕೇಳಿ ಊರ್ಮಿಳೆಯು ಎಚ್ಚತ್ತು ಶ್ರೀ ರಾಮನು ಕೂಗುತ್ತಿರುವನೆಂದು ಪತಿಗೆ ತಿಳುಹಿದಳು. ಲಕ್ಷ್ಮಣನು ಈ ಮಾತುಗಳನ್ನು ಕೇಳಿ ಭಯದಿಂದ ಅಣ್ಣನ ಬಳಿಗೆ ಬಂದು ನಿಂತನು. ಶ್ರೀರಾಮನು ನಡೆದ ವೃತ್ತಾಂತವನ್ನೆಲ್ಲ ತಿಳುಹಿ, ದೂತರೂ; ದಾಸಿಯರೂ ಎಲ್ಲಿ ಹೋಗಿರುವರೋ, ವಿಚಾರಮಾಡಿ ಕರೆತರುವಂತೆ ಆಜ್ಞಾಪಿಸಿದನು. ಲಕ್ಷ್ಮಣನು ಶೋಧಮಾಡುತ್ತಿರಲು, ದೂತರು ರಾಮನ ಕಥೆಯನ್ನು ಕೇಳಲು ಊರಹೊರಗೆ ಹೋಗಿರುವದಾಗಿ ತಿಳಿಯಬಂತು. ಅನಂತರ ಸೌಮಿತ್ರಿಯು ಅವರೆಲ್ಲರನ್ನೂ ಕರೆತರುವಂತೆ ತನ್ನ ದೂತರಿಗೆ ಆಜ್ಞಾಪಿಸಿದನು. ರಾಮಕಥೆಯನ್ನು ಕೇಳುತ್ತ ಕುಳಿತಿದ್ದ ದೂತರು ಲಕ್ಷ್ಮಣನ ದೂತರ ಮಾತುಗಳಿಗೆ ಹೆದರಿದರು. ಅವರಲ್ಲಿ ಕೆಲವರು ಕೀರ್ತನವಾದಮೇಲೆ ಹೋಗೋಣವೆಂದರು. ಕೆಲವರು ಈಗಲೇ ಹೋಗೋಣ ನಡೆಯಿರಿ, ಯಜಮಾನರು ಕರೆಸಿದಮೇಲೆ ಕೂಡ್ರುವದು ಧರ್ಮವಲ್ಲ ಎಂದರು. ಕೆಲವರು ನಾವು ರಾಮಕೀರ್ತನೆಗೆ ಹೋಗಿರುವೆವೆಂದು ಶ್ರೀ ರಾಮನಿಗೆ ಬಹಳ ಸಂತೋಷವಾಗಿರಬಹುದು, ಎಂದು ಮನಸ್ಸಿಗೆ ಬಂದಂತೆ ಮಾತನಾಡಲುಪಕ್ರಮಿಸಿದರು. ಸಾರಾಂಶ ರಾಮಕಥೆಯು ಮುಗಿಯುವವರೆಗೂ ಯಾರೂ ಹೊರಡಲು ಇಷ್ಟಪಡಲಿಲ್ಲ. ಈ

ವರ್ತಮಾನವು ಶ್ರೀ ರಾಮನಿಗೆ ತಿಳಿಯಿತು. ಆಗ ಶ್ರೀ ರಾಮನು ಮನಸ್ಸಿನಲ್ಲಿ 'ದೂತರು ಈಗ ನನ್ನ ಭಜನೆಯಲ್ಲಿ ಆಸಕ್ತರಾಗಿರುವರು. ಆದ್ದರಿಂದ ನಾನು ಅವರಿಗೆ ಈ ವಿಷಯದಲ್ಲಿ ಶಿಕ್ಷೆಮಾಡಲಾರೆ. ಆದರೆ ಅವರಿಗೆ ಇದು ಯೋಗ್ಯವಾದ ದ್ದಲ್ಲ' ಎಂದು ಅಂದುಕೊಂಡನು. ಅಷ್ಟರಲ್ಲಿ ನಗರದ ಹೊರಗೆ ಯಾರೋ ಒಬ್ಬ ಸ್ತ್ರೀಯು ಅಳುವ ಧ್ವನಿಯು ಕೇಳಿತು.

ಅಳುವವರ್ಯಾರೋ ವಿಚಾರಿಸಬೇಕೆಂದು ಶ್ರೀ ರಾಮನು ಪುಷ್ಪಕವನ್ನೇರಿ ಸರಯೂ ನದಿಯ ಕಡೆಗೆ ತೆರಳಿದನು. ಆ ನದೀತೀರದಲ್ಲಿ ಕಪ್ಪಾದ ವಸ್ತ್ರಗಳದ ಒಬ್ಬ ಸ್ತ್ರೀಯು ಕಣ್ಣುಗಳಲ್ಲಿ ನೀರು ಸುರಿಸುತ್ತ ರೋದನ ಮಾಡುತ್ತಿದ್ದಳು. ಅಲ್ಲಿಗೆ ವಿಮಾನವನ್ನು ಇಳಿಸಿ ಶ್ರೀ ರಾಮನು 'ಎಲೈ ತರುಣಿಯೇ, ನೀನು ಯಾರು? ಇಂಥ ಹೊತ್ತಿನಲ್ಲಿ ಯಾಕೆ ರೋದನ ಮಾಡುವೆ? ಎಂದು ಕೇಳಿದನು. ಆಗಲಾ ತರುಣಿ ಯು "ಸ್ವಾಮಿ, ನಾನು ಬಹು ದಿವಸಗಳಿಂದಲೂ ಇಲ್ಲಿ ಅಳುತ್ತ ಕುಳಿತಿದ್ದೆನು. ಯಾವದೋ ಒಂದು ಸುಕೃತದಿಂದ ಈ ದಿವಸ ನಿನ್ನ ದರ್ಶನವಾಯಿತು. ನಾನು ನಿದ್ರಾದೇವಿಯೆಂದು ಪ್ರಸಿದ್ಧಿಯನ್ನು ಹೊಂದಿರುವೆನು. ಬ್ರಹ್ಮನು ನನ್ನನ್ನು ಸೃಷ್ಟಿಮಾಡಿ ಕುಂಭಕರ್ಣನಿಗೆ ಕೊಟ್ಟಿದ್ದನು. ಅವನನ್ನು ಆಶ್ರಯಿಸಿ ಬಹಳ ದಿವಸಗಳವರೆಗೆ ಸುಖ ದಿಂದಿದ್ದೆನು. ನೀನು ಈಗ ಕೆಲವು ಕಾಲದ ಹಿಂದೆ ಲಂಕೆಗೆ ಬಂದಾಗ ಕುಂಭಕರ್ಣ ನನ್ನು ಕೊಂದೆಯಷ್ಟೆ? ಆಗಿನಿಂದ ಅನಾಥಳಾಗಿರುವೆನು. ನಾನು ಬ್ರಹ್ಮದೇವನ ಬಳಿಗೆ ಹೋಗಿ ನಡೆದ ವೃತ್ತಾಂತವನ್ನು ತಿಳುಹಿದೆನು. ಆತನು ನಿನ್ನ ಸನ್ನಿಧಿಗೆ ಹೋಗುವಂತೆ ಅಜ್ಞೆಮಾಡಿದನು. ನಾನು ಬಹು ದಿವಸಗಳ ಮುಂಚೆ ಇಲ್ಲಿಗೆ ಬಂದವಳಾದರೂ ದೂತರ ಭಯದಿಂದ ನಗರಿಯನ್ನು ಪ್ರವೇಶಿಸಲು ಹೆದರಿದೆನು" ಎಂದು ಪ್ರಾರ್ಥನೆ ಮಾಡಿದಳು. ಆಗ ಶ್ರೀ ರಾಮನು "ಎಲೈ ನಿದ್ರಾದೇವಿಯೇ, ನಿನಗೆ ಯೋಗ್ಯವಾದ ಸ್ಥಾನಗಳನ್ನು ಹೇಳುವೆನು ಕೇಳು. ಈ ಲೋಕದಲ್ಲಿ ಯಾವ ಪಾಪಿಜನರು ರಾಮಭಜನೆ ಮಾಡುವರೋ, ಯಾವ ದುಷ್ಟರು ಪುರಾಣ ಶ್ರವಣ, ವೇದಪಠಣ, ಜಪಪೂಜನ ಇತ್ಯಾದಿಗಳಲ್ಲಿ ಪ್ರವರ್ತಿಸುವರೋ? ಅಂಥಾ ಮಾನವರಲ್ಲಿ ವಾಸಮಾಡು. ಬಳಲಿದ ವಿದ್ಯಾರ್ಥಿಗಳು, ಜಾಗರಣೆ, ಉಪವಾಸ ಇತ್ಯಾದಿಗಳನ್ನು ಮಾಡುವವರು ಇವರಲೆಲ್ಲ ನೀನು ವಾಸಮಾಡಬಹುದು" ಎಂದು ಮಾತನಾಡಿದನು. ಈ ವಚನಗಳನ್ನು ಕೇಳಿ ನಿದ್ರಾದೇವಿಗೆ ಬಹಳ ಹರ್ಷವಾಯಿ ತು. ಆಕೆಯು ಮತ್ತೆ ಶ್ರೀ ರಾಮನಿಗೆ ನಮಸ್ಕಾರ ಮಾಡಿ ತನ್ನ ವಾಸಸ್ಥಾನಗಳಿಗೆ ತೆರಳಿದಳು. ಶ್ರೀ ರಾಮನು ಅಯೋಧ್ಯೆಗೆ ಬಂದು ಆನಂದದಿಂದ ನಿದ್ರೆಮಾಡಿದನು.

## ೨ನೆಯ ಪ್ರಕರಣ.

### ಶತಮುಖ ರಾವಣಾದಿಗಳ ವಧ.

ಪ್ರಿಯ ಶಿಷ್ಯನೇ, ನಿನಗೆ ಇನ್ನೊಂದು ಸಂಗತಿಯನ್ನು ಹೇಳುವೆನು ಕೇಳು. ಶ್ರೀ ರಾಮನು ಲಂಕೆಯಲ್ಲಿ ರಾಕ್ಷಸರನ್ನು ನಾಶಮಾಡುತ್ತಿರುವಾಗ ಕುಂಭಕರ್ಣನ ಮಗನಾದ ನಿಕುಂಭನ ಹೆಂಡತಿಯು ಗರ್ಭಿಣಿಯಾಗಿದ್ದಳು. ಕರುಣಾನಿಧಿಯಾದ ಶ್ರೀ ರಾಮನು ಆ ತರುಣಿಯನ್ನು ಮಾತ್ರ ನಾಶಮಾಡಲಿಲ್ಲ. ರಾಮ ರಾವಣರ ಯುದ್ಧವಾದ ಕೆಲವು ಕಾಲದಮೇಲೆ ಆ ರಾಕ್ಷಸಿಯು ಕೌಂಡ್ರಕನೆಂಬ ಮಗನನ್ನು ಪಡೆದಳು. ಆ ರಾಕ್ಷಸನು ಮಾಯಾನಗರಿಯಲ್ಲಿ ವಾಸಮಾಡುವ ಶತಮುಖರಾವಣನ ಸಹಾಯದಿಂದ ವಿಭೀಷಣನನ್ನು ರಾಜಕಾರ್ಯದಿಂದ ತಪ್ಪಿಸಿ ಬಹಳ ತೊಂದರೆಗೊಳಿಸಿದನು. ವಿಭೀಷಣನು ಆ ಬಾಧೆಯನ್ನು ಸಹಿಸಲಾರದೆ ಶ್ರೀ ರಾಮನಿಗೆ ಶರಣಾಗತನಾಗಿ, ತನ್ನ ಸಮಸ್ತ ದುಃಖವನ್ನೂ ಆತನಿಗೆ ತಿಳುಹಿದನು. ಆಗ ಶ್ರೀ ರಾಮನು ಸೀತೆಯೊಡನೆ ಪುಷ್ಪಕವಿಮಾನದಲ್ಲಿ ಕುಳಿತು ಲಂಕೆಗೆ ಪ್ರಯಾಣ ಮಾಡಿದನು. ವಿಭೀಷಣನು ಕೌಂಡ್ರಕನ ಹೆದರಿಕೆಯಿಂದ ಶ್ರೀ ರಾಮನ ವಿಮಾನದಲ್ಲಿಯೇ ಕುಳಿತಿದ್ದನು. ಲಂಕೆಯಲ್ಲಿ ಕೌಂಡ್ರಕನೇ ಮೊದಲಾದ ರಾಕ್ಷಸರಿಗೂ ಶ್ರೀ ರಾಮನಿಗೂ ಬಹಳ ದಿವಸಗಳ ವರೆಗೆ ಯುದ್ಧ ನಡೆಯಿತು. ಕೊನೆಗೆ ಶ್ರೀ ರಾಮನು ಕೌಂಡ್ರಕನನ್ನೂ, ಸೀತಾದೇವಿಯು ಶತಮುಖರಾವಣನನ್ನೂ ನಾಶಮಾಡಿದರು. ವಿಭೀಷಣನಿಗೆ ಲಂಕಾರಾಜ್ಯವನ್ನಿತ್ತು ಸೀತಾರಾಮರು ಅಯೋಧ್ಯೆಗೆ ಬಂದರು. ಮತ್ತೆ ಕೆಲವು ಕಾಲದಮೇಲೆ ವಿಭೀಷಣನು ಪತ್ನೀಪುತ್ರರೊಡನೆ ಥಟಥಟನೆ ನಡುಗುತ್ತ ಸಭಾಮಧ್ಯದಲ್ಲಿ ಕುಳಿತಿರುವ ಶ್ರೀ ರಾಮನ ಪಾದಕಮಲಗಳಿಗೆರಗಿದನು. ಆತನ ಕಣ್ಣುಗಳಲ್ಲಿ ನೀರು ಥಟಥಟನೆ ಉದುರುತ್ತಿತ್ತು. ಮುಖವು ದುಃಖದಿಂದ ಬಾಡಿತ್ತು. ಇಂಥಾ ವಿಭೀಷಣನನ್ನು ನೋಡಿ ಶ್ರೀ ರಾಮನು 'ಎಲೈ ಭಕ್ತಾಗ್ರೇಸರನೆ, ಇಷ್ಟು ವ್ಯಸನಕ್ಕೆ ಕಾರಣವೇನು?' ಎಂದು ಪ್ರಶ್ನೆ ಮಾಡಿದನು. ವಿಭೀಷಣನು "ಹೇ ರಾಮಚಂದ್ರಾ, ನನ್ನನ್ನು ಸಂರಕ್ಷಿಸು. ಕುಂಭಕರ್ಣನಿಗೆ ಮೂಲಾ ನಕ್ಷತ್ರದಲ್ಲಿ ಒಬ್ಬ ಮಗನು ಹುಟ್ಟಿದ್ದನು. ಅವನನ್ನು ಒಂದು ವೃಕ್ಷದ ಕೆಳಗೆ ಬಿಸುಟಿದ್ದರು. ಅವನು ದೈವಯೋಗದಿಂದ ಅಲ್ಲೀ ಸಹಾಯ ಸಂಪತ್ತಿಗಳನ್ನು ಹೊಂದಿ ಬದುಕಿ

ಹನು. ಅವನು ಮೂಲಾ ನಕ್ಷತ್ರದಲ್ಲಿ ಹುಟ್ಟಿದ್ದರಿಂದಲೂ ವೃಕ್ಷಮೂಲದಲ್ಲಿ ಬದುಕಿದ್ದರಿಂದಲೂ ಆತನನ್ನು ಮೂಲಕಾಸುರನೆಂದು ಕರೆಯುವರು. ಈಗ ಆ ರಾಕ್ಷಸನು ತರುಣನಾಗಿರುವನು. ನಿನ್ನಿಂದ ರಾಕ್ಷಸ ವಂಶವೆಲ್ಲ ನಾಶವಾಯಿತೆಂಬ ವಾರ್ತೆಯನ್ನು ಕೇಳಿ ಅವನು ಅತಿ ಕೋಪದಿಂದ ಶ್ರೇಷ್ಠವಾದ ಬಲವನ್ನು ಸಂಪಾದಿಸಿ ನಮ್ಮೆಲ್ಲರನ್ನು ಸದೆಬಡಿಯಲು ಬ್ರಹ್ಮನನ್ನು ಕುರಿತು ಉಗ್ರವಾದ ತಪಸ್ಸು ಮಾಡಿದನು. ಅವನ ಉಗ್ರವಾದ ತಪಸ್ಸಿಗೆ ಬ್ರಹ್ಮದೇವನು ಪ್ರತ್ಯಕ್ಷನಾಗಿ ಉತ್ತಮವಾದ ವರಗಳನ್ನು ಕೊಟ್ಟಿರುವನು. ಅದರಿಂದ ಉದ್ಧತನಾಗಿ ಪಾತಾಳಲೋಕದಲ್ಲಿರುವ ರಾಕ್ಷಸರ ಸಹಾಯದಿಂದ ಆ ಮೂಲಕಾಸುರನು ಮೊದಲು ನನ್ನನ್ನು ನಾಶಮಾಡಬೇಕೆಂದು ಉದ್ಯುಕ್ತನಾದನು. ನಾನು ಐದಾರು ತಿಂಗಳವರೆಗೂ ಅವನೊಡನೆ ಹೋರಾಡಿದೆನು. ಆದರೂ ಪ್ರಯೋಜನವಾಗಲಿಲ್ಲ. ಇನ್ನು ಇಲ್ಲಿದ್ದರೆ ಪ್ರಾಣಗಳು ನಿಶ್ಚಯವಾಗಿ ಉಳಿಯುವದಿಲ್ಲವೆಂದು ತಿಳಿದು ಪತ್ನೀ-ಪುತ್ರರೊಡನೆ ಭೂಮಿಯಲ್ಲಿರುವ ಸುರಂಗಮಾರ್ಗದಿಂದ ಪಾರಾಗಿ ಇಲ್ಲಿಗೆ ಬಂದೆನು. ಆ ಮೂಲಕಾಸುರನು ಇಷ್ಟರಲ್ಲಿ ಇಲ್ಲಿಗೆ ಬರಬೇಕೆಂದು ಯೋಚಿಸಿರುವನು. ರಾಮಚಂದ್ರಾ, ಇನ್ನು ಸಾವಕಾಶ ಮಾಡಬೇಡ. ಎಂದು ಪ್ರಾರ್ಥನೆಮಾಡಿದನು.

ಈ ಮಾತುಗಳನ್ನು ಕೇಳಿ ಶ್ರೀರಾಮನು ಸ್ವಲ್ಪ ನಕ್ಕು, ಲಂಕೆಗೆ ಪ್ರಯಾಣ ಮಾಡಲು ನಿಶ್ಚಯಮಾಡಿದನು. ಸಮಸ್ತ ಸಾಮಂತ ರಾಜರನ್ನೂ ಕರೆಸಲು ಆತನು ಲಕ್ಷ್ಮಣನಿಗೆ ಆಜ್ಞಾಪಿಸಿದನು. ಸುಗ್ರೀವನೇ ಮೊದಲಾದ ಕೆಲವು ರಾಜರು ಸೇನಾಸಮೇತವಾಗಿ ಬಂದು ಸಿದ್ಧರಾದರು. ಯೂಪಕೇತುವಿನ ಸ್ವಯಂವರ ಕಾಲದಲ್ಲಿ ಪರಾಜಿತರಾದ ಕೆಲವು ರಾಜರು ಸಹಾಯಮಾಡಲು ಸಮ್ಮತಿಸಲಿಲ್ಲ. ಶ್ರೀರಾಮನು ಈ ಕ್ಷುಲ್ಲಕರಾಜರ ದೌಷ್ಟ್ಯವನ್ನು ಕೇಳಿ 'ಒಳ್ಳೇದಾಯಿತು. ಈಗ ಅತಿಕ್ರೂರನಾದ ಮೂಲಕಾಸುರನನ್ನು ಮೊದಲು ನಾಶಮಾಡಿ, ಬಳಿಕ ಈ ನರಪತಿಗಳನ್ನು ವಿಚಾರಿಸುವೆನು' ಎಂದು ನುಡಿದು, ಯೂಪಕೇತುವಿಗೆ ಅಯೋಧ್ಯೆಯನ್ನು ಸಂರಕ್ಷಣೆ ಮಾಡುವಂತೆ ಆಜ್ಞಾಪಿಸಿ, ಪುತ್ರರು, ಮಿತ್ರರು, ಸುಗ್ರೀವನೇ ಮೊದಲಾದ ಕಪಿಗಳು ಇವರೊಡನೆ ವಿಮಾನದಲ್ಲಿ ಕುಳಿತನು. ಶ್ರೀರಾಮನ ವಿಮಾನವು ಲಂಕೆಯ ಬಳಿಗೆ ಬಂತೆಂದು ತಿಳಿದು, ಮೂಲಕಾಸುರನು ಯುದ್ಧಮಾಡುವದಕ್ಕಾಗಿ, ನಗರದ ಹೊರಕ್ಕೆ ಬಂದನು. ಆಗ ವಾನರರಿಗೂ ರಾಕ್ಷಸರಿಗೂ ದೊಡ್ಡ ಯುದ್ಧವಾಯಿತು. ಅನೇಕ ಕೋಟಿ ರಾಕ್ಷಸರೂ ವಾನರರೂ ಹತರಾದರು. ಕುಶನಿಗೂ ಮೂಲಕಾಸುರನಿಗೂ ಮಹಾಸಂಗ್ರಾಮವು ನಡೆಯಿತು.

ಆ ಯುದ್ಧದಲ್ಲಿ ಕುಶನು ತನ್ನ ವಾಯುವ್ಯಾಸ್ತ್ರದಿಂದ ಮೂಲಕಾಸುರನನ್ನು ಲಂಕಾ ಪುರಿಯ ಮಧ್ಯದಲ್ಲಿ ಬೀಳುವಂತೆ ಹಾರಿಸಿದನು. ಆಗ ನಿಶ್ಶಕ್ತನಾದ ಆ ರಾಕ್ಷಸ ನು ಗುಹೆಯನ್ನು ಪ್ರವೇಶಿಸಿ ಮಹಾಹೋಮ ಮಾಡಲಾರಂಭಿಸಿದನು. ಈ ವಿಷ ಯವನ್ನು ವಿಭೀಷಣನು ತನ್ನ ಮಂತ್ರಿಗಳಿಂದ ತಿಳಿದು, ಕೂಡಲೇ ಶ್ರೀರಾಮನಿಗೆ ವಿಜ್ಞಾಪಿಸಿದನು.

ಶ್ರೀ ರಾಮನು ಅವನ ಯಜ್ಞವನ್ನು ನಾಶಮಾಡಲು ಕಪಿಗಳಿಗೆ ಅಜ್ಞಾಪಿಸಲು ದ್ಯುಕ್ತನಾಗಿದ್ದನು. ಅಷ್ಟರಲ್ಲಿ ಬ್ರಹ್ಮದೇವನು "ರಾಮಚಂದ್ರಾ, ಮೊದಲು ಸೀತಾದೇವಿಯನ್ನು ಕರೆಸು. ಆಕೆಯಿಂದಲೇ ಇವನಿಗೆ ಮರಣವಾಗಬೇಕಾಗಿರು ವದು. ಸ್ತ್ರೀಯರಿಂದಲೇ ನಿನಗೆ ಮರಣವಾಗಲೆಂದು ನಾನು ಇವನಿಗೆ ವರಕೊಟ್ಟಿ ರುವೆನು. ತಪಸ್ಸು ಮಾಡುತ್ತಿದ್ದ ಒಬ್ಬ ಬ್ರಾಹ್ಮಣನು ಈ ಮೂಲಕಾಸುರನ ಮೇಲೆ ಕೋಪಗೊಂಡು 'ನಿನ್ನನ್ನು ಸೀತೆಯೇ ಚಂಡಿಯ ರೂಪದಿಂದ ಸಂಹರಿಸು ವಳು' ಎಂದು ಶಪಿಸಿರುವನು. ಆದ್ದರಿಂದ ಸೀತೆಯನ್ನು ಕರೆಸುವದರಲ್ಲಿ ತ್ವರೆ ಮಾಡು. ಆಕೆಯು ಬಂದಬಳಿಕ ಇವನ ಯಜ್ಞವನ್ನು ನಾಶಮಾಡು" ಎಂದು ಶ್ರೀ ರಾಮನಿಗೆ ತಿಳುಹಿದನು. ಬ್ರಹ್ಮದೇವನ ಮಾತಿನಂತೆ ಸೀತಾದೇವಿಯನ್ನು ಕರೆ ಯಲು ಮಾರುತಿ, ಗರುಡ ಇವರಿಬ್ಬರನ್ನೂ ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿ ಅಯೋ ಧ್ಯೆಗೆ ಕಳುಹಿಸಿದನು. ಅವರು ಶ್ರೀ ರಾಮನ ಅಜ್ಞೆಯಂತೆ ಅಯೋಧ್ಯೆಗೆ ಬಂದು ಎಲ್ಲ ವೃತ್ತಾಂತವನ್ನೂ ಯೂಪಕೇತುವಿಗೆ ತಿಳುಹಿದರು. ಅನಂತರ ಆ ಯೂಪ ಕೇತುವು ಸೀತಾದೇವಿಯ ಅಂತಃಪುರದ ಕಡೆಗೆ ತೆರಳಿದನು. ಶ್ರೀ ರಾಮನು ಲಂಕೆಗೆ ಹೋದಾಗಿನಿಂದ ಪತಿವ್ರತೆಯಾದ ಸೀತೆಯು ಅನೇಕ ವ್ರತಗಳನ್ನಾಚರಿ ಸುತ್ತಿದ್ದಳು. ಸಮಸ್ತ ಐಹಿಕ ಸುಖಗಳನ್ನೂ ಬಿಟ್ಟು ಅಹೋರಾತ್ರಿಗಳಲ್ಲಿಯೂ ಆಕೆಯು ನಿಯಮಗಳಲ್ಲಿ ಆಸಕ್ತಳಾಗಿದ್ದಳು.

ಶ್ರೀ ರಾಮನ ವಿಯೋಗವನ್ನು ಸಹಿಸಲಾರದೆ ಆತನು ಶ್ರೀಘ್ರವಾಗಿ ಬರ ಲೆಂದು ಸೀತಾದೇವಿಯು ಅನೇಕ ದಾನಗಳನ್ನು ಮಾಡುತ್ತಿದ್ದಳು. ಮತ್ತು ಅನೇಕ ಶಕುನಗಳನ್ನು ನೋಡುತ್ತಿದ್ದಳು. ಒಂದು ದಿವಸ ಜಾನಕಿಯು ಉಪ್ಪರಿಗೆಯಮೇಲೆ ನಿಂತಿರಲು, ಒಂದು ಕಾಗೆಯು ಸಮೀಪದಲ್ಲಿರುವ ಒಂದು ವೃಕ್ಷದ ಮೇಲೆ ಬಂದು ಕುಳಿತಿತು. ಅದನ್ನು ನೋಡಿ "ಎಲೈ ಕಾಗಿಯೇ, ನನಗೆ ಶ್ರೀ ರಾಮನ ದರ್ಶನವು ಶೀಘ್ರವಾಗಿ ಆಗುವದಾದರೆ, ನೀನು ಇಲ್ಲಿಂದ ಹಾರಿಹೋಗು ಇಲ್ಲವಾದರೆ ಇದೇ ವೃಕ್ಷದ ಮೇಲೆ ಕುಳಿತುಕೊಂಡಿರು" ಎಂದು ಹೇಳಿ ಸ್ವಲ್ಪ ಹೊತ್ತು ಸುಮ್ಮನೆ

ನಿಂತಳು. ಆ ಕಾಗೆಯು ಸೀತಾದೇವಿಯ ಮಾತುಗಳನ್ನು ಕೇಳಿದೊಡನೆ ಅಲ್ಲಿಂದ ಹಾರಿಹೋಯಿತು. ಇದನ್ನು ನೋಡಿ ಶ್ರೀ ರಾಮನ ದರ್ಶನವು ಶೀಘ್ರವಾಗಿ ದೊರಕುವದೆಂದು ಸಂತೋಷದಿಂದ ಆಕೆಯು ಕೆಳಕ್ಕೆ ಇಳಿಯುತ್ತಿದ್ದಳು. ಅಷ್ಟರಲ್ಲಿ ಯೂಪಕೇತುವು ಸೀತಾದೇವಿಗೆ ಮಾರುತಿ, ಗರುಡ ಇವರು ಬಂದ ಉದ್ದೇಶವನ್ನು ತಿಳುಹಿದನು. ಬಳಿಕ ಸೀತೆಯು ಲಂಕೆಗೆ ಹೊರಡಲು ಸಿದ್ಧಳಾದಳು. ಸುಮುಹೂರ್ತ ದಲ್ಲಿ ಆ ಮಹಾಮಾಯೆಯು ಅಯೋಧ್ಯೆಯಿಂದ ಹೊರಟು ಲಂಕೆಗೆ ಪ್ರಯಾಣ ಮಾಡಿದಳು. ಕಲ್ಪವೃಕ್ಷದ ಕೆಳಗೆ ಕುಳಿತಿರುವ ಶ್ರೀರಾಮನನ್ನು ಆಕೆಯು ನೋಡಿ ದಳು. ಶ್ರೀರಾಮನು ಸೀತಾದೇವಿಯೊಡನೆ ಸ್ವಲ್ಪ ಹೊತ್ತು ವಿನೋದವಾಗಿ ಮಾತನಾಡುತ್ತಲಿದ್ದು, ಬಳಿಕ ಸಾತ್ವಿಕರೂಪದಿಂದ ತನ್ನ ಬಳಿಯಲ್ಲಿರುವಂತೆ ಯೂ, ರಾಜಸ ತಾಮಸ ರೂಪಗಳಿಂದ ಚಂಡಿಯ ಆಕಾರವನ್ನು ಧರಿಸುವಂತೆ ಯೂ ಆಕೆಗೆ ಅಪ್ಪಣೆಮಾಡಿದನು. ಆ ಪತಿವ್ರತಾಶಿರೋಮಣಿಯು ಪತಿಯ ಆಜ್ಞೆ ಯಂತೆ ಕ್ಲಪ್ತರೂಪಗಳನ್ನು ಧರಿಸಿದಳು.

ಅನಂತರ ಶ್ರೀರಾಮನು ಮೂಲಕಾಸುರನ ಯಜ್ಞವನ್ನು ನಾಶಮಾಡುವಂತೆ ವಾನರರಿಗೆ ಆಜ್ಞಾಪಿಸಿದನು. ಆ ಸುಗ್ರೀವನೇ ಮೊದಲಾದ ರಾಮದೂತರು ಒಂದು ಪ್ರಹರದೊಳಗಾಗಿ ಮೂಲಕಾಸುರನ ಯಾಗವನ್ನು ಕೆಡಿಸಿ, ಅವನನ್ನು ಗುಹೆಯಿಂದ ಹೊರಕ್ಕೆ ತಂದರು. ಆ ರಾಕ್ಷಸನನ್ನು ನೋಡಿದೊಡನೆ, ಚಂಡಿ ಯು ಶ್ರೀರಾಮನ ರಥದಲ್ಲಿ ಕುಳಿತು ಮೂಲಕಾಸುರನ ಎದುರಾಗಿ ಬಂದುನಿಂತ ಳು. ಆ ಭಯಂಕರವಾದ ರೂಪವನ್ನು ನೋಡಿ ಮೂಲಕಾಸುರನು ಹೆದರಿ 'ಹೇ ದೇವಿ ನೀನು ಯಾರು? ಮತ್ತು ನನ್ನನ್ನು ನಾಶಮಾಡಬೇಕೆಂದು ನಿನಗೆ ಯಾಕೆ ಇಷ್ಟು ರೋಷ ಉಂಟಾಗಿರುವದು?' ಎಂದು ಕೇಳಿದನು. ಆಗ ಚಂಡಿಯು ತನ್ನ ನಿಜವೃತ್ತಾಂತವೆಲ್ಲವನ್ನೂ ಅವನಿಗೆ ತಿಳುಹಿದಳು. ಅನಂತರ ಮೂಲಕಾಸುರನು ಈಕೆಯು ಶ್ರೀರಾಮನ ಶಕ್ತಿಯಾಗಿರುವಳೆಂದು ತಿಳಿದು, ಚಂಡಿಯೊಡನೆ ಭಯಂಕರ ವಾದ ಯುದ್ಧವನ್ನು ಮಾಡಲಾರಂಭಿಸಿದನು. ಆದರೆ ಆ ಜಗನ್ಮಾತೆಯ ಎದುರಿಗೆ ಇವನ ಸಾಮರ್ಥ್ಯಕ್ಕೆ ಸ್ವಲ್ಪವಾದರೂ ಪ್ರಯೋಜನವಾಗಲಿಲ್ಲ. ಅವರಿಬ್ಬರ ಯುದ್ಧವು ಯಾರಿಂದಲೂ ವರ್ಣಿಸಲಸದಳವಾಗಿತ್ತು. ಕೊನೆಗೆ ಚಂಡಿಕಾ ದೇವಿಯು ಆ ರಾಕ್ಷಸನ ಶಿರಸ್ಸನ್ನು ಒಡೆದು ಚೂರುಚೂರು ಮಾಡಿ ಲಂಕೆಯ ಬಾಗಿ ಲಿಗೆ ಎಸೆದಳು. ಈ ಯುದ್ಧ ಸಮಾರಂಭವನ್ನು ನೋಡಿ ಸಮಸ್ತ ದೇವತೆಗಳೂ ಬೆರಗಾದರು. ಚಂಡಿಕಾದೇವಿಗೆ ಜಯವಾದ ಮೇಲಂತೂ ಅವರ ಆನಂದಕ್ಕೆ

ಪಾರವೇ ಇಲ್ಲದಾಯಿತು. ಆ ಸಂತೋಷಕಾಲದಲ್ಲಿ ದೇವತೆಗಳು ದುಂದುಭಿಗಳ ನ್ನು ಬಾರಿಸಿದರು. ಮತ್ತು ಗಂಧರ್ವರು ಚಂಡಿಯ ಮಹಿಮೆಯನ್ನು ಗಾಯನ ಮಾಡಿದರು. ವಿದ್ಯಾಧರರು ಆ ಜಗನ್ಮಾತೆಯ ಮೇಲೆ ಪುಷ್ಪಗಳ ಮಳೆಗರೆದರು. ಬ್ರಹ್ಮದೇವನು ಚಂಡಿಕಾದೇವಿಯನ್ನು ಒಂಬತ್ತು ಶ್ಲೋಕಗಳಿಂದ ಸ್ತೋತ್ರಮಾಡಿ ದನು. ಅನಂತರ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದು ತನ್ನ ನಿಜ ಸ್ವರೂಪವನ್ನಡಗಿಸಿ ಸೌಮ್ಯರೂಪವನ್ನು ಧರಿಸಿದಳು. ಸಮಸ್ತರೂ ಸೀತಾದೇವಿ ಯ ಮಹಿಮೆಯನ್ನು ಬಹು ವಿಧವಾಗಿ ಹೊಗಳಿದರು.

ಶ್ರೀರಾಮನು ವಿಭೀಷಣನಿಗೆ ಪುನಃ ಲಂಕಾರಾಜ್ಯವನ್ನು ಕೊಟ್ಟು ಸುಖ ವಾಗಿ ವಾಸಮಾಡೆಂದು ಆಶೀರ್ವಾದ ಮಾಡಿದನು. ಮತ್ತು ವಿಭೀಷಣನಿಗೆ ಒಂದು ಶರವನ್ನು ಕೊಟ್ಟು, 'ಎಲೈ ಭಕ್ತಶ್ರೇಷ್ಠನೇ, ಈ ಶರವು ನಿನ್ನಲ್ಲಿರಲಿ. ಇನ್ನು ನೀನು ಯಾವ ಶತ್ರುಗಳಿಗೂ ಹೆದರ ಬೇಕಾದ ನಿಮಿತ್ತವಿಲ್ಲ. ಅಂಥಾ ಶತ್ರುಗಳು ಯಾರಾದರೂ ಬಂದರೆ, ಈ ಶಸ್ತ್ರದಿಂದ ಅವರನ್ನು ನಿಸ್ಸಂದೇಹವಾಗಿ ಜಯಿಸುವೆ' ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ವಿಭೀಷಣನು ಶ್ರೀ ರಾಮನ ಪಾದಗಳಿಗೆ ನಮಸ್ಕರಿಸಿ, 'ಪ್ರಭೋ, ತಾವು ಇದುವರೆಗೂ ಲಂಕಾ ನಗರಿಯನ್ನು ಪ್ರವೇಶಿಸಿಲ್ಲವಷ್ಟೆ? ಈ ದಿವಸ ಪುತ್ರ-ಮಿತ್ರ-ಬಾಂಧವರೊಡನೆ ಈ ನಗರಿಯನ್ನು ಪ್ರವೇಶಿಸಿ ನಮ್ಮನ್ನು ಧನ್ಯರನ್ನಾಗಿ ಮಾಡು' ಎಂದು ಪ್ರಾರ್ಥಿಸಿ ದನು. ಶ್ರೀರಾಮನು ವಿಭೀಷಣನ ಪ್ರಾರ್ಥನೆಯನ್ನು ಅಂಗೀಕರಿಸಿ, ಪರಿವಾರ ಸಮೇತವಾಗಿ ಲಂಕಾನಗರವನ್ನು ಪ್ರವೇಶಿಸಿದನು. ರಾಮಚಂದ್ರನು ಸೀತೆಯ ಹಸ್ತವನ್ನು ತನ್ನ ಹಸ್ತದಿಂದ ಹಿಡಿದುಕೊಂಡು, ವಿನೋದವಾಗಿ ಮಾತನಾಡುತ್ತ ಲಂಕಾನಗರಿಯನ್ನೆಲ್ಲ ನೋಡಿದನು. ಸೀತೆಯು ಮೊದಲು ತಾನು ವಾಸಮಾಡಿ ದ್ದ ಅಶೋಕವನವನ್ನು ಶ್ರೀರಾಮನಿಗೆ ತೋರಿಸಿದಳು. ಮತ್ತು ತನಗೆ ಆಶ್ರಯ ವಾಗಿದ್ದ ಶಿಂಶಪಾವೃಕ್ಷವನ್ನು ಬಹಳ ವಿಶ್ವಾಸದಿಂದ ನೋಡಿದಳು. ವಿಭೀಷಣನು ಸೀತಾ-ರಾಮರಿಗೆ ಅಮೌಲ್ಯ ವಸ್ತ್ರಾಭರಣಗಳಿಂದ ಸತ್ಕಾರಮಾಡಿದನು. ಮತ್ತು ತಮ್ಮ ಅಣ್ಣನು ಪೂಜಿಸುತ್ತಿದ್ದ ಕಪಿಲವರಾಹ ಮೂರ್ತಿಗಳನ್ನು ಶ್ರೀರಾಮನಿಗೆ ತೋರಿಸಿ, ಅವನ್ನು ಶ್ರೀರಾಮನಿಗೆ ಸಮರ್ಪಿಸಿದನು. ಸರಮೆಯು ಸೀತಾ ದೇವಿಗೆ ಬಹಳ ಉಪಚಾರ ಮಾಡಿದಳು. ಆಗ ಸೀತಾದೇವಿಯು 'ಸರಮೆ, ಈ ತ್ರಿಜಟೆ ಯು ಪೂರ್ವದಲ್ಲಿ ನನಗೆ ಬಹಳ ಉಪಕಾರ ಮಾಡಿರುವಳು. ನೀನು ಇವಳಿಗೆ ಏನು ಉಪಚಾರ ಮಾಡಿದರೂ ಅವೆಲ್ಲ ನನಗೇ ಮಾಡಿದವುಗಳೆಂದು ತಿಳಿಯುವೆನು.

ಇದ್ದರಿಂದ ಇವಳನ್ನು ಬಹಳ ಗೌರವದಿಂದ ಕಾಪಾಡು' ಎಂದು ಹೇಳಿ ತನಗೆ ಕೊಟ್ಟ ವಸ್ತ್ರಾಭರಣಗಳನ್ನು ತ್ರಿಜಟೆಗೆ ಸಮರ್ಪಿಸಿ ಆನಂದದಿಂದ ಆಕೆಯನ್ನು ಆಲಿಂಗನ ಮಾಡಿಕೊಂಡಳು. ಕೊನೆಗೆ ಸೀತಾದೇವಿಯು ಕಣ್ಣುಗಳಲ್ಲಿ ನೀರನ್ನು ತಂದು, ತ್ರಿಜಟೆಯ ಹಸ್ತವನ್ನು ಸರಮೆಯ ಕೈಯಲ್ಲಿಟ್ಟು, 'ಸರಮೆ, ಇವಳನ್ನು ನೀನು ನನ್ನ ತಂಗಿಯೆಂದು ತಿಳಿದು ಕಾಪಾಡು' ಎಂದು ಹೇಳಿದಳು. ಈ ರೀತಿ ಮೂಲಕಾಸುರನೇ ಮೊದಲಾದ ಸಮಸ್ತ ರಾಕ್ಷಸರೂ ಹತರಾದ ಬಳಿಕ ಶ್ರೀ ರಾಮನು ಪರಿವಾರ ಸಮೇತನಾಗಿ ವಿಮಾನದಲ್ಲಿ ಕುಳಿತು ವಿಭೀಷಣನೊಡನೆ ಅಯೋಧ್ಯೆಯ ಕಡೆಗೆ ಪ್ರಯಾಣ ಮಾಡಿದನು. ದಾರಿಯಲ್ಲಿ ತನ್ನ ಭಕ್ತರಾದ ರಾಜರ ಸತ್ಕಾರಗಳನ್ನು ಸ್ವೀಕರಿಸುತ್ತ ಶ್ರೀರಾಮನು ಅಯೋಧ್ಯೆಗೆ ಬಂದನು.

ಒಂದಾನೊಂದು ದಿವಸ ಶ್ರೀ ರಾಮನು ಆ ವರಾಹಮೂರ್ತಿಯನ್ನು ಶತ್ರುಘ್ನನಿಗೆ ಕೊಟ್ಟನು. ಕೆಲವು ದಿವಸಗಳ ಮೇಲೆ ಚ್ಯವನ, ಭಾರ್ಗವ ಇತ್ಯಾದಿ ಶ್ರೇಷ್ಠರಾದ ಋಷಿಗಳು ಶ್ರೀ ರಾಮನ ಬಳಿಗೆ ಬಂದರು. ಅವರು ಶ್ರೀ ರಾಮನನ್ನು ನಾನಾವಿಧವಾಗಿ ಸ್ತೋತ್ರಮಾಡಿ 'ಅನೇಕ ಶಿಷ್ಯಸಮುದಾಯಗಳಿಂದ ಕೂಡಿದ ನಮ್ಮನ್ನು ಸಂರಕ್ಷಣೆಮಾಡು' ಎಂದು ಪ್ರಾರ್ಥಿಸಿದರು. ಆಗ ಶ್ರೀ ರಾಮನು 'ಮಹಾಮುನಿಗಳೇ, ತಮಗೆ ಯಾರಿಂದ ತೊಂದರೆಯಾಗಿರುವದು' ಎಂದು ಪ್ರಶ್ನೆಮಾಡಿದನು. ಈ ಮಾತುಗಳನ್ನು ಕೇಳಿ ಚ್ಯವನರು "ಮಹಾರಾಜನೆ, ಮಧುವೆಂಬ ಒಬ್ಬ ರಾಕ್ಷಸನಿದ್ದನು. ಅವನಿಗೆ ರಾವಣನು ತನ್ನ ತಂಗಿಯಾದ ಕುಂಭೀನಸಿಯನ್ನು ವಿವಾಹಮಾಡಿಕೊಟ್ಟಿದ್ದನು. ಆ ರಾಕ್ಷಸಿಯ ಉದರದಲ್ಲಿ ಲವಣನೆಂಬ ಒಬ್ಬ ರಾಕ್ಷಸನು ಹುಟ್ಟಿದನು. ಕೆಲವು ಕಾಲದನಂತರ ಆ ಮಧುದೈತ್ಯನು ನಿನ್ನಿಂದಲೇ ಮರಣ ಹೊಂದಿದನು. ಆದಕಾರಣ ನಿನಗೆ ಮಧುಸೂದನನೆಂಬ ಹೆಸರು ಬಂತು. ತನ್ನ ತಂದೆಯಂತೆ ದೇವಬ್ರಾಹ್ಮಣರಿಗೆ ಕಂಟಕನಾದ ಲವಣಾಸುರನು ನಮಗೆ ಬಹಳ ತ್ರಾಸವನ್ನುಂಟುಮಾಡಲುಪಕ್ರಮಿಸಿರುವನು" ಎಂದು ಹೇಳಿಕೊಂಡರು. ಇದನ್ನು ಕೇಳಿ ಶ್ರೀ ರಾಮನು 'ಮಹರ್ಷಿಗಳೇ, ಹೆದರಬೇಡಿರಿ. ಆ ರಾಕ್ಷಸನನ್ನು ಕೊಂದು ನಿಮ್ಮೆಲ್ಲರಿಗೂ ಕ್ಷೇಮವನ್ನುಂಟುಮಾಡುವೆನು' ಎಂದು ಹೇಳಿ ಅವರನ್ನು ಯೋಗ್ಯವಾದ ಸತ್ಕಾರಗಳಿಂದ ಉಪಚರಿಸಿ ಅವರವರ ತಪೋವನಗಳಿಗೆ ಕಳುಹಿದನು. ಬಳಿಕ ರಾಮಚಂದ್ರನು ಶತ್ರುಘ್ನನನ್ನು ಕರೆಸಿ 'ತಮ್ಮಾ, ನಾನು ನಿನಗೆ ಈ ದಿವಸ ಮಥುರೆಯ ರಾಜ್ಯಾಭಿಷೇಕ ಮಾಡುವೆನು' ಎಂದು ಹೇಳಿದನು. ಆಗ ಶತ್ರುಘ್ನನು 'ಅಣ್ಣಾ, ಈ ನಿನ್ನ ಚರಣಗಳನ್ನು ಬಿಟ್ಟು ನಾನು ಎಲ್ಲಿಗೂ

ಹೋಗಲಾರೆನು ಎಂದನು. ಇದೇ ಮಾತುಗಳನ್ನು ಶ್ರೀ ರಾಮನು ಭರತ, ಲಕ್ಷ್ಮಣರಿಗೆ ತಿಳುಹಿದನು. ಅವರೂ ಶತ್ರುಘ್ನನಂತೆ ಉತ್ತರ ಕೊಟ್ಟರು. ಅನಂತರ ಶ್ರೀ ರಾಮನು ಬ್ರಾಹ್ಮಣರ ಕಡೆಯಿಂದ ಸುಬಾಹು, ಯೂಪಕೇತುಗಳಿಗೆ ಅಭಿಷೇಕ ಮಾಡಿಸಿದನು. ಮತ್ತು ಶತ್ರುಘ್ನನ ಕೈಗೆ ಒಂದು ದಿವ್ಯವಾದ ಬಾಣವನ್ನು ಕೊಟ್ಟು "ಈ ಬಾಣದಿಂದ ನೀನು ಲೋಕಕಂಟಕನಾದ ಲವಣಾಸುರನನ್ನು ಕೊಲ್ಲುವವನಾಗು. ಅವನು ತನ್ನ ಶೂಲಾಯುಧವನ್ನು ಮನೆಯಲ್ಲಿರಿಸಿ ಪೂಜೆಮಾಡಿ, ಆಹಾರಗಳಿಗೋಸ್ಕರ ಅರಣ್ಯಕ್ಕೆ ಪ್ರತಿನಿತ್ಯವೂ ಹೋಗುವ ಸಾಂಪ್ರದಾಯವುಂಟು. ಆ ಸಮಯವನ್ನು ಕಾದುಕೊಂಡಿದ್ದು ಅವನ ಮನೆಯ ಬಾಗಿಲಿಗೆ ಮುತ್ತಿಗೆ ಹಾಕು. ವನದಿಂದ ಬಂದ ಅವನನ್ನು ಒಳಗೆ ಬಿಡದೆ ಯುದ್ಧಮಾಡಿ ಈ ಬಾಣದಿಂದ ನಾಶಮಾಡು. ತ್ರಿಶೂಲವು ಅವನ ಕೈಯಲ್ಲಿರುವಾಗ ಮಾತ್ರ ಅವನನ್ನು ನೀನು ಹೊಡೆಯಬೇಡ. ಪರಮೇಶ್ವರನು ಅವನ ತಪಸ್ಸಿಗೆ ಮೆಚ್ಚಿ ಆ ತ್ರಿಶೂಲವನ್ನು ಅವನಿಗೆ ಕೊಟ್ಟಿರುವನು. ಆ ಲವಣಾಸುರನನ್ನು ಸಂಹಾರಮಾಡಿದ ಬಳಿಕ ನೀನು ಯಮುನಾತೀರದಲ್ಲಿರುವ ಮಧುವನದಲ್ಲಿ ಮಥುರೆ ಎಂಬ ನಗರಿಯನ್ನು ನಿರ್ಮಾಣಮಾಡಿ ಅದಕ್ಕೆ ಸುಬಾಹುವನ್ನು ಅಧಿಪತಿಯನ್ನಾಗಿಮಾಡು. ಮತ್ತು ವಿದಿಶಾ ಎಂಬ ಒಂದು ನಗರಿಯನ್ನು ಸಿದ್ಧಗೊಳಿಸಿ ಅದನ್ನು ಯೂಪಕೇತುವಿನ ಸ್ವಾಧೀನಕ್ಕೆ ಕೊಡು. ಅವನ ಪತ್ನೀ, ಪುತ್ರರು, ಸೇನೆಗಳು ಇವುಗಳೆಲ್ಲ ಆ ನಗರದಲ್ಲೇ ಇರಲಿ. ಈ ಕಾರ್ಯಗಳೆಲ್ಲ ಮುಗಿದಬಳಿಕ ನೀನು ನನ್ನಲ್ಲಿಗೆ ಬರತಕ್ಕದ್ದು" ಎಂದು ಹೇಳಿದನು.

ಶತ್ರುಘ್ನನು ಪುತ್ರರೊಡನೆ ಸೇನಾಸಮೇತನಾಗಿ ಪ್ರಯಾಣಮಾಡಿ ಶ್ರೀ ರಾಮನ ಅಪ್ಪಣೆಯಂತೆ ಸಮಸ್ತ ಶತ್ರುಗಳನ್ನೂ ನಾಶಮಾಡಿ, ಮಧುವನದಲ್ಲಿ ಮಥುರೆ ಎಂಬ ನಗರಿಯನ್ನು ಸ್ಥಾಪಿಸಿ, ಅದನ್ನು ಸುಬಾಹುವಿಗೆ ಸಮರ್ಪಿಸಿದನು. ಮತ್ತು ತನ್ನಲ್ಲಿರುವ ವರಾಹಮೂರ್ತಿಯನ್ನು ಮಗನಿಗೆ ಕೊಟ್ಟು, ಶ್ರೀ ರಾಮನ ಬಳಿಗೆ ಬಂದನು. ಶತ್ರುಘ್ನನ ಈ ಕಾರ್ಯಗಳನ್ನು ಕೇಳಿ ಶ್ರೀ ರಾಮನಿಗೆ ಬಹಳ ಹರ್ಷವಾಯಿತು. ಕೆಲವು ಕಾಲ ಕಳೆಯಲು ಯುಧಾಜಿತುವು ಶತ್ರುಘ್ನನನ್ನು ತನಗೆ ಸಹಾಯ ಮಾಡಲು ಕರೆದನು. ಆಗ ಶತ್ರುಘ್ನನು ಶ್ರೀ ರಾಮನ ಅಪ್ಪಣೆಯಿಂದ ಅಲ್ಲಿಗೆ ಹೋಗಿ ತನ್ನ ಬಾಣಗಳಿಂದ ಮೂರುಕೋಟಿ ಗಂಧರ್ವರನ್ನು ನಾಶಗೊಳಿಸಿ, ತಕ್ಷಶಿಲಾ, ಪುಷ್ಕರಾವತಿ ಎಂಬ ಎರಡು ನಗರಗಳನ್ನು ಸಂಪಾದಿಸಿದನು. ಮತ್ತು ತಕ್ಷಶಿಲಾನಗರದಲ್ಲಿ ತಕ್ಷನನ್ನೂ, ಪುಷ್ಕರಾವತಿಯಲ್ಲಿ ಪುಷ್ಕರನನ್ನೂ ವಾಸಮಾಡುವಂತೆ ಅಜ್ಞಾಪಿಸಿ, ಆ ಬಲಶಾಲಿಯಾದ ಶತ್ರುಘ್ನನು

ಶ್ರೀರಾಮನ ಕಡೆಗೆ ಬಂದನು. ಕೆಲವು ಕಾಲ ಕಳೆಯಲು ಲಕ್ಷ್ಮಣನು ಶ್ರೀ ರಾಮನ ಆಜ್ಞೆಯಂತೆ ಪಶ್ಚಿಮಭಾಗದಲ್ಲಿ ಬಲಿಷ್ಠರಾಗಿದ್ದ ಮಲ್ಲರನ್ನು ಸೋಲಿಸಿ, ಆನೆ, ಕುದುರೆ, ಧನ, ರತ್ನ ಇವುಗಳಿಂದ ಅಯೋಧ್ಯೆಯನ್ನು ತುಂಬಿದನು. ಮತ್ತು ತನ್ನ ಮಕ್ಕಳಾದ ಅಂಗದ, ಚಿತ್ರಕೇತು ಎಂಬ ಇಬ್ಬರನ್ನು ಆ ಪ್ರಾಂತಗಳಿಗೆ ರಾಜರನ್ನಾಗಿ ಮಾಡಿ, ಶ್ರೀ ರಾಮನ ಕಡೆಗೆ ಬಂದು ಸೇರಿದನು. ಅನಂತರ ಶ್ರೀ ರಾಮನು ಶುಭಮುಹೂರ್ತದಲ್ಲಿ ಪೃಥ್ವೀವಿಜಯಕ್ಕೋಸ್ಕರ ಹೊರಡಲು ನಿಶ್ಚಯ ಮಾಡಿದನು. ಲಕ್ಷ್ಮಣನು ಶ್ರೀ ರಾಮನ ಮನೋಭಿಪ್ರಾಯವನ್ನು ತಿಳಿದು ಪುಷ್ಪಕ ವಿಮಾನದಲ್ಲಿ ದಿವ್ಯ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಿದನು. ಅಯೋಧ್ಯೆಯಲ್ಲಿ ಸುವ್ಯವಸ್ಥಿತ ರೀತಿಯಿಂದ ಕಾಪಾಡಿಕೊಂಡು ಇರುವಂತೆ ಸುಮಂತ್ರನಿಗೆ ಆಜ್ಞಾಪಿಸಿ ಶ್ರೀ ರಾಮನು ಸೀತಾದೇವಿಯ ಅಂತಃಪುರದ ಕಡೆಗೆ ತೆರಳಿದನು.

## ೧ನೆಯ ಪ್ರಕರಣ.

### ದಿಗ್ವಿಜಯವೂ, ನ್ಯಾಯನಿರ್ಣಯಗಳೂ.

ಶ್ರೀ ರಾಮನು ಸೀತಾದೇವಿಯ ಅಂತಃಪುರಕ್ಕೆ ಬಂದು ತನ್ನ ಉದ್ದೇಶವನ್ನು ಸೀತೆಗೆ ತಿಳುಹಿದನು. ಈ ಮಾತುಗಳನ್ನು ಕೇಳಿ ಆ ಪತಿವ್ರತೆಯಾದ ಜಾನಕಿಯು 'ಸ್ವಾಮಿ, ನಾನು ತಮ್ಮ ವಿರಹವನ್ನು ಸಹಿಸಲಾರೆನು. ಆದ್ದರಿಂದ ತಮ್ಮ ಜೊತೆಗೆ ನನ್ನನ್ನು ಕರೆದುಕೊಂಡು ಹೋಗಿರಿ' ಎಂದಳು. ಶ್ರೀರಾಮನು ಸೀತಾದೇವಿಯ ಮಾತುಗಳನ್ನು ಮಾನ್ಯಮಾಡಿದನು. ಅಷ್ಟರಲ್ಲಿ ಊರ್ಮಿಳೆಯೇ ಮೊದಲಾದ ತಂಗಿಯರೂ, ಸೊಸೆಯರೂ 'ಸೀತಾದೇವಿಯು ಶ್ರೀರಾಮನೊಡನೆ ಲೋಕಯಾತ್ರೆಗೆ ಹೊರಟಿರುವಳು' ಎಂಬ ವರ್ತಮಾನವನ್ನು ಕೇಳಿ, ಸೀತೆಯ ಬಳಿಗೆ ಬಂದು ತಮ್ಮನ್ನೂ ಕರೆದುಕೊಂಡು ಹೋಗುವಂತೆ ಪ್ರಾರ್ಥಿಸಿದರು. ಬಳಿಕ ಸೀತಾದೇವಿಯು ಈ ತರುಣಿಯರ ನಿರ್ಬಂಧವನ್ನು ಶ್ರೀರಾಮನಿಗೆ ತಿಳುಹಿದಳು. ಆಗ ಉದಾರನಾದ ಶ್ರೀರಾಮನು 'ಪ್ರಿಯಳೆ, ಅವರೆಲ್ಲರನ್ನೂ ನಾನು ಜೊತೆಗೆ ಕರೆದುಕೊಂಡು ಹೋಗುವೆನು' ಎಂದು ವಚನಕೊಟ್ಟನು. ಆ ಸ್ತ್ರೀಯರಿಗೆ ಈ ವಚನಗಳನ್ನು ಕೇಳಿ ಬಹಳ ಹರ್ಷವಾಯಿತು. ಮತ್ತು ಸೀತಾದೇವಿಯು ಅಪ್ಪಣೆಯ

ನ್ನು ಪಡೆದು ತಮ್ಮ ತಮ್ಮ ಸಾಮಾನುಗಳನ್ನು ಸಿದ್ಧಗೊಳಿಸಲು ಆ ತರುಣಿಯರು ತಮ್ಮ ಮಂದಿರಗಳಿಗೆ ತೆರಳಿದರು. ಪ್ರಾತಃಕಾಲದಲ್ಲಿ ಶ್ರೀರಾಮನು ತನ್ನ ನಿತ್ಯ ನಿಯಮಗಳನ್ನೆಲ್ಲ ತೀರಿಸಿ, ಸಮಸ್ತ ಪರಿವಾರದೊಡನೆ ಪುಷ್ಪಕವಿಮಾನದಲ್ಲಿ ಕುಳಿತನು. ಆಗ ಅನೇಕ ವಾದ್ಯ, ಗಾಯನ, ಜಯಜಯಕಾರ ಇವುಗಳ ಧ್ವನಿಗಳಿಂದ ದಿಕ್ಕುಗಳು ಪ್ರತಿಧ್ವನಿಕೊಡುತ್ತಿದ್ದವು.

ಶ್ರೀರಾಮನು ಮೊದಲು ಪೂರ್ವದಿಕ್ಕಿಗೆ ಪ್ರಯಾಣಮಾಡಿದನು. ಅಲ್ಲಿಯ ರಾಜರೆಲ್ಲರೂ ರಘುನಂದನನಿಗೆ ಶರಣಾಗತರಾಗಿ ತಮ್ಮ ಕಾಣಿಕೆಗಳನ್ನು ಸಮರ್ಪಿಸಿದರು. ಬಳಿಕ ಪುಷ್ಪಕವು ಭೂರಿಕೀರ್ತಿಯ ನಗರದ ಕಡೆಗೆ ಬಂತು. ಅಲ್ಲಿ ಶ್ರೀರಾಮನು ಭೂರಿಕೀರ್ತಿಯ ಸತ್ಕಾರಗಳನ್ನು ಸ್ವೀಕರಿಸಿ ದಕ್ಷಿಣದಿಕ್ಕಿಗೆ ಪ್ರಯಾಣ ಬೆಳಿಸಿದನು. ಆದೇಶದ ರಾಜರೆಲ್ಲರೂ ಶ್ರೀರಾಮನಿಗೆ ಕಿಂಕರರಾದರು. ಬಳಿಕ, ಶ್ರೀರಾಮನು ಕೊಂಕಣ, ಕೇರಲ, ಮಹಾರಾಷ್ಟ್ರ ಇತ್ಯಾದಿ ದೇಶಗಳಲ್ಲಿ ಸತ್ಕಾರಗಳನ್ನು ಹೊಂದುತ್ತ ರೇವಾತೀರದಲ್ಲಿರುವ ಓಂಕಾರೇಶ್ವರನ ಬಳಿಗೆ ಬಂದನು. ಅಲ್ಲಿಂದ ಮಾಳವದೇಶಗಳಿಗೆ ಹೋಗಿ ಅಲ್ಲಿಯ ರಾಜರನ್ನೆಲ್ಲ ಜಯಿಸಿ ಹೈಹಯನಗರಕ್ಕೆ ಬಂದನು. ಆ ನಗರಕ್ಕೆ ರಾಜನಾದ ಪ್ರತೀಪನನ್ನು ಯುದ್ಧದಲ್ಲಿ ಸೋಲಿಸಿ, ಶ್ರೀರಾಮನು ಹಸ್ತಿನಾಪುರದ ಕಡೆಗೆ ತೆರಳಿದನು. ಅಷ್ಟರಲ್ಲಿ ಚಂದ್ರವಂಶದ ಪ್ರರೂರವರಾಜನು ಬಹಳ ಸೇನೆಗಳಿಂದ ಕೂಡಿ ಶ್ರೀರಾಮನೊಡನೆ ಯುದ್ಧಮಾಡಲು ಎದುರಾದನು. ಆಗ ಪ್ರರೂರವ, ರಾಮ ಇವರಿಗೆ ಮೂರುದಿವಸಗಳ ವರೆಗೂ ಭಯಂಕರವಾದ ಯುದ್ಧವಾಯಿತು. ಆ ಯುದ್ಧದ ರಕ್ತಪ್ರವಾಹವು ಭಾಗೀರಥಿಗೆ ಸೇರಿತು. ನಾಲ್ಕನೇ ದಿವಸ ಶ್ರೀರಾಮನು ಆ ರಾಜನನ್ನು ಯುದ್ಧದಲ್ಲಿ ಸೋಲಿಸಿ, ಹಸ್ತಿನಾಪುರವನ್ನು ಸುಷೇಣನೆಂಬ ವಾನರನಿಗೆ ಕೊಟ್ಟು, ಸುಖವಾಗಿ ರಾಜ್ಯಭಾರ ಮಾಡಿಕೊಂಡಿರುವಂತೆ ಆಜ್ಞಾಪಿಸಿದನು. ಮತ್ತು ಆ ರಾಜನಿಗೆ ಅಲ್ಲೇ ಕಾರಾಗೃಹ ವಾಸಮಾಡಿಸಿದನು. ಅನಂತರ ಶ್ರೀರಾಮನು ಮಧುರೆಗೆ ಬಂದು ಸುಬಾಹುವಿನ ಕ್ಷೇಮ ಸಮಾಚಾರವನ್ನು ವಿಚಾರಿಸಿ, ಅಲ್ಲಿ ಕೆಲವು ದಿವಸಗಳ ವರೆಗೆ ವಾಸವಾಗಿದ್ದನು. ಬಳಿಕ ಕುರುಕ್ಷೇತ್ರದ ಮಾರ್ಗವಾಗಿ ಮಲ್ಲದೇಶಕ್ಕೆ ಪ್ರಯಾಣಮಾಡಿ ಅಲ್ಲಿರುವ ರಾಜರಿಂದ ಸತ್ಕಾರಗಳನ್ನು ಹೊಂದಿ ಶ್ರೀರಾಮನು ಯೂಪಕೇತುವಿನ ನಗರಕ್ಕೆ ಬಂದನು. ಅಲ್ಲಿ ಯೂಪಕೇತುವು ಶ್ರೀರಾಮನಿಗೆ ಬಹಳ ಉಪಚಾರಮಾಡಿದನು. ಅಲ್ಲಿಂದ ಶ್ರೀರಾಮನು ತಕ್ಷಶಿಲ, ಪುಷ್ಕರಾವತಿ ಇತ್ಯಾದಿ ತನ್ನ ಪುತ್ರರಿದ್ದ ನಗರಗಳನ್ನೆಲ್ಲ

ನೋಡುತ್ತ ಶಕದೇಶವನ್ನು ಪ್ರವೇಶಿಸಿದನು. ಅಲ್ಲಿ ಯವನರಾಜನನ್ನು ಸೋಲಿಸಿ ಮುಂದೆ ಅನೇಕ ದೇಶಗಳನ್ನೂ, ಪರ್ವತಗಳನ್ನೂ ನೋಡುತ್ತ, ಶ್ರೀರಾಮನು ಅಲ್ಲಲ್ಲಿ ಕಾಣುವ ನೂತನ ವಸ್ತುಗಳನ್ನು ಸೀತಾದೇವಿಗೆ ತೋರಿಸುತ್ತ ಪ್ರಯಾಣ ಮಾಡಿದನು. ಹೀಗೆ ಶ್ರೀರಾಮನು ಭರತಖಂಡವನ್ನೆಲ್ಲ ಜಯಿಸಿದನು.

ಅನಂತರ ಶ್ರೀ ರಾಮನು ಸೀತೆಯೊಡನೆ ವಿಮಾನದಲ್ಲಿ ಕುಳಿತು ಅನೇಕ ಹೊಸ ಸ್ಥಳಗಳಿಗೆ ಹೋದನು. ಕಿಂಪುರುಷವರ್ಷ, ಹೇಮಕೂಟಪರ್ವತ, ನಿಷಧಪರ್ವತ, ಮೇರುಪರ್ವತ, ಮಂದರಪರ್ವತ, ಇಲಾವ್ರತ ಇತ್ಯಾದಿ ಸಮಸ್ತ ದ್ವೀಪಗಳಿಗೂ ಹೋಗಿ ಸರ್ವಭಾಗಗಳನ್ನೂ ಶ್ರೀ ರಾಮನು ಸ್ವಾಧೀನ ಮಾಡಿಕೊಂಡನು. ಅಲ್ಲಲ್ಲಿರುವ ದೇವತೆಗಳು ಸೀತಾರಾಮರಿಗೆ ನಮಸ್ಕಾರ ಮಾಡಿದರು. ಸಾರಾಂಶ ಶ್ರೀ ರಾಮನು ಐವತ್ತುಕೋಟಿ ಯೋಜನವಿಸ್ತಾರವುಳ್ಳ ಭೂಗೋಳ, ಲೋಕಾಲೋಕಪರ್ವತ ಇವುಗಳನ್ನು ತನ್ನ ಶಾಸನಕ್ಕೆ ಸೇರಿಸಿಕೊಂಡು ಅಯೋಧ್ಯೆಯ ಕಡೆಗೆ ತಿರುಗಿದನು. ಪುಷ್ಪಕವು ಅಯೋಧ್ಯೆಯ ಸಮೀಪಕ್ಕೆ ಬಂದ ವರ್ತಮಾನವನ್ನು ಕೇಳಿ ಸುಮಂತ್ರನು ಅತಿ ಸಂಭ್ರಮದಿಂದ ಶ್ರೀ ರಾಮನನ್ನು ಎದುರುಗೊಂಡು ಪಟ್ಟಣದೊಳಕ್ಕೆ ಕರೆತಂದನು. ಶ್ರೀ ರಾಮನು ಸೀತಾಸಮೇತನಾಗಿ ಪ್ರಜೆಗಳು ಮಾಡಿದ ಸತ್ಕಾರಗಳನ್ನು ಅಲ್ಲಲ್ಲಿ ಸ್ವೀಕರಿಸುತ್ತ ಅಂತಃಪುರವನ್ನು ಪ್ರವೇಶಿಸಿದನು. ಅನಂತರ ಶ್ರೀ ರಾಮನು ಸ್ನಾನಸಂಧ್ಯಾದಿಗಳನ್ನು ನೆರವೇರಿಸಿ, ಪುತ್ರ, ಮಿತ್ರ, ಬಂಧುಗಳು, ಸಾಮಂತರಾಜರು ಇವರೊಡನೆ ಷಡ್ರಸೋಪೇತವಾದ ಅನ್ನವನ್ನು ಭೋಜನ ಮಾಡಿದನು. ಬಳಿಕ ಶ್ರೀ ರಾಮನು ಸಭಾಮಂಟಪಕ್ಕೆ ಬಂದು ಸಿಂಹಾಸನಾರೂಢನಾಗಿ ಸಮಸ್ತ ಪ್ರಜೆಗಳ ಕ್ಷೇಮಸಮಾಚಾರವನ್ನು ವಿಚಾರಿಸಿದನು. ಮತ್ತು ಭರತನಿಗೆ ಭರತವರ್ಷದ ಆಧಿಪತ್ಯವನ್ನು ಕೊಟ್ಟನು. ಲವನಿಗೆ ಜಂಬೂದ್ವೀಪವನ್ನು ಕೊಟ್ಟನು. ವಿಜಯನನ್ನು ಲವನಿಗೆ ಮಂತ್ರಿಯಾಗಿರುವಂತೆ ಆಜ್ಞಾಪಿಸಿದನು. ಈ ರೀತಿಯಿಂದ ಲಕ್ಷ್ಮಣ, ಶತ್ರುಘ್ನ ಇವರೇ ಮೊದಲಾದ ಸಮಸ್ತ ಬಂಧುಗಳಿಗೂ ಯೋಗ್ಯವಾದ ಕಾರ್ಯಗಳನ್ನು ನಿಯಮಿಸಿ ತಾನು ಅವರೆಲ್ಲರ ಪ್ರಾರ್ಥನೆಯ ಮೇರೆಗೆ ಸಾರ್ವಭೌಮಪದವಿಯನ್ನು ವಹಿಸಿದನು.

ಒಂದಾನೊಂದು ದಿವಸ ಶ್ರೀ ರಾಮನು ಸಭಾಮಧ್ಯದಲ್ಲಿ ಕುಳಿತಿರಲು, ಒಂದು ನಾಯಿಯು ಘಟ್ಟಿಯಾಗಿ ಒದರಲಾರಂಭಿಸಿತು. ಆ ಶ್ವಾನದ ದೀನಧ್ವನಿಯನ್ನು ಕೇಳಿ ಶ್ರೀ ರಾಮನು-ಈ ನಾಯಿಯು ಸುಮ್ಮನೆ ಒದರುತ್ತಿರುವದು. ಇದ

ನ್ನು 'ಓಡಿಸು' ಎಂದು ದೂತನಿಗೆ ಆಜ್ಞಾಪಿಸಿದನು. ಆತನ ಅಪ್ಪಣೆಯಂತೆ ದೂತರು ಶ್ವಾನವನ್ನು ಅಲ್ಲಿಂದ ಓಡಿಸಿದರು. ಮರುದಿವಸ ಆ ಶ್ವಾನವು ಹಿಂದಿನಂತೆ ರಾಜದ್ವಾರದಲ್ಲಿ ನಿಂತು ಒದರಲಾರಂಭಿಸಿತು. ಆಗಲೂ ದೂತರು ಅದನ್ನು ಹೊಡೆದು ಓಡಿಸಿದರು. ಮೂರನೇ ದಿವಸವೂ ಆ ನಾಯಿಯು ಸಭೆಯ ಎದುರಿಗೆ ನಿಂತು ಹೀನಸ್ವರದಿಂದ ಕಣ್ಣಲ್ಲಿ ನೀರು ಸುರಿಸುತ್ತ ಒದರಲಾರಂಭಿಸಿತು. ಇದನ್ನು ಕೇಳಿ ಶ್ರೀ ರಾಮನು 'ಈ ನಾಯಿಯು ಸುಮಾರು ಮೂರು ದಿವಸಗಳಿಂದ ಇಲ್ಲಿ ಒದರುತ್ತಲಿರುವದು. ಅದಕ್ಕೇನು ಆಪತ್ತು ಬಂದದೆಯೋ ವಿಚಾರಿಸೋಣ, ನನ್ನ ಬಳಿಗೆ ಅದನ್ನು ಕರೆತನ್ನಿ' ಎಂದು ದೂತರಿಗೆ ಆಜ್ಞಾಪಿಸಿದನು. ಆಗ ರಾಜದೂತರು ಶ್ವಾನದ ಬಳಿಗೆ ಬಂದು ಎಲೈ ನಾಯಿಯೇ, ನಿನ್ನನ್ನು ಶ್ರೀ ರಾಮನು ಸಭಾಮಂಟಪದೊಳಗೆ ಕರೆತರುವಂತೆ ಅಪ್ಪಣೆ ಮಾಡಿರುವನು. ಬಾ ಹೋಗೋಣ ಎಂದರು. ಈ ಮಾತುಗಳನ್ನು ಕೇಳಿ ಶ್ವಾನವು 'ನನ್ನ ಪುಣ್ಯವು ಈ ದಿವಸ ಫಲಕೊಟ್ಟಹಾಗಾಯಿತು' ಎಂದು, ಆ ದೂತರನ್ನು ಕುರಿತು "ಮಹಾಸ್ವಾಮಿ, ನಾನು ಅಮಂಗಲ ಜಾತಿಯಲ್ಲಿ ಹುಟ್ಟಿರುವೆನು. ಪಾಪಿಗಳಾದ ನನ್ನಂಥವರು ದೇವಸ್ಥಾನ, ಯಜ್ಞಶಾಲೆ, ಹೋಮಶಾಲೆ, ವೃಂದಾವನ, ಸಭೆ, ಮಠ, ರಾಜಗೃಹ, ತೀರ್ಥಸ್ಥಾನ, ಅಡಿಗೆಯಮನೆ, ಇತ್ಯಾದಿ ಪುಣ್ಯಸ್ಥಳಗಳಿಗೆ ಪ್ರವೇಶ ಮಾಡಬಾರದು" ಎಂದು ಮಾತನಾಡಿತು.

ಆ ಮಾತುಗಳನ್ನು ಕೇಳಿದೊಡನೆ ದೂತರಿಗೆ ಬಹಳ ಆಶ್ಚರ್ಯವಾಯಿತು. ಮತ್ತು ಅವರು ಅದೇ ವಚನಗಳನ್ನು ಶ್ರೀರಾಮನಿಗೆ ವಿಜ್ಞಾಪಿಸಿದರು. ಈ ವಿಷಯವನ್ನು ಕೇಳಿ ಶ್ರೀರಾಮನು ಪಾದಗಳಲ್ಲಿ ಸುವರ್ಣದ ಪಾದುಕೆಗಳನ್ನು ಧರಿಸಿ, ಲಕ್ಷ್ಮಣನೊಡನೆ ಸಭಾಮಂಟಪದಿಂದ ಹೊರಕ್ಕೆ ಬಂದನು. ಮತ್ತು ಆ ಶ್ವಾನನ ದುಃಖಕ್ಕೆ ಕಾರಣವನ್ನು ತಾನೇ ವಿಚಾರಿಸಿದನು. ಅನಂತರ ಶ್ವಾನವು ಶ್ರೀರಾಘವನ ಚರಣಗಳಿಗೆರಗಿ "ಹೇ ದಯಾಸಾಗರನೇ, ನಿನಗೆ ಮಂಗಳವಾಗಲಿ, ನನಗೆ ನೀನು ಬಹಳ ಉಪಕಾರಮಾಡಿದೆ. ರಾಮಚಂದ್ರಾ, ನಿರಪರಾಧಿಯಾದ ನನ್ನನ್ನು ಭಿಕ್ಷು ಯತಿಯು ಕಲ್ಲುಗಳಿಂದ ಹೊಡೆದು, ನನ್ನ ಒಂದು ಕಾಲು ಮುರಿದಿರುವನು. ಆದ್ದರಿಂದ ನಾನು ಬಹಳ ವ್ಯಸನದಿಂದ ನಿನ್ನ ಬಳಿಗೆ ಬಂದಿರುವೆನು. ಎಂದು ಹೇಳಿತು. ಈ ಮಾತುಗಳಿಂದ ಶ್ರೀರಾಮನಿಗೆ ಬಹಳ ಆಶ್ಚರ್ಯವಾಯಿತು. ರಾಮಚಂದ್ರನು ಆ ಯತಿಯನ್ನು ಕರೆಸಿದನು. ಶ್ರೀರಾಮನು ಎಲೈ ಸನ್ಯಾಸಿಯೇ, ನೀನು ಕಲ್ಲುಗಳಿಂದ ಹೊಡೆದು ಈ ನಾಯಿಯ ಕಾಲುಮುರಿದ ಕಾರಣವೇನು?' ಎಂದು

ಪ್ರಶ್ನೆಮಾಡಿದನು. ಬಳಿಕ ಯತಿಯು 'ರಾಮಚಂದ್ರಾ, ನಾನು ಭಿಕ್ಷೆಬೇಡಲು ಬೀದಿಯಲ್ಲಿ ಸಂಚಾರಮಾಡುತ್ತಿದ್ದೆನು. ಆಗ ಈ ಶ್ವಾನವು ನನ್ನನ್ನು ಮುಟ್ಟಿ ಜೋಳಿಗೆಯಲ್ಲಿದ್ದ ಅನ್ನವನ್ನು ಉಪಯೋಗಕ್ಕೆ ಬರದಂತೆ ಮಾಡಿತು. ಆದ್ದರಿಂದ ನನಗೆ ಬಹಳ ಕೋಪಬಂದು ಕಲ್ಲುಗಳಿಂದ ಈ ಶ್ವಾನವನ್ನು ಹೊಡೆದೆನು. ಆಗ ನನಗೆ ಪ್ರಾಣಹೋಗುವಷ್ಟು ಸಂಕಟವಾಗುತ್ತಿತ್ತು.' ಎಂದನು.

ಯತಿಯು ಈ ಮಾತುಗಳನ್ನು ಕೇಳಿ ಶ್ರೀರಾಮನು 'ಹೇ ಯತಿಶ್ರೇಷ್ಠನೆ, ಇದು ತಿಳುವಳಿಕೆಇಲ್ಲದ ಪಶುಪ್ರಾಣಿಯಲ್ಲವೆ? ಇದಕ್ಕೆ ಯಾವವಿಧವಾದ ಒಳ್ಳೇ ವಿಚಾರಶಕ್ತಿಯೂ ಇಲ್ಲದ್ದರಿಂದ ಅಂಥಾ ಕೆಲಸ ಮಾಡಿರಬಹುದು. ವಿವೇಕಿಯೆಂದೆನಿಸಿದ ನೀನು ಇಂಥಾ ನೀಚ ಕೃತ್ಯವನ್ನು ಮಾಡಿದೆಯಾದ್ದರಿಂದ ಅಪರಾಧವು ನಿನ್ನ ಪದರಿಗೆ ಬೀಳುವದು. ನನ್ನ ರಾಜ್ಯದಲ್ಲಿ ಯಾರಿಂದಲೂ ಯಾರಿಗೂ ದುಃಖವಾಗಬಾರದು. ಈ ವಿಷಯ ನಿನಗೆ ತಿಳಿಯದೇ ಹ್ಯಾಗೆ? ಇರಲಿ. ಎಲೈ ಶ್ವಾನವೇ, ಈತನಿಗೆ ನಾನು ಯಾವ ಶಿಕ್ಷೆಮಾಡಲಿ? ಹೇಳು. ನೀನು ಹೇಳಿದ ಶಿಕ್ಷೆಯನ್ನು ವಿಧಿಸುವೆನು." ಎಂದು ಮಾತನಾಡಿದನು. ಶ್ರೀರಾಮನ ಈ ವಚನಗಳನ್ನು ಕೇಳಿ ಶ್ವಾನವು "ಮಹಾರಾಜನೇ, ಈ ಯತಿಗೆ ಶಿವಾಲಯದ ಯಜಮಾನಿಕೆಯನ್ನು ಕೊಟ್ಟುಬಿಡು" ಎಂದು ಹೇಳಿತು. ಶ್ರೀರಾಮನು ಪರಮ ಹರ್ಷದಿಂದ ಆ ಸನ್ಯಾಸಿಯನ್ನು ಶಿವಾಲಯದ ವಿಚಾರಕನನ್ನಾಗಿ ನಿಯಮಿಸಿ ಲಕ್ಷ್ಮಣಾದಿಗಳೊಡನೆ ಸಭಾಮಂದಿರವನ್ನು ಪ್ರವೇಶಿಸಿದನು. ಆಗ ಸಭೆಯ ಜನರು "ರಾಮಚಂದ್ರಾ, ಇದೇನು ವಿಚಿತ್ರವಾದ ಶಾಸನ? ಇಂಥಾ ಶಿಕ್ಷೆಯನ್ನು ಇದುವರೆಗೂ ಎಲ್ಲೂ ಯಾರೂ ಕೊಟ್ಟದ್ದನ್ನು ನಾವು ಕೇಳಿರಲಿಲ್ಲ. ಆ ಯತಿಯು ಶಿವಾಲಯದ ಅಧಿಕಾರವು ಸಿಕ್ಕಿತೆಂದು ಮತ್ತಷ್ಟು ಸಂತೋಷಗೊಂಡಿರುವನು" ಎಂದರು. ಆಗ ಶ್ರೀರಾಮನು "ಎಲೈ ಸಭಾಸದರೆ, ಆ ಯತಿಯು ಅವಿವೇಕಿಯಾದ್ದರಿಂದ ಈ ಶಿಕ್ಷೆಯನ್ನು ಸಂತೋಷದಿಂದ ಸ್ವೀಕರಿಸಿರುವನು. 'ಈ ಶಿಕ್ಷೆಯಿಂದ ಏನಾಗುವದು, ಎಂಬ ವಿಷಯವನ್ನು ನೀವು ಆ ಶ್ವಾನವನ್ನು ವಿಚಾರಿಸಿರಿ, ಸ್ಪಷ್ಟವಾಗುವದು. ಎಂದು ಹೇಳಿದನು.

ಬಳಿಕ ಅವರೆಲ್ಲರೂ ಆ ನಾಯಿಯ ಬಳಿಗೆ ಬಂದು 'ಆ ಶಿಕ್ಷೆಯ ಫಲವು ಯಾವದು' ಎಂದು ಪ್ರಶ್ನೆಮಾಡಿದರು. ಆಗ ಶ್ವಾನವು "ಎಲೈ ಜನಗಳೇ, ಯಾರು ಕೃಷಿಯಿಂದ ಬಂದ ಧಾನ್ಯವನ್ನು ಮಾರುವರೋ, ದುಷ್ಟರಿಗೆ ಸನ್ಮಾನ ಮಾಡುವರೋ, ಶಿವಾಲಯ, ಮಠ, ಗ್ರಾಮ, ದಾನ, ಉಪವನ ಇವುಗಳಿಗೆ ಯಾರು

ಅಧಿಕಾರಿಗಳಾಗುವರೋ, ಅನಾಥಸ್ತ್ರೀ, ಬಾಲಕ ಇವರ ದ್ರವ್ಯಗಳನ್ನು ಯಾರು ಅಪಹರಿಸುವರೋ, ಕ್ರೂರವಾದ ಭಾಷಣಗಳನ್ನು ಯಾರು ನುಡಿಯುವರೋ, ಗೋವು, ಬ್ರಾಹ್ಮಣರು, ದೇವಸ್ಥಾನ ಇವುಗಳ ದ್ರವ್ಯಗಳನ್ನು ಯಾರು ತಿನ್ನುವರೋ, ಇವರೇ ಮೊದಲಾದ ಪಾತಕಿಗಳು ಮುಂದಿನ ಜನ್ಮದಲ್ಲಿ ನಾಯಿಯಾಗಿ ಹುಟ್ಟುತ್ತಾರೆ. ನಾನು ಹಿಂದೆ ಮಠಾಧಿಪತಿಯಾಗಿದ್ದೆನಾದ್ದರಿಂದ, ಈಗ ನನಗೆ ನಾಯಿಯ ಜನ್ಮ ಬಂದಿರುವದು.” ಎಂದು ಹೇಳಿತು. ಈ ಮಾತುಗಳಿಂದ ಆ ಜನಗಳ ಸಂಶಯಗಳೆಲ್ಲಾ ಪರಿಹಾರ ಹೊಂದಿದವು. ಬಳಿಕ ಸಭಾಸದರು ತಮ್ಮ ಮನೆಗಳಿಗೆ ಪ್ರಯಾಣ ಮಾಡಿದರು. ಶ್ವಾನವು ತನ್ನ ವಾಸಸ್ಥಾನಕ್ಕೆ ತೆರಳಿತು. ರಾಮ-ಲಕ್ಷ್ಮಣರು ರಾಜಗೃಹವನ್ನು ಪ್ರವೇಶಿಸಿದರು. ಮುಂದೆ ಯತಿಯು ದೇಹಪಾತವಾದ ಬಳಿಕ ಬಹಳ ಪಾಪಗಳಿಂದ ನಾಯಿಯ ಜನ್ಮವನ್ನು ಹೊಂದಿದನು. ಆ ಶ್ವಾನವು ತನ್ನ ಪುಣ್ಯಕರ್ಮಗಳಿಂದ ಸದ್ಗತಿಯನ್ನು ಹೊಂದಿತು. ಅಹಹಾ! ಎಷ್ಟು ಚಮತ್ಕಾರ! ಯತಿ ಎಲ್ಲಿ!! ನಾಯಿ ಎಲ್ಲಿ!! ಇವರಿಗೆ ಲಬ್ಧವಾದ ಲೋಕಗಳೆಲ್ಲಿ! ಕರ್ಮಗತಿಯು ಅಗಾಧವೆಂಬ ಮಾತು ಸತ್ಯವಾಗಿ ತೋರುವದು.

ಶ್ರೀರಾಮನ ರಾಜ್ಯದಲ್ಲಿ ಅನ್ಯಾಯದ ಗಂಧವಾದರೂ ಇರಲಿಲ್ಲ. ಹೀಗಿರಲು, ಒಂದು ದಿವಸ ಒಬ್ಬ ಬ್ರಾಹ್ಮಣನ ಐದು ವರ್ಷದ ಮಗನು ಮರಣಹೊಂದಿದನು. ಆ ಪ್ರೇತವನ್ನು ಹೆಗಲಮೇಲೆ ಹಾಕಿಕೊಂಡು ಹೆಂಡತಿಯೊಡನೆ ಆ ಬ್ರಾಹ್ಮಣನು ರಾಜಮಂದಿರದ ಬಳಿಗೆ ಬಂದು ಗಟ್ಟಿಯಾಗಿ ಅಳಲಾರಂಭಿಸಿದನು. ಅತನು ಗಟ್ಟಿಯಾಗಿ ಕೂಗುತ್ತ 'ರಾಮಚಂದ್ರಾ, ನೀನು ರಾಜಸೌಖ್ಯಗಳನ್ನು ಅನುಭವಿಸುತ್ತ ಯೋಚನೆಗಳಿಲ್ಲದೆ ಅಂತಃಪುರದಲ್ಲಿ ಬಿದ್ದಿರುವೆ. ಇಂಥಾ ನಿನಗೆ ರಾಜ್ಯದಲ್ಲಿ ನಡೆಯುವ ಅಧರ್ಮಕೃತ್ಯಗಳು ಹ್ಯಾಗೆ ತಿಳಿದಾವು? ನನ್ನ ಈ ಚಿಕ್ಕಮಗನು ನಿನ್ನ ದೋಷಗಳಿಂದಲೇ ಮರಣಹೊಂದಿರುವನು. 'ರಾಜನ ಪಾಪಕೃತ್ಯಗಳಿಂದಲೇ ಪ್ರಜೆಗಳು ಅಲ್ಪಾಯುಷ್ಯವಂತರಾಗುವರು. ರಾಜನ ದೋಷಗಳಿಂದಲೇ ರಾಜ್ಯಗಳಲ್ಲಿ ಅಧರ್ಮಗಳು ನಡೆಯುತ್ತಿರುತ್ತವೆ' ಎಂದು ಧರ್ಮವಚನಗಳು ಕೂಗಿ ಹೇಳುವವು. ನಿನ್ನ ರಾಜ್ಯದಲ್ಲಿ ಯಾರು ಅಧರ್ಮವನ್ನು ಮಾಡಿದರೂ, ಅದನ್ನೆಲ್ಲ ನೀನೇ ಮಾಡುವೆ. ಎಂದು ನಾನು ತಿಳಿಯುವೆನು. ಎಲೈ ರಾಜನೇ, ನನ್ನ ಐದು ವರ್ಷಗಳ ಈ ಕಂದನನ್ನು ಬದುಕಿಸು. ಇಲ್ಲವಾದರೆ ನಾನು ನಿನಗೆ ಶಾಪಕೊಟ್ಟು, ಆತ್ಮಹತ್ಯೆ ಮಾಡಿಕೊಳ್ಳುವೆನು. ಶ್ರಾವಣನೆಂಬ ವೈಶ್ಯಪುತ್ರನ ಮರಣದಿಂದ ನಿನ್ನ ತಂದೆಗೆ ಯಾವ ಗತಿಯು ಬಂತು, ಸ್ವಲ್ಪ ಸ್ಮರಣೆ ಮಾಡು” ಎಂದನು. ಆ ಬ್ರಾಹ್ಮಣ

ಪತ್ನಿಯೂ ಕೂಡ ಸೀತೆಯನ್ನು ಕುರಿತು 'ಹೇ ಸೀತೇ, ನೀನು ಪತಿವ್ರತೆಯಷ್ಟೇ? ನನ್ನಂತೆ ನೀನು ದುಃಖಕ್ಕೆ ಪಾತ್ರಳಾಗುವಂತೆ ಮಾಡಿಕೊಳ್ಳಬೇಡ. ನನ್ನ ಈ ಐದು ವರ್ಷದ ಬಾಲಕನನ್ನು ಬದುಕಿಸುವಂತೆ ಶ್ರೀ ರಾಮನಿಗೆ ಹೇಳು' ಎಂದು ಹೇಳಿದಳು.

ಈ ಮಾತುಗಳನ್ನು ಕೇಳಿ ಸೀತಾರಾಮರು ಥಟ್ಟನೆ ಎದ್ದು ಕಾಲುನಡಿಗೆಗಳಿಂದಲೇ ಬಾಗಿಲ ಹತ್ತರಕ್ಕೆ ಬಂದರು. ಆ ಶವವನ್ನು ನೋಡಿ ಸೀತಾರಾಮರಿಗೆ ಬಹಳ ವ್ಯಸನವಾಯಿತು. ಸೀತಾರಾಮರನ್ನು ಕಂಡಕೂಡಲೆ ಆ ದಂಪತಿಗಳು ಗಟ್ಟಿಯಾಗಿ ಅಳಲಾರಂಭಿಸಿದರು. ಆಗ ಶ್ರೀ ರಾಮನು "ಮಹಾಸ್ವಾಮಿ, ತಾವು ಅಳಲಾಗದು. ನಾನು ನಿಮ್ಮ ಪುತ್ರನನ್ನು ಬದುಕಿಸುವೆನು. ನನ್ನಿಂದ ಈ ಕೆಲಸವು ಸಾಧಿಸದೆ ಹೋದರೆ ನನ್ನ ಹಿರಿಯ ಮಗನಾದ ಕುಶನನ್ನು ತಮಗೆ ಸಮರ್ಪಿಸುವೆನು. ತಾವು ಸ್ವಲ್ಪ ಕಾಲದವರೆಗೆ ಇಲ್ಲೇ ಇರ್ರಿ" ಎಂದು ಹೇಳಿದನು. ಸೀತಾದೇವಿಯು ಆ ಬ್ರಾಹ್ಮಣನ ಹೆಂಡತಿಯನ್ನು ನೋಡಿ 'ಹೇ ಪತಿವ್ರತೇ, ನೀನು ಅಳಬಾರದು. ನಿನ್ನ ಮಗನು ನಿಶ್ಚಯವಾಗಿ ಬದುಕುವನು. ಈ ನನ್ನ ಮಾತು ಸುಳ್ಳಾದರೆ ನನ್ನ ಮಗನಾದ ಲವನನ್ನು ನಿನಗೆ ಕೊಡುವೆನು, ಎಂದು ಸಮಾಧಾನಪಡಿಸಿದಳು. ಈ ಸೀತಾರಾಮರ ಸತ್ಯವಚನಗಳನ್ನು ಕೇಳಿ ಆ ಬ್ರಾಹ್ಮಣದಂಪತಿಗಳು ಸ್ವಲ್ಪ ಸಮಾಧಾನಹೊಂದಿದರು. ಶ್ರೀ ರಾಮನ ಅಪ್ಪಣೆಯಂತೆ ಲಕ್ಷ್ಮಣನು ಆ ಶವವನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಇರಿಸಿ ಕಾಪಾಡಿದನು. ಶ್ರೀ ರಾಮನು ನಿತ್ಯಕೃತ್ಯಗಳನ್ನು ತೀರಿಸಿ, ಸಭಾಮಂಟಪಕ್ಕೆ ಬಂದು ಕುಳಿತನು. ಬ್ರಾಹ್ಮಣಪುತ್ರನ ವಿಷಯವಾಗಿ ಯಾವ ಯೋಚನೆಯೂ ತೋರದ್ದರಿಂದ ಆತನು ಗುರುಗಳಾದ ವಸಿಷ್ಠರನ್ನು ಕುರಿತು 'ಮಹಾಸ್ವಾಮಿ, ಈ ಅದ್ಭುತಕಾರ್ಯವು ಹ್ಯಾಗೆ ನಡೆದಿರಬಹುದು? ಇದು ಯಾರ ದುಷ್ಟಕೃತ್ಯದ ಫಲವಿರಬಹುದು? ಮುಂದೆ ಯಾವ ಉಪಾಯ ಮಾಡಬೇಕು. ಎಂದು ಪ್ರಶ್ನೆ ಮಾಡಿದನು. ಅಷ್ಟರಲ್ಲಿ ಶ್ರೀ ರಾಮನ ಸಭೆಗೆ ನಾರದರು ಬಂದರು. ಆ ಮಹರ್ಷಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಸಿಂಹಾಸನದ ಮೇಲೆ ಕುಳ್ಳಿರಿಸಿ, ಶ್ರೀರಾಮನು ತನ್ನ ಮನೋವ್ಯಥೆಯ ಕಾರಣವನ್ನು ತಿಳುಹಿದನು. ಆ ಮಾತುಗಳನ್ನು ಕೇಳಿ ನಾರದರು 'ರಾಮಚಂದ್ರಾ, ನಿನ್ನ ರಾಜ್ಯದಲ್ಲಿ ಯಾರೋ ಅಧರ್ಮವನ್ನಾಚರಿಸುವರು. ಆದ್ದರಿಂದಲೇ ಇಂಥಾ ಅನಾಹುತವು ಸಂಭವಿಸಿರುವದು. ಈ ಅಧಾರ್ಮಿಕನಾದ ಮನುಷ್ಯನ ಸ್ಥಳವನ್ನು ನಾನೇ ನಿನಗೆ ತಿಳುಹಬಹುದು. ಆದರೆ ಹಾಗೆ ಮಾಡದೆ, ಲೋಕೋಪಕಾರವಾಗಲೆಂದು ನಿನ್ನನ್ನೇ ಶೋಧಮಾಡಲು ಕಳುಹಿಸುವೆನು. ನೀನು ಅಧರ್ಮವನ್ನಾಚರಿಸುವ ಪ್ರಾಣಿ

ಯನ್ನು ಶೋಧಮಾಡು. ಅಂದರೆ ಈ ಬ್ರಾಹ್ಮಣಪುತ್ರನು ಬದುಕುವನು" ಎಂದು ಹೇಳಿದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು ಶೋಧಕ್ಕೆ ಹೊರಡಲು ನಿಶ್ಚಯ ಮಾಡಿದನು. ಬಳಿಕ ನಾರದರು ತಮ್ಮ ಲೋಕಕ್ಕೆ ತೆರಳಿದರು.

ಶ್ರೀ ರಾಮನು ಲಕ್ಷ್ಮಣಾದಿಗಳೊಡನೆ ಪುಷ್ಪಕವಿಮಾನದಲ್ಲಿ ಕುಳಿತು ಶೋಧ ಮಾಡುವದಕ್ಕೆ ಹೊರಟನು. ಆತನು ಮಾರ್ಗದಲ್ಲಿ ಶೃಂಗಭೇರಪುರದ ಹತ್ತಿರ ಒಬ್ಬ ಹೆಂಗಸಿನ ಸುತ್ತಲೂ ಕೆಲವು ಜನರು ಮುತ್ತಿಕೊಂಡಿರುವಂತೆಯೂ, ಆಕೆಯು ಅಳುತ್ತಿರುವಂತೆಯೂ ಕಂಡನು. ಸ್ವಲ್ಪ ಹತ್ತಿರಕ್ಕೆ ಹೋಗಲು, ಒಂದು ಶವವು ಅಲ್ಲಿ ಕಾಣಿಸಿತು. 'ಶ್ರೀ ರಾಮನು ಬಂದಿರುವನು' ಎಂದು ತಿಳಿದೊಡನೆ ಆ ತರುಣಿಯು 'ರಾಮ, ನನ್ನ ಗಂಡನನ್ನು ಬದುಕಿಸು. ಇಲ್ಲವಾದರೆ ನಿನಗೆ ಶಾಪ ಕೊಡುವೆನು' ಎಂದು ಹೇಳಿದಳು. ಈ ಮಾತುಗಳನ್ನು ಕೇಳಿ ಶ್ರೀರಾಮನು 'ಹೇ ಪತಿವ್ರತೆಯೇ, ಅಳಬೇಡ, ನಿನ್ನ ಪತಿಯನ್ನು ನಾನು ಬದುಕಿಸುವೆನು. ಅದಕ್ಕೋಸ್ಕರವೇ ನಾನು ಅಯೋಧ್ಯೆಯಿಂದ ಹೊರಟಿರುವೆನು' ಎಂದು ಹೇಳಿ ಆ ಶವವನ್ನು ಅಯೋಧ್ಯೆಗೆ ಕಳುಹಿಸಿದನು. ಮತ್ತು 'ನಾನು ಬರುವವರೆಗೂ ಯಾರೂ ಶವಗಳನ್ನು ಸುಡಬಾರದು' ಎಂದು ನಗರಗಳಲ್ಲೆಲ್ಲ ಡಂಗುರ ಹೊಡೆಸುವಂತೆ ಸುಮಂತ್ರನಿಗೆ ಹೇಳಿಕಳುಹಿಸಿದನು. ಇದರಂತೆ ಪ್ರಯಾಗ, ಹಸ್ತಿನಾವತಿ, ಉಜ್ಜಯಿನಿ ಇತ್ಯಾದಿ ನಗರಗಳಿಂದ ಅಯೋಧ್ಯೆಗೆ, ಏಳು ಶವಗಳು ಬಂದವು. ಅವೆಲ್ಲವನ್ನೂ ಎಣ್ಣೆಯ ಕೊಪ್ಪರಿಗೆಗಳಲ್ಲಿ ಹಾಕಿ ಜೋಪಾನ ಮಾಡಿದ್ದರು.

ಇತ್ತ ಶ್ರೀ ರಾಮನು ಉತ್ತರ, ಪಶ್ಚಿಮ, ಪೂರ್ವ ಈ ದಿಕ್ಕುಗಳನ್ನು ಸುತ್ತಿ ಎಲ್ಲಿಯೂ ಅಧಾರ್ಮಿಕರನ್ನು ಕಾಣದೆ ದಕ್ಷಿಣದಿಕ್ಕಿಗೆ ಬಂದನು. ರೇವಾನದಿಯ ತೀರದಲ್ಲಿ ಒಬ್ಬ ಶೂದ್ರನು ಅಧೋಮುಖನಾಗಿ(ಧೂಮಪಾನ)ಹೊಗೆಕುಡಿಯುತ್ತಿರುವದು ಶ್ರೀ ರಾಮನ ದೃಷ್ಟಿಗೆ ಬಿತ್ತು. ಶ್ರೀ ರಾಮನು ಆ ಕ್ಷಣವೇ ಆ ಪಾಪಿಯನ್ನು ಕೊಲ್ಲಲುದ್ಯುಕ್ತನಾದನು. ಆ ಶೂದ್ರನು ಹೆದರಿಕೆಯಿಂದ ಗಡಗಡನೆ ನಡುಗುತ್ತ ಶ್ರೀ ರಾಮನ ಪಾದಗಳಿಗೆ ನಮಸ್ಕರಿಸಿ ಸ್ತೋತ್ರಮಾಡಿದನು. ಇದನ್ನು ಕೇಳಿ ಶ್ರೀ ರಾಮನು 'ಎಲೈ ಶೂದ್ರನೆ, ಮೂರು ವರ್ಣದವರು ಹೊರತಾಗಿ ಮತ್ತೆಯಾರೂ ತಪಸ್ಸು ಮಾಡಲಾಗದೆಂದು ಧರ್ಮಪ್ರಸಿದ್ಧಿ ಇದ್ದರೂ ಅಯೋಗ್ಯನಾದ ನೀನು ತಪಶ್ಚರ್ಯೆ ಮಾಡಿರುತ್ತೀಯಾದ ಕಾರಣ ನಿನ್ನನ್ನು ಕೊಲ್ಲದೆ ಎಂದಿಗೂ ಬಿಡೆನು. ನಿನಗೆ ಏನಾದರೂ ವರ ಬೇಕಾದರೆ ಬೇಡು, ಕೊಡುವೆನು' ಎಂದನು. ಆಗ ಆ ಶೂದ್ರನು "ರಾಮಚಂದ್ರಾ, ಶೂದ್ರರಿಗೆ ಯಾವದಾದರೂ ಒಂದು ಮೋಕ್ಷ ಸಾಧನವನು

ಉಪದೇಶಿಸು" ಎಂದನು. ಆಗ ಶ್ರೀ ರಾಮಚಂದ್ರನು 'ಎಲೈ ಶೂದ್ರನೆ, ಶೂದ್ರರೆಲ್ಲರೂ ನನ್ನ ಸ್ಮರಣೆ, ಪೂಜೆ, ವಂದನೆ ಇವುಗಳಿಂದಲೇ ಉತ್ತಮಗತಿಯನ್ನು ಹೊಂದಲಿ. ನೀನು ಶೂದ್ರರಿಗೆ ಬಹಳ ಹೆಚ್ಚಿನ ಉಪಕಾರ ಮಾಡಿರುವೆಯಾದ್ದರಿಂದ ನಿನಗೆ ಅವರಲ್ಲಿ ಶ್ರೇಷ್ಠವಾದ ಕೀರ್ತಿಯೊಗದಲಿ' ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಶೂದ್ರನು 'ಸ್ವಾಮಿ, ಕಲಿಯುಗದಲ್ಲಿ ಶೂದ್ರರು ಕೃಷಿಕರ್ಮಗಳಿಂದ ಬಹಳ ಮನೋವ್ಯಥೆಯನ್ನು ಹೊಂದುವರು. ಅವರು ರಾಮಮಂತ್ರದ ಜಪ ಹೋಮಾದಿಗಳನ್ನು ಹ್ಯಾಗೆ ಮಾಡಿಯಾರು' ಎಂದನು. ಆಗ ಶ್ರೀ ರಾಮನು 'ಎಲೈ ಶೂದ್ರನೆ, ಶೂದ್ರರಿಗೆ ಅಷ್ಟು ಅನುಕೂಲವಿಲ್ಲದೆ ಹೋದರೆ, ಅವರು ಎಲ್ಲರಿಗೂ ನಮಸ್ಕಾರ ಮಾಡುವಾಗ, ರಾಮ, ರಾಮ ಎಂದು ನನ್ನ ನಾಮಗಳನ್ನು ಉಚ್ಚರಿಸಲಿ. ಅದರಿಂದಲೇ ಅವರಿಗೆ ಸದ್ಗತಿಗಳಾಗುವವು' ಎಂದು ಹೇಳಿ ಆ ಶೂದ್ರನಿಗೆ "ಮುಮುಕ್ಷುಗಳು ಸೀತಾ ಲಕ್ಷ್ಮಣ ಸಹಿತನಾದ ನನ್ನ ದರ್ಶನ ಮಾಡುವದಕ್ಕೆ ಮೊದಲು ನಿನ್ನ ದರ್ಶನ ತೆಗೆದುಕೊಳ್ಳಲಿ" ಎಂದು ಶ್ರೇಷ್ಠವಾದ ವರವನ್ನೂ ಕೊಟ್ಟನು. ಬಳಿಕ ಶ್ರೀ ರಾಮನು ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಆ ಶೂದ್ರನಿಗೆ ವಿಧಿಸಿದನು. ಆ ಶೂದ್ರನು ಮೃತನಾದ ಕೂಡಲೆ ಅಯೋಧ್ಯೆಯಲ್ಲಿ ಎಳ ಶವಗಳೂ ಬದುಕಿದವು. ಈ ರೀತಿ ಅಧರ್ಮವನ್ನು ನಾಶಮಾಡಿ ಶ್ರೀ ರಾಮನು ಭೂಮಿಯ ಮೇಲಿನ ಅನೇಕ ಚಮತ್ಕಾರಗಳನ್ನು ಸೀತಾದೇವಿಗೆ ತೋರಿಸುತ್ತ ಅಯೋಧ್ಯೆಗೆ ಹೊರಟನು.

ಅಷ್ಟರಲ್ಲಿ ಹದ್ದು-ಗೂಗೆಗಳೆರಡೂ ಜಗಳವಾಡುತ್ತ ಶ್ರೀ ರಾಮನ ಬಳಿಗೆ ಬಂದವು. ಈ ಜಗಳವನ್ನು ನೋಡಿ ಶ್ರೀ ರಾಮನು 'ನಿಮ್ಮ ಜಗಳಕ್ಕೆ ಕಾರಣವೇನು? ನನ್ನ ಮುಂದೆ ಹೇಳಿರಿ' ಎಂದು ಕೇಳಿದನು. ಆಗ ಗೂಗೆಯು ಶ್ರೀರಾಮನಿಗೆ ನಮಸ್ಕರಿಸಿ 'ರಾಮಾ, ನಾನು ಒಂದು ಮರದ ಮೇಲೆ ಕೆಲವು ಕಾಲಗಳ ಮುಂಚೆ ಒಂದು ಗೂಡನ್ನು ಕಟ್ಟಿಕೊಂಡಿದ್ದೆನು. ಇದುವರೆಗೂ ಕೆಲವು ಪ್ರತಿಬಂಧಕಗಳಿಂದ ಆ ಗೂಡನ್ನು ಬಿಟ್ಟು ಬೇರೆಕಡೆ ನಾನು ವಾಸವಾಗಿದ್ದೆನು. ಈ ಸಮಯವನ್ನು ನೋಡಿ ಈ ದುಷ್ಟಹದ್ದು ಅದರಲ್ಲಿ ವಾಸಮಾಡಿರುವದು. ಈಗ ನಾನು ನನ್ನ ಗೂಡನ್ನು ಬಿಡೆಂದರೆ ನನ್ನೊಡನೆ ಸುಮ್ಮನೆ ವ್ಯಾಜ್ಯವಾಡುತ್ತಿರುವದು, ಎಂದು ಹೇಳಿತು. ಆಗ ಶ್ರೀ ರಾಮನು 'ಎಲೈ ಹದ್ದೇ, ಅದರ ಗೂಡನ್ನು ನೀನು ಯಾಕೆ ಬಿಡುವದಿಲ್ಲ?' ಎಂದು ಕೇಳಿದನು. ಈ ಮಾತುಗಳನ್ನು ಕೇಳಿ ಹದ್ದು 'ರಾಮಚಂದ್ರಾ, ಈ ಗೂಡು ಮೊದಲು ನನ್ನದೇ ಆಗಿತ್ತು. ನಾನು ಕೆಲವು ದಿವಸಗಳು ಅಲ್ಲಿ ವಾಸ-

ಮಾಡದೆ ಇರಲು, ಈ ಗೂಗೆಯು ಅದರಲ್ಲಿ ಸೇರಿಕೊಂಡಿತು. ಕೆಲವು ಕಾಲದ ಮೇಲೆ ಇದು ಆ ಗೂಡನ್ನು ಬಿಟ್ಟು ಹೋದದ್ದನ್ನು ನೋಡಿ ಅದಕ್ಕೆ ಇಲ್ಲಿ ವಾಸ ಮಾಡಲು ಇಷ್ಟವಿಲ್ಲವೆಂದು ತಿಳಿದು ನಾನು ವಾಸಮಾಡಿದೆನು." ಎಂದು ಹೇಳಿತು. ಈ ಮಾತುಗಳನ್ನು ಕೇಳಿ ಶ್ರೀ ರಾಮನು ಆಶ್ಚರ್ಯಗೊಂಡನು. ಮತ್ತು ಅವುಗಳಿಗೆ ಏನು ನಿರ್ಣಯ ಹೇಳಬೇಕೆಂದು ಯೋಚಿಸಲಾರಂಭಿಸಿದನು. ಆಗ ಗೃಧ್ರವು 'ರಾಮಾ, ನಮ್ಮ ನ್ಯಾಯವನ್ನು ಸರಿಯಾದ ರೀತಿಯಿಂದ ತೀರಿಸು. ಸುಮ್ಮನೆ ಪಕ್ಷಪಾತಮಾತ್ರ ಮಾಡಬೇಡ, ಎಂದು ಹೇಳಿತು. ಈ ವಚನಗಳನ್ನು ಕೇಳಿ ಶ್ರೀ ರಾಮನು ಸ್ವಲ್ಪ ಯೋಚಿಸಲಾರಂಭಿಸಿದನು. ಮತ್ತು ಶ್ರೀ ರಾಮನು 'ಎಲೈ ಗೂಗಿಯೇ, ನೀನು ಆ ಗೂಡನ್ನು ಯಾವಾಗ ಕಟ್ಟಿದೆ?' ಎಂದು ಪ್ರಶ್ನೆಮಾಡಿದನು. ಆಗ ಗೂಗೆಯು 'ಯಾವಾಗ ಈ ಪೃಥ್ವಿಯು ಉಂಟಾಯಿತೊ ಆಗಲೇ ನಾನು ಕಟ್ಟಿದೆನು' ಎಂದು ಹೇಳಿತು. ಅದನ್ನು ಕೇಳಿ ಶ್ರೀ ರಾಮನು 'ಎಲೈ ಹದ್ದೇ, 'ನೀನು ಯಾವಾಗ ಗೂಡುಕಟ್ಟಿದೆ' ಎಂದು ಕೇಳಿದನು. ಆಗ ಹದ್ದು 'ರಾಮಾ, ಯಾವಾಗ ಭೂಮಿಯು ಹುಟ್ಟಿರಲಿಲ್ಲವೋ, ಯಾವಾಗ ಎಲ್ಲ ಆಕಾಶವೂ ಜಲಮಯವಾಗಿತ್ತೋ? ಆಗ ಮಾವಿನ ಮರದಮೇಲೆ ಆ ಗೂಡನ್ನು ಕಟ್ಟಿದೆನು' ಎಂದು ಹೇಳಿತು. ಇದನ್ನು ಕೇಳಿ ಶ್ರೀರಾಮನಿಗೆ ಬಹಳ ಕೋಪಬಂತು. ಮತ್ತು ಆತನು "ಎಲೈ ಅಧಮ ಗೃಧ್ರವೇ, ನೀನು ನನ್ನ ಸನ್ನಿಧಿಯಲ್ಲಿ ಸುಳ್ಳು ಮಾತಾಡುತ್ತಿರುವೆಯಾ? ಪೃಥ್ವಿ ಇಲ್ಲದೆ ಆ ವೃಕ್ಷವು ಎಲ್ಲಿಂದ ಬಂತು? ಇರಲಿ. ಎಲೈ ಲಕ್ಷ್ಮಣನೆ, ಈ ಪಾಪಿ ಗೃಧ್ರವನ್ನು ಶೂಲಕ್ಕೆ ಹಾಕಿಸು. ಇಂಥಾ ನೀಚನನ್ನು ಉಳಿಸಿ ಉಪಯೋಗವಿಲ್ಲ." ಎಂದನು. ಅನಂತರ ಲಕ್ಷ್ಮಣನು ಶ್ರೀ ರಾಮನ ಅಪ್ಪಣೆಯಂತೆ ಆ ಗೃಧ್ರವನ್ನು ಶೂಲಕ್ಕೆ ಹಾಕಿದನು. ಆ ಗೃಧ್ರವು ಶ್ರೀ ರಾಮನ ಸನ್ನಿಧಿಯಲ್ಲಿ ಮರಣ ಹೊಂದಿದ್ದರಿಂದ ವೈಕುಂಠ ಲೋಕವನ್ನು ಹೊಂದಿತು. ಶ್ರೀ ರಾಮನು ಗೂಗೆಗೆ ಆ ಗೂಡಿನಲ್ಲಿ ವಾಸಮಾಡುವಂತೆ ಅಪ್ಪಣೆಮಾಡಿ ಸಮಸ್ತ ಪರಿವಾರದೊಡನೆ ಅಯೋಧ್ಯೆಗೆ ಬಂದನು. ಶ್ರೀ ರಾಮನನ್ನು ನೋಡಿ ಸಮಸ್ತ ಪ್ರಜೆಗಳೂ ಹರ್ಷಗೊಂಡರು. ಶ್ರೀ ರಾಮನು ತನ್ನ ಅನುಗ್ರಹದಿಂದ ಬದುಕಿ ಸುಖದಿಂದಿರುವ ಆ ಏಳು ಜನರಿಗೂ ವಸ್ತ್ರಾಭರಣಗಳಿಂದ ಪೂಜೆಮಾಡಿ ತಮ್ಮ ತಮ್ಮ ಸ್ಥಳಗಳಿಗೆ ಪ್ರಯಾಣ ಮಾಡುವಂತೆ ಅಪ್ಪಣೆಮಾಡಿದನು. ಈ ರೀತಿ ಅನೇಕ ಚಮತ್ಕಾರಗಳನ್ನು ನಡೆಸುತ್ತಾ ಶ್ರೀ ರಾಮನು ಅಯೋಧ್ಯೆಯಲ್ಲಿ ಸುಖದಿಂದ ವಾಸಮಾಡಿದನು.

## ೪ನೆಯ ಪ್ರಕರಣ.

### ಹದಿನಾರು ಸಾವಿರ ಸ್ತ್ರೀಯರ ಬಂಧ ವಿಮೋಚನೆ.

ಒಂದಾನೊಂದು ಕಾಲದಲ್ಲಿ ಶ್ರೀ ರಾಮನು ಪರಿವಾರ ಸಮೇತನಾಗಿ ಬೇಟೆಗೋಸ್ಕರ ಅರಣ್ಯಕ್ಕೆ ತೆರಳಿದನು. ಆತನು ಅನೇಕ ಉಪವನಗಳನ್ನು ನೋಡುತ್ತಾ, ಅಲ್ಲಲ್ಲಿ ಅನೇಕ ದುಷ್ಟ ಮೃಗಗಳನ್ನು ನಾಶಮಾಡಿದನು. ಆ ಕಾಲದಲ್ಲಿ ಹು, ಇಕೋ ಇಲ್ಲಿ ಹುಲಿಬಂತು? ಕರಡಿಯನ್ನು ನೋಡು? ಅಕೋ ಸಿಂಹವನ್ನು ನೋಡಿದೆಯಾ? ಹಿಡಿ, ಹೊಡಿ, ಕಡಿ, ತಿವಿ, ಬಗಿ ಇತ್ಯಾದಿ ವಚನಗಳ ಧ್ವನಿಗಳಿಂದ ಆಕಾಶವು ವ್ಯಾಪ್ತವಾಗಿತ್ತು. ಸೇನಾಪತಿಗಳಿಗೆ ಒಂದೊಂದುಸಲ ಬಹಳ ಕೋಪಬರುತ್ತಿತ್ತು. ಕೆಲವು ರಾಮದೂತರು ಮೃಗಗಳನ್ನು ಪೊದೆಗಳಿಂದ ಹೊರಗೆ ಹೊರಡಿಸಲು ತಮ್ಮಟೆ, ಢಕ್ಕೆ ಮೊದಲಾದ ವಾದ್ಯಗಳ ಧ್ವನಿಮಾಡುತ್ತಾ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದರು. ಈ ಶಬ್ದಗಳಿಗೆ ಬೆದರಿ ಒಂದು ಸಿಂಹವು ತನ್ನ ಗುಹೆಯಿಂದ ಹೊರಕ್ಕೆ ಬಂತು. ಆ ಸಿಂಹವು ಶ್ರೀ ರಾಮನನ್ನು ಕೆಂಪಾದ ಕಣ್ಣುಗಳಿಂದ ನೋಡುತ್ತಾ ಆತನ ಎದುರಾಗಿ ಬಂತು. ಈ ಸಾಹಸಕೃತ್ಯವನ್ನು ನೋಡಿ ಶ್ರೀ ರಾಮನು ತನ್ನ ಬಾಣದಿಂದ ಆ ಸಿಂಹವನ್ನು ಹೊಡೆದನು. ಆ ಸಿಂಹವು ಎಷ್ಟು ಬಲಶಾಲಿಯಾದರೂ ಶ್ರೀ ರಾಮನ ಬಾಣದ ಏಟನ್ನು ತಾಳಲಾರದೆ, ಹಾರಿ ಆತನ ಎದುರಿಗೆ ಬಿತ್ತು. ಆಕ್ಷಣದಲ್ಲಿ ಅದು ದಿವ್ಯರೂಪವನ್ನು ಧರಿಸಿ ಶ್ರೀ ರಾಮನಿಗೆ ನಮಸ್ಕರಿಸಿ "ರಾಮಚಂದ್ರಾ, ನೀನು ನನಗೆ ಬಹಳ ಉಪಕಾರ ಮಾಡಿದೆ. ನಾನು ಮೊದಲು ವಿದ್ಯಾಧರ ಕುಲದವನು. ನಾನು ಪೂರ್ವದಲ್ಲಿ ಅವಿವೇಕದಿಂದ ಒಬ್ಬ ಋಷಿಪತ್ನಿಯನ್ನು ಬಲಾತ್ಕಾರದಿಂದ ಉಪಭೋಗ ಮಾಡಿದೆನು. ಆ ಋಷಿಪತ್ನಿಯು ಬಹಳ ಕೋಪದಿಂದ 'ನೀನು ಕ್ರೂರವಾದ ಸಿಂಹನಾಗು' ಎಂದು ಶಪಿಸಿದಳು. ನಾನು ಬಹಳ ಪ್ರಾರ್ಥನೆ ಮಾಡಿಕೊಂಡಮೇಲೆ ಕನಿಕರದಿಂದ ಆ ಋಷಿಪತ್ನಿಯು 'ನೀನು ರಾಮಬಾಣದಿಂದ ಮುಕ್ತನಾಗುವೆ'ಎಂದು ವರವನ್ನಿತ್ತು ಪ್ರಯಾಣಮಾಡಿದಳು. ಆ ಪತಿವ್ರತೆಯ ಮಾತು ಈ ದಿವಸ ಸತ್ಯವಾಯಿತು" ಎಂದು ಹೇಳಿ ಶ್ರೀ ರಾಮನ ಅಪ್ಪಣೆಯನ್ನು ಪಡೆದು ಆ ವಿದ್ಯಾಧರನು ಸ್ವರ್ಗಲೋಕಕ್ಕೆ ತೆರಳಿದನು.

ಬಳಿಕ ಶ್ರೀ ರಾಮನು ಕುದುರೆಯಮೇಲೆ ಕುಳಿತು ಅಲ್ಲಲ್ಲಿ ಸಂಚರಿಸುತ್ತಿದ್ದನು.

ಆತನ ಎದುರಿಗೆ ಒಂದು ಗುಹೆಯು ಕಾಣಿಸಿತು. ಆ ಗುಹೆಯ ಬಾಗಿಲಿಗೆ ನಿಲ್ಲಿಸಿರುವ ಬಂಡೆಯನ್ನು ತನ್ನ ಧನುಸ್ಸಿನಿಂದ ಕೆಳಗೆ ಕೆಡವಿ ಶ್ರೀ ರಾಮನು ಅತ್ಯಾರೂಢನಾಗಿಯೇ ಒಳಕ್ಕೆ ಪ್ರವೇಶಿಸಿದನು. ಬಹಳ ಒಳಕ್ಕೆ ಹೋದಬಳಿಕ ಶ್ರೀ ರಾಮನಿಗೆ ನಾಲ್ಕು ಜನ ಸ್ತ್ರೀಯರು ಕಾಣಿಸಿದರು. ಅವರ ದೇಹದಲ್ಲಿ ಎಲಬು, ಚರ್ಮ ಇವು ಹೊರತಾಗಿ ಮತ್ತೇನೂ ಉಳಿದಿರಲಿಲ್ಲ. ಶ್ವಾಸೋಚ್ಛ್ವಾಸಗಳಿಂದ ಮಾತ್ರ ಅವರು ಬದುಕಿರುವರೆಂದು ಗೊತ್ತು ಮಾಡಬೇಕಾಗಿತ್ತು. ಇಂಥ ಉಗ್ರತಪಸ್ಸು ಮಾಡುತ್ತಲಿರುವ ಆ ತರುಣಿಯರನ್ನು ನೋಡಿ ಶ್ರೀ ರಾಮನು ಪರಮ ಸಂತುಷ್ಟನಾದನು. ಆತನು ನಾಲ್ಕುರೂಪಗಳನ್ನು ಧರಿಸಿ ಅವರ ಮುಂದೆ ನಿಂತನು. ಮತ್ತು ಅವರನ್ನು ಕುರಿತು 'ಎಲೈ ತರುಣಿಯರೆ, ನಿಮ್ಮ ತಪಸ್ಸಿಗೆ ಮೆಚ್ಚಿ ನಾನು ಪ್ರಸನ್ನನಾಗಿರುವೆನು. ನಿಮಗೆ ಬೇಕಾದ ವರಗಳನ್ನು ಬೇಡಿರಿ' ಎಂದು ಮಾತನಾಡಿದನು. ಈ ಮಾತುಗಳನ್ನು ಕೇಳಿ ಆ ಸ್ತ್ರೀಯರು ಶ್ರೀ ರಾಮನ ಪಾದಕಮಲಗಳನ್ನು ಸ್ಪರ್ಶಮಾಡಿದರು. ಆ ಮಹಿಮನ ಕೃಪೆಯಿಂದ ಆ ತರುಣಿಯರ ದೇಹಗಳು ರಕ್ತಮಾಂಸಾದಿಗಳಿಂದ ಪುಷ್ಟವಾದವು. ಆ ಸ್ತ್ರೀಯರು 'ನಾವು ಮೊದಲಿನಂತೆ ದಿವ್ಯ ಸೌಂದರ್ಯವತಿಯರಾಗಿರುವೆವು' ಎಂದು ತಿಳಿದು, ಆ ದಿವ್ಯ ಮೂರ್ತಿಯಾದ ಶ್ರೀ ರಾಮನನ್ನು ನೋಡಿ ಆಶ್ಚರ್ಯಗೊಂಡು, 'ಎಲೈ ಮಹಾನುಭಾವರೇ. ನೀವು ಯಾರು? ಇಲ್ಲಿಗೆ ಯಾತಕೆ ಬಂದಿರಿ? ನೀವು ದೇವತೆಗಳೋ? ಅಥವಾ ದಾನವರೋ? ನಮ್ಮ ಕೃಶವಾದ ದೇಹಗಳು ಏನುಕಾರಣ ಸುಂದರಗಳಾದವು? ಆ ಯಮಸ್ವರೂಪಿಯಾದ ದುಂದುಭಿಯು ಬದುಕಿರುವನೋ? ಅಥವಾ ಸತ್ತನೋ?" ಇತ್ಯಾದಿ ವಿಷಯಗಳನ್ನು ಪ್ರಶ್ನೆಮಾಡಿದರು. ಆಗ ಶ್ರೀ ರಾಮನು "ಹೇ ಲಲನೆಯರೆ, ನಾನು ಅಯೋಧ್ಯಾವಾಸಿಯಾದ ರಾಮನಲ್ಲವೆ? ಈ ನಾಲ್ಕು ರೂಪಗಳೂ ನನ್ನವೇ ಆಗಿರುವವು. ನಾನು ಏಳು ದ್ವೀಪಗಳಿಗೂ ಅರಸನಾಗಿರುವೆನು. ದುಂದುಭಿಯನ್ನು ವಾಲಿಯು ನಾಶಮಾಡಿದನು. ಆ ವಾಲಿಯನ್ನು ನಾನು ಒಂದೇ ಬಾಣದಿಂದ ಭೇದಿಸಿದೆನು. ನಾನು ರಾವಣನೇ ಮೊದಲಾದ ಸಮಸ್ತ ರಾಕ್ಷಸರನ್ನೂ ನಾಶಮಾಡಿರುವೆನು. ಈ ವನಕ್ಕೆ ನಾನು ಬೇಟೆಗಾಗಿ ಬಂದಿದ್ದೆನು. ನಿಮ್ಮ ಗುಹೆಗೆ ಮುಚ್ಚಿರುವ ಬಂಡೆಯನ್ನು ಈ ಧನುಸ್ಸಿನ ತುದಿಯಿಂದ ಕೆಳಕ್ಕುರುಳಿಸಿ, ವಿನೋದವಾಗಿ ನಿಮ್ಮ ಕಡೆಗೆ ಬಂದಿರುವೆನು. ನನ್ನ ಸ್ಪರ್ಶದಿಂದಲೇ ನಿಮ್ಮ ಅವಯವಗಳು ದಿವ್ಯ ಸೌಂದರ್ಯವನ್ನು ಹೊಂ[illegible] ನೀವು ನಿಮಗೇನುಬೇಕು? ಹೇಳಿರಿ" ಎಂದು ಮಾತನಾಡಿದನು.

ಈ ವಚನಗಳನ್ನು ಕೇಳಿ ಪರಮಾನಂದದಿಂದ ಆ ತರುಣಿಯರು "ರಾಮಚಂದ್ರಾ, ನಾವು ಬ್ರಾಹ್ಮಣಪುತ್ರಿಯರು. ನಮ್ಮಂತೆ ಕ್ಷತ್ರಿಯ, ವೈಶ್ಯ, ಶೂದ್ರರ ಹದಿನಾರು ಸಾವಿರ ಹೆಣ್ಣು ಮಕ್ಕಳನ್ನು ದುಂದುಭಿಯು ಈ ಗುಹೆಯಲ್ಲಿ ಇರಿಸಿದ್ದಾನೆ. ಅವನು ಒಂದೇ ದಿವಸದಲ್ಲಿ ಒಂದು ಲಕ್ಷಸ್ತ್ರೀಯರನ್ನು ವಿವಾಹ ಮಾಡಿಕೊಳ್ಳಬೇಕೆಂದು ಬಯಸಿದ್ದನು. ಅವನು ನಮ್ಮೆಲ್ಲರನ್ನೂ ಇಲ್ಲಿಗೆ ತಂದು ಸೇರಿಸಿ ಗುಹೆಯ ಬಾಗಿಲಿಗೆ ಒಂದು ದೊಡ್ಡ ಬಂಡೆಯನ್ನು ಮುಚ್ಚಿದ್ದನು. ಆಗಿನಿಂದ ನಾವೆಲ್ಲರೂ ವಿಷ್ಣುವಿನ ಧ್ಯಾನಮಾಡುತ್ತ ಬಿದ್ದಿರುವೆವು. ಇಲ್ಲಿ ನಮಗೆ ವಾಯುಹೊರತಾಗಿ ಮತ್ತೇನೂ ಭಕ್ಷಣಕ್ಕೆ ಸಿಕ್ಕುವದಿಲ್ಲ. ಆದ್ದರಿಂದ, ಹೇ, ಮಹಾಪ್ರಭೋ ರಾಮ, ನೀನು ನಮ್ಮನ್ನು ಅಂಗೀಕರಿಸು. ನಿನ್ನ ಪಾದಸೇವೆಮಾಡುತ್ತ ಕಾಲಹರಣ ಮಾಡುವೆವು. ಕ್ಷತ್ರಿಯ ಸಾಂಪ್ರದಾಯದಂತೆ ನೀನು ನಮ್ಮೆಲ್ಲರನ್ನೂ ಇಲ್ಲೀ ಗಾಂಧರ್ವವಿಧಿಯಿಂದ ವಿವಾಹ ಮಾಡಿಕೊಂಡೆಯಾದರೆ, ನಮ್ಮ ಸಂತೋಷಕ್ಕೆ ಪಾರವೇ ಇಲ್ಲ." ಎಂದು ವಿಜ್ಞಾಪಿಸಿದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು "ಹೇ ಸ್ತ್ರೀಯರೇ, ನಾನು ಈ ಅವತಾರದಲ್ಲಿ ಏಕಪತ್ನೀ ವ್ರತವನ್ನು ಧರಿಸಿರುವೆನು. ಆದಕಾರಣ ನಿಮ್ಮ ಇಷ್ಟಾರ್ಥವನ್ನು ಮುಂದಿನ ಅವತಾರದ ಸಮಯದಲ್ಲಿ ಪೂರ್ಣಮಾಡುವೆನು" ಎಂದು ಹೇಳಿ, ಅವರ ಪ್ರಾರ್ಥನೆಯಂತೆ ಮುಂದಕ್ಕೆ ಪ್ರಯಾಣಮಾಡಿ, ನಿರ್ಬಂಧದಲ್ಲಿ ಸಿಕ್ಕಿದ್ದ ಹದಿನಾರುಸಾವಿರ ಸ್ತ್ರೀಯರನ್ನು ಸೋಡಿದನು. ಆ ತರುಣಿಯರು ಶ್ರೀರಾಮನ ವೃತ್ತಾಂತವನ್ನು ಕೇಳಿ ಶ್ರೀರಾಮನನ್ನು ತಮ್ಮ ವಿವಾಹಕಾರ್ಯಕ್ಕಾಗಿ ಬಲವಂತಮಾಡಿದರು. ಆಗ ರಾಮಚಂದ್ರನು "ಎಲೈ ತರುಣಿಯರೆ, ನೀವು ದ್ವಾಪರಯುಗದಲ್ಲಿ ಬೇರೆ ಬೇರೆ ರಾಜಪುತ್ರಿಯರಾಗಿ ಅವತರಿಸಿರಿ. ಭೌಮಾಸುರನೆಂಬ ರಾಕ್ಷಸನು ನಿಮ್ಮನ್ನು ಸೆರೆಯಲ್ಲಿಡುವನು. ಆಗ ನಾನು ಆ ರಾಕ್ಷಸನನ್ನು ನಾಶಮಾಡಿ, ನಿಮ್ಮನ್ನೆಲ್ಲ ವಿವಾಹಮಾಡಿಕೊಳ್ಳುವೆನು. ಈ ದುಂದುಭಿಯೇ ಮುಂದೆ ಭೌಮಾಸುರನಾಗಿ ಅವತರಿಸುವನು" ಎಂದು ಹೇಳಿದನು.

ಈ ಮಾತುಗಳು ಆ ಕಾಮಾತುರರಾದ ತರುಣಿಯರಿಗೆ ಸರಿಬೀಳಲಿಲ್ಲ. ಅವರೆಲ್ಲರೂ ಶ್ರೀ ರಾಮನನ್ನು ನಾಲ್ಕೂ ದಿಕ್ಕುಗಳಲ್ಲೂ ಸುತ್ತಿ, ಆಲಿಂಗನ ಮಾಡಲಪೇಕ್ಷಿಸಿದರು. ಅವರ ಈ ಸಂಕೇತವನ್ನು ತಿಳಿದು ಶ್ರೀರಾಮನು ಗುಪ್ತನಾದನು. ಆಗ ಆ ಸ್ತ್ರೀಯರು ಶ್ರೀರಾಮನನ್ನು ನಾನಾವಿಧವಾಗಿ ಸ್ತೋತ್ರಮಾಡಿದರು. "ಹೇ ರಾಮಚಂದ್ರಾ, ನಮಗೆ ದರ್ಶನಕೊಡು. ಇಲ್ಲವಾದರೆ ನಾವು ಸರ್ವಥಾ ಬದುಕಲಾರೆವು. ನಿನ್ನನ್ನು ಕಾಣದೆ ನಮ್ಮ ಪ್ರಾಣಗಳು ತಳಮಳಿಸುತ್ತಿರುವವು.

ಹೇದೇವಾಧಿದೇವಾ, ನಿನ್ನ ಇಚ್ಛೆಗೆ ವಿರೋಧವಾಗಿ ನಾವು ಎಂದಿಗೂ ನಡೆಯುವ ದಿಲ್ಲ. ದ್ವಾಪರಯುಗದಲ್ಲಿ ನಿನ್ನ ಅವತಾರವಾಗುವವರೆಗೂ ನಾವು ಧೈರ್ಯದಿಂದ ಇದ್ದು, ಆಗಲೇ ನಿನ್ನನ್ನು ಸಂತೋಷಗೊಳಿಸುವೆವು. ರಾಮಾ, ದರ್ಶನಕೊಡು. ನಾವು ಅನಾಥರಾಗಿರುವೆವು" ಇತ್ಯಾದಿ ಅನೇಕ ವಿಧವಾದ ಅವರ ಸ್ತೋತ್ರಗಳನ್ನು ಕೇಳಿ, ದಯಾನಿಧಿಯಾದ ಶ್ರೀ ರಾಮನು ಮತ್ತೆ ಅವರಿಗೆ ದರ್ಶನಕೊಟ್ಟನು. ಅನೇಕ ವಿಧವಾದ ತನ್ನ ಮಧುರಭಾಷಣಗಳಿಂದ ಅವರನ್ನು ಸಂತೋಷಗೊಳಿಸಿ, ದ್ವಾಪರ ಯುಗದಲ್ಲಿ ನಿಮ್ಮ ಇಷ್ಟಾರ್ಥವನ್ನು ಪೂರ್ಣಮಾಡುವೆನೆಂದು ಅವರಿಗೆ ಮತ್ತೆ ವಚನಕೊಟ್ಟನು. ಅಷ್ಟರಲ್ಲಿ ಲಕ್ಷ್ಮಣಾದಿಗಳು ಕುದುರೆಯ ಹೆಜ್ಜೆಗಳನ್ನು ಅನುಸ ರಿಸಿ, ಆ ಗುಹೆಯೊಳಗೆ ಬಂದರು. ಸ್ತ್ರೀಸಮೂಹದಲ್ಲಿರುವ ಶ್ರೀ ರಾಮನನ್ನು ನೋಡಿ ಅವರಿಗೆ ಬಹಳ ಆಶ್ಚರ್ಯವಾಯಿತು. ಆದರೆ ಶ್ರೀರಾಮನಿಂದ ಅವರ ಪೂರ್ವ ವೃತ್ತಾಂತವನ್ನೆಲ್ಲ ಕೇಳಿದಮೇಲೆ ಅವರ ಸಂಶಯಗಳೆಲ್ಲ ಪರಿಹೃತವಾದವು. ಅನಂ ತರ ಶ್ರೀ ರಾಮನು ದೂತರನ್ನು ಅಯೋಧ್ಯೆಗೆ ಕಳುಹಿಸಿ ಅನೇಕ ವಾಹನಗಳನ್ನು ತರಿಸಿದನು. ಮತ್ತು ಆ ವಾಹನಗಳಲ್ಲಿ ಆ ತರುಣಿಯರೆಲ್ಲರನ್ನು ಕುಳ್ಳಿರಿಸಿ, ಸೀತಾ ದೇವಿಯು ಇರುವ ಸ್ಥಳಕ್ಕೆ ಕಳುಹಿದನು. ಸೀತಾದೇವಿಯು ಆ ಲಲನೆಯರನ್ನು ಮರ್ಯಾದೆಯಿಂದ ಕಂಡು ಯೋಗ್ಯವಾದ ಅತಿಥಿಸತ್ಕಾರಗಳನ್ನು ನಡೆಸಿದಳು. ಶ್ರೀ ರಾಮನ ಮುಖದಿಂದ ಅವರ ಎಲ್ಲ ವೃತ್ತಾಂತವನ್ನು ಕೇಳಿ ಸೀತೆಯೂ ಸಮಾಧಾನಹೊಂದಿದಳು.

ಈ ರೀತಿ ಶ್ರೀ ರಾಮನು ಅನೇಕ ವಿಹಾರ, ವಿಲಾಸಗಳಿಂದ ಆನಂದಬಡುತ್ತ ಒಂದು ಉತ್ತಮವಾದ ಸರೋವರದ ತೀರದಲ್ಲಿ ಏಳು ದಿವಸಗಳವರೆಗೆ ವಾಸಮಾಡಿ ದನು. ಅನಂತರ ಶ್ರೀರಾಮನು ಆ ತರುಣಿಯರ ತಾಯಿತಂದೆಗಳನ್ನು ವಿಚಾರಿಸಿ, ಅವರನ್ನೆಲ್ಲ ಅಯೋಧ್ಯೆಗೆ ಕರೆಸಿ, ವಸ್ತ್ರಾಭರಣಗಳಿಂದ ಸಂತೋಷಗೊಳಿಸಿ, ಅವರ ವರ ಮಕ್ಕಳನ್ನು ಅವರವರ ಅಧೀನಕ್ಕೆ ಕೊಟ್ಟನು. ಆ ತರುಣಿಯರ ತಾಯಿತಂದೆ ಗಳು ಶ್ರೀ ರಾಮನನ್ನು ಬಹುವಿಧವಾಗಿ ಸ್ತೋತ್ರಮಾಡಿದರು. ಆ ತರುಣಿಯರಲ್ಲಿ ಬ್ರಾಹ್ಮಣಸ್ತ್ರೀಯರಿಗೆ ವಿವಾಹಕಾಲವು ಮೀರಿತ್ತಾದ್ದರಿಂದ, ಅವರು ತಮ್ಮ ತಮ್ಮ ತಂದೆಗಳ ಮನೆಯಲ್ಲಿ ಬ್ರಹ್ಮಚರ್ಯದಿಂದ ಶ್ರೀರಾಮನ ಭಕ್ತರಾಗಿ ಆಯುಷ್ಯವನ್ನು ಕಳೆದರು. ಮಿಕ್ಕ ಮೂರು ವರ್ಣದ ತರುಣಿಯರು ತಮಗೆ ಯೋಗ್ಯರಾದ ತರುಣ ರನ್ನು ವರಿಸಿ ವಿವಾಹಮಾಡಿಕೊಂಡರು. ಶ್ರೀ ರಾಮನು ಆಗಾಗ್ಗೆ ಆ ತರುಣಿಯರ ವಿವಾಹಮುಹೂರ್ತಗಳಿಗೆ ಹೋಗಿಬರುತ್ತಿದ್ದನು.

ಈ ರೀತಿಯಾಗಿ ಶ್ರೀ ರಾಮನು ಆನಂದದಿಂದ ಕಾಲಹರಣ ಮಾಡುತ್ತಾ ಒಂದು ದಿವಸ ಮಥುರೆಗೆ ಹೋದನು. ಅಲ್ಲಿ ಶತ್ರುಘ್ನನ ಮಗನಾದ ಸುಬಾಹುವಿನ ರಾಜ್ಯಕಾರಭಾರಗಳನ್ನು ನೋಡುತ್ತ ಕೆಲವು ದಿವಸಗಳು ವಾಸವಾಗಿದ್ದನು. ಒಂದು ರಾತ್ರಿಯಲ್ಲಿ ಶ್ರೀರಾಮನು ಸೀತೆಯೊಡನೆ ಯಮುನಾನದಿಯ ಮರಳಿನಲ್ಲಿ ಸುವರ್ಣದ ಮಂಚದಮೇಲೆ ಮಲಗಿದ್ದನು. ಸಮಸ್ತ ದಾಸರೂ, ದಾಸಿಯರೂ ಮಲಗಿರುವ ಸಂದರ್ಭವನ್ನು ನೋಡಿ ಕಾಳಿಂದಿಯು ಉತ್ತಮ ಸ್ತ್ರೀರೂಪವನ್ನು ಧರಿಸಿದಳು. ಮತ್ತು ಆಕೆಯು ಶ್ರೀ ರಾಮನ ಬಳಿಗೆ ಬಂದು ಆತನ ಪಾದಗಳನ್ನು ಮುಟ್ಟಿದಳು. ಒಡನೆ ಶ್ರೀ ರಾಮನಿಗೆ ಎಚ್ಚರವಾಯಿತು. ಶ್ರೀ ರಾಮನು ಎದುರಿಗೆ ನಿಂತಿರುವ ದಿವ್ಯಸುಂದರಿಯಾದ ಸರ್ವಾಭರಣಗಳಿಂದ ಒಪ್ಪುವ ತರುಣೀಮಣಿಯನ್ನು ನೋಡಿದನು. ಶ್ರೀ ರಾಮನಿಗೆ ಆಕೆಯು ಯಮುನೆಯೆಂದು ತಿಳಿಯಿತು. ಆಗ ಶ್ರೀ ರಾಮನು 'ಹೇ ಸೂರ್ಯಪುತ್ರೀ, ಇಂಥ ಮಧ್ಯರಾತ್ರಿಯಲ್ಲಿ ಸ್ತ್ರೀವೇಷವನ್ನು ಧರಿಸಿ ನನ್ನ ಬಳಿಗೆ ಏಕೆ ಬಂದಿ' ಎಂದು ಪ್ರಶ್ನೆಮಾಡಿದನು. ಕಾಳಿಂದಿಯು 'ಹೇ ಪ್ರಭೋ, ನಿನಗೆ ಗೊತ್ತಿಲ್ಲದ ವಿಷಯಗಳ್ಯಾವು? ಹೀಗಿರಲು ನನ್ನನ್ನು ಯಾಕೆ ವಿಚಾರಿಸುವೆ' ಎಂದು ಹೇಳಿ ನಾಚಿಕೆಯಿಂದ ಭೂಮಿಯನ್ನು ನೋಡುತ್ತ ನಿಂತಳು. ಶ್ರೀ ರಾಮನು ಆ ಕಾಳಿಂದಿಗೆ ಈ ಅವತಾರದಲ್ಲಿ ತಾನು ಕೈಕೊಂಡಿರುವ ಏಕಪತ್ನೀವ್ರತವನ್ನು ತಿಳುಹಿ, 'ದ್ವಾಪರಯುಗದಲ್ಲಿ ಕೃಷ್ಣರೂಪದಿಂದ ನಿನ್ನ ಇಚ್ಛೆಯನ್ನು ಪೂರ್ಣ ಮಾಡುವೆನು' ಎಂದು ವಚನಕೊಟ್ಟನು. ಬಳಿಕ ಯಮುನೆಯು ಸಂತೋಷದಿಂದ ಶ್ರೀ ರಾಮನ ಚರಣಕಮಲಗಳಿಗೆ ನಮಸ್ಕರಿಸಿ, ತನ್ನ ವಾಸಸ್ಥಾನಕ್ಕೆ ಪ್ರಯಾಣ ಮಾಡಿದಳು.

— ರಾಜ್ಯಕಾಂಡ ಪೂರ್ವಾರ್ಧಸ್ಸಮಾಪ್ತಃ —



# ರಾಜ್ಯಕಾಂಡ-ಉತ್ತರಾರ್ಧ.

## ಯಾರೂ ನಗಬಾರದು.

ಒಂದಾನೊಂದು ದಿವಸ ಶ್ರೀ ರಾಮನು ಆಪ್ತರೊಡನೆ ಸಭೆಯಲ್ಲಿ ಕುಳಿತು ನೃತ್ಯಾದಿಗಳನ್ನು ನೋಡುತ್ತಿದ್ದನು. ಆಗ ಒಬ್ಬ ಸಭಾಸದನು ನೃತ್ಯದ ಚಮತ್ಕಾರವನ್ನು ನೋಡಿ ನಕ್ಕನು. ಅದನ್ನು ನೋಡಿದೊಡನೆ ಶ್ರೀ ರಾಮನಿಗೆ ರಾವಣನ ಶಿರಸ್ಸಿನ ಜ್ಞಾಪಕಬಂತು. ಹಿಂದೆ ಯುದ್ಧಕಾಲದಲ್ಲಿ ಶ್ರೀ ರಾಮನು ರಾವಣನ ಶಿರಸ್ಸುಗಳನ್ನು ತನ್ನ ಬಾಣಗಳಿಂದ ಕತ್ತರಿಸಿದನಷ್ಟೆ. ಅವು ನಗು-ನಗುತ್ತಾ ಆ ಯುದ್ಧರಂಗದಲ್ಲಿ ಶ್ರೀ ರಾಮನ ಪಾದಗಳ ಮೇಲೆ ಬೀಳಲಿಕ್ಕೆ ಬರುತ್ತಿದ್ದವು. ಆಗ ಶ್ರೀರಾಮನು ತನ್ನ ಪಾದಗಳನ್ನು ಉಚ್ಚುವದಕ್ಕೋಸ್ಕರ ಬರುವವೋ ಏನೋ? ಎಂಬ ಗಾಬರಿಯಿಂದ ನೂರಾವಂದು ಸಲ ಆ ಶಿರಸ್ಸುಗಳನ್ನು ಬಾಣಗಳಿಂದ ಅಂತರಿಕ್ಷಕ್ಕೆ ಹಾರಿಸಿದ್ದನು. ಈ ನಗುವ ಪ್ರಸಂಗವನ್ನು ನೋಡಿ ಶ್ರೀ ರಾಮನಿಗೆ ಪೂರ್ವದಲ್ಲಿ ನಡೆದ ಸಮಾಚಾರವು ಮತ್ತೆ ಮತ್ತೆ ಜ್ಞಾಪಕಕ್ಕೆ ಬರಹತ್ತಿತು. ಮತ್ತು ಮಾಯಾವಿಯಾದ ಯಾವನಾದರೂ ರಾಕ್ಷಸನು ನನ್ನ ಸಭೆಯನ್ನು ಮೋಸದಿಂದ ಪ್ರವೇಶಿಸಿರುವನೋ? ಎಂಬ ಗಾಬರಿಯಿಂದ ಮುಂದೆ ನೋಡಿದನು. ಅಷ್ಟರಲ್ಲಿ ಆ ಸಭಾಜನರು ನೃತ್ಯದಲ್ಲಿ ವೇಶ್ಯೆಯ ಚಮತ್ಕಾರಗಳನ್ನು ನೋಡಿ ಮತ್ತೂ ನಕ್ಕರು. ಆಗಲೂ ಶ್ರೀ ರಾಮನಿಗೆ ಇದೇ ಭಾಸವಾಯಿತು. ಸಾರಾಂಶ, ಮತ್ತೆ ಮತ್ತೆ ಶ್ರೀ ರಾಮನು ಭಯದಿಂದ ಮುಂದೆ ನೋಡುತ್ತಿದ್ದನು. ಶ್ರೀ ರಾಮನು ಮನಸ್ಸಿನಲ್ಲಿ "ನಾನು ಯಾವ ಯಾವಾಗ ನಗುವದನ್ನು ನೋಡುವೆನೋ, ಆಗಾಗ ಆ ರಾಕ್ಷಸರು ನನ್ನನ್ನು ಭಕ್ಷಣೆಮಾಡಲು ಈ ಸಭೆಗೇನಾದರೂ ಬಂದಿರುವರೋ ಎಂಬ ಯೋಚನೆಯು ನನಗೆ ಹುಟ್ಟುತ್ತಿರುವದು. ಅದಲ್ಲದೆ ಸಭೆ, ಮಠ, ದೇವಸ್ಥಾನ ಇತ್ಯಾದಿ ಧರ್ಮಸ್ಥಳಗಳಲ್ಲಿ ನಗಬಾರದೆಂದು ಧರ್ಮಶ್ರುತಿಗಳು ಕೂಗಿ ಹೇಳುತ್ತಿರುವವು. ಆದ್ದರಿಂದ ಈ ಹಾಸ್ಯಕ್ಕೆ ಪ್ರತಿಬಂಧ ಮಾಡಬೇಕು" ಎಂದು ಯೋಚಿಸಿ, ಲಕ್ಷ್ಮಣನನ್ನು ಕರೆಸಿ 'ಈ ಭೂಮಂಡಲವೆಲ್ಲ ಈ ನನ್ನ ಆಜ್ಞೆಯನ್ನು ಪ್ರಸಿದ್ಧಪಡಿಸತಕ್ಕದ್ದು' ಎಂದು ಹೇಳಿದನು. ಲಕ್ಷ್ಮಣನು ಶ್ರೀ ರಾಮನ ಆಜ್ಞೆಯನ್ನು ಶಿರಸಾವಹಿಸಿ 'ಈ ದಿವಸ ಮೊದಲುಗೊಂಡು ಮುಂದೆ ಯಾರೂ

ಯಾವ ಕಾರಣಗಳಿಂದಲೂ ನಗಬಾರದು. ಇದಕ್ಕೆ ವಿರುದ್ಧವಾಗಿ ನಡೆದವರು ಶ್ರೀ ರಾಮನ ಶಾಸನಕ್ಕೆ ಗುರಿಯಾಗುವರು." ಎಂದು ಪ್ರಪಂಚದಲ್ಲೆಲ್ಲಾ ಪ್ರಕಟಗೊಳಿಸಿದನು.

ಶ್ರೀ ರಾಮನ ಆಜ್ಞೆಯನ್ನು ಕೇಳಿದಾಗಿನಿಂದ ಎಲ್ಲರೂ ಹಾಸ್ಯವನ್ನು ಬಿಟ್ಟರು. ಆಗಿನಿಂದ ಕಥಾ, ಕೀರ್ತನ, ವಿನೋದ, ಸ್ತ್ರೀ-ಪುರುಷರ ಸಂಭಾಷಣ, ಮಕ್ಕಳ ಬಾಲಲೀಲೆಗಳು ಇತ್ಯಾದಿ ಅನೇಕ ವಿನೋದದ ಪ್ರಸಂಗಗಳು ಬಂದರೂ ಜನರು ನಗುತ್ತಿರಲಿಲ್ಲ. ಇದರಿಂದ ಜನರಲ್ಲಿ ಉದಾಸೀನತೆಯು ಹೆಚ್ಚಿತು. ಆನಂದಕರಗಳಾದ ಅನೇಕ ಉತ್ಸವಗಳು, ಯಜ್ಞಗಳು, ಗರ್ಭಾಧಾನಾದಿ ಷೋಡಶಕರ್ಮಗಳು ಇವೇ ಮೊದಲಾದ ವಿನೋದದ ಪ್ರಸಂಗಗಳೆಲ್ಲ ಕಟ್ಟಾದವು. ದೇವತೆಗಳ ಪೂಜೆಗಳಿಗೂ ಪೂಚೆಗಳು ಬಂದವು. ಆಗ ಇಂದ್ರಾದಿದೇವತೆಗಳು ಬ್ರಹ್ಮದೇವನಲ್ಲಿಗೆ ಹೋಗಿ ತಮ್ಮ ದುಃಖವನ್ನು ಹೇಳಿಕೊಂಡರು. ಬ್ರಹ್ಮನು 'ಎಲೈ ದೇವತೆಗಳಿರಾ, ಶ್ರೀ ರಾಮನಿಗೆ ಹೇಳುವ ಸಾಮರ್ಥ್ಯವು ಯಾರಿಗೂ ಸಾಲದು. ಇರಲಿ, ನಾನು ಒಂದು ಉಪಾಯವನ್ನು ಮಾಡುವೆನು. ನೀವು ಹೆದರಬೇಡಿರಿ' ಎಂದು ಹೇಳಿ ತಾನು ಅಯೋಧ್ಯೆಯ ಸಮೀಪದಲ್ಲಿರುವ ಒಂದು ಅರಳೀಮರವನ್ನು ಪ್ರವೇಶಿಸಿ ಕುಳಿತನು. ಅಷ್ಟರಲ್ಲಿ ಅರಣ್ಯದಿಂದ ಒಬ್ಬ ಪುರುಷನು ತಲೆಯ ಮೇಲೆ ಕಟ್ಟಿಗೆಯ ಹೊರೆಯನ್ನು ಹೊತ್ತುಕೊಂಡು ಆ ವೃಕ್ಷದ ಬಳಿಯಲ್ಲಿ ಹೋಗುತ್ತಿದ್ದನು. ಅವನನ್ನು ನೋಡಿ ಆ ಅಶ್ವತ್ಥವೃಕ್ಷವು ಫಕಫಕನೆ ನಕ್ಕಿತು. ಈ ಆಶ್ಚರ್ಯವನ್ನು ನೋಡಿ ಆ ಕಾಷ್ಠ ಮಾರುವವನೂ ಕೂಡ ನಕ್ಕನು. ಬಳಿಕ ಆ ಮನುಷ್ಯನು ಕಾಷ್ಠಭಾರವನ್ನು ಮಾರಲು ಅಯೋಧ್ಯೆಯ ರಾಜಮಾರ್ಗಕ್ಕೆ ಬಂದನು. ತಾನು ನೋಡಿದ ಆಶ್ಚರ್ಯವನ್ನು ಯೋಚಿಸುತ್ತಾ ಹೋಗುವ ಆ ಪುರುಷನು ರಾಜಮಾರ್ಗದಲ್ಲಿ ಮತ್ತೂ ನಕ್ಕನು. ಅವನು ನಗುವದನ್ನು ನೋಡಿ ಒಬ್ಬ ರಾಜದೂತನು ತಾನೂ ನಗೆಮುಖದವನಾದನು. ಆ ರಾಜದೂತನು ಶ್ರೀ ರಾಮನ ಸಭೆಗೆ ಬಂದು ನಿಂತಿರಲು, ಅವನಿಗೆ ಕಟ್ಟಿಗೆ ಹೊರೆಯವನ ನಗುವು ಜ್ಞಾಪಕಕ್ಕೆ ಬಂತು. ಆಗ ಅವನಿಗೆ ಮಿತಿಯಿಲ್ಲದಷ್ಟು ನಗೆ ಬಂತು. ಯತ್ನವಿಲ್ಲದೆ ನಕ್ಕನು. ಆ ದೂತನು ನಗುವದನ್ನು ನೋಡಿ ಸಮಸ್ತ ಸಭಾಸದರೂ ಗಟ್ಟಿಯಾಗಿ ನಕ್ಕುಬಿಟ್ಟರು. ಅವರ ಹಾಸ್ಯವನ್ನು ನೋಡಿ ಶ್ರೀ ರಾಮನೂ ನಕ್ಕನು. ಆಗ ರಾಮಚಂದ್ರನು "ಇದೇನಾಶ್ಚರ್ಯ, ಸಿಂಹಾಸನದ ಮೇಲೆ ಕುಳಿತು ನಾನು ಯಾಕೆ ನಕ್ಕಿರಬಹುದು. ಮತ್ತೆ ಇಂಥಾ ನನ್ನನ್ನು ನೋಡಿ ಪ್ರಜೆಗಳು ಏನಂದಾರು? 'ಈ ನಮ್ಮ ರಾಜನು

ನಮಗೆ ಮಾತ್ರ ಶಿಕ್ಷೆ ಮಾಡುವನು. ತಾನು ಮಾತ್ರ ಅಪರಾಧಗಳನ್ನೇ ಮಾಡುತ್ತಿರುವನು. ಇವನಿಗೆ ಶಿಕ್ಷೆ ಕೊಡುವವರು ಯಾರು? ಈ ರಾಜನು ಸರಿಯಾದ ನ್ಯಾಯವಿಮರ್ಶೆಮಾಡುವವನಲ್ಲ' ಎಂದು ನನ್ನ ಮೇಲೆ ಅಪವಾದ ಕೊಡಬಹುದು. ಆದ್ದರಿಂದ ನಾನು ನಕ್ಕದ್ದಕ್ಕೆ ಕಾರಣವನ್ನು ಈಗಲೇ ಶೋಧಮಾಡಿ ಅದಕ್ಕೆ ಸರಿಯಾದ ಶಿಕ್ಷೆಯನ್ನು ನಾನೇ ಮಾಡಿಕೊಳ್ಳುವೆನು" ಎಂದು ಮನಸ್ಸಿನಲ್ಲಿ ಯೋಚಿಸಿ, 'ಹೇ ಸಭಾಸದರೇ, ನೀವು ನಕ್ಕದ್ದಕ್ಕೆ ಕಾರಣವೇನು?' ಎಂದು ಕೇಳಿದನು. ಅವರು 'ಮಹಾಸ್ವಾಮಿ, ತಮ್ಮ ದೂತನು ರಾಜಸಭೆಯಲ್ಲಿ ನಗುವದನ್ನು ನೋಡಿ ನಮಗೆ ನಗೆ ಬಂತು' ಎಂದು ವಿಜ್ಞಾಪಿಸಿದರು. ಬಳಿಕ ಶ್ರೀ ರಾಮನು ದೂತನನ್ನು ಕರೆಸಿ ವಿಚಾರಿಸಿದನು. ಅವನು 'ಮಹಾರಾಜರೇ, ನಾನು ಬೀದಿಯಲ್ಲಿ ನಿಂತಿರುವಾಗ ಒಬ್ಬ ಕಟ್ಟಿಗೆ ಮಾರುವ ಮನುಷ್ಯನು ನಗುತ್ತಾ ಹೊರಟು ಹೋದನು. ಅವನನ್ನು ನೋಡಿ ನಾನು ಅಲ್ಲಿ ಬಹಳ ಹೊತ್ತಿನ ವರೆಗೂ ನಗುತ್ತಾ ನಿಂತಿದ್ದೆನು. ಇಲ್ಲಿಗೆ ಬಂದಮೇಲೆ ಆ ವಿಷಯವು ಜ್ಞಾಪಕಕ್ಕೆ ಬಂದದ್ದರಿಂದ ಯತ್ನವಿಲ್ಲದೆ ನಕ್ಕೆನು' ಎಂದು ಹೇಳಿಕೊಂಡನು. ಆಗ ಶ್ರೀ ರಾಮನು ಆ ಕಟ್ಟಿಗೆಹೊರೆಯುವನನ್ನು ರಾಜಸಭೆಗೆ ಕರತರಲು, ದೂತರಿಗೆ ಆಜ್ಞಾಪಿಸಿದನು. ಕಟ್ಟಿಗೆಹೊರೆಯುವನು ಸಭೆಗೆ ಬಂದಕೂಡಲೆ ಶ್ರೀ ರಾಮನು ಮೊದಲನಂತೆ ಪ್ರಶ್ನೆಮಾಡಿದನು. ಆ ಮನುಷ್ಯನು ಶ್ರೀ ರಾಮನಿಗೆ ನಮಸ್ಕರಿಸಿ 'ಸ್ವಾಮಿ, ನಾನು ಅಡವಿಯಿಂದ ಬರುತ್ತಿರುವಾಗ ಒಂದು ಅರಳಿಯ ಮರವು ನಗುತ್ತಿತ್ತು. ಅದನ್ನು ನೋಡಿ ನನಗೆ ನಗುವುಬಂತು. ಆಗ ನಾನು ನಕ್ಕೆನು. ಬೀದಿಯಲ್ಲಿ ಓಡಾಡುತ್ತಿರುವಾಗ ಮತ್ತೆ ಅದು ಸ್ಮರಣೆಗೆ ಬಂದದ್ದರಿಂದ ನಗಬೇಕಾಯಿತು' ಎಂದು ಹೇಳಿಕೊಂಡನು.

ಶ್ರೀರಾಮನು 'ಇವನ ಮಾತು ಸುಳ್ಳೋ, ಅಥವಾ, ನಿಜವೋ, ಆ ವೃಕ್ಷದ ಬಳಿಗೆ ಹೋಗಿ ನೋಡಿ ಬನ್ನಿ' ಎಂದು ದೂತರಿಗೆ ಆಜ್ಞಾಪಿಸಿದನು. ಅವರು ವೃಕ್ಷವು ನಗುವದನ್ನು ನೋಡಿ ಬಂದು ಶ್ರೀರಾಮನಿಗೆ ಆ ವಿಷಯವನ್ನು ಅರಿಕೆ ಮಾಡಿದರು. ಬಳಿಕ ಶ್ರೀರಾಮನು ಆ ವೃಕ್ಷವನ್ನು ಕಡಿದು ಹಾಕುವಂತೆ ಸೇವಕರಿಗೆ ಆಜ್ಞಾಪಿಸಿದನು. ದೂತರು ಆ ವೃಕ್ಷದ ಬಳಿಗೆ ಕೊಡಲಿಗಳನ್ನು ತೆಗದುಕೊಂಡು ಬಂದೊಡನೆ ಆ ವೃಕ್ಷದಲ್ಲಿರುವ ಬ್ರಹ್ಮನು ಕಲ್ಲುಗಳಿಂದ ಆ ದೂತರನ್ನು ಹೊಡೆದನು. ಅಂದರೆ ಆ ವೃಕ್ಷದಿಂದ ಕಲ್ಲುಗಳು ಮಾತ್ರ ಹೊರಗೆ ಬರುತ್ತಿದ್ದವು. ಆ ಕಲ್ಲುಗಳಿಂದ ದೂತರ ತಲೆಗಳು ಒಡೆದವು. ರಕ್ತವು ಸುರಿಯಲಾರಂಭಿಸಿತು. ಬಳಿಕ ಎಲ್ಲರೂ ಅಳುತ್ತಾ ಶ್ರೀರಾಮನ ಬಳಿಗೆ ಬಂದರು. ಆತನು ಇನ್ನೂ ನೂರಾರು

ಜನ ಸೇವಕರನ್ನು ಕಳುಹಿಸಿದನು, ಅವರಿಗೂ ಪೂರ್ವದ ಸ್ಥಿತಿಯೇ ಪ್ರಾಪ್ತವಾಯಿತು. ಬಳಿಕ ಶ್ರೀರಾಮನು ಅನೇಕ ಸೈನ್ಯಗಳೊಡನೆ ಸುಮಂತ್ರನನ್ನು ಆ ವೃಕ್ಷವನ್ನು ಛೇದಿಸಿ ಬರುವಂತೆ ಅಪ್ಪಣೆಮಾಡಿದನು. ಬ್ರಹ್ಮದೇವನು ಆ ಸುಮಂತ್ರನನ್ನೂ ಹೊಡೆದು ಮೂರ್ಛೆಗೊಳಿಸಿದನು. ಇದನ್ನು ಕೇಳಿ ಶ್ರೀರಾಮನು ಲವ, ಕುಶ, ಶತ್ರುಘ್ನ, ಇವರೆಲ್ಲರನ್ನೂ ಕಳುಹಿಸಿದನು. ಆಗ ನಗರದಲ್ಲಿ ಎಲ್ಲಾ ಜನರೂ ಮಹಡಿಗಳ ಮೇಲೆ ನಿಂತು ನೋಡುತ್ತಿದ್ದರು. ಶತ್ರುಘ್ನಾದಿಗಳು ನಗರದ ಹೊರಕ್ಕೆ ಹೋಗುತ್ತಿರಲು ಅವರ ರಥಗಳು ಮುಂದಕ್ಕೆ ನಡೆಯದಾದವು. ಕುದುರೆಗಳು ಕಾಲು ಸೋತು ಕೆಳಗೆ ಉರುಳಿದವು. ಇದನ್ನು ನೋಡಿ ಎಲ್ಲಾ ರಾಜಪುತ್ರರೂ ಆಶ್ಚರ್ಯಗೊಂಡರು. ಈ ಸಮಾಚಾರಗಳನ್ನೆಲ್ಲಾ ಕೇಳಿ ಶ್ರೀರಾಮನು 'ಇಂಥಾ ಕಷ್ಟಕಾಲಗಳಲ್ಲಿ ಗುರುಗಳೊಡನೆ ಯೋಚನೆಮಾಡಿ, ಅವರ ಅಪ್ಪಣೆಯಂತೆ ನಡೆಯುವದು ಯುಕ್ತ, ಎಂದು ಯೋಚಿಸಿ, ವಸಿಷ್ಠರನ್ನು ಕರೆಸಿದನು. ಮತ್ತು ಗುರುಗಳನ್ನು ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಕೃತಸಮಾಚಾರಗಳನ್ನೆಲ್ಲಾ ತಿಳುಹಿ, ಇಂಥಾ ಅನರ್ಥಪ್ರಸಂಗದಲ್ಲಿ ನಾನು ಏನು ಉಪಾಯಮಾಡಲಿ, ಎಂದು ಪ್ರಶ್ನೆಮಾಡಿದನು. ಆಗ ವಸಿಷ್ಠರು 'ರಾಮಚಂದ್ರನೆ, ವಾಲ್ಮೀಕಿಮಹರ್ಷಿಗಳು ನಿನ್ನ ಚರಿತ್ರೆಯನ್ನೆಲ್ಲಾ ಬರೆದಿರುವರು. ಅವರನ್ನು ವಿಚಾರಿಸಲು ಗೊತ್ತಾಗುವದು, ಎಂದು ಹೇಳಿದರು. ಶ್ರೀರಾಮನು ವಾಲ್ಮೀಕಿಮಹರ್ಷಿಗಳನ್ನು ಕರೆಸಿದನು. ಮತ್ತು ಆ ಮುನಿಗಳಿಗೆ ಶ್ರೇಷ್ಠವಾದ ಆಸನವನ್ನು ಕೊಟ್ಟು, ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ತನ್ನ ಕಾರ್ಯಭಾಗವನ್ನು ತಿಳುಹಿದನು. ಆಗ ವಾಲ್ಮೀಕಿಮಹರ್ಷಿಗಳು— ರಾಮ, ನೀನು ಸರ್ವಜ್ಞನೇ ಇರುತ್ತೀ; ಆದರೂ ಮನುಷ್ಯಭಾವವನ್ನು ವಹಿಸಿ ನಮ್ಮನ್ನು ಪ್ರಶ್ನೆಮಾಡಿರುವೆ. ಆದ್ದರಿಂದ ಹೇಳುವೆನು. ಕೇಳು—ರಾಮಚಂದ್ರ, ನೀನು 'ಯಾವಪ್ರಾಣಿಯೂ ನಗಲಾಗದೆಂದು ಶಾಸನಮಾಡಿರುವೆಯಷ್ಟೆ. ಆದ್ದರಿಂದ ಈ ಪ್ರಪಂಚದಲ್ಲಿ ಆನಂದಕರವಾದ ಕಾರ್ಯಗಳೆಲ್ಲಾ ನಿಂತುಹೋಗಿರುವವು. ಒಂದುವರ್ಷದಿಂದಲೂ ಹೀಗೆಯೇ ನಡೆಯುತ್ತಾ ಬಂತು. ಇದನ್ನು ಕೇಳಿ ಬ್ರಹ್ಮದೇವನು ಲೋಕಗಳಿಗೆ ಸುಖವಾಗಬೇಕೆಂದು ಅಶ್ವತ್ಥವೃಕ್ಷವನ್ನು ಪ್ರವೇಶಿಸಿರುವನು. ಆತನು ತನ್ನ ಸಾಮರ್ಥ್ಯವು ನಿನ್ನ ಮುಂದೆ ನಡೆಯಲಾರದೆಂದು, ತಿಳಿದು ಅಶ್ವತ್ಥವೃಕ್ಷವನ್ನು ಪ್ರವೇಶಿಸಿ ನಿನ್ನ ಭೃತ್ಯರಿಗೆ ತೊಂದರೆ ಕೊಟ್ಟಿರುವನು, ಎಂದರು.

ಈ ಮಾತುಗಳನ್ನು ಕೇಳಿ ಶ್ರೀ ರಾಮನು "ಹೀಗೂ ಉಂಟೇ! ಆಗಲಿ. ಆ ಬ್ರಹ್ಮದೇವನಿಗೆ ಸಾಮರ್ಥ್ಯವೆಷ್ಟಿರುವದೋ ನೋಡಿಬಿಡುವೆನು" ಎಂದು 'ಯುದ್ಧಕ್ಕೆ

ಹೊರಡಲು ಸೇನೆಯು ಸಿದ್ಧವಾಗಲಿ' ಎಂದು ಸೇನಾಪತಿಗಳಿಗೆ ಆಜ್ಞಾಪಿಸಿದನು. ಅಷ್ಟರಲ್ಲಿ ವಾಲ್ಮೀಕಿಮುನಿಗಳು "ರಾಮ, ಜಗತ್ತಿನಲ್ಲಿ ಹಾಸ್ಯಮಾಡದೆ ಇರುವದು ಯೋಗ್ಯವಲ್ಲ. ಹೇ ಪರಮೇಶ್ವರಾ, ನೀನೂ ಕೂಡ ಆನಂದರೂಪನಾಗಿರುವೆ. ಮತ್ತು ಆನಂದದಿಂದಲೇ ಸಮಸ್ತ ಲೋಕಗಳೂ ಬದುಕಿರುತ್ತವೆ. ಆನಂದವೇ ಇಲ್ಲವೆಂದರೆ ಜಗತ್ತೆಲ್ಲವೂ ನಾಶವಾದೀತು. ಹೇ ನಾರಾಯಣಾ, ನೀನೇನೋ ನಗಬಾರದೆಂದು ಆಜ್ಞೆ ಮಾಡಿದೆ. ಆದರಿಂದ ನಾನು ರಚಿಸಿದ ನಿನ್ನ ಚರಿತ್ರೆಯನ್ನೇ ಕೇಳುವ ಜನರಿಲ್ಲವಾಯಿತಲ್ಲ! ಹಾಗಾಗಬಾರದು. ನಾನು ಬಹಳ ಶ್ರಮಬಟ್ಟು ಶತಕೋಟಿ ರಾಮಾಯಣವನ್ನು ರಚಿಸಿರುವೆನು. ಅದನ್ನೆಲ್ಲಾ ನೀನೇ ಮೂರು ಲೋಕಗಳಿಗೂ ಹಂಚಿ ಕೊಟ್ಟಿರುವೆ. ಸ್ವಲ್ಪಭಾಗವನ್ನು ಮಾತ್ರ ಭೂಲೋಕದ ವರಿಗೆ ಕೊಟ್ಟಿರುತ್ತೀ. ಅದೂ ನಿನ್ನ ಈ ಶಾಸನದಿಂದ ಅವರಿಗೆ ಇಲ್ಲದಂತಾಯಿತು. ಹಾಗಾಗಬಾರದು. ಈ ರಾಮಾಯಣದಿಂದಲೇ ಮುಂದೆ ಆರು ಶಾಸ್ತ್ರ, ಹದಿನೆಂಟು ಪುರಾಣ, ಇತಿಹಾಸ ಇವುಗಳೆಲ್ಲಾ ಆಗತಕ್ಕವುಗಳಿವೆ. ನಿನ್ನ ವನವಾಸ ಪರ್ಯಂತವೂ ನಡೆದ ಕಥೆಗಳನ್ನು ತಿಳಿಸುವ ರಾಮಾಯಣವನ್ನು ವ್ಯಾಸರು ರಚಿಸುವವರಿದ್ದಾರೆ. ಅದು ಇಪ್ಪತ್ತು ನಾಲ್ಕು ಶ್ಲೋಕಗಳಿಂದ ಯುಕ್ತವಾಗತಕ್ಕದ್ದಿದೆ. ಅದು ಮಧ್ಯಾಹ್ನದಲ್ಲಿ ಪಠನೆಗೆ ಅನುಕೂಲವಾಗುವದು. ನಾನು ರಚಿಸಿರುವ ಈ ಆನಂದರಾಮಾಯಣವು ರಾತ್ರಿ ಕೇಳುವದಕ್ಕೆ ಯೋಗ್ಯವಾಗಿದೆ. ಆಗ ಜನಗಳು ಬಹಳ ದಣಿದಿರುತ್ತಾರಾದ್ದರಿಂದ ಉದರ ಒಳಲಿಕೆ ಎಲ್ಲಾ ಪರಿಹಾರವಾಗಿ ಆನಂದ ಉಂಟಾಗುವದು. ನಿನ್ನ ಈ ಶಾಸನದಿಂದ ನನ್ನ ಶ್ರಮವೆಲ್ಲ ನಿರರ್ಥಕವಾಗಿರುವದು. ಆದ್ದರಿಂದ ಇಂಥ ಶಾಸನವನ್ನು ಎಂದಿಗೂ ಮಾಡಬೇಡ. ಇಷ್ಟವಿದ್ದರೆ ಇದಕ್ಕೆ ಬದಲಾಗಿ 'ಸಮಸ್ತರೂ ಹಾಸ್ಯಮಾಡುವಾಗ ಬಾಯಿಯನ್ನು ಬಟ್ಟೆಯಿಂದ ಮುಚ್ಚಿಕೊಂಡಿರಬೇಕು' ಎಂದು ಆಜ್ಞೆ ಮಾಡು. ಹಾಸ್ಯವೇ ಮನೆಗೆ ಅಲಂಕಾರವಲ್ಲವೆ! ಆನಂದವೆಲ್ಲಿರುವದೋ, ಅಲ್ಲೇ ಲಕ್ಷ್ಮಿಯು ವಾಸಮಾಡುವಳು. ಬ್ರಹ್ಮದೇವನು ನಿನಗೆ ಅವಮಾನ ಮಾಡಿದನೆಂದು ತಿಳಿಯಬೇಡ. ಆತನು ಲೋಕಹಿತಕ್ಕಾಗಿಯೇ ಈ ರೀತಿ ಮಾಡಿರುವನು. ನಾನು ಆತನನ್ನು ನಿನಗೆ ಶರಣಾಗತನಾಗುವಂತೆ ಮಾಡುವೆನು. ಹೇ, ರಾಮಚಂದ್ರಾ, ನನ್ನ ಈ ವಿನಂತಿಗಳಿಗೆ ಗೌರವವನ್ನು ಕೊಡು" ಎಂದು ಮಾತನಾಡಿದರು.

ಮುನಿಗಳ ಈ ಮಾತುಗಳನ್ನು ಕೇಳಿ ಶ್ರೀರಾಮನು 'ಹಾಗೇಯೇ ಆಗಲಿ' ಎಂದು ನುಡಿದನು. ಆಗ ವಾಲ್ಮೀಕಿಮುನಿಗಳ ಶಿಷ್ಯರು, ಗುರುಗಳ ಅಪ್ಪಣೆಯಂತೆ

ಬ್ರಹ್ಮದೇವನನ್ನು ಸಭೆಗೆ ಕರೆತಂದರು. ಇಷ್ಟರಲ್ಲಿ ಶತ್ರುಘ್ನ, ಕುಶ, ಲವ ಇವರ ರಥದ ಕುದುರೆಗಳು ಎದ್ದು ನಿಂತವು. ಅವರೆಲ್ಲರೂ ಶ್ರೀ ರಾಮನ ಕಡೆಗೆ ಬಂದರು. ಇಂದ್ರಾದಿದೇವತೆಗಳೂ ಶ್ರೀ ರಾಮನ ಸಭಾಮಂಟಪಕ್ಕೆ ಬಂದರು. ಬ್ರಹ್ಮದೇವನು ಶ್ರೀ ರಾಮನ ಚರಣಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿ, ಮತ್ಸ್ಯಾವತಾರದಿಂದ ರಾಮಾವತಾರದವರೆಗೂ ನಡೆಸಿದ ನಾರಾಯಣನ ಮಹಿಮೆಯನ್ನು ಹೊಗಳಿ 'ರಾಮಚಂದ್ರಾ, ನಮ್ಮ ಎರಡು ಗಣಗಳನ್ನು ಎರಡುಸಲ ಉದ್ಧಾರಮಾಡಿದೆ. ಮುಂದೆ ಒಂದು ಸಲ ಅವರನ್ನು ಉದ್ಧಾರಮಾಡತಕ್ಕದ್ದಿದೆ' ಎಂದು ಪ್ರಾರ್ಥಿಸಿದನು.

—ಜಯ-ವಿಜಯರ ವೃತ್ತಾಂತ.—

ವಸಿಷ್ಠರು 'ಹೇಬ್ರಹ್ಮದೇವ, ಆ ಎರಡು ಗಣಗಳ್ಯಾರು? ಅವರನ್ನು ರಾಮಚಂದ್ರನು ಹ್ಯಾಗೆ ಉದ್ಧಾರಮಾಡಿದನು. ಇದೆಲ್ಲವನ್ನು ನಮಗೆ ಸವಿಸ್ತಾರವಾಗಿ ಹೇಳು' ಎಂದು ಮಾತನಾಡಿದರು. ಆಗ ಬ್ರಹ್ಮದೇವನು 'ಎಲೈ ಮಾನಸಪುತ್ರನೇ, ನೀನು ಎಲ್ಲ ವಿಷಯವನ್ನೂ ತಿಳಿದಿರುವೆ. ಲೋಕಾನುಗ್ರಹಕ್ಕಾಗಿ ಕೇಳಿದ ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುವೆನು' ಎಂದು ಹೇಳಲಾರಂಭಿಸಿದನು. ಎಲೈ ಬ್ರಹ್ಮನೇ, ಒಂದಾನೊಂದು ಕಾಲದಲ್ಲಿ ನಾರಾಯಣನು ರಮಾದೇವಿಯೊಡನೆ ಏಕಾಂತ ಗೃಹದಲ್ಲಿದ್ದನು. ಆಗ ದೇವಶ್ರೇಷ್ಠರಾದ ಅಶ್ವಿನೀಪುತ್ರರು ಮಹಾವಿಷ್ಣುವನ್ನು ನೋಡಬೇಕೆಂದು ಬಂದರು. ರಾಜಮಂದಿರದ ಬಾಗಿಲಿಗೆ ಬಂದ ಆ ದೇವವೈದ್ಯರನ್ನು ನೋಡಿ ದ್ವಾರಪಾಲಕರಾದ ಜಯ-ವಿಜಯರು 'ಸ್ವಾಮಿ, ಪ್ರಭುಗಳು ಏಕಾಂತಾಗಾರದಲ್ಲಿರುವರು. ಒಳಕ್ಕೆ ಹೋಗಬೇಡಿರಿ' ಎಂದರು. ಆಗ ದೇವವೈದ್ಯರು 'ನಾವು ಬಂದಿರುವೆವೆಂದು ಒಳಗೆ ತಿಳಿಸಿರಿ' ಎಂದು ಮೂರುಸಲಹೇಳಿದರು. ಅದಕ್ಕೆ ದ್ವಾರಪಾಲಕರು 'ಇದು ಪ್ರಭುಗಳ ಸನ್ನಿಧಿಗೆ ಹೋಗತಕ್ಕ ಸಮಯವಲ್ಲ' ಎಂದರು. ಆಗ ಅಶ್ವಿನೀಕುಮಾರರು ಸಿಟ್ಟಿನಿಂದ 'ಹೇ ದ್ವಾರಪಾಲಕರೆ, ನಾವು ಮೂರುಸಲ ಹೇಳಿದರೂ ಆ ಮಾತುಗಳನ್ನು ನೀವು ಸ್ವಲ್ಪವೂ ಕೇಳಲಿಲ್ಲವಾದ್ದರಿಂದ ನೀವು ಭೂಲೋಕದಲ್ಲಿ ಮೂರುಸಲ ಜನಿಸಿರಿ' ಎಂದು ಶಪಿಸಿದರು. ಜಯ-ವಿಜಯರಿಗೆ ಈ ಮಾತುಗಳನ್ನು ಕೇಳಿದೊಡನೆ ಸಿಟ್ಟು ಬಂತು. ಅವರು 'ನೀವು ನಿರಪರಾಧಿಗಳಾದ ನಮಗೆ ಶಾಪಕೊಟ್ಟಿರುವಿರಾದ್ದರಿಂದ ನೀವೂ ಒಂದು ಸಲ ಭೂಲೋಕದಲ್ಲಿ ಜನ್ಮಹೊಂದಿರಿ' ಎಂದು ಅಶ್ವಿನೀಪುತ್ರರನ್ನು ಶಪಿಸಿದರು. ಬಳಿಕ ತಮ್ಮ ಕ್ರೂರ ಕೃತ್ಯಗಳಿಂದ ಎಲ್ಲರಿಗೂ ವನವಾಸಯಿತು. ಅವರು ಶ್ರೀ ಋಷ್ಯ

ರಾಮಾಯಣನಿಗೆ ಶರಣಾಗತರಾಗಿ 'ನಾವೆಲ್ಲರೂ ಉದ್ಧಾರವಾಗುವಂತೆ ಅನುಗ್ರಹಿಸು' ಎಂದು ಬೇಡಿಕೊಂಡರು. ಆಗ ವಿಷ್ಣುವು 'ಎಲೈ ಭಕ್ತಶಿಖಾಮಣಿಗಳೆ, ನೀವು ವಿರೋಧಭಕ್ತಿಯಿಂದ ಮೂರು ಜನ್ಮಗಳಾದ ಬಳಿಕ ನನ್ನ ಬಳಿಗೆ ಬರುವಿರೋ? ಸಾತ್ವಿಕಭಕ್ತಿಯಿಂದ ಏಳು ಜನ್ಮಗಳಾದ ಬಳಿಕ ನನ್ನ ಸನ್ನಿಧಿಗೆ ಬರುವಿರೋ?' ಎಂದು ಪ್ರಶ್ನೆಮಾಡಿದನು. ಆಗ ಅವರು 'ಮಹಾಸ್ವಾಮೀ, ನಾವು ವಿರೋಧಭಕ್ತಿಯಿಂದಲೇ ನಿನ್ನನ್ನು ಹೊಂದುವೆವು' ಎಂದರು. ಮಹಾವಿಷ್ಣುವು ಅವರ ಮಾತುಗಳಿಗೆ ಮಾನ್ಯಮಾಡಿದನು. ಅನಂತರ ಜಯ-ವಿಜಯರು ಹಿರಣ್ಯಾಕ್ಷ-ಹಿರಣ್ಯಕಶಿಪುಗಳೆಂಬ ರಾಕ್ಷಸರಾಗಿ ಅವತರಿಸಿದರು. ಅವರಲ್ಲಿ ಹಿರಣ್ಯಾಕ್ಷನನ್ನು ವರಾಹಾವತಾರದಿಂದಲೂ, ಹಿರಣ್ಯಕಶಿಪುವನ್ನು ನಾರಸಿಂಹಾವತಾರದಿಂದಲೂ ಶ್ರೀ ಮಹಾವಿಷ್ಣುವು ನಾಶಗೊಳಿಸಿದನು. ಬಳಿಕ ಜಯ-ವಿಜಯರು ರಾವಣ-ಕುಂಭಕರ್ಣರೆಂಬ ರಾಕ್ಷಸರಾದರು. ಆ ಕಾಲದಲ್ಲಿ ಅಶ್ವಿನೀಕುಮಾರರು ಅಹಿರಾವಣ, ಮಹಿರಾವಣರೆಂಬ ರಾಕ್ಷಸರಾಗಿ ಅವತರಿಸಿದರು. ಮುಂದೆ ಈ ಜಯ-ವಿಜಯರು ಶಿಶುಪಾಲ-ದಂತವಕ್ತ್ರರೆಂಬ ಅವತಾರಗಳನ್ನು ಹೊಂದುವವರಿದ್ದಾರೆ. ಈ ಪ್ರಕಾರ ಮೂರು ಜನ್ಮಗಳನ್ನು ಹೊಂದಿ ನಾರಾಯಣನೊಡನೆ ದ್ವೇಷಮಾಡಿ ಮುಂದೆ ಜಯ-ವಿಜಯರು ಮಹಾವಿಷ್ಣುವಿನ ದ್ವಾರಪಾಲಕರಾಗುವರು. ಅಹಿರಾವಣ-ಮಹಿರಾವಣರನ್ನು ಶ್ರೀರಾಮನು ಕೊಂದದ್ದರಿಂದ ಅವರು ಈಗ ದೇವವೈದ್ಯರ ಕೆಲಸವನ್ನು ಸ್ವೀಕರಿಸಿರುವರು. ಇರಲಿ, ರಾಮಚಂದ್ರ, ನಿನ್ನ ಮುಖ್ಯ ಅವತಾರಗಳ ಸಂಕ್ಷೇಪವನ್ನು ಹೇಳಿರುವೆನು. ನಿನ್ನ ಲೀಲೆಯನ್ನೆಲ್ಲ ವರ್ಣಿಸಲು ಸಮರ್ಥರ್ಯಾರು?" ಎಂದು ಬ್ರಹ್ಮದೇವನು ಸ್ತೋತ್ರಮಾಡಲು, ಶ್ರೀರಾಮನು ಸಂತುಷ್ಟನಾದನು. ಮತ್ತು 'ವಾಲ್ಮೀಕಿಮಹಾಮುನಿಗಳ ವಚನದಂತೆ ಜನಗಳು ಯೋಗ್ಯವಾದ ಹಾಸ್ಯ ಕರ್ಮಗಳಲ್ಲಿ ಪ್ರವೃತ್ತರಾಗಬಹುದು. ಆದರೆ ಅತಿಶಯ ಹಾಸ್ಯ ಮಾತ್ರ ವರ್ಜ್ಯಮಾಡಬೇಕು' ಎಂದು ಸಭಾಮಧ್ಯದಲ್ಲಿ ನುಡಿದನು.

ಶ್ರೀರಾಮನ ಈ ಮಾತುಗಳನ್ನು ಕೇಳಿ ಎಲ್ಲರೂ ಸಂತುಷ್ಟರಾದರು. ಶ್ರೀರಾಮನು ವಾಲ್ಮೀಕಿ ಮಹರ್ಷಿಗಳನ್ನು ಕುರಿತು 'ಹೇ ಮಹಾಮುನಿಗಳೇ, ನೀವು ನನ್ನ ಚರಿತ್ರೆಯನ್ನು ಹ್ಯಾಗೆ ಕೇಳಿದಿರಿ? ನಿಮಗೆ ಇದನ್ನು ಯಾರಾದರೂ ಹೇಳಿದ್ದರೋ ಹ್ಯಾಗೆ?' ಎಂದು ಪ್ರಶ್ನೆಮಾಡಿದನು. ಆಗ ಮಹರ್ಷಿಗಳು ಮಾತನಾಡುತ್ತಾರೆ— 'ರಾಮಚಂದ್ರ, ನಾನು ಹ್ಯಾಗೆ ಮಹರ್ಷಿಯಾದೆನೋ, ಅದನ್ನು ಹೇಳುವೆನು ಕೇಳು. ನನ್ನ ಪೂರ್ವಜನ್ಮದ ಕಥೆಯನ್ನು ಮೊದಲು ಹೇಳುವೆನು. ಪಂಚಾಶೀ

ರದಲ್ಲಿ ಶಂಖನೆಂಬ ಒಬ್ಬ ಬ್ರಾಹ್ಮಣನಿದ್ದನು. ಆತನು ಗುರುಗಳಿಂದ ಸಿದ್ಧಿಯನ್ನು ಹೊಂದಿ, ಒಂದುದಿವಸ ಗೋದಾವರೀ ತೀರಕ್ಕೆ ಹೊರಟಿದ್ದನು. ಭೀಮರಥೀ ನದಿಯನ್ನು ದಾಟಿ, ಮುಳ್ಳುಗಳಿಂದ ಕೂಡಿದ ನಿರ್ಜನವಾದ ವನದಲ್ಲಿ ಪ್ರಯಾಣ ಮಾಡುತ್ತಾ, ಆತನು ಒಬ್ಬ ವ್ಯಾಧನನ್ನು ಕಂಡನು. ಅವನ ಕೈಯಲ್ಲಿ ಧನಸ್ಸು ಇತ್ತು. ಅವನ ಆಕಾರವು ಭಯಂಕರವಾಗಿತ್ತು. ಬ್ರಾಹ್ಮಣನ ಕಿವಿಯೊಳಗೆ ಕಾಣುವ ಕುಂಡಲಗಳನ್ನು ನೋಡಿ, ಆ ವ್ಯಾಧನು ಆಶೆಯಿಂದ ಆ ಬ್ರಾಹ್ಮಣನನ್ನು ತನ್ನ ಕ್ರೂರ ಕೃತ್ಯದಿಂದ ಹೆದರಿಸಿ, ಆ ಕುಂಡಲಗಳನ್ನು ತೆಗೆದುಕೊಂಡನು. ಹೆಚ್ಚು ಹೇಳುವದೇನು? ಆತನ ಛತ್ರಿ, (ಜೋಡು) ಮುಚ್ಚೆ, ವಸ್ತ್ರ ಇವುಗಳನ್ನೆಲ್ಲಾ ಸುಲಿದು ಕೊಂಡು, ಆ ವ್ಯಾಧನು 'ನಿನಗೆ ಬೇಕಾದ ಮಾರ್ಗದಲ್ಲಿ ಹೊರಟುಹೋಗು' ಎಂದು ಹೇಳಿದನು. ಆ ಬ್ರಾಹ್ಮಣನಿಗೆ ಸೂರ್ಯನ ಕಿರಣಗಳಿಂದ ಬಹಳ ತಾಪ ವಾಯಿತು. ಪಾದಗಳು ಭೂಮಿಯಮೇಲೆ ನಿಲ್ಲದಾದವು. ಆಗ ಬ್ರಾಹ್ಮಣನು ಹಾಯ್, ಹಾಯ್ ಎಂದು ನಿಟ್ಟುಸುರು ಬಿಡುತ್ತಾ ತನ್ನ ಕಾಲುಗಳ ಕೆಳಗೆ ಸಣ್ಣ ವಸ್ತ್ರವನ್ನು ಹಾಕಿಕೊಂಡು ಕುಳಿತನು. ಆ ವ್ಯಾಧನು ಬ್ರಾಹ್ಮಣನ ದೀನತನವನ್ನು ನೋಡಿ ಆತನಿಗೆ ಜೋಡುಗಳನ್ನು ಕೊಡಬೇಕೆಂದು ಯೋಚಿಸಿದನು. ಮತ್ತು 'ಎಲೈ ಬ್ರಾಹ್ಮಣನೇ, ಈ ಸಾಮಾನುಗಳೆಲ್ಲಾ ಈಗ ನನ್ನವಷ್ಟೆ? ಕಳವುಮಾಡಿದ ಪದಾರ್ಥಗಳು ಕಳ್ಳನಿಗೆ ಸೇರಿದವುಗಳೆಂದು ಒಂದು ನ್ಯಾಯವಿರುವದು. ಈ ಕಾಲ ದಲ್ಲಿ ನಾನು ನಿನಗೆ ಈ ಮುಚ್ಚೆಗಳನ್ನು ಕೊಟ್ಟರೆ, ನನಗೆ ಬಹಳ ಪುಣ್ಯಬರಬಹುದು' ಎಂದು ಹೇಳಿ ಮುಚ್ಚೆಗಳನ್ನು ಆ ಬ್ರಾಹ್ಮಣನಿಗೆ ಕೊಟ್ಟನು. ಅದರಿಂದ ಬ್ರಾಹ್ಮಣ ನಿಗೆ ಬಹಳ ಸುಖವಾಯಿತು. ಮತ್ತು ಆತನು 'ಎಲೈ ವ್ಯಾಧನೆ, ನಿನ್ನ ಪೂರ್ವ ಪುಣ್ಯದಿಂದ ಇಂಥಾ ಒಳ್ಳೇ ಬುದ್ಧಿಯು ಹುಟ್ಟಿರುವದು' ಎಂದನು. ಆಗ ವ್ಯಾಧನು 'ಇದು ನನ್ನ ಪೂರ್ವಸುಕೃತವು ಹ್ಯಾಗೆ?' ಎಂದು ಪ್ರಶ್ನೆಮಾಡಿದನು.

ಆಗ ಬ್ರಾಹ್ಮಣನು 'ಇಲ್ಲಿ ಬಹಳ ಬಿಸಿಲು ಕಾಯುತ್ತಿರುವದು. ಸ್ವಲ್ಪ ನೆರಳು-ನೀರು, ಇರುವ ಸ್ಥಳಕ್ಕೆ ಹೋಗಿ, ಸ್ವಲ್ಪ ಜಲಪಾನಮಾಡಿ, ನೆರಳಿನಲ್ಲಿ ಕುಳಿತು ವಿಸ್ತಾರವಾಗಿ ಹೇಳುವೆನು' ಎಂದನು. ವ್ಯಾಧನು ನೆರಳು ನೀರು ಇವುಗಳಿಂದ ಪ್ರಶಸ್ತವಾದ ಸ್ಥಳವನ್ನು ಆ ಬ್ರಾಹ್ಮಣನಿಗೆ ತೋರಿಸಿದನು. ಆ ವಿಪ್ರನು ವ್ಯಾಧ ನೊಡನೆ ಅಲ್ಲಿಗೆ ಹೋಗಿ ಸ್ವಲ್ಪ ವಿಶ್ರಮಿಸಿಕೊಂಡು, ವ್ಯಾಧನನ್ನು ಕುರಿತು ಮಾತ ನಾಡುತ್ತಾನೆ—ಎಲೈ ವ್ಯಾಧನೇ, ನೀನು ಮೊದಲು ಶಾಕಲನಗರದಲ್ಲಿ ವಾಸವಾಗಿ ದ್ದೆ. ನೀನು ಆ ಜನ್ಮನದಲ್ಲಿ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ್ದೆ. ವೇದವಿದ್ಯಾನಿಪುಣ

ನಾದ ನಿನಗೆ ಸ್ತಂಭನೇಬ ಹೆಸರಿತ್ತು. ನಿನ್ನ ಗೋತ್ರ, ಶ್ರೀವತ್ಸವೆಂಬುದಾಗಿತ್ತು. ನಿನಗೆ ಬಹಳ ಪ್ರೀತಿಪಾತ್ರಳಾದ ಒಬ್ಬ ಸೂಳೆ ಇದ್ದಳು. ಅವಳ ಸಂಗಮದಿಂದ ನೀನು ಎಲ್ಲ ನಿತ್ಯಕರ್ಮಗಳನ್ನೂ ಬಿಟ್ಟು ಶ್ವಪಚನಾಗಿದ್ದೆ. ನೀನು ಇಷ್ಟು ದುಷ್ಟನಾಗಿದ್ದರೂ ನಿನ್ನ ಹೆಂಡತಿಯು ಪತಿವ್ರತೆಯಾಗಿದ್ದಳು. ಆಕೆಯು ನಿನ್ನನ್ನೂ ಆ ವೇಶ್ಯೆಯನ್ನೂ ಬಹಳ ಭಕ್ತಿಯಿಂದ ಸೇವಿಸುತ್ತಿದ್ದಳು. ನಿಮ್ಮಿಬ್ಬರ ಪಾದಗಳನ್ನು ಸೇವಿಸಿ, ನಿಮ್ಮ ಅಜ್ಞೆಯಂತೆ ಒಂದುಕಡೆ ನೆಲದಮೇಲೆ ಮಲಗುತ್ತಿದ್ದಳು. ಈ ರೀತಿ ಆಕೆಯು ಬಹಳ ಕಾಲಗಳನ್ನು ಕಳೆದಳು. ಒಂದು ದಿವಸ ನೀನು ಅಭಕ್ಷ್ಯ ಭಕ್ಷಣ ಮಾಡಿದ್ದರಿಂದ ನಿನಗೆ ಭಗಂಧರರೋಗವು ಪ್ರಾಪ್ತವಾಯಿತು. ಅದರಿಂದ ನೀನು ಬಹಳ ವ್ಯಥೆಯನ್ನು ಹೊಂದುತ್ತಿದ್ದೆ. ಮನೆಯಲ್ಲಿ ದ್ರವ್ಯವಿರುವವರೆಗೂ, ಆ ವೇಶ್ಯೆಯು ನಿನ್ನ ಬಳಿಯಲ್ಲಿದ್ದಳು. ದ್ರವ್ಯವು ಮುಗಿದಕೂಡಲೆ ಅವಳು ಮತ್ತೊಬ್ಬ ಧನಿಕನನ್ನು ಹುಡುಕಿಕೊಂಡು ಹೊರಟುಹೋದಳು. ಆಗ ಅಳುತ್ತಾ ಅಳುತ್ತಾ ನೀನು ಹೆಂಡತಿಯನ್ನು ಕುರಿತು 'ಹೇ ಪತಿವ್ರತೆ, ನಾನು ಅತಿ ನೀಚನು, ಚಾಂಡಾಲನು, ಅಧಮನು, ದುರಾಚಾರಿಯು ಎಂದು ತಿಳಿ. ಅಯ್ಯೋ, ವ್ಯರ್ಥವಾಗಿ ನಿನಗೆ ತೊಂದರೆಕೊಟ್ಟೆನಲ್ಲಾ! ವೇಶ್ಯೆಯಲ್ಲಿ ಪ್ರೀತಿಮಾಡಬೇಕೆಂದು ನಿನ್ನನ್ನೆಷ್ಟು ಹಿಂಸಿಸಿದೆನಲ್ಲಾ!! ಹೇ ಸಾಧ್ವೀ, ಆ ನನ್ನ ಅಪರಾಧಗಳನ್ನೆಲ್ಲ ಕ್ಷಮಿಸು. ಯಾವನು ಪತಿವ್ರತೆಯರಾದ ಸ್ತ್ರೀಯರಿಗೆ ದುಃಖಕೊಡುವನೋ, ಆ ನರಪಶುವು ಷಂಢನಾಗುವನು. ನಾನು ಸಮಸ್ತ ಪ್ರಾಣಿಗಳಲ್ಲೂ ನಿಂದ್ಯನಾದೆನು. ನಿಶ್ಚಯವಾಗಿ ನೀನು ಉತ್ತಮ ಸ್ತ್ರೀ ಇರುತ್ತೀ, ಎಂದು ಮಾತನಾಡಿದೆ. ನಿನ್ನ ಈ ವ್ಯಥೆಯನ್ನು ನೋಡಿ ಆ ಸಾಧ್ವಿಗೆ ಬಹಳ ದುಃಖವಾಯಿತು. ಆಕೆಯು ಪರಮೇಶ್ವರನನ್ನು ನಂಬಿ ನಿನ್ನ ಸೇವೆಯಲ್ಲಿ ನಿರತಳಾದಳು. ಅಷ್ಟರಲ್ಲಿ ನಿನ್ನ ಮನೆಗೆ ದೇವಲರೆಂಬ ಮಹರ್ಷಿಗಳು ಬಂದರು. ಬಿಸಿಲಿನಲ್ಲಿ ದಣಿದು ಬಂದ ಆ ಮಹರ್ಷಿಯನ್ನು ನೋಡಿ ಬಹಳ ಹರ್ಷದಿಂದ ಆ ನಿನ್ನ ಪತ್ನಿಯು ನಿನ್ನ ಅನುಜ್ಞೆಯನ್ನು ಪಡೆದು ಆ ಮುನಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದಳು. ಆತನ ಪಾದತೀರ್ಥವನ್ನು ನಿನ್ನ ತಲೆಯಮೇಲೆ ಪ್ರೋಕ್ಷಿಸಿ, ಆ ಪತಿವ್ರತೆಯು ಅದನ್ನು ನಿನಗೆ ಕುಡಿಯುವಂತೆ ಹೇಳಿದಳು. ಬಳಿಕ ಆಕೆಯು ಮುನಿಗಳಿಗೆ ಭಕ್ಷ್ಯಭೋಜ್ಯಗಳಿಂದ ಯೋಗ್ಯವಾದ ಭೋಜನ ಮಾಡಿಸಿದಳು. ಆ ದಿವಸ ಮುನಿಗಳು ನಿನ್ನ ಮನೆಯಲ್ಲಿ ವಾಸಮಾಡಿ ಮರುದಿವಸ ಪ್ರಾತಃಕಾಲಕ್ಕೆ ಮುಂದೆ ತೆರಳಿದರು. ಕೆಲವು ಕಾಲಗಳನಂತರ ನಿನಗೆ ಬಹಳ ಕಾಯಿಲೆಯಾಗಿ ಮರಣಕಾಲವು ಸಮೀಪಿಸಿತು. ನಿನ್ನ ಹೆಂಡತಿಯು ಔಷಧವನ್ನು ನಾಲಿಗೆಗೆ ಹಚ್ಚಬೇಕೆಂದು

ನಿನ್ನ ಬಾಯಿಯಲ್ಲಿ ಬೆರಳನ್ನು ಇರಿಸಿದ್ದಳು. ಆಗಲೆ ನಿನ್ನ ಪ್ರಾಣಗಳು ಹೊರಟು ಹೋದ್ದರಿಂದ ಹಲ್ಲುಗಳು ಜಿಗಿಬಿದ್ದವು. ಆಕೆಯ ಬೆರಳಿನ ತುಂಡು ನಿನ್ನ ಮುಖದಲ್ಲಿ ನಿಂತಿತು. ಇರಲಿ. ಆ ಸಾಧ್ವಿಯು ತನ್ನ ಮೈಮೇಲಿರುವ ಸಮಸ್ತ ಆಭರಣಗಳನ್ನೂ ಮಾರಿ, ಬಂದ ದ್ರವ್ಯದಿಂದ ಚಂದನಕಾಷ್ಠಗಳನ್ನು ಕೊಂಡಳು. ಅದರಿಂದ ಅಗ್ನಿಯನ್ನು ಪ್ರಜ್ವಲಿಸಿ ಅದರಲ್ಲಿ ನಿನ್ನ ಶರೀರವನ್ನು ಹಾಕಿ ತಾನೂ ಬೆಂಕಿಯಲ್ಲಿ ಹಾರಿದಳು. ಆಕೆಗೆ ಸ್ವರ್ಗಲೋಕವು ಪ್ರಾಪ್ತವಾಯಿತು. ನೀನುಮಾತ್ರ ಪಾಪಶೇಷದಿಂದ ಈ ಜನ್ಮವನ್ನು ಹೊಂದಿರುತ್ತೀ. ಸಾಯುವಾಗ ನಿನ್ನ ಮುಖದಲ್ಲಿ ಮಾಂಸದ ತುಂಡು ಇದ್ದದ್ದರಿಂದ ಈಗ ನೀನು ಮಾಂಸಭಕ್ಷಕನಾಗಿರುತ್ತೀ. ನಿನ್ನ ಹೆಂಡತಿಯ ಸುಕೃತದಿಂದ ಆ ಬ್ರಾಹ್ಮಣನ ಪಾದತೀರ್ಥವನ್ನು ನೀನು ಕುಡಿದದ್ದರಿಂದ ಈ ದಿವಸ ನಿನಗೆ ಇಂಥ ಒಳ್ಳೇ ಬುದ್ಧಿ ಹುಟ್ಟಿರುವದು. ಎಲೈ ವ್ಯಾಧನೇ, ಇನ್ನು ಮುಂದೆ ನೀನು ಬ್ರಾಹ್ಮಣನಾಗುವೆ. ಅಂದರೆ ಒಬ್ಬ ತಪಸ್ವಿಯ ನೇತ್ರಗಳಿಂದ ವೀರ್ಯಬಿಂದುವು ಹೊರಗೆ ಬರುವದು. ಅದನ್ನು ಒಂದು ಹೆಣ್ಣುಸರ್ಪವು ಭಕ್ಷಣೆಮಾಡುವದು. ಆಗ ಗರ್ಭಿಣಿಯಾದ ಸರ್ಪದ ಹೊಟ್ಟೆಯಲ್ಲಿ ನೀನು ಜನಿಸುವೆ. ನಿನಗೆ ಚಿಕ್ಕ ವಯಸ್ಸಿನಲ್ಲಿಯೇ ಕಿರಾತರ ಸಹವಾಸವು ಜೋಡುವದು. ಅವರೊಡನೆ ಬೆಳೆದು ನೀನೂ ಕೆಟ್ಟಕೃತ್ಯಗಳನ್ನು ಮಾಡಲುಪಕ್ರಮಿಸುವೆ. ಮುಂದೆ ನಿನಗೆ ಸಪ್ತಋಷಿಗಳ ಸಮಾಗಮವು ದೊರೆಯುವದು. ಅವರ ಉಪದೇಶದಿಂದ ನೀನು ವಾಲ್ಮೀಕಿಮುನಿಯಾಗುತ್ತೀ. ಅನಂತರ ನೀನು ಶ್ರೀರಾಮನ ಚರಿತ್ರವನ್ನು ಬರೆಯಬೇಕಾಗುವದು. ಅದರಿಂದ ನಿನ್ನ ಕೀರ್ತಿಯು ಶಾಶ್ವತವಾಗಿ ನಿಲ್ಲುವದು" ಎಂದು ಹೇಳಿ ಆ(ಮುನಿಯು) ಬ್ರಾಹ್ಮಣನು ಗೌತಮಿಯ ನದಿಯ ಕಡೆಗೆ ಹೊರಟುಹೋದನು. ಮುಂದೆ ಆತನು ಹೇಳಿದಂತೆ ಎಲ್ಲ ಕಾರ್ಯಗಳೂ ನಡೆದವು. ಕಿರಾತರ ಸಹವಾಸದಿಂದ ನಾನು ಶೂದ್ರಸ್ತ್ರೀಯನ್ನು ವಿವಾಹಮಾಡಿಕೊಂಡೆನು. ಅವಳಿಗೆ ಅನೇಕ ಮಕ್ಕಳಾದವು. ಅವರೆಲ್ಲರ ರಕ್ಷಣೆಗಾಗಿ ನಾನು ದಾರಿಯನ್ನು ಕಟ್ಟಿ ಜನರ ತಲೆಹೊಡೆಯಲು ಪ್ರಾರಂಭಮಾಡಿದೆನು. ಆ ಸಮಯದಲ್ಲಿ ಅಲ್ಲಿಗೆ ಏಳು ಜನ ಋಷಿಗಳು ಬಂದರು. ಅವರನ್ನು ಹೊಡೆಯಲು ನಾನು ಮುಂದುವರೆದನು. ಆಗ ಅವರು ನಾನಾವಿಧವಾಗಿ ಉಪದೇಶ ಮಾಡಿದರು. ನಾನು ಅವರ ಆಜ್ಞೆಯಂತೆ ಮನೆಗೆ ಹೋಗಿ, ಹೆಂಡತಿ, ಮಕ್ಕಳನ್ನು ನನಗೆ ಬಂದ ಪಾಪಗಳಲ್ಲಿ ನೀವು ಅರ್ಧಭಾಗ ತೆಗೆದುಕೊಳ್ಳುವಿರಾ ಎಂದು ಪ್ರಶ್ನೆಮಾಡಿದೆನು.

ಅದಕ್ಕೆ ಅವರು 'ನಿಮ್ಮ ಪಾಪಗಳಿಗೇನೂ ನಾವು ಬಾಧ್ಯರಲ್ಲ. ಪಾಪಕೃತ್ಯಗಳಿಂದ

ತಂದ ಪದಾರ್ಥಗಳಿಗೆ ಮಾತ್ರ ನಾವು ಭಾಗದಾರರು' ಎಂದು ಹೇಳಿದರು. ಆ ಕ್ಷಣವೇ ನನಗೆ ವಿರಕ್ತಿಯುಂಟಾಯಿತು. ನಾನು ಆ ಏಳುಮಂದಿ ಋಷಿಗಳ ಪಾದಗಳನ್ನು ಘಟ್ಟಿಯಾಗಿ ಹಿಡಿದೆನು. ಅವರು 'ಎಲೈ ವ್ಯಾಧನೆ, ರಾಮ, ರಾಮ, ಎಂದು ಜಪ ಮಾಡುತ್ತ, ನಾವು ಇಲ್ಲಿಗೆ ಬರುವ ವರೆಗೂ ಅಲ್ಲಿ ಕುಳಿತಿರು' ಎಂದು ಹೇಳಿ ಹೊರಟು ಹೋದರು. ನಾನು ಅನೇಕ ವರ್ಷಗಳ ವರೆಗೆ ರಾಮ, ರಾಮ, ಎಂದು ಜಪಮಾಡುತ್ತ ಅಲ್ಲಿ ವಾಸವಾಗಿದ್ದೆನು. ಕೆಲವು ಕಾಲಗಳ ಮೇಲೆ ನನ್ನ ಮನಸ್ಸು ಏಕಾಗ್ರವಾಯಿತು. ಬರಬರುತ್ತ ದೇಹಭಾನುವು ತಪ್ಪಿತು. ನನ್ನ ದೇಹದ ಮೇಲೆ ದೊಡ್ಡ ಹುತ್ತ ಬೆಳೆಯಿತು. ಮುಂದೆ ಸಾವಿರಾರು ವರ್ಷಗಳು ಹೀಗೆ ಕಳೆದವು. ಅಷ್ಟರಲ್ಲಿ ಆ ಮುನಿಗಳು ನಾನಿದ್ದಲ್ಲಿಗೆ ಬಂದರು. ನನ್ನ ನಿಶ್ಚಯಸ್ಥಿತಿಯನ್ನು ನೋಡಿ ಸಂತುಷ್ಟರಾಗಿ ಆ ಮಹರ್ಷಿಗಳು 'ಹೇ, ವಾಲ್ಮೀಕಿಯೆ, ಹೊರಗೆ ಬಾ. ನೀನೂ ನಮ್ಮಂತೆ ಮಹರ್ಷಿಯಾದೆ. ನೀನು ವಲ್ಮೀಕದಿಂದ ಹೊರಗೆ ಬಂದವನಾದ್ದರಿಂದ ನಿನ್ನನ್ನು ಜನರು ವಾಲ್ಮೀಕಿಯೆಂದು ಕರೆಯಲಿ. ನೀನು ಧನ್ಯನು' ಇತ್ಯಾದಿ ಮಾತುಗಳನಾಡಿದರು. ನಾನು ಅವರ ಅಪ್ಪಣೆಯಂತೆ ಹೊರಕ್ಕೆ ಎದ್ದು ಬಂದು ಅವರಿಗೆ ನಮಸ್ಕರಿಸಿದೆನು. ಆಗ ಮಹರ್ಷಿಗಳು ನನಗೆ ಅನೇಕ ವರಗಳನ್ನಿತ್ತರು. ಅನಂತರ ನಾನು ಸರಸ್ವತೀತೀರದಲ್ಲಿ ಆಶ್ರಮವನ್ನು ಕಟ್ಟಿ ವಾಸಮಾಡಿದೆನು. ನಿನ್ನ ಕೃಪೆಯಿಂದ ನನಗೆ ಸಮಸ್ತ ವೇದ–ವೇದಾರ್ಥಗಳೂ ತಿಳಿಯಲಾರಂಭಿಸಿದವು. ನಾನು ಒಂದು ದಿವಸ ವ್ಯಾಧನ ಕ್ರೂರತನವನ್ನು ನೋಡಿ ಅವನಿಗೆ ಶಾಪಕೊಟ್ಟೆನು. ಅದೇ ಮೂವತ್ತೆರಡಕ್ಷರದ ಒಂದು ಶ್ಲೋಕವಾಯಿತು. ಪೂರ್ವದಲ್ಲಿ ಶಂಕರನ ಮುಖದಿಂದ ಬ್ರಹ್ಮದೇವನು ನಿನ್ನ ಚರಿತ್ರೆಯನ್ನು ಕೇಳಿದ್ದನು. ಆತನು ಅದನ್ನು ನಾರದರಿಗೆ ಉಪದೇಶಮಾಡಿದನು. ನಾರದರು ಅದನ್ನು ನನಗೆ ಹೇಳಿದರು. ಸಾರಾಂಶ, ಹೇ ರಾಮಚಂದ್ರ, ಈ ಚರಾಚರ ಸೃಷ್ಟಿ, ಶಬ್ದ, ಸರ್ವವರ್ಣ ಇವುಗಳೆಲ್ಲೆಲ್ಲ ನೀನೇ ತುಂಬಿರುತ್ತೀ. ನಿನ್ನನ್ನು ಬಿಟ್ಟು ಯಾವ ಪದಾರ್ಥ ಬಾಳೀತು! ಈ ರೀತಿ ಸ್ತೋತ್ರಮಾಡಿ ಅವರವರು ತಮ್ಮ ತಮ್ಮ ವಾಸಸ್ಥಾನಗಳಿಗೆ ಶ್ರೀರಾಮನ ಅಪ್ಪಣೆಯನ್ನು ಪಡೆದು ತೆರಳಿದರು. ಶ್ರೀ ರಾಮನು ತನ್ನ ರಾಜ್ಯದಲ್ಲಿ ಸೀತೆಯೊಡನೆ ಸುಖದಿಂದ ವಾಸವಾಗಿದ್ದನು.

## ಕುಶಕನ್ಯೆಯ ಸ್ವಯಂವರ.

ಶ್ರೀ ರಾಮನ ರಾಜ್ಯಸಂರಕ್ಷಣೆಯು ಸಮಸ್ತ ಪ್ರಜೆಗಳಿಗೂ ಸುಖಕರವಾಗಿತ್ತು. ಆತನು ಯಾವ ವಿಷಯದಲ್ಲೂ ಯಾರಿಗೂ ಏನೂ ಶಿಕ್ಷೆಮಾಡಲಿಲ್ಲ,

ಆದ್ದರಿಂದ ಶಸ್ತ್ರ, ಅಸ್ತ್ರ, ದಂಡ ಈ ಶಬ್ದಗಳು ಅರ್ಥವಿಲ್ಲದವಾದವು. ಶ್ರೀರಾಮನ ಸೇವೆ ಮಾಡಬೇಕೆಂದು ದೇವತೆಗಳೂ ಬಹಳ ಪ್ರೇಮದಿಂದ ಭೂಲೋಕಕ್ಕೆ ಬರುತ್ತಿದ್ದರು. ಆತನ ರಾಜ್ಯದಲ್ಲಿ ದುಃಖವನ್ನು ಸ್ವಪ್ನದಲ್ಲಾದರೂ ಜನರು ಕಂಡಿರಲಿಲ್ಲ. ಎಲ್ಲರೂ ತಮ್ಮ ಧರ್ಮಗಳಲ್ಲಿ ಆಸಕ್ತರಾಗಿದ್ದರು. ಅಯೋಧ್ಯಾನಗರದಲ್ಲಿ ಪ್ರಜೆಗಳ ಮಕ್ಕಳು ಬಹಳ ಕುಶಲರಿದ್ದರು. ದಡ್ಡರು ಹುಡುಕಿದರೂ ಸಿಗುವದು ಅಸಾಧ್ಯವಾಗಿತ್ತು. ರಾಮರಾಜ್ಯದಲ್ಲಿ ಬಡವರು, ರೋಗಿಗಳು, ಮತ್ಸರಿಗಳು ಇವರ ಹೆಸರುಗಳುಮಾತ್ರ ಉಳಿದಿದ್ದವು. ಶ್ರೀರಾಮನ ಕೃಪೆಯಿಂದ ಪಶುಗಳಿಗಾದರೂ ಎರಡು, ಮೂರು ಮಕ್ಕಳಿರುತ್ತಿದ್ದವು. ಇನ್ನು ಮನುಷ್ಯರಿಗೆ ಮಕ್ಕಳಿದ್ದವೆಂದು ಬೇರೆ ಹೇಳಬೇಕೆ? ನಿಷಿದ್ಧಾಚರಣೆಯಲ್ಲಿ ಯಾರೂ ನಡೆಯಲಾರರು. ಆತನ ರಾಜ್ಯದಲ್ಲಿ ನಾಸ್ತಿಕ, ವಾದಿಗಳು ಇವರ ಸಂಪರ್ಕವೇ ಇರಲಿಲ್ಲ. ಸಾರಾಂಶ ಶ್ರೀರಾಮನು ರಾಜ್ಯ ಸಂರಕ್ಷಣೆ ಮಾಡುತ್ತಿರಲು ಸೃಷ್ಟಿಯು ಆನಂದದಿಂದ ಕೇಲಿಮಾಡುತ್ತಿರುವದು. ಶ್ರೀರಾಮನು ಒಂದು ದಿವಸ ಕುಶ, ಲವ, ಭರತ, ಶತ್ರುಘ್ನ ಇವರೆಲ್ಲರನ್ನೂ ತನ್ನ ಬಳಿಗೆ ಕರಿಸಿ ಶ್ರೇಷ್ಠವಾದ ರಾಜನೀತಿಯನ್ನು ಬೋಧಿಸಿದನು. ಲಕ್ಷ್ಮಣಾದಿಗಳು ಶ್ರೀರಾಮನ ಬೋಧನಚಾತುರ್ಯವನ್ನು ಕೊಂಡಾಡಿದರು.

ಒಂದಾನೊಂದುದಿವಸ ಕುಶನಮಗಳಾದ ಹೇಮೆಯ ಸ್ವಯಂವರಮಹೋತ್ಸವವು ಪ್ರಾಪ್ತವಾಯಿತು. ಆಗ ಭರತವರ್ಷದಲ್ಲಿರುವ ಸಮಸ್ತ ರಾಜರೂ, ಗಂಧರ್ವರೂ ದೇವತೆಗಳೂ ಅಯೋಧ್ಯೆಗೆ ಬಂದಿದ್ದರು. ಶ್ರೀರಾಮನು ತನ್ನ ಪೌತ್ರಿಯ ವಿವಾಹ ಮಹೋತ್ಸವವನ್ನು ಬಹಳ ವಿಜೃಂಭಣೆಯಿಂದ ಮಾಡಬೇಕೆಂದು ಸುಮಂತ್ರನಿಗೆ ಆಜ್ಞಾಪಿಸಿದ್ದನು. ದೂತರು ನಗರಿಯನ್ನು ಶೃಂಗಾರ ಮಾಡಿದರು. ಒಂದು ಸೊಗಸಾದ ಸ್ವಯಂವರ ಮಂಟಪವು ಸಿದ್ಧವಾಯಿತು. ಸಮಸ್ತ ರಾಜರೂ ಸಕಾಲಕ್ಕೆ ಸಭಾಮಂಟಪವನ್ನು ಪ್ರವೇಶಿಸಿದರು. ಅವರೆಲ್ಲರೂ ತಮಗೆ ಯೋಗ್ಯವಾದ ಆಸನಗಳಲ್ಲಿ ಕುಳಿತಿರಲು, ಕುಶಕನ್ಯೆಯಾದ ಹೇಮೆಯು ತನ್ನ ದಾಸಿಯೊಡನೆ ಸಭಾಮಂಟಪಕ್ಕೆ ಬಂದು, ದಾಸಿಯು ಹೊಗಳುವ ಅನೇಕ ರಾಜರ ಪರಾಕ್ರಮಗಳನ್ನು ಕೇಳುತ್ತ ಮುಂದೆನಡೆದಳು. ಅಷ್ಟರಲ್ಲಿ ಅವಂತಿರಾಜನ ಮಗನಾದ ಚಿತ್ರರಥನು ಸಮಸ್ತ ರಾಜರನ್ನೂ ಮೋಹನಾಸ್ತ್ರದಿಂದ ಮೂರ್ಛೆಗೊಳಿಸಿ ಆ ಹೇಮೆಯನ್ನು ರಥದಮೇಲೆ ಕುಳ್ಳಿರಿಸಿಕೊಂಡು ನಗರದ ಹೊರಭಾಗದಲ್ಲಿ ಬಂದು ನಿಂತ ... ಕನ್ಯೆಯನ್ನು ಅಪಹರಿಸಿಕೊಂಡು ಹೋಗುವದು ಯುಕ್ತವಲ್ಲವೆಂದು ಯೋಚಿಸಿ ಆ ರಾಜಕುಮಾರನು ರಾಜರಿಗೆ ಪ್ರಯೋಗಿಸಿದ ಮೋಹನಾಸ್ತ್ರವನ್ನು ಉಪಶ

ಸಂಹಾರ ಮಾಡಿದನು. ಆ ಕ್ಷಣದಲ್ಲಿ ಸಮಸ್ತ ರಾಜರೂ ಹಲ್ಲುಗಳನ್ನು ಕಡಿಯುತ್ತಾ ಸೇನೆಗಳೊಡನೆ ಪಟ್ಟಣದ ಹೊರಕ್ಕೆ ಬಂದರು. ಆಗ ಅವರಿಗೆ ಮಹತ್ತರವಾದ ಯುದ್ಧವಾಯಿತು. ಉಗ್ರಬಾಹುವಿನ ಮಗನಾದ ಚಿತ್ರರಥನು ವಾಯುವ್ಯಾಸ್ತ್ರದಿಂದ ಸಮಸ್ತ ರಾಜರನ್ನೂ ಆಕಾಶಕ್ಕೆ ಹಾರಿಸಿದನು.

ಈ ವರ್ತಮಾನವನ್ನು ಕೇಳಿ ಶ್ರೀ ರಾಮನು ತನ್ನ ಏಳು ಮಂದಿಮಕ್ಕಳನ್ನೂ ಯುದ್ಧಕ್ಕೆ ಕಳುಹಿಸಿದನು. ಚಿತ್ರಕೇತುವು ಅವರೊಡನೆ ಭಯಂಕರ ಯುದ್ಧ ಮಾಡಿದನು. ಯೂಪಕೇತು, ಅಂಗದ, ರಕ್ಷನೇ ಮೊದಲಾದ ರಾಜಪುತ್ರರು ಅವನೊಡನೆ ಯುದ್ಧಮಾಡಲಾರದೆ ಮೂರ್ಛಿತರಾದರು. ಈ ವಾರ್ತೆಯನ್ನು ಕೇಳಿ ಲವನು ಚಿತ್ರರಥನೊಡನೆ ಕ್ರೂರವಾದ ಶಸ್ತ್ರಗಳಿಂದ ಯುದ್ಧಮಾಡಲುಪಕ್ರಮಿಸಿದನು. ಆಗ ತನ್ನ ಬಂಧುವನ್ನು ಇವನು ಸೋಲಿಸುವನೆಂದು ತಿಳಿದು ವೀರಬಾಹುವು ಲವನೊಡನೆ ಯುದ್ಧಕ್ಕೆ ಬಂದನು. ವೀರಬಾಹುವು ತನ್ನ ಶಸ್ತ್ರಾಸ್ತ್ರಗಳ ಸಾಮರ್ಥ್ಯದಿಂದ ಲವನನ್ನು ಬಳಲಿಸಿ ಮೂರ್ಛೆಗೊಳಿಸಿದನು. ಈ ವರ್ತಮಾನವನ್ನು ಕೇಳಿ ಕುಶನು ಅತಿಕ್ರೋಧದಿಂದ ರಣಾಂಗಣಕ್ಕೆ ಬಂದು, ವೀರಬಾಹುವನ್ನು ಭೂಮಿಯಲ್ಲಿ ಹುಗಿಸಿ, ಚಿತ್ರರಥ, ಉಗ್ರಬಾಹು ಇವರಿಬ್ಬರು ತಂದೆಮಕ್ಕಳನ್ನು ಪಾಶಗಳಿಂದ ಕಟ್ಟಿ ಶ್ರೀರಾಮನ ಬಳಿಗೆ ಕರೆತಂದನು. ಶ್ರೀರಾಮನು ತಂದೆಮಕ್ಕಳನ್ನು ಬಂಧನದಿಂದ ತಪ್ಪಿಸುವಂತೆ ಹೇಳಿ, ಅಗಸ್ತ್ಯರು ತನಗೆ ಸಮರ್ಪಿಸಿದ ಕಂಕಣವನ್ನು ಜಯಶಾಲಿಯಾದ ಕುಶನಿಗೆ ಕೊಟ್ಟನು. ಆಗ ಕುಶನು 'ಸ್ವಾಮಿ, ಮಹರ್ಷಿಗಳೆ, ತಮಗೆ ಈ ಕಂಕಣವು ಎಲ್ಲಿ ದೊರಕಿತು?' ಎಂದು ಅಗಸ್ತ್ಯರನ್ನು ಕೇಳಿದನು. ಈಮಾತುಗಳನ್ನು ಕೇಳಿ ಅವರು "ಕುಶ, ಪೂರ್ವದಲ್ಲಿ ಸಾಗರವು ಇಂದ್ರಶತ್ರುವಿಗೆ ತನ್ನಲ್ಲಿ ಆಶ್ರಯ ಕೊಟ್ಟಿತು. ಆ ರಾಕ್ಷಸನು ದೇವತೆಗಳನ್ನು ಬಾಧಿಸಿ, ತಾನು ಅವರ ಶಾಸನಗಳಿಗೊಳಗಾಗದೆ ಸಮುದ್ರವನ್ನು ಪ್ರವೇಶಿಸುತ್ತಿದ್ದನು. ಇದನ್ನು ನೋಡಿ ದೇವೇಂದ್ರನು 'ಸಮುದ್ರವನ್ನು ಪಾನಮಾಡಬೇಕು' ಎಂದು ನನ್ನನ್ನು ಪ್ರಾರ್ಥಿಸಿದನು. ಆಗ ನಾನು ಸಾಗರವನ್ನು ಒಂದೆ ಗುಟುಕಿಗೆ ಬರಿಯದನ್ನಾಗಿ ಮಾಡಿದೆನು. ಅನಂತರ ದೇವೇಂದ್ರನು ಆ ದುಷ್ಟರಾಕ್ಷಸನನ್ನು ಶಾಸನಮಾಡಿದನು. ನಾನು ಇಂದ್ರನ ಪ್ರಾರ್ಥನೆಯಂತೆ ಆ ಸಮುದ್ರದ ಉದಕವನ್ನು ಮೂತ್ರರೂಪದಿಂದ ಬಿಟ್ಟೆನು. ಆಗ ನನಗೆ ಈ ಕಂಕಣವು ಸಿಕ್ಕಿತು. ನಾನು ಇದನ್ನು ಮೊದಲು ಶ್ರೀ ರಾಮನಿಗೆ ಸಮರ್ಪಿಸಿದ್ದೆನು. ಈ ದಿವಸ ಅದನ್ನು ಶ್ರೀ ರಾಮನು ನಿನಗೆ ಕೊಟ್ಟಿರುವನು." ಎಂದು ಹೇಳಿದರು. ಈ ಮಾತುಗಳನ್ನು ಕೇಳಿ ಕುಶನು "ಮಹರ್ಷಿಗಳೆ, ನನ್ನ ತಮ್ಮನಾದ

ಲವನು ಯುದ್ಧದಲ್ಲಿ ಮೂರ್ಛಿತನಾಗಿ ಬಿದ್ದಿರುವನು. ಅವನು ಹ್ಯಾಗೆ ಚೇತರಿಸಿಕೊಂಡಾನೆಂಬ ಈ ವಿಷಯವನ್ನು ದಯವಿಟ್ಟು ಹೇಳಿರಿ" ಎಂದು ಕೇಳಿದನು. ಈ ಮಾತುಗಳನ್ನು ಕೇಳಿ ಅಗಸ್ತ್ಯರು 'ಎಲೈ ರಾಜಕುಮಾರನೆ, ಭರತನಿಗೆ ಮೂರ್ಛೆಯುಂಟಾದಾಗ ಶ್ರೀ ರಾಮನು ಮುದ್ಗಲರ ಆಶ್ರಮದಿಂದ ಸಂಜೀವಿನೀ ಲತೆಯನ್ನು ತರಿಸಿ, ಅವನನ್ನು ಹ್ಯಾಗೆ ಬದುಕಿಸಿದನೋ, ಅದರಂತೆ ನೀನಾದರೂ ಜಾಗ್ರತೆ ಅವರ ಆಶ್ರಮಕ್ಕೆ ಆಂಜನೇಯನನ್ನು ಕಳುಹಿಸಿ ಓಷಧಿಗಳನ್ನು ತರಿಸು, ಅಂದರೆ ನಿನ್ನ ತಮ್ಮನು ಬದುಕುವನು' ಎಂದು ಹೇಳಿದರು. ಆಗ ಮಾರುತಿಯು ಮುದ್ಗಲಾಶ್ರಮಕ್ಕೆ ಹಾರಿ ಓಷಧಿಗಳನ್ನು ತಂದು ಲವನನ್ನು ಕಾಪಾಡಿದನು. ಆಗ ಅಗಸ್ತ್ಯರು "ಕುಶನೇ, ಈ ಸಂಜೀವಿನೀ ಲತೆಯು ಸಾಮಾನ್ಯವಾದದ್ದಲ್ಲ. ಇದು ದ್ರೋಣಗಿರಿಯಲ್ಲಿ ಹೊರತಾಗಿ ಇನ್ನೆಲ್ಲೂ ಸಿಕ್ಕುವದಿಲ್ಲ. ಪೂರ್ವದಲ್ಲಿ ಗರುಡನು ಅಮೃತ ಕಲಶವನ್ನು ತನ್ನ ತಾಯಿಗೆ ತರುವಾಗ ಒಂದು ಅಮೃತಬಿಂದುವು ದ್ರೋಣಪರ್ವತದಲ್ಲಿ ಬಿತ್ತು. ಅದು ಮುದ್ಗಲತಪಶ್ಶಕ್ತಿಯಿಂದ ಲೋಕೋಪಕಾರಕ್ಕಾಗಿ ಈ ಲತೆಯಾಗಿರುವದು" ಎಂದು ಹೇಳಿದರು. ಅಷ್ಟರಲ್ಲಿ ಲವನು ಸಂತೋಷದಿಂದ ಶ್ರೀ ರಾಮನ ಬಳಿಗೆ ಬಂದು ನಮಸ್ಕರಿಸಿದನು. ಶ್ರೀ ರಾಮನಿಗೆ ಲವನನ್ನು ನೋಡಿ ಪರಮಾನಂದವಾಯಿತು. ಆತನು ಅಗಸ್ತ್ಯರು ತನಗೆ ಕೊಟ್ಟಿದ್ದ ಇನ್ನೊಂದು ಕಂಕಣವನ್ನು ಲವನಿಗೆ ಕೊಟ್ಟನು. ಆ ಕಂಕಣವನ್ನು ಧರಿಸಿದ ಲವನು ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಅಷ್ಟರಲ್ಲಿ ಶ್ರೀ ರಾಮನಿಗೆ ಮಾರುತಿಯು ವಂದನೆಮಾಡಿದನು. ರಾಮಚಂದ್ರನು ಆತನಿಗೂ ಎರಡು ಕಂಕಣಗಳನ್ನು ಕೊಟ್ಟನು. ಅವುಗಳಿಂದ ಆಂಜನೇಯನು ಸಭೆಯಲ್ಲಿ ಬಹಳ ಪ್ರಕಾಶಮಾನನಾಗಿ ಕಂಡನು. ಅನಂತರ ಲವನು ಅಗಸ್ತ್ಯರಿಗೆ ನಮಸ್ಕರಿಸಿ 'ಸ್ವಾಮಿ, ಈ ಕಂಕಣವು ತಮಗೆ ಹ್ಯಾಗೆ ದೊರಕಿತು' ಎಂದು ಕೇಳಿದನು.

### ಕಂಕಣ ಮತ್ತು ದಂಡಕಾರಣ್ಯದ ಇತಿಹಾಸ.

ಲವನ ಈ ಮಾತುಗಳನ್ನು ಕೇಳಿ ಅಗಸ್ತ್ಯರು "ಎಲೈ ಲವನೆ, ನಾನು ಒಂದು ದಿವಸ ದಂಡಕಾರಣ್ಯಕ್ಕೆ ಹೋಗಿದ್ದೆನು. ಅಲ್ಲಿರುವ ಒಂದು ಮನೋಹರವಾದ ಸರೋವರದಲ್ಲಿ ಸ್ನಾನಮಾಡಿ, ನನ್ನ ಆಹ್ನಿಕಗಳನ್ನೆಲ್ಲಾ ಮುಗಿಸಿ, ಒಂದು ವೃಕ್ಷದ ಬುಡದಲ್ಲಿ ಕುಳಿತಿದ್ದೆನು. ಅಲ್ಲಿಗೆ ವಿಮಾನವನ್ನೇರಿ ಒಬ್ಬ ಸ್ವರ್ಗವಾಸಿಯಾದ ಪುರುಷನು ಬಂದನು. ಅವನೊಡನೆ ನೂರಾರು ಜನ ಸ್ತ್ರೀಯರಿದ್ದರು. ಆ ಪುರುಷನು ವಿಮಾನದಿಂದ ಇಳಿದು ಸರೋವರದ ಬಳಿಗೆ ಬರುವಷ್ಟರೊಳಗೆ [illegible]

ಕೊಳೆತುಹೋಗಿದ್ದ ಶವವು ಆ ಸರಸ್ಸಿನಿಂದ ಮೇಲಕ್ಕೆ ನೀರಿನಲ್ಲಿ ತೇಲಿಬಂತು. ಆ ಪುರುಷನು ಶವದ ಬಳಿಗೆ ಹೋಗಿ ಅದರ ದೇಹದ ಒಂದು ಭಾಗವನ್ನು ಸ್ವಲ್ಪ ಮಟ್ಟಿಗೆ ಕಿತ್ತು ತಿಂದನು. ಮತ್ತು ಆ ಸರೋವರದಲ್ಲಿ ಸ್ವಲ್ಪ ನೀರುಕುಡಿದು ಪುನಃ ವಿಮಾನದಲ್ಲಿ ಬಂದು ಕುಳಿತನು. ಆ ಶವವು ಮತ್ತೆ ನೀರಿನಲ್ಲಿ ಮುಳುಗಿತು. ಇದನ್ನೆಲ್ಲಾ ನೋಡಿ ನನಗೆ ಆಶ್ಚರ್ಯವಾಯಿತು. ನಾನು ಸ್ವರ್ಗಕ್ಕೆ ಹೊರಡಲು ಸಿದ್ಧನಾದ ಆ ಪುರುಷನನ್ನು ನೋಡಿ 'ಅಯ್ಯಾ, ಇದೇನು ಚಮತ್ಕಾರ?' ಎಂದು ಪ್ರಶ್ನೆ ಮಾಡಿದೆನು. ಆಗ ಆ ಸ್ವರ್ಗವಾಸಿಯಾದ ಪುರುಷನು 'ಪೂರ್ವದಲ್ಲಿ ವಿದರ್ಭದೇಶಕ್ಕೆ ಸುದೈವನೆಂಬ ಒಬ್ಬ ರಾಜನಿದ್ದನು. ಆತನಿಗೆ ಶ್ವೇತ, ಸುರಥ ಎಂಬ ಇಬ್ಬರು ಮಕ್ಕಳಿದ್ದರು. ಅವರೊಳಗೆ ಹಿರಿಯವನಾದ ಶ್ವೇತನೆಂಬುವನೇ ನಾನು. ತಂದೆಯ ರಾಜ್ಯವು ನನಗೆ ಪ್ರಾಪ್ತವಾಯಿತು. ನಾನು ಆ ಜನ್ಮದಲ್ಲಿ ಸ್ವಲ್ಪವಾದರೂ ದಾನ-ಧರ್ಮಗಳನ್ನು ಮಾಡಲಿಲ್ಲ. ರಾಜ್ಯಮದದಿಂದ ನಾನು ಮತ್ತನಾಗಿದ್ದೆನು. ಅನೇಕ ವಿಧವಾದ ದುಷ್ಕರ್ಮಗಳನ್ನು ಮಾತ್ರ ತಪ್ಪದೆ ಮಾಡಿದೆನು. ನನಗೆ ಮಕ್ಕಳಿಲ್ಲದ್ದರಿಂದ ರಾಜ್ಯವನ್ನು ತಮ್ಮನಾದ ಸುರಥನಿಗೆ ಕೊಟ್ಟೆನು. ಮತ್ತು ವೈರಾಗ್ಯದಿಂದ ತಪಸ್ಸುಮಾಡಲು ನಾನು ಅರಣ್ಯಕ್ಕೆ ತೆರಳಿ ಘೋರವಾದ ತಪಸ್ಸು ಮಾಡಿದೆನು. ಒಂದು ದಿವಸ ಸ್ನಾನಮಾಡುವಾಗ ನಾನು ಈ ಸರೋವರದಲ್ಲಿ ಕಾಲುಜಾರಿ ಬಿದ್ದು ಮರಣ ಹೊಂದಿದೆನು. ನನ್ನ ತಪಃಪ್ರಭಾವದಿಂದ ದೇವದೂತರು ನನ್ನನ್ನು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದರು. ಅಲ್ಲಿ ನನಗೆ ಸಮಸ್ತ ಭೋಗಗಳೂ ಒದಗಿದವು. ಆದರೆ ನನಗೆ ತಿನ್ನುವದಕ್ಕೆ ಮಾತ್ರ ಯಾವ ಪದಾರ್ಥವೂ ಸಿಗಲಿಲ್ಲ. ನಾನು 'ದೇವೇಂದ್ರನೆ, ನೀನು ನನಗೆ ಎಲ್ಲಾ ಅನುಕೂಲಗಳನ್ನೂ ಒದಗಿಸಿಕೊಟ್ಟಿರುತ್ತೀ. ಊಟಕ್ಕೆ ಮಾತ್ರ ಏನೂ ಅನುಕೂಲ ಮಾಡಲಿಲ್ಲ. ನನಗೆ ಬಹಳ ಹಸಿವೆಯಾಗಿರುತ್ತದೆ. ಏನು ಮಾಡಲಿ' ಎಂದು ಕೇಳಿದೆನು. ಆಗ ದೇವೇಂದ್ರನು ನಕ್ಕು 'ಎಲೈ ಹುಚ್ಚ, ನೀನು ರಾಜ್ಯಮದದಿಂದ ಭೂಲೋಕದಲ್ಲಿ ಏನೂ ದಾನಮಾಡಲಿಲ್ಲ. "ಬಿತ್ತದಿದ್ದರೆ ಬೆಳೆಯುವದಿಲ್ಲ' ಎಂಬಲೋಕನ್ಯಾಯವು ನಿನಗೆ ಗೊತ್ತಿಲ್ಲವೇ? ಆದ್ದರಿಂದ ಎಲೈ ರಾಜನೆ, ವಿಮಾನದಲ್ಲಿ ಕುಳಿತು ಭೂಲೋಕಕ್ಕೆ ಪ್ರತಿದಿವಸವೂ ಹೋಗಿ ಮೃಷ್ಟಾನ್ನಗಳಿಂದ ಪುಷ್ಟವಾದ ನಿನ್ನ ಶವವನ್ನು ತಿನ್ನುತ್ತಬಾ' ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ನಾನು, 'ಪ್ರಭೋ, ನನಗೆ ದಿವ್ಯಾನ್ನವು ಹ್ಯಾಗೆ ಪ್ರಾಪ್ತವಾದೀತು?' ಎಂದು ಪ್ರಶ್ನೆ ಮಾಡಿದೆನು. ಇದನ್ನು ಕೇಳಿ ಇಂದ್ರನು 'ಎಲೈ ಶ್ವೇತರಾಜನೇ, ಈ ಪಂಚ

ಕಾರಣ್ಯದಲ್ಲಿ ಒಬ್ಬ ಪುರುಷನಾದರೂ ವಾಸವಾಗಿಲ್ಲ. ಮುಂದೆ ಇಲ್ಲಿಗೆ ವಿಂಧ್ಯಾದ್ರಿಯನ್ನು ಶಾಸನ ಮಾಡುವದಕ್ಕಾಗಿ ಅಗಸ್ತ್ಯರು ಬರುವರು. ನೀನು ಅವರಿಗೆ ನಿನ್ನ ಕೈಯಲ್ಲಿರುವ ಕಂಕಣವನ್ನು ಜಲಸಹಿತ ಕೊಡು. ಅಂದರೆ ನಿನಗೆ ಮೃಷ್ಟಾನ್ನವು ಪ್ರಾಪ್ತವಾದೀತು.' ಎಂದು ಹೇಳಿದನು. ಹೇ ಬ್ರಾಹ್ಮಣಶ್ರೇಷ್ಠನೇ, ನಾನು ಪ್ರತಿದಿವಸವೂ ಇಲ್ಲಿಗೆ ಬಂದು ಶವಭಕ್ಷಣೆಮಾಡಿ ಹೋಗುತ್ತಿರುವೆನು. ಇದುವರೆಗೂ ಇಲ್ಲಿ ಒಬ್ಬ ಮನುಷ್ಯನನ್ನಾದರೂ ಕಾಣಲಿಲ್ಲ. ಈ ದಿವಸ ತಮ್ಮ ದರ್ಶನವಾಯಿತು. ಆದ್ದರಿಂದ ಈ ಕಂಕಣವನ್ನು ದಾನಹಿಡಿದು, ನನ್ನನ್ನು ಉದ್ಧಾರ ಮಾಡಬೇಕು" ಎಂದು ಹೇಳಿ ಆತನು ನನಗೆ ಈ ಕಂಕಣವನ್ನು ಕೊಟ್ಟನು. ಬಳಿಕ ಆ ರಾಜನು ವಿಮಾನಾರೂಢನಾಗಿ ಸ್ವರ್ಗಲೋಕಕ್ಕೆ ಹೋಗಿ, ಇಂದ್ರನ ಅಜ್ಞೆಯಂತೆ ಮೃಷ್ಟಾನ್ನವನ್ನು ಹೊಂದಿದನು. ಆಗಿನಿಂದ ಅವನ ಶವವು ಸರೋವರದಲ್ಲಿ ತೇಲಲಿಲ್ಲ. ಈ ಕಂಕಣವನ್ನು ಮೊದಲು ನಾನು ನಿಮ್ಮ ತಂದೆಗೆ ಕೊಟ್ಟಿದ್ದೆನು. ಈ ದಿವಸ ಅದು ನಿನಗೆ ಬಂತು." ಎಂದು ಹೇಳಿದರು. ಅನಂತರ ಲವನು 'ಸ್ವಾಮೀ, ದಂಡಕಾರಣ್ಯದ ಇತಿಹಾಸವನ್ನು ನನಗೆ ಹೇಳಿರಿ. ಅದಕ್ಕೆ ದಂಡಕಾರಣ್ಯವೆಂಬ ಹೆಸರು ಯಾಕೆ ಬಂತು?' ಎಂದು ಪ್ರಶ್ನೆ ಮಾಡಿದನು. ಇದನ್ನು ಕೇಳಿ ಅಗಸ್ತ್ಯರು "ಎಲೈ ಲವನೇ, ಕೇಳು ; ವಿಂಧ್ಯಪರ್ವತದ ದಕ್ಷಿಣಭಾಗದಲ್ಲಿ ದಂಡಕನೆಂಬ ಇಕ್ಷ್ವಾಕು ವಂಶದ ಅರಸು ರಾಜ್ಯಭಾರ ಮಾಡುತ್ತಿದ್ದನು. ಅವನು ಪ್ರತಿದಿವಸದಲ್ಲೂ ಪಾಪಕರ್ಮಗಳಲ್ಲಿ ನಿರತನಾಗಿದ್ದನು. ಒಂದು ಕಾಲದಲ್ಲಿ ಆ ರಾಜನು ಸೇನೆಯೊಡನೆ ಬೇಟೆಗಾಗಿ ಅರಣ್ಯಕ್ಕೆ ತೆರಳಿದನು. ಅಲ್ಲಿ ಅವನು ಒಂದು ಹರಿಣವನ್ನು ಬೆನ್ನಟ್ಟಿ ಒಬ್ಬನೇ ಬಹಳದೂರ ಪ್ರಯಾಣಮಾಡಿದನು. ಕೊನೆಗೆ ಆ ಮೃಗವು ಕಾಣದಂತಾಯಿತು. ಈ ರೀತಿ ಆಯಾಸ ಹೊಂದಿದ ಅರಸನು ಒಂದು ಸರೋವರದ ಬಳಿಯಲ್ಲಿ ಕುದುರೆಯಿಂದ ಇಳಿದು ಮರದ ನೆರಳಿಗೆ ಕುಳಿತನು. ಅಲ್ಲಿ ಸ್ವಲ್ಪ ವಿಶ್ರಾಂತಿಯನ್ನು ಹೊಂದಿ ಸರೋವರದಲ್ಲಿ ನೀರುಕುಡಿದು, ಅಲ್ಲಲ್ಲಿ ಸುತ್ತಾಡುತ್ತಾ ಆ ರಾಜನು ಭೃಗುಮಹರ್ಷಿಗಳ ಆಶ್ರಮಕ್ಕೆ ಬಂದನು. ಆ ಮುನಿಗಳು ದಂಡಕಮಹಾರಾಜನಿಗೆ ಗುರುಗಳು. ಅವರ ಆಶ್ರಮವನ್ನು ರಾಜನು ಪ್ರವೇಶಿಸುವಷ್ಟರಲ್ಲಿ ಸುಂದರಿಯಾದ ಋಷಿಕನ್ಯೆಯು ಈ ಪಾಪಿಷ್ಠನ ಕಣ್ಣಿಗೆ ಬಿದ್ದಳು. ಬಳಿಕ ಆ ಅರಸನು ಆ ಕನ್ಯೆಯ ರೂಪಕ್ಕೆ ಮೋಹಗೊಂಡು 'ನೀನು ನನಗೆ ವಶಳಾಗು. ನನ್ನ ರಾಜ್ಯವನ್ನೇ ನಿನಗೆ ಕೊಡುವೆನು' ಎಂದು ಆ ಋಷಿಪುತ್ರಿಯನ್ನು ಪ್ರಶ್ನೆಮಾಡಿದನು. ಆಕೆಯು 'ಮಹಾರಾಜನೆ, ನಾನು ಸ್ವತಂತ್ರಳಲ್ಲ. ನನ್ನ ತಂದೆಯು

ಅರಣ್ಯಕ್ಕೆ ಹೋಗಿರುವನು. ಬಂದಮೇಲೆ ಅವರ ಅನುಮತಿಯನ್ನು ಪಡೆದು ನನ್ನನ್ನು ವಿವಾಹ ಮಾಡಿಕೋ. ಹೀಗೆ ದುಡುಕುವದು ನ್ಯಾಯವಲ್ಲ.' ಎಂದಳು. ಋಷಿಪುತ್ರಿಯ ಈ ಮಾತುಗಳು ಕಾಮಾಂಧನಾದ ಆ ರಾಜನ ಕಿವಿಗೆ ಬೀಳಲಿಲ್ಲ. ಅವನು ಬಲಾತ್ಕಾರದಿಂದ ಆ ಮುನಿಕನ್ಯೆಯನ್ನು ಉಪಭೋಗ ಮಾಡಿದನು; ಮತ್ತು ಋಷಿಗಳು ಬರುವದರೊಳಗೆ ಭಯದಿಂದ ಅವನು ಅಲ್ಲಿಂದ ಓಡಿಹೋದನು. ತಂದೆಯು ಆಶ್ರಮಕ್ಕೆ ಬಂದಬಳಿಕ ಆ ಮುನಿಪುತ್ರಿಯು ಆಶ್ರಮದಲ್ಲಿ ನಡೆದ ದುಷ್ಟ ಕೃತ್ಯಗಳನ್ನೆಲ್ಲಾ ಅವನಿಗೆ ತಿಳುಹಿ ಘಟ್ಟಿಯಾಗಿ ರೋದನ ಮಾಡಲಾರಂಭಿಸಿದಳು. ಆಗ ಭೃಗುಮಹರ್ಷಿಗಳು ಮಗಳನ್ನು ಸಮಾಧಾನಮಾಡಿ 'ಈ ಪಾಪಿಷ್ಠನಾದ ದಂಡಕ ನೊಡನೆ ನೂರು ಯೋಜನ ಪ್ರದೇಶವು ಸುಟ್ಟು ಬೂದಿಯಾಗಲಿ, ಎಂದು ಶಪಿಸಿ ದರು. ಇದನ್ನು ಕೇಳಿ ಆ ಕೃಪಾಳುವಾದ ಮುನಿಪುತ್ರಿಯು 'ತಂದೆಯೇ, ಈ ಅರ ಣ್ಯವು ಎಲ್ಲಿಯ ವರೆಗೆ ಹೀಗಿರಬೇಕು? ಅವಧಿಯನ್ನು ಹೇಳಿರಿ. ಅನ್ಯಾಯವಾಗಿ ಪ್ರಾಣಿಗಳೆಲ್ಲಾ ದಗ್ಧವಾದವಲ್ಲ!! ಮುಂದಾದರೂ ಇಲ್ಲಿ ಅವರು ಸುಖವಾಗಿರಲಿ, ಎಂದು ಪ್ರಾರ್ಥಿಸಿದಳು. ಆಗ ಭೃಗುಮಹರ್ಷಿಗಳು "ಈ ಅರಣ್ಯಕ್ಕೆ ಕಾಶಿಯಿಂದ ಅಗಸ್ತ್ಯಋಷಿಗಳು ಬರತಕ್ಕವರಿರುವರು. ಅಲ್ಲಿಯ ವರೆಗೂ ಇದು ಅಮಂಗಳ ವಾಗಿರಲಿ. ಆ ಮುನಿಗಳ, ಹಾಗು ಶ್ರೀರಾಮನ ಅನುಗ್ರಹದಿಂದ ಮುಂದೆ ಈ ಸ್ಥಳವು ಪಾವನವಾಗುವದು. ಇಲ್ಲಿ ಅನೇಕ ಮಹರ್ಷಿಗಳು ವಾಸಮಾಡುವರು. ಇದಕ್ಕೆ ರಾಮಕ್ಷೇತ್ರವೆಂಬ ಹೆಸರು ಬರುವದು." ಎಂದು ಹೇಳಿದನು. ಸಾರಾಂಶ, ಭೃಗುಮಹರ್ಷಿಗಳ ಶಾಪದಿಂದ ದಂಡಕರಾಜನೊಡನೆ ಈ ಅರಣ್ಯವು ಸುಟ್ಟು ಹೋಯಿತು. ಶ್ರೀರಾಮನ ಹಾಗು ನನ್ನ ಸಂಚಾರಗಳಿಂದ ಪಾವನವಾಯಿತು." ಎಂದು ಹೇಳಿದರು. ಅಗಸ್ತ್ಯರ ಈ ವಚನಗಳನ್ನು ಕೇಳಿ ಲವನು ಪರಮಾನಂದ ಭರಿತನಾದನು. ಅನಂತರ ಶ್ರೀರಾಮನು ತನ್ನ ಮೊಮ್ಮಗಳಾದ ಹೇಮಾ ಎಂಬ ಕನ್ನೆಯನ್ನು ತನ್ನ ಸ್ನೇಹಿತನಮಗನಾದ ಚಿತ್ರರಥನಿಗೆ ಕೊಟ್ಟು ವಿವಾಹ ನಡೆಸಿ ದನು. ಆ ಕಾಲದಲ್ಲಿ ದಾನಧರ್ಮಗಳಿಂದ ಬ್ರಾಹ್ಮಣರು ಸಂತುಷ್ಟರಾದರು. ಶ್ರೀರಾಮನು ವಧೂವರರಿಗೆ ದಿವ್ಯ ವಸ್ತ್ರಾಭರಣಗಳನ್ನು ಕೊಟ್ಟು ಸಂತೋಷ ಗೊಳಿಸಿದನು. ಬಳಿಕ ಸಮಸ್ತ ರಾಜರೂ, ಮುನಿಗಳೂ ಶ್ರೀರಾಮನ ಅಪ್ಪಣೆ ಯನ್ನು ಪಡೆದು ತಮ್ಮ ಸ್ಥಾನಗಳಿಗೆ ತೆರಳಿದರು.

## ಬ್ರಾಹ್ಮಣರಿಗೆ ನಗರದಾನ.

ಶ್ರೀರಾಮನು ಸೀತಾದೇವಿಯೊಡನೆ ಅಯೋಧ್ಯೆಯಲ್ಲಿ ರಾಜಭೋಗಗಳ

ನ್ನನುಭವಿಸುತ್ತಿರುವಾಗ್ಯ, ಆತನ ಆಜ್ಞೆಯು ಹೊರತಾಗಿ ಒಬ್ಬನೂ ನಗರದ ಹೊರಕ್ಕೆ ಹೋಗುತ್ತಿರಲಿಲ್ಲ; ಹಾಗೂ ಒಳಗೂ ಬರುತ್ತಿರಲಿಲ್ಲ. ಶ್ರೀ ರಾಮನು ತನ್ನ ಮುದ್ರೆಯು ಗುರುತಿಲ್ಲದೆ ಯಾವ ಶಾಸನವನ್ನೂ ಮಾಡುತ್ತಿರಲಿಲ್ಲ. ಆತನು ಯಾವಬ್ರಾಹ್ಮಣರ ಇಚ್ಛೆಯನ್ನೂ ಪೂರ್ಣಮಾಡದೆ ಇರುತ್ತಿರಲಿಲ್ಲ. ಶ್ರೀ ರಾಮನಲ್ಲಿ ಅದೇಯವಾದ ವಸ್ತುಗಳು ಬಹಳ ಸ್ವಲ್ಪವಿದ್ದವು. ಒಂದು ದಿವಸ ಶ್ರೀ ರಾಮನು ಪರಿವಾರ ಸಮೇತ ವಾಗಿ ತನ್ನ ಸ್ನೇಹಿತನಾದ ಗಂಧರ್ವಮಿತ್ರನ ಮನೆಗೆ ಭೋಜನಕ್ಕೆ ಹೋಗಿದ್ದನು. ಗಂಧರ್ವನು ಶ್ರೀ ರಾಮನಿಗೆ ಭೋಜನಕ್ಕಾಗಿ ಅನೇಕ ಪದಾರ್ಥಗಳನ್ನು ಮಾಡಿಸಿದ್ದನು. ಸೇವಕರು ಭೋಜನ ಮಂದಿರದಲ್ಲಿ ಸುವರ್ಣದ ಪೀಠಗಳನ್ನು ಹಾಕಿ, ಉತ್ತಮವಾದ ಎಲೆಗಳಮೇಲೆ ನಾನಾವಿಧವಾದ ಪದಾರ್ಥಗಳನ್ನು ಬಡಿಸಲಾರಂಭಿಸಿದರು. ಇಷ್ಟರಲ್ಲಿ ಶ್ರೀ ರಾಮನ ದಾತೃತ್ವವನ್ನು ಕೇಳಿದ ದಕ್ಷಿಣದೇಶದಿಂದ ಕೆಲವು ಬ್ರಾಹ್ಮಣರು ಆತನ ದರ್ಶನಕ್ಕಾಗಿ ಬಂದರು. ಶ್ರೀ ರಾಮನು ಗಂಧರ್ವನ ಮನೆಯಲ್ಲಿರುವನೆಂದು ತಿಳಿದು, ಬ್ರಾಹ್ಮಣರು ಅಲ್ಲಿಗೆ ಬಂದರು. ಬಹಳ ದೂರದಿಂದ ತನ್ನ ದರ್ಶನಕ್ಕಾಗಿ ಬ್ರಾಹ್ಮಣರು ಬಂದಿರುವರೆಂದು ತಿಳಿದು, ಶ್ರೀ ರಾಮನು ಥಟ್ಟನೆ ಆಸನದಿಂದ ಎದ್ದು, ಅವರನ್ನು ಎದುರುಗೊಂಡು, ಉತ್ತಮವಾದ ಆಸನದಲ್ಲಿ ಕುಳ್ಳಿರಿಸಿ ಮಾನಮಾಡಿ, ಕೈಜೋಡಿಸಿಕೊಂಡು 'ಮಹಾಸ್ವಾಮಿ, ಸ್ನಾನಮಾಡಿ ನಿತ್ಯಕೃತ್ಯಗಳನ್ನು ನೆರವೇರಿಸಬೇಕು. ಭೋಜನಕ್ಕೆ ಸಿದ್ಧವಾಗಿದೆ' ಎಂದು ಪ್ರಾರ್ಥಿಸಿದನು. ಈ ಮಾತುಗಳನ್ನು ಕೇಳಿ, ಬ್ರಾಹ್ಮಣರಲ್ಲಿ ಕೆಲವರು 'ಈಗಲೇ ನಮ್ಮ ಅಭಿಪ್ರಾಯವನ್ನು ಶ್ರೀರಾಮನಿಗೆ ತಿಳಿಸೋಣ' ಎಂದರು. ಕೆಲವರು 'ಈಗಬೇಡಪ್ಪ ನಿಮಗೇನು ಸೂರೆಯಾಗುವದು? ಶ್ರೀರಾಮನ ಭೋಜನವಾದಮೇಲೆ ವಿಜ್ಞಾಪಿಸೋಣ.' ಎನ್ನುತ್ತಿದ್ದರು. ಇವರ ಪರಸ್ಪರ ಭಾಷಣಗಳನ್ನು ಕೇಳಿ ಶ್ರೀ ರಾಮನು—ಸ್ವಾಮೀ, ನೀವು ಬ್ರಹ್ಮಪುರವನ್ನು ದಾನಬೇಡಬೇಕೆಂದು ಬಂದಿರುವಿರಲ್ಲವೆ? ಒಳ್ಳೇದಾಯಿತು. ಲಕ್ಷ್ಮಣ, ಈಗಲೇ ಅಮೃತಶಿಲೆಯನ್ನು ತರಿಸಿ, ಅದರಲ್ಲಿ 'ಬ್ರಹ್ಮಪುರವನ್ನು ಈ ಬ್ರಾಹ್ಮಣರಿಗೆ ದಾನಮಾಡಿರುವೆನು' ಎಂದು ಪದ್ಧತಿಯಂತೆ ಶಾಸನವನ್ನು ಬರೆದು ಈ ಬ್ರಾಹ್ಮಣರ ವಶಕ್ಕೆ ಅದನ್ನು ಕೊಡತಕ್ಕದ್ದು. ಈ ಕಾರ್ಯವಾಗುವವರೆಗೂ ನಾನು ಭೋಜನ ಮಾಡುವದಿಲ್ಲ' ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಬ್ರಾಹ್ಮಣರು 'ರಾಮಚಂದ್ರ, ಇಷ್ಟು ಅವಸರವೇಕೆ? ಭೋಜನವಾದಮೇಲೆ ನಮಗೆ ದಾನಪತ್ರ ಬರೆದು ಕೊಟ್ಟರಾಯಿತು. ಭೋಜನ ಮಾಡೋಣ ಏಳು' ಎಂದರು

ಈ ಮಾತುಗಳನ್ನು ಕೇಳಿ, ಶ್ರೀ ರಾಮನು "ದ್ವಿಜಶ್ರೇಷ್ಠರೇ, ನೀವು ಹೇಳು

ವದೇನೋ ಸತ್ಯ. ಚಿತ್ತ, ವಿತ್ತ, ಜೀವಿತ ಇವು ಕ್ಷಣಕಾಲದಲ್ಲಿ ನಾಶವಾಗುವವು. ಅಲ್ಲದೆ ಒಳ್ಳೇಕೆಲಸಗಳಿಗೆ ವಿಘ್ನಗಳು ಬಹಳ. ಆದ್ದರಿಂದ ಮನುಷ್ಯನು ಮನಸ್ಸಿಗೆ ಬಂದೊಡನೇ ಧರ್ಮವನ್ನು ಆಚರಿಸಬೇಕು. 'ಭೋಜನದ ಪೂರ್ವಕಾಲದಲ್ಲಿರುವ ಬುದ್ಧಿಯು ಭೋಜನವಾದಮೇಲೆ ಇರುತ್ತದೆಯೋ? ಇಲ್ಲವೋ?' ಎಂಬ ವಚನಗಳು ಮತ್ತೆ-ಮತ್ತೆ ಜ್ಞಾಪಕಕ್ಕೆ ಬರುತ್ತಿರುವವು. ಇರಲಿ, ಈ ಕ್ಷಣದಲ್ಲಿ ಎಲ್ಲ ಕಾರ್ಯವನ್ನೂ ಮುಗಿಸಿ ಕೊಡುವೆನು" ಎಂದು ಹೇಳಿ, 'ಬ್ರಾಹ್ಮಣರು ಬಹಳ ಹಸಿದಿರಬಹುದು' ಎಂದು ಯೋಚಿಸಿ ಅವರಿಗೆ ರುಚಿಯಾದ ಫಲಗಳನ್ನು ತರಿಸಿ ಕೊಟ್ಟನು. ಅಷ್ಟರಲ್ಲಿ ಲಕ್ಷ್ಮಣನು ಗಂಡಕಿಯಿಂದ ಶ್ರೇಷ್ಠವಾದ ಶಿಲೆಯನ್ನು ತರಿಸಿ, ಅದರಲ್ಲಿ ಶ್ರೀರಾಮನ ಶಾಸನವನ್ನು ಬರೆಸಿದನು. ಸೀತಾರಾಮರು ಅದನ್ನು ಮಂಗಳ ದ್ರವ್ಯಗಳಿಂದ ಪೂಜೆಮಾಡಿ ಬ್ರಾಹ್ಮಣರಿಗೆ ಬಹಳ ಹರ್ಷದಿಂದ ದಾನಮಾಡಿದರು. ಅನಂತರ ಸಮಸ್ತರೂ ಭೋಜನಮಾಡಿದರು. ಶ್ರೀರಾಮನು ಆ ಬ್ರಾಹ್ಮಣರನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ, ಶಾಸನದ ಶಿಲೆಯನ್ನು ಅವರ ಸನ್ನಿಧಿಯಲ್ಲಿರಿಸಿ ಬ್ರಹ್ಮಪುರಕ್ಕೆ ಕಳುಹಿಸಿದನು. ಬ್ರಾಹ್ಮಣರು ತಮ್ಮದೇಶಕ್ಕೆ ಹೋಗುವಾಗ ಶ್ರೀರಾಮನಿಗೆ ಅನೇಕ ಆಶೀರ್ವಾದಗಳನ್ನು ಮಾಡಿದರು. ಈ ಬ್ರಾಹ್ಮಣರು ವಾಸಮಾಡಿದ ಸ್ಥಳಕ್ಕೆ ರಾಮಸಾಥಪುರವೆಂದು ಕರೆಯುವರು.

ಈ ರೀತಿಯಾಗಿ ಶ್ರೀರಾಮನು ಸಾವಿರಾರು ದಾನಗಳನ್ನು ಬ್ರಾಹ್ಮಣರಿಗೆ ಕೊಟ್ಟನು. ಇರಲಿ. ಮುಂದೆ ಆ ಬ್ರಾಹ್ಮಣರು ದುಷ್ಟನಾದ ರಾಜನ ಬಾಧೆಯಿಂದ ಆ ಶಿಲೆಯನ್ನು ಒಂದು ಸರೋವರದಲ್ಲಿ ಎಸೆಯುವರು. ಅದರಿಂದ ಅವರು ಬಹಳ ದುಃಖವನ್ನನುಭವಿಸಬೇಕಾಗುವದು. ಯಾಕಂದರೆ ಮುಂದೆ ಕಲಿಯುಗದಲ್ಲಿ ಒಬ್ಬ ದುಷ್ಟರಾಜನು ಆ ದೇಶಕ್ಕೆ ಪ್ರಭುವಾಗುವನು. ಅವನು ದುರಾಶೆಯಿಂದ ಆ ಬ್ರಾಹ್ಮಣರನ್ನು ಕರೆಸಿ 'ಎಲೈ ಬ್ರಾಹ್ಮಣರೆ, ನೀವು ಈ ಗ್ರಾಮವು ನಮ್ಮದೆಂದು ಹೇಳುವಿರಷ್ಟೇ? ನಿಮಗೆ ಇದನ್ನು ಯಾರು ಕೊಟ್ಟಿರುವರು? ಅವರ ಶಾಸನ ಪತ್ರವನ್ನು ನನಗೆ ತೋರಿಸಿರಿ. ಇಲ್ಲವಾದರೆ ನೀವು ಇದುವರೆಗೂ ಇದರಿಂದ ತೆಗೆದುಕೊಂಡಿರುವ ಹಣವನ್ನು ವಸೂಲು ಮಾಡುವೆನು. ಕೊಡುವದಿಲ್ಲವಾದರೆ, ನಿಮ್ಮನ್ನೆಲ್ಲಾ ಒಂದೇಸಲ ಕೊಲ್ಲಿಸುವೆನು, ಎಂದು ಹೇಳುವನು. ಆಗ ಬ್ರಾಹ್ಮಣರು 'ರಾಜನೇ, ನಾವು ಒಂದು ತಿಂಗಳೊಳಗೆ ಶಾಸನ ಪತ್ರವನ್ನು ನಿನಗೆ ತೋರಿಸುವೆವು' ಎಂದು ಹೇಳಿ, ಸರೋವರಕ್ಕೆ ಹೋಗಿ ಶೋಧಮಾಡಲಾರಂಭಿಸುವರು. ಎಷ್ಟು ದಿವಸ ಹುಡುಕಿದರೂ ಆ ಶಿಲೆಯು ಸಿಕ್ಕುವದಿಲ್ಲ. ಬಳಿಕ ಅವರು 'ತಿಂಗಳೊಳಗಾಗಿ ಶಾಸನ

ಪತ್ರವನ್ನು ತೋರಿಸದೆ ಹೋದೆವಾದ್ದರಿಂದ ರಾಜನು ನಮ್ಮನ್ನು ನಿಶ್ಚಯವಾಗಿ ಕೊಲ್ಲಿಸುವನು' ಎಂದು ಯೋಚಿಸಿ, ಅದೇ ಸರೋವರದಲ್ಲಿ ಬೀಳಲು ನಿಶ್ಚಯ ಮಾಡುವರು. ಆ ಸರೋವರವನ್ನು ಪ್ರದಕ್ಷಿಣೆಮಾಡಿ, ಶ್ರೀ ರಾಮನನ್ನು ಸ್ಮರಿಸುತ್ತಾ ಆ ಬ್ರಾಹ್ಮಣರು ನೀರಿನಲ್ಲಿ ಹಾರಲು ಸಿದ್ಧರಾಗುವರು. ಆಗ ಅವರ ಹೆಂಡಿರು-ಮಕ್ಕಳು ಗಟ್ಟಿಯಾಗಿ ರೋದನ ಮಾಡಲಾರಂಭಿಸುವರು. ಅವರು ಹೆಂಡಿರು ಮಕ್ಕಳನ್ನು ನೀತಿವಚನಗಳಿಂದ ಸಮಾಧಾನ ಮಾಡಿ, ಪ್ರಾಣತ್ಯಾಗ ಮಾಡಲು ಮತ್ತೆ ಸಿದ್ಧರಾಗುವರು. ಅಷ್ಟರಲ್ಲಿ ಆ ಸರೋವರದ ತೀರದಲ್ಲಿದ್ದ ಆಂಜನೇಯ ವಿಗ್ರಹದಿಂದ ಒಂದು ಶ್ರೇಷ್ಠವಾದ ಕಪಿಯು ಹೊರಗೆ ಬಂದು, ಆ ಬ್ರಾಹ್ಮಣರ ದುಃಖವನ್ನು ಪರಿಹಾರ ಮಾಡುವದು. ಅವರ ಮುಖದಿಂದ ಎಲ್ಲಾ ವೃತ್ತಾಂತವನ್ನೂ ಕೇಳಿ ಆ ವೃದ್ಧ ಕಪಿಯು ಸರೋವರದಲ್ಲಿ ಮುಳುಗಿ ಆ ಶಿಲೆಯನ್ನು ತೆಗೆದು ಕೊಡುವದು. ಮತ್ತು ಆಂಜನೇಯನು ಬ್ರಾಹ್ಮಣರೊಡನೆ ಆ ಶಿಲೆಯನ್ನು ತೆಗೆದುಕೊಂಡು ರಾಜನಬಳಿಗೆ ಹೋಗುವನು. ಆ ರಾಜನು ಮಾರುತಿ, ಬ್ರಾಹ್ಮಣರು, ಶಾಸನ, ಇವುಗಳನ್ನು ನೋಡಿ ಗಾಬರಿಯಿಂದ ಮೂರ್ಛಿತನಾಗುವನು. ಮಾರುತಿಯು ಬ್ರಹ್ಮದ್ವೇಷಿಯಾದ ಆ ರಾಜನನ್ನು ತನ್ನ ಬಾಲದಿಂದ ಕಟ್ಟಿ, ಎಲ್ಲಿ ಬ್ರಾಹ್ಮಣರು ಪ್ರಾಣತ್ಯಾಗ ಮಾಡಲುದ್ಯುಕ್ತರಾಗಿದ್ದರೋ, ಆ ಸ್ಥಳದಲ್ಲಿ ದುಷ್ಟನಾದ ಆ ರಾಜನನ್ನು ನಾಶಮಾಡುವನು. ಆಗ ರಾಜಸೇನೆಯು ಮಾರುತಿಯೊಡನೆ ಯುದ್ಧ ಮಾಡಲು ಬರುವದು, ಅವರೆಲ್ಲರನ್ನೂ ಮಾರುತಿಯು ತನ್ನ ಬೆರಳಿನಿಂದ ಸವರುವನು. ಮತ್ತು ಆ ಸ್ಥಳದಲ್ಲಿ ಆಂಜನೇಯನು ರಾಮಮೂರ್ತಿಯನ್ನು ಸ್ಥಾಪನೆ ಮಾಡುವನು. ಮಾರುತಿಯು ಆ ಬ್ರಾಹ್ಮಣರನ್ನು ಕುರಿತು "ಎಲೈ ದ್ವಿಜರೆ, ನಿಮಗೆ ಇನ್ನು ಯಾವ ತೊಂದರೆಗಳೂ ಇಲ್ಲ. ಅಂಥ ಆಪತ್ಕಾಲದಲ್ಲಿ ನನ್ನನ್ನು ಸ್ಮರಿಸಿರಿ. ನಾನು ನಿಮ್ಮ ಎಲ್ಲಾ ತಾಪಗಳನ್ನೂ ಪರಿಹರಿಸುವೆನು. ನೀವುಮಾತ್ರ ಯಾವಾಗಲೂ ರಾಮಧ್ಯಾನ ನಿರತರಾಗಿರಿ." ಎಂದು ಹೇಳಿ ಆ ಶಿಲೆಯನ್ನು ಒಂದು ಗುಹೆಯಲ್ಲಿರಿಸುವನು. ಇರಲಿ. ಶ್ರೀ ರಾಮನು ಈ ರೀತಿ ಅನೇಕ ಚಮತ್ಕಾರಗಳನ್ನು ನಡೆಸುತ್ತಾ ಅಯೋಧ್ಯೆಯಲ್ಲಿ ಸುಖದಿಂದ ವಾಸಮಾಡಿದನು.

ಸೀತಾರಾಮರ ಸಂವಾದ:

ಒಂದು ದಿವಸ ಶ್ರೀರಾಮನು ಸೀತೆಯೊಡನೆ ಏಕಾಂತದಲ್ಲಿ ಕುಳಿತಿರಲು ಸೀತಾದೇವಿಯು 'ರಾಮಚಂದ್ರ, ನನಗೆ ಕುಶನಮೇಲೆಮಕ್ಕಳಾಗಲೇಇಲ್ಲವಲ್ಲ. ಕಾರಣವೇನಿರಬಹುದು' ಎಂದು ಕೇಳಿದಳು. ಆಗ ಶ್ರೀರಾಮನು 'ಸೀತೆಯೇ,

ನೀನು ಹೆಚ್ಚು ಮಕ್ಕಳನ್ನು ಏಕೆ ಅಪೇಕ್ಷಿಸುವೆ? ಉತ್ತಮಕುಲವಲ್ಲಿ ಬಹಳ ಮಕ್ಕಳು ಹುಟ್ಟುವದು ಒಳ್ಳೇದಲ್ಲ. ಅವರಲ್ಲಿ ಒಬ್ಬನು ದುಷ್ಟನಾದನೆಂದರೆ, ಕುಲಕ್ಕೆಲ್ಲಾ ಅಪಯಶಸ್ಸು ಬರುವದು. ನನಗೆ ಬಹಳ ಮಕ್ಕಳಾಗಬೇಕೆಂದು ಸ್ವಪ್ನದಲ್ಲಾದರೂ ಇಚ್ಛೆಯಿಲ್ಲ. ನಿಶ್ಚಯವಾಗಿಯೂ ಕುಶನಂಥ ವಂಶಕ್ಕೆ ಕೀರ್ತಿಯನ್ನುಂಟು ಮಾಡುವ ಒಬ್ಬ ಮಗನಿದ್ದರೆ ಸಾಕು. ಕ್ರಿಮಿಗಳಂತೆ ದುಷ್ಟರಾದ ಅನೇಕ ಮಕ್ಕಳಿದ್ದರೆ, ಪ್ರಯೋಜನವೇನು? ಅದ್ದರಿಂದ ಸೂರ್ಯ-ಚಂದ್ರರು, ಅಥವಾ ಎರಡು ಕಣ್ಣುಗಳು, ಅಥವಾ ನಾನು-ಲಕ್ಷ್ಮಣ, ಇವರಿಗೆ ಸಮವಾದ ಇಬ್ಬರು ಮಕ್ಕಳಿದ್ದರೆ ಸಾಕು. ಅಂಥವರು ಈಗ ನಿನಗೆ ಇರುವರಷ್ಟೇ? ಇನ್ನು ಹೆಚ್ಚು ಮಕ್ಕಳನ್ನು ಅಪೇಕ್ಷಿಸಬೇಡ. ನನಗೂ ಮಕ್ಕಳ ಇಚ್ಛೆಯಿಲ್ಲದ್ದರಿಂದ ನಿನಗೆ ಆ ಮಕ್ಕಳು ಆಗುವದೂ ಇಲ್ಲ." ಎಂದನು. ಈ ಮಾತುಗಳನ್ನು ಕೇಳಿ ಸೀತಾದೇವಿಯು 'ನನಗೆ ಒಂದಾದರು ಹೆಣ್ಣು ಮಗುವಾಗುವದಿಲ್ಲವೇ ಹ್ಯಾಗೆ?' ಎಂದು ಕೇಳಿದಳು. ಆಗ ಶ್ರೀರಾಮನು "ನನ್ನ ಮಗಳಿಗೆ ಅನುರೂಪವಾದ ವರನು ಭೂಲೋಕದಲ್ಲಿ ಎಲ್ಲಿರುವನು? ಶ್ರೇಷ್ಠಳಾದ ಕನ್ಯೆಯನ್ನು ಪಡೆದು ಯಾವನೋ ಒಬ್ಬನಿಗೆ ಕೊಟ್ಟದ್ದರಿಂದ ಬಂದ ಭಾಗ್ಯವೇನು? ಕನ್ಯೆಹುಟ್ಟದಳೆಂದರೆ ಅಳಿಯನಕಾಲು ತೊಳೆಯಬೇಕಾಗುವದು. ನನ್ನ ಕೈಯಿಂದ ಆ ಕೆಲಸವನ್ನು ಮಾಡಿಸಬೇಕೆಂದು ನಿನಗೆ ಬಯಕೆ ಇರುವದೇ ಹ್ಯಾಗೆ? ಹಾಗಾಗಬಾರದು. ಹೇಸೀತೇ, ಕುಶನಮಗಳು ಹೇಮಾದೇವಿಯು ನಿನಗೆ ಮಗಳಲ್ಲವೇ? ನಿನ್ನ ನಿಜಸ್ವರೂಪವನ್ನು ಮರೆತಂತೆ ಕಾಣುತ್ತದೆ. ಈ ಪ್ರಪಂಚದಲ್ಲಿ ಎಷ್ಟು ಜನ ಸ್ತ್ರೀಯರಿರುವರೋ, ಅವರೆಲ್ಲರೂ ನಿನ್ನ ಅಂಶಭೂತರಲ್ಲವೇ? ಪುರುಷರೆಲ್ಲರೂ ನನ್ನ ಅಂಶಭೂತರು. ಅಂದಮೇಲೆ ನಿನಗೆ ಎಷ್ಟು ಜನ ಹೆಣ್ಣುಮಕ್ಕಳಿರುವರು. ನಿನ್ನ ಪುತ್ರರನ್ನು ಎಣಿಸಲು ಯಾರಿಂದ ಸಾಧ್ಯವಾದೀತು. ಆದ್ದರಿಂದ, ಪ್ರಿಯೆ, ಹೆಚ್ಚುಮಕ್ಕಳನ್ನು ಬಯಸಬೇಡ. ಕುಲವನ್ನು ಉದ್ಧಾರಮಾಡುವ ಒಬ್ಬ ಮಗನನ್ನು ಪಡೆದತಾಯಿತಂದೆಗಳೇ ಧನ್ಯರು. ಕುಲಕ್ಕೆ ಮೃತ್ಯುರೂಪರಾದ ಬಹುಜನ ಮಕ್ಕಳಿಂದ ಏನು ಪ್ರಯೋಜನ?' ಎಂಬ ಲೋಕವಾರ್ತೆಯು ಸತ್ಯವಾದದ್ದು. ಅಲ್ಲದೆ ಬಹಳ ಮಕ್ಕಳನ್ನು ಪಡೆದ ಹೆಂಗಸಿನತಾರುಣ್ಯವು ನಾಶವಾಗುತ್ತದೆ. ನಿನ್ನ ತಾರುಣ್ಯವನ್ನು ಹಾಳುಮಾಡುವ ಬಹುಮಂದಿಮಕ್ಕಳನ್ನು ಪಡೆದು ಏನು ಪ್ರಯೋಜನ? ಹೇಸೀತೇ, ಈ ದಿವಸ ನಿನಗೊಂದು ಗುಟ್ಟನಮಾತನ್ನು ಹೇಳುವೆನು.—ನಾನು ಈ ಅವತಾರದಲ್ಲಿ ಬಹಳ ಮಕ್ಕಳನ್ನು ನಿನಗೆ ಕೊಟ್ಟಿಲ್ಲ. ಮುಂದೆ ಕೃಷ್ಣಾವತಾರದ ಕಾಲದಲ್ಲಿ ಹತ್ತು ಜನ ಮಕ್ಕಳನ್ನು ನಿನಗೆ ಕೊಡುವೆನು.

ಆ ಜನ್ಮದಲ್ಲಿ ನಿನಗೆ ಒಬ್ಬ ಹೆಣ್ಣುಮಗಳು ಹುಟ್ಟುವಳು. "ಎಂದು ಹೇಳಿದನು. ಇರಲಿ. ಈ ರೀತಿ ವಿಲಾಸದಿಂದ ಮಾತನಾಡುತ್ತಾ ಅವರಿಬ್ಬರೂ ನಿದ್ರೆಮಾಡಿದರು.

ಏಳು ಅವತಾರಗಳ ಸುವರ್ಣನ.

ಒಂದಾನೊಂದು ದಿವಸ ಲವನು ವಸಿಷ್ಠರನ್ನು ಕುರಿತು 'ಗುರುಗಳೇ, ನಾನು ರಾತ್ರಿ ಮಲಗಿರುವಾಗ, ಪ್ರತಿದಿವಸವೂ ಕಿವಿಗಳಿಗೆ, 'ಘೋ, ಘೋ' ಎಂಬ ಶಬ್ದವು ಕೇಳಿ ಬರುತ್ತದೆ. ಅದೇನಿರಬಹುದು' ಎಂದು ಪ್ರಶ್ನೆಮಾಡಿದನು. ಇದನ್ನು ಕೇಳಿ ವಸಿಷ್ಠರು—"ಲವನೇ, ಕೇಳು. ಪೂರ್ವದಲ್ಲಿ ರಾವಣನುಯಾವ ದೇಹದಿಂದ ಅನೇಕ ಬ್ರಹ್ಮಹತ್ಯಗಳನ್ನು ಮಾಡಿದನೋ, ಆ ದೇಹವು ಈಗಲೂ ಉರಿಯುತ್ತಿರುವದು. ರಾವಣನು ಶ್ರೀರಾಮನ ಕೈಯಿಂದ ಮರಣಹೊಂದಿದನಾದ್ದರಿಂದ ಮುಕ್ತನಾದನು. ಅವನು ಯಾವಾಗಲೂ ಶ್ರೀರಾಮನಲ್ಲಿ ವೈರಮಾಡಿದನಾದ್ದರಿಂದ ಅವನ ಚಿತ್ತವು ಪ್ರಸನ್ನವಾಯಿತು. ಅವನ ದೇಹವು ಮಾತ್ರ ಯಾವದೇವತೆಗಳಿಗೂ ನಮಸ್ಕಾರಮಾಡಲಿಲ್ಲ. ಯಾವತೀರ್ಥಗಳಿಗೂ ಹೋಗಲಿಲ್ಲ. ಯಾವ ಧರ್ಮಕೆಲಸವನ್ನೂ ಮಾಡಲಿಲ್ಲ. ಆದ್ದರಿಂದ ಆ ಹಿಂಸಕ ದೇಹವು ಈಗಲೂ ಉರಿಯುತ್ತಿರುವದು. ಆ ಉರಿಯು ಶಬ್ದವು ಜನಗಳ ಗಲಾಟೆಗಳಿಂದ ಹಗಲು ಯಾರಿಗೂ ಕೇಳಿಸುವದಿಲ್ಲ. ರಾತ್ರಿಹೊತ್ತಿನಲ್ಲಿ ಮಾತ್ರ ಅದು ಎಲ್ಲರಿಗೂ ಕೇಳಿ ಬರುತ್ತದೆ. ಅವನು ಮಾಡಿದ ಪಾಪವು ನಾಶವಾಗುವವರೆಗೂ ಅದು ಹಾಗೆಯೇ ಇರತಕ್ಕದ್ದು. ಮಾರುತಿಯು ಆ ಚಿತೆಯ ಮೇಲೆ ಪ್ರತಿನಿತ್ಯವೂ ಕಾಷ್ಠಭಾರಗಳನ್ನು ತಂದು ಹಾಕುತ್ತಾನೆ. ಅದಲ್ಲದೆ ರಾವಣನು 'ನನ್ನ ಸ್ಮರಣೆಯು ಎಲ್ಲರಿಗೂ ಆಗಲಿ' ಎಂದು ಶ್ರೀರಾಮನನ್ನು ಪ್ರಾರ್ಥಿಸಿರುವನು. ರಾಮಚಂದ್ರನಾದರೂ ಅವನಿಗೆ ಎಲೈ ರಾವಣನೇ, ನಿನ್ನ ದೇಹಸುಡುವಧ್ವನಿಯು ಏಳು ದ್ವೀಪಗಳಿಗೂ ಕೇಳಿಸಲಿ, ಎಂದು ವರಕೊಟ್ಟಿರುವನು," ಎಂದು ಹೇಳಿದರು.

ಒಂದಾನೊಂದು ದಿವಸ ಪತ್ನಿ, ಪುತ್ರ, ಗುರುಗಳು, ಲಕ್ಷ್ಮಣ ಇತ್ಯಾದಿ ಬಂಧುಗಳಿಂದ ಕೂಡಿ ಸಿಂಹಾಸನದ ಮೇಲೆ ಕುಳಿತಿರುವ ಶ್ರೀರಾಮನು "ನನ್ನ ಅನೇಕ ಅವತಾರಗಳಲ್ಲಿ ಏಳು ಅವತಾರಗಳು ಮಾತ್ರ ಶ್ರೇಷ್ಠವಾಗಿರುವವು. ವೇದಗಳನ್ನು ಅಪಹಾರಮಾಡಿ ಸಮುದ್ರದಲ್ಲಿ ಮುಳುಗಿದ್ದ ಶಂಖಾಸುರನನ್ನು ನಾಶಮಾಡಲು ನಾನು ಮತ್ಸ್ಯಾವತಾರವನ್ನು ಧರಿಸಿದೆನು. ಆದರೆ ಸ್ವಲ್ಪ ದಿವಸಗಳಲ್ಲಿ ಆ ಅವತಾರದ ಉದ್ದೇಶವನ್ನು ಮುಗಿಸಿದೆನು. ಮೊದಲಿನ ಮೂರು ಅವತಾರಗಳನ್ನು ನಾನು ತಿರ್ಯಗ್ಜಾತಿಯಲ್ಲಿ ಸ್ವೀಕರಿಸಿದೆನಾದ್ದರಿಂದ ಅವುಗಳಲ್ಲಿ ನನಗೆ ಸುಖವಾಗ

ಲಿಲ್ಲ. ಭಕ್ತನಾದ ಪ್ರಲ್ಹಾದನನ್ನು ಕಾಪಾಡಬೇಕೆಂಬ ಉದ್ದೇಶದಿಂದ ಮಾಡಿದ ನಾಲ್ಕನೇ ಅವತಾರದಲ್ಲಿ ಅತಿ ಕ್ರೂರ ಸ್ವರೂಪವನ್ನು ವಹಿಸಿದ್ದರಿಂದ ಸುಖೋಪಭೋಗಕ್ಕೆ ಸ್ವಲ್ಪವಾದರೂ ಸಮಯವು ಸಿಗಲಿಲ್ಲ. ಐದನೇ ವಾಮನಾವತಾರದಲ್ಲಿ ಬ್ರಹ್ಮಚರ್ಯ-ನಿಯಮವನ್ನು ಅಂಗೀಕರಿಸಿ ಋಷಿಪುತ್ರನಾದ್ದರಿಂದ ಸುಖದ ಹೆಸರೇ ಆಗ ಇಲ್ಲದಂತಾಯಿತು. ಕಾರ್ತವೀರ್ಯನೇ ಮೊದಲಾದ ಕ್ಷತ್ರಿಯರನ್ನು ನಾಶಮಾಡಲು ಏಳನೇ ಪರಶುರಾಮಾವತಾರವನ್ನು ಧರಿಸಿದೆನಷ್ಟೇ? ಆಗ ಸ್ವಲ್ಪವಾದರೂ ಸುಖವಾಗಲಿಲ್ಲ. ಮುಂದೆ ದ್ವಾಪರಯುಗದಲ್ಲಿ ಕೃಷ್ಣರೂಪದಿಂದ ಅನೇಕ ಸುಖಗಳನ್ನನುಭವಿಸತಕ್ಕವನಿರುವೆನು. ಆದರೆ ಈ ರಾಮಾವತಾರದಲ್ಲಿ ನನಗೆ ಉಂಟಾದ ಆನಂದವು ಇನ್ನು ಯಾವ ಅವತಾರಗಳಲ್ಲೂ ಸಿಕ್ಕಲಾರದು. ಯಾಕೆಂದರೆ ಕೃಷ್ಣಾವತಾರದಲ್ಲಿ ದೇವಸ್ತ್ರೀಯರಿಗೆ ಕೊಟ್ಟಿರುವ ವರಗಳನ್ನು ಕೈಗೂಡಿಸಲು ನಾನು ಅನೇಕ ದುಷ್ಕೃತ್ಯಗಳನ್ನು ಮಾಡಬೇಕಾಗುವದು. ಆದ್ದರಿಂದ ನಾನು ಅನೇಕ ಸ್ತ್ರೀಯರಿಗೆ ಪತಿಯಾಗಬೇಕಾಗುವದು. ಅಂದಮೇಲೆ ನನಗೆ ಸುಖವೆಲ್ಲಿಯದು? ಬುದ್ಧ, ಕಲ್ಕಿ ಎಂಬ ಎರಡು ಅವತಾರಗಳು ಮುಂದೆ ಆಗತಕ್ಕವುಗಳಿವೆ. ಆದರೆ ಈ ರಾಮಾವತಾರಕ್ಕೆ ಯಾವ ಅವತಾರವೂ ಸರಿಬರಲಾರದು. ಈ ಅವತಾರದಲ್ಲಿ ಏಕಪತ್ನೀವ್ರತ, ಸಾರ್ವಭೌಮತ್ವ, ಮೂರುಮಂದಿ ತಮ್ಮಂದಿರು, ಇಬ್ಬರು ವೀರರಾದ ಪುತ್ರರು, ಸತ್ಯವ್ರತ, ಸತ್ಯವಚನ ಇತ್ಯಾದಿ ಸಲಕರಣೆಗಳಿಂದ ನನಗೆ ಬಹಳ ಸುಖವುಂಟಾಗುತ್ತಲಿರುವದು. ಅದಲ್ಲದೆ ನನ್ನ ತಾಯಿ, ಗುರು, ಬಂಧು, ಮಂತ್ರಿಗಳು ಇವರ ಸಹಾಯ ಸಂಪತ್ತಿಗಳನ್ನು ಎಷ್ಟು ಹೇಳಿದರೂ ತೀರದು. ಅಹೊ, ತಂದಿಯ ಮಾತನ್ನು ಸತ್ಯಮಾಡಲು ದಂಡಕಾರಣ್ಯಕ್ಕೆ ನಾನು ತೆರಳಿದಾಗ, ಸಮಸ್ತ ಪುರಜನರಿಗೂ ಬಹಳ ದುಃಖವಾಯಿತು. ಆದರೆ "ನಾನು ಈದಿವಸ ಒಂದು ಅಲೌಕಿಕ ಕೃತ್ಯವನ್ನು ಮಾಡುತ್ತಿರುವೆನು" ಎಂದು ತಿಳಿದು ಆಗಲೂ ಸಂತೋಷದಿಂದಿದ್ದೆನು. ಆಗ ನಾನು ಮನಸ್ಸುಮಾಡಿದ್ದರೆ, ಆ ನನ್ನ ತಾಯಿಯಾದ ಕೌಸಲ್ಯೆ, ಮಂಥರೆ ಇವರನ್ನು ನಿಗ್ರಹ ಮಾಡುವದೊಂದು ದೊಡ್ಡ ಕೆಲಸವಾಗಿತ್ತೇ ಹ್ಯಾಗೆ? ಅದು ಹಾಗಲ್ಲ. ನನ್ನ ಒಳ್ಳೇ ನಡಾವಳಿಕೆಯಿಂದ ಪ್ರಪಂಚಕ್ಕೆ ಪರಮಾರ್ಥವನ್ನು ಕಲಿಸುವ ಕಡೆ ನನ್ನ ಪ್ರಯತ್ನವಿದ್ದುದರಿಂದ, ನಾನು ಅಂಥಾ ಒಂದು ಕೆಲಸವನ್ನಾದರೂ ಮಾಡಲಿಲ್ಲ. ಮಲತಾಯಿಯ ಮಾತನ್ನಾದರೂ ಖಾಸತಾಯಿಯ ಮಾತಿನಂತೆ ತಿಳಿದು ಜನರೆಲ್ಲರೂ ಪೂರ್ಣವಿಶ್ವಾಸದಿಂದ ನಡೆಸುವದು ಮುಖ್ಯಧರ್ಮವೆಂದು, ನಾನು ಈ ನನ್ನ ಆಚರಣೆಯಿಂದ ತೋರಿಸಿಕೊಟ್ಟೆನು.

ತಂದೆಯು ಮೃತನಾದ ಮೇಲಾದರೂ ಭರತಾದಿಗಳನ್ನು ಸ್ವಾಧೀನಮಾಡಿಕೊಂಡು, ರಾಜ್ಯವನ್ನು ಹೊಂದಬಹುದಾಗಿತ್ತು. ಆದರೆ ರಾಜ್ಯಾಸಕ್ತನಾದ ಪುರುಷನಿಗೆ ಸುಖವಿಲ್ಲವೆಂಬುವ ಮಾತಿನ ಅನುಭವ ನನಗೆ ಚೆನ್ನಾಗಿದ್ದುದರಿಂದ ನಾನು ಹಾಗೆ ಮಾಡಲಿಲ್ಲ. ಹಾಗೆಯೇ, 'ತಾಯಿ, ತಂದೆ, ತಮ್ಮ, ಬಂಧುಗಳು ಇತ್ಯಾದಿ ಮೋಹಗಳಲ್ಲಿ ಮನುಷ್ಯನು ತೊಡಕಿಕೊಳ್ಳಬಾರದು, ಎಂಬ ಈ ವಿಷಯವನ್ನೂ ಜನರಿಗೆ ಆ ಕಾಲದಲ್ಲಿ ಚೆನ್ನಾಗಿ ನಡೆದು ತೋರಿಸಿರುವೆನು. ಸುಖದುಃಖಗಳ ಕಾಲದಲ್ಲಿ ಧೀರನು ಸಮಸ್ಥಿತಿಯಲ್ಲಿರಬೇಕೆಂಬ ವಿಷಯವನ್ನು ನಾನು ವನವಾಸಮಾಡಿ ಕಷ್ಟಗಳನ್ನು ಸಹಿಸಿ, ಜನರಿಗೆ ಬೋಧಿಸಿರುವೆನು. ನಾನು ಈ ಜನ್ಮದಲ್ಲಿ ಅನೇಕ ಉಪದೇಶಗಳನ್ನು ಬಾಯಿಂದ ಹೇಳದೆ ನಡತೆಯಿಂದ ಮಾತ್ರ ತೋರಿಸಿರುವೆನು. ಇದನ್ನೆಲ್ಲಾ ಗುಣಶಾಲಿಯಾದ ಪುರುಷನು ತನ್ನ ಬುದ್ಧಿಶಕ್ತಿಯನ್ನನುಸರಿಸಿ ತಿಳಿದು ಕೊಳ್ಳುವನು. ಈ ರಾಮಾವತಾರದ ನನ್ನ ಕೃತ್ಯಗಳೆಲ್ಲಾ ಅನುಕರಣೀಯವಾಗಿರುತ್ತವೆ. ಅಂದರೆ ನಡವಳಿಕೆಯಿಂದಲೇ ಫಲವನ್ನು ಕೊಡುವವು. ನನ್ನ ಚರಿತ್ರೆಯನ್ನು ಕೇಳುವದರಿಂದ ನನ್ನ ಭಕ್ತರಿಗೆ ನನ್ನಲ್ಲಿ ದೃಢಭಕ್ತಿಯುಂಟಾಗುವದು. ಎಂದು ಹೇಳಿ ಗುರುಗಳ ಪಾದಗಳಿಗೆ ನಮಸ್ಕರಿಸಿದನು.

## ಶ್ರೀರಾಮನು ದಾಸಿಗೆ ವರಕೊಡುವದು.

ಒಂದಾನೊಂದು ಕಾಲದಲ್ಲಿ (ಸಪ್ತದ್ವೀಪ) ಏಳು ದ್ವೀಪಗಳಲ್ಲಿರುವ ಸ್ತ್ರೀಯರೆಲ್ಲಾ, ಸೀತಾದೇವಿಯನ್ನು ನೋಡಬೇಕೆಂಬ ಇಚ್ಛೆಯಿಂದ ಚೈತ್ರಸ್ನಾನದನಿಮಿತ್ತವಾಗಿ ಅಯೋಧ್ಯೆಗೆ ಬಂದರು. ಸೀತಾದೇವಿಯು ಅವರನ್ನು ಎದುರುಗೊಂಡು ಅಂತಃಪುರಕ್ಕೆ ಕರೆತಂದು ಯೋಗ್ಯವಾದ ಆಸನಗಳಲ್ಲಿ ಕುಳ್ಳಿರಿಸಿದಳು. ಮತ್ತು ವಸ್ತ್ರಾಲಂಕಾರಗಳಿಂದ ಅವರೆಲ್ಲರಿಗೂ ಸೀತೆಯು ಸತ್ಕಾರಮಾಡಿದಳು. ಆ ತರುಣಿಯರೂ ತಮ್ಮದೇಶಗಳಿಂದ ತಂದ ನೂತನವಾದ ಪದಾರ್ಥಗಳನ್ನು ಸೀತೆಗೆ ಒಪ್ಪಿಸಿ ಹರ್ಷಗೊಂಡರು. ಸೀತೆಯು ಅವರೆಲ್ಲರಿಗೂ ಶ್ರೀರಾಮನ ಅದ್ಭುತವಾದ ಅನೇಕ ಚರಿತ್ರೆಗಳನ್ನು ಹೇಳಿದಳು. ಆ ಸ್ತ್ರೀಯರು ಅದೆಲ್ಲವನ್ನೂ ಕೇಳಿ ಬಹಳ ಸಂತೋಷಗೊಂಡು 'ಹೇ ಜಾನಕಿ, ನಿನ್ನ ವಿವಾಹದ ಸಮಾರಂಭವನ್ನು ವರ್ಣಿಸು, ಕೇಳೋಣ' ಎಂದು ಕೇಳಿದರು. ಆಗ ಸೀತೆಯು ನಾಚಿಕೆಯಿಂದ ತಲೆತಗ್ಗಿಸಿದಳು ಬಳಿಕ ಸೀತೆಯ ಹಸ್ತ ಸಂಜ್ಞೆಯನ್ನು ತಿಳಿದು, ಸಖಿಯಾದ ತುಳಸಿಯು ಸೀತಾಕಲ್ಯಾಣದ ವೃತ್ತಾಂತವನ್ನೆಲ್ಲಾ ವಿಸ್ತಾರವಾಗಿ ತಿಳುಹಿದಳು. ಇದನ್ನೆಲ್ಲಾ ಕೇಳಿ ಸಂತುಷ್ಟರಾದ ಆ ತರುಣಿಯರು ಸೀತಾದೇವಿಯ ಅಪ್ಪಣೆಯನ್ನು ಪಡೆದು ಸರಯೂ

ತೀರಕ್ಕೆ ಸ್ನಾನಮಾಡಲು ತೆರಳಿದರು. ಅಲ್ಲಿ ಸ್ನಾನವನ್ನು ವಿಧ್ಯುಕ್ತ ರೀತಿಯಿಂದ ಮುಗಿಸಿಕೊಂಡು ಆ ತರುಣಿಯರು ತಮ್ಮ ತಮ್ಮ ದ್ವೀಪಗಳಿಗೆ ತೆರಳಿದರು.

ಒಂದಾನೊಂದು ದಿವಸ ಶ್ರೀರಾಮನು ಮಂಚದ ಮೇಲೆ ಕುಳಿತಿದ್ದನು. ತಾಂಬೂಲದ ಪ್ರಥಮರಸವನ್ನು ನುಂಗಬಾರದೆಂದು ತಿಳಿದ ಶ್ರೀರಾಮನು ಆ ರಸವನ್ನು ಉಗುಳಲು ಪೀಕದಾನಿಯನ್ನು ನೋಡಿದನು. ಅದು ಹತ್ತಿರದಲ್ಲೆಲ್ಲೂ ಕಾಣಿಸಲಿಲ್ಲ. ಸಮೀಪದಲ್ಲಿ ನಿಂತಿದ್ದ ಸುಗುಣೆ ಎಂಬ ದಾಸಿಯು ಶ್ರೀರಾಮನ ಈ ಅಭಿಪ್ರಾಯವನ್ನು ತಿಳಿದು, ಪೀಕದಾನಿಯು ಹತ್ತಿರ ಇಲ್ಲದ್ದನ್ನು ನೋಡಿ, ತನ್ನ ಅಂಗೈಯ್ಯಲ್ಲಿ ಶ್ರೀರಾಮನ ಆ ಮುಖರಸವನ್ನು ಸ್ವೀಕರಿಸಿದಳು. ಮತ್ತು ಈ ದಿವಸ ಇದೊಂದು ಅಲಭ್ಯಲಾಭವೆಂದು ತಿಳಿದು, ಆ ದಾಸಿಯು ಅಂಗೈಯಲ್ಲಿದ್ದ ರಸವನ್ನು ಪಾನಮಾಡಿದಳು. ಇದನ್ನು ನೋಡಿ ಶ್ರೀರಾಮನು ಬಹಳ ಹರ್ಷವನ್ನು ಹೊಂದಿ 'ಹೇ ಸುಗುಣೆ, ನಿನಗೇನು ಬೇಕು ಬೇಡು! ಕೊಡುವೆನು, ಎಂದು ಕೇಳಿದನು. ಈ ವಚನವನ್ನು ಕೇಳಿ ದಾಸಿಯು 'ರಾಮಚಂದ್ರ, ಈ ಅವತಾರದಲ್ಲಿ ಏಕಪತ್ನೀವ್ರತವನ್ನು ಧರಿಸಿರುತ್ತೀ. ಆಗಲಿ ಮುಂದಿನ ಜನ್ಮದಲ್ಲಾದರೂ ನಿನ್ನ ಅಂಗ ಸಂಗವು ನನಗೆ ಲಭಿಸುವಂತೆ ದಯಪಾಲಿಸು' ಎಂದು ಕೇಳಿಕೊಂಡಳು. ಆಗ ಶ್ರೀರಾಮನು, ಎಲೈ ಸುಗುಣೆಯೇ, ನೀನು ಕೃಷ್ಣಾವತಾರ ಕಾಲದಲ್ಲಿ ರಾಧೆಯಾಗಿ ಅವತರಿಸು, ಆಗ ನಿನ್ನೊಡನೆ ನಾನಾ ಕ್ರೀಡೆಗಳನ್ನಾಡಿ ಸಂತೋಷಗೊಳಿಸುವೆನು. ನೀನು ಗೋಪಿಕಾಸ್ತ್ರೀಯರಲ್ಲೆಲ್ಲಾ ಶ್ರೇಷ್ಠಪದವಿಯನ್ನು ಹೊಂದುತ್ತೀ, ಎಂದು ಹೇಳಿದನು. ಈ ವಚನಗಳನ್ನು ಕೇಳಿ ದಾಸಿಯು ಪರಮಾನಂದವನ್ನು ಹೊಂದಿದಳು. ಒಂದು ಸಮಯದಲ್ಲಿ ಶ್ರೀರಾಮನು ಬಂಧು-ಪುತ್ರಮಿತ್ರರೊಡನೆ ಸಭೆಯಲ್ಲಿ ಕುಳಿತಿದ್ದನು. ಅಷ್ಟರಲ್ಲಿ ಒಬ್ಬ ತರುಣ ಬ್ರಹ್ಮಚಾರಿಯು ಅಲ್ಲಿಗೆ ಬಂದನು. ಆತನು ಕಮಂಡಲು, ಅಜಿನ, (ಕಾಷಾಯವಸ್ತ್ರ) ಕಾವಿ ಬಟ್ಟೆ ಇವುಗಳನ್ನು ಧರಿಸಿದ್ದನು. ಆತನನ್ನು ನೋಡಿದೊಡನೆ ಶ್ರೀರಾಮನು ಆಸನದಿಂದ ಎದ್ದು, ಆತನಿಗೆ ನಮಸ್ಕರಿಸಿ ಶ್ರೇಷ್ಠವಾದ ಆಸನದಮೇಲೆ ಕುಳ್ಳಿರಿಸಿದನು. ಶ್ರೀ ರಾಮನು ಅರ್ಘ್ಯಪಾದ್ಯಾದಿಗಳಿಂದ ಆತನನ್ನು ಪೂಜಿಸಿ "ನಾನು ಈ ದಿವಸ ಧನ್ಯನಾದೆನು, ಕೃತಕೃತ್ಯನಾದೆನು. ದುರ್ಲಭವಾದ ತಮ್ಮ ದರ್ಶನದಿಂದ ನಾನು ಬದುಕಿದ್ದು ಸಾರ್ಥಕವೆನಿಸಿತು. ಮಹಾಸ್ವಾಮಿ, ತಾವು ನನ್ನ ಬಳಿಗೆ ಬರಲು ಕಾರಣವೇನು!" ಎಂದು ಕೇಳಿದನು. ಈ ಮಾತುಗಳನ್ನು ಕೇಳಿ ಆ ಬ್ರಹ್ಮಚಾರಿಯು, "ಹೇ ರಾಮ, ನಾನು ವಾಲ್ಮೀಕಿಮಹರ್ಷಿಗಳ ಆಶ್ರಮದಿಂದ ಬಂದಿರುವೆನು. ಆ ನಮ್ಮ ಗುರುಗಳು ಮಹಾಯಜ್ಞವನ್ನು

ಮಾಡಬೇಕೆಂದು ಅಪೇಕ್ಷಿಸಿರುವರು. ಸೀತಾಲಕ್ಷ್ಮಣಾದಿಗಳೊಡನೆ ನಿನ್ನನ್ನು ಆಶ್ರಮಕ್ಕೆ ಕರೆದುಕೊಂಡುಹೋಗುವದಕ್ಕಾಗಿ ನಾನು ಬಂದಿರುವೆನು. ನೀನು ಈ ದಿವಸವೇ ಹೊರಡು; ಸುಮುಹೂರ್ತವಾಗಿದೆ" ಎಂದು ಹೇಳಿದನು. ಅಷ್ಟರಲ್ಲಿ ವಿಶ್ವಾಮಿತ್ರರ ಆಶ್ರಮದಿಂದ ಒಬ್ಬ ಬ್ರಹ್ಮಚಾರಿಯು ಶ್ರೀರಾಮನ ಬಳಿಗೆ ಬಂದು, 'ರಾಮಚಂದ್ರ, ನನ್ನನ್ನು ಗುರುಗಳಾದ ವಿಶ್ವಾಮಿತ್ರರು ಕಳುಹಿಸಿರುವರು. ನೀನು ಈಗಲೇ ಕುಟುಂಬಪರಿವಾರಗಳೊಡನೆ ಅವರ ಆಶ್ರಮಕ್ಕೆ ಬರಬೇಕಂತೆ. ನಡೆ, ಹೋಗೋಣ"ಎಂದು ಮಾತನಾಡಿದನು. ಈ ಮಾತುಗಳನ್ನು ಕೇಳಿ ಶ್ರೀರಾಮನು ಸ್ವಲ್ಪನಕ್ಕು, ಒಳ್ಳೇದು, ಎಂದು ಹೇಳಿದನು. ಶ್ರೀರಾಮನ ಈ ಮಾತ ಗಳನ್ನು ಕೇಳಿ ಜನರಿಗೆ ಆಶ್ಚರ್ಯವಾಯಿತು. ರಾಮಚಂದ್ರನು ಇವರಿಬ್ಬರು ಶಿಷ್ಯರೊಡನೆ ಒಂದೇ ಕಾಲದಲ್ಲಿ ಬೇರೆಬೇರೆ ಸ್ಥಳಗಳಿಗೆ ಹ್ಯಾಗೆ ಹೋದಾನು, ಎಂಬ ಯೋಚನೆಯು ಎಲ್ಲರ ಮನಸ್ಸನ್ನೂ ಮುತ್ತಿಕೊಂಡಿತು. ಅಷ್ಟರಲ್ಲಿ ಶ್ರೀರಾಮನು ಪ್ರಯಾಣ ಸಾಮಗ್ರಿಗಳನ್ನು ಸಿದ್ಧಪಡಿಸುವಂತೆ ಲಕ್ಷ್ಮಣನಿಗೆ ಅಜ್ಞಾಪಿಸಿದನು. ಮತ್ತೂ ಈ ದಿವಸ ಭೋಜನವಾದ ಕೂಡಲೆ ಹೊರಡಬೇಕೆಂದು ಸಂಕಲ್ಪ ಮಾಡಿದನು.

ಅನಂತರ ಶ್ರೀರಾಮನು ಸಭೆಯಿಂದ ಹೊರಟು ಸೀತಾದೇವಿಯ ಅಂತಃಪುರದ ಕಡೆಗೆ ತೆರಳಿದನು. ಜಾನಕಿಗೆ ಈ ಸಮಾಚಾರವನ್ನೆಲ್ಲಾ ತಿಳುಹಿ, ಆ ಬ್ರಾಹ್ಮಣಶ್ರೇಷ್ಠರೊಡನೆ ಭೋಜನಮಾಡಿ, ಸೀತೆಯನ್ನೂ, ಹಾಗೂ ಬಂಧುಗಳನ್ನೂ ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ, ಶ್ರೀರಾಮನು ಆ ಋಷಿಶಿಷ್ಯರೊಡನೆ ಪ್ರಯಾಣ ಮಾಡಿದನು. ಅಯೋಧ್ಯೆಯಿಂದ ಎರಡು ಕ್ರೋಶ ಮಾರ್ಗವನ್ನು ದಾಟಿದಮೇಲೆ ಮಾರ್ಗಗಳು ಒಡೆದವು. ಆಗ ಶ್ರೀರಾಮನು ಯಚ್ಯ ಯಾವತ್ ಪರಿವಾರಸಹಿತ ಎರಡು ಪಂಗಡ ಮಾಡಿದನು. ವಿಮಾನಗಳೂ ಎರಡಾದವು. ಅವುಗಳಲ್ಲಿ ಒಂದು ಶ್ರೀರಾಮಾದಿಗಳೊಡನೆ ವಾಲ್ಮೀಕಾಶ್ರಮಕ್ಕೆ ಹೋಯಿತು. ಮತ್ತೊಂದು ವಿಮಾನವು ಶ್ರೀರಾಮಾದಿಗಳಿಂದ ನಿಬಿಡವಾಗಿ ವಿಶ್ವಾಮಿತ್ರರ ಆಶ್ರಮದ ಮಾರ್ಗಕ್ಕೆ ತೆರಳಿತು. ಆ ಋಷಿಶಿಷ್ಯರೂ ತಮ್ಮ ಆಶ್ರಮಗಳಿಗೆ ಹೋಗುವ ವಿಮಾನಗಳಲ್ಲೇ ಕುಳಿತಿದ್ದರು. ಹೀಗೆ ಶ್ರೀರಾಮನು ವಾಲ್ಮೀಕಿ–ವಿಶ್ವಾಮಿತ್ರರ ಆಶ್ರಮಗಳಿಗೆ ಒಂದೇಸಲ ಪ್ರಯಾಣ ಮಾಡಿ, ಯಜ್ಞ ಸಮಾಪ್ತಿಯಾದಮೇಲೆ ಋಷಿಗಳ ಅಪ್ಪಣೆಯನ್ನು ಪಡೆದು ಅಯೋಧ್ಯೆಗೆ ಹಿಂದಿರುಗಿದನು. ಪೂರ್ವದಂತೆ ಆ ಶೀಳುಹಾದಿಯ ಬಳಿಯಲ್ಲಿ ಎರಡು ವಿಮಾನಗಳು ಸೇರಿ ಒಂದಾಯಿತು. ಶ್ರೀರಾಮನು ಅಯೋಧ್ಯೆಗೆ ಕಳುಹಿಸಲು ಬಂದ ಋಷಿಶಿಷ್ಯರಿಬ್ಬರೂ ಒಂದೇ ವಿಮಾನದಲ್ಲಿ ಸೇರಿದರು. ಅನಂತರ ಆ ವಿಮಾ

ನವು ಅಯೋಧ್ಯೆಗೆ ಬಂತು. ಈ ರೀತಿಯಾಗಿ ಶ್ರೀರಾಮನು ಅನೇಕ ಲೀಲೆಗಳನು ತೋರಿಸುತ್ತಾ ಕಾಲಕಳೆದನು. ರಾಮಚಂದ್ರನ ಚರಿತ್ರೆಯನ್ನು ವಾಲ್ಮೀಕಿ ಮಹರ್ಷಿಗಳೊಬ್ಬರೇ ವರ್ಣಿಸಮಾಡಲು ಸಮರ್ಥರು. ಇಂಥ ಕವಿಗಳು ಪೂರ್ವದಲ್ಲಿರಲಿಲ್ಲ. ಮುಂದೆ ಆಗುವಹಾಗಿಲ್ಲ.

ಸೀತೆಯ ಅಪರಾಧ.

ಒಂದಾನೊಂದು ಕಾಲದಲ್ಲಿ ಶ್ರೀರಾಮನು ಪರಿಜನರೊಡನೆ ಸಭಾಮಧ್ಯದಲ್ಲಿ ಕುಳಿತಿದ್ದನು. ಅದೇವೇಳೆಗೆ ಸರಿಯಾಗಿ ಭೂರಿಕೀರ್ತಿಯು ಕಳುಹಿಸಿದ ಅನೇಕ ಹಣ್ಣಿನ ಬುಟ್ಟಿಗಳು ಬಂದವು. ಶ್ರೀರಾಮನು ಅವೆಲ್ಲವನ್ನೂ ಸೀತಾದೇವಿಯ ಕಡೆಗೆ ಕಳುಹಿಸಿದನು. ಸೀತೆಯು ಆಗ ಸಖಿಯರೊಡನೆ ಆಟವಾಡುತ್ತಿದ್ದಳು. ಬಹಳ ಫಲಪುಷ್ಪಗಳ ಬುಟ್ಟಿಗಳನ್ನು ನೋಡಿ ಸೀತಾದೇವಿಯು ಒಂದು ಬುಟ್ಟಿಯ ಮುಚ್ಚಳವನ್ನು ಮೆಲ್ಲನೆ ಬಿಚ್ಚಿ ಅದರೊಳಗಿರುವ ರಕ್ತೋತ್ಪಲವನ್ನು ಶ್ರೀರಾಮನು ಸ್ವೀಕರಿಸುವದಕ್ಕಿಂತ ಮೊದಲು ತಾನು ವಾಸನೆ ತೆಗೆದುಕೊಂಡಳು. ಅನಂತರ ಜಾನಕಿಯು ಆ ಕುಸುಮವನ್ನು ಸ್ವಲ್ಪವೂ ಬಾಡದಂತೆ ಬುಟ್ಟಿಯೊಳಕ್ಕೆ ಸೇರಿಸಿದಳು. ಈ ಸಮಾಚಾರವೆಲ್ಲಾ ಶ್ರೀರಾಮನಿಗೆ ಗೊತ್ತಾಯಿತು. ಮತ್ತು ರಾಮಚಂದ್ರನು ,,ಈ ಸಮಯದಲ್ಲಿ ಉದಾಸೀನ ಮಾಡಿದರೆ, ಸೀತೆಯಂತೆ ಎಲ್ಲಾ ತರುಣಿಯರೂ ಪತಿಗಿಂತಲೂ ಮೊದಲೇ ಭೋಗ್ಯವಸ್ತುಗಳನ್ನು ಸ್ವೀಕರಿಸುವರು. ಆದ್ದರಿಂದ ಈ ವಿಷಯದಲ್ಲಿ ಸೀತೆಗೆ ಶಿಕ್ಷೆಮಾಡಬೇಕು'' ಎಂದು ಮನಸ್ಸಿನಲ್ಲಿ ಯೋಚಿಸಿದನು. ಬಳಿಕ ಶ್ರೀರಾಮನು ಸಭೆಯಿಂದ ಎದ್ದು ಮನೆಗೆ ಬಂದನು. ಸೀತಾದೇವಿಯು ಶ್ರೀರಾಮನಿಗೆ ಪುಷ್ಪ–ಫಲಾದಿಗಳ ಬುಟ್ಟಿಗಳನ್ನು ತೋರಿಸಿದಳು. ಅವುಗಳಲ್ಲಿ ಕೆಲವು ಬುಟ್ಟಿಗಳನ್ನು ಲಕ್ಷ್ಮಣ, ಭರತ, ಶತ್ರುಘ್ನ ಇವರ ಮಂದಿರಗಳಿಗೆ ಕಳುಹಿ, ಶ್ರೀರಾಮನು ಇನ್ನೂ ಕೆಲವು ಬುಟ್ಟಿಗಳನ್ನು ಬಿಚ್ಚಿ ಅದರಲ್ಲಿರುವ ಹಣ್ಣುಗಳನ್ನೂ ಹೂಗಳನ್ನೂ, ಮಂತ್ರಿ, ಗುರುಗಳು, ಮಿತ್ರರು, ಮಕ್ಕಳು, ಸಭಾಸದರು ಇತ್ಯಾದಿ ಸಮಸ್ತರಿಗೂ ಯೋಗ್ಯತಾನುಸಾರ ಕಳುಹಿದನು. ಮತ್ತು ಸೀತಾದೇವಿಗೂ ಅನೇಕ ಹೂ–ಹಣ್ಣುಗಳನ್ನು ಕೊಟ್ಟನು. ಸಾರಾಂಶ ಸೀತಾದೇವಿಯು ಅಂತರಂಗದಲ್ಲಿ ಮೂಸಿನೋಡಿದ ಹೂವಿನ ಸಮಾಚಾರ ತನಗೆ ಗೊತ್ತಿಲ್ಲವೋ, ಏನೋ ಎಂಬಂತೆ ಶ್ರೀರಾಮನು ಕಾರ್ಯಭಾಗಗಳನ್ನು ನಡೆಸಿದನು. ಮುಂದೆ ಕೆಲವು ದಿವಸಗಳು ಕಳೆದಮೇಲೆ ಒಂದು ಏಕಾದಶಿಯು ಬಂತು. ಆ ದಿವಸ ಸೀತಾದೇವಿಯು ಉಪವಾಸಮಾಡಿ, ಮರುದಿವಸ ಸ್ನಾನತೀರಿಸಿಕೊಂಡು, ತುಳಸೀ ಪೂಜೆ ಮಾಡಿ

ಬೇಕೆಂದು ವೃಂದಾವನದ ಸಮೀಪಕ್ಕೆ ಹೋದಳು. ಪೂಜಾದಿಗಳನ್ನು ತೀರಿಸಿ ಕೊಂಡು ಸೀತಾದೇವಿಯು ಪ್ರದಕ್ಷಿಣೆ ಮಾಡುತ್ತಿರುವಾಗ ಸೀರೆಯ ಶೆರಗು ತುಳಸೀ ಗಿಡಕ್ಕೆ ಸೋಂಕಿತು. ಕೂಡಲೆ ಅದರಿಂದ ಒಂದು(ಪತ್ರವು) ಎಲಿಯು ಕೆಳಕ್ಕೆ ಉದುರಿತು. ಅದನ್ನು ನೋಡಿ ಸೀತೆಯು ದ್ವಾದಶಿಯ ದಿವಸ ಇಂಥಾ ಅಪರಾಧ ವಾಯಿತಲ್ಲಾ, ಎಂದು ಬಹಳ ಭಯಪಟ್ಟಳು. ದ್ವಾದಶಿಯ ದಿವಸ ತುಳಸೀ ದಳಗಳನ್ನು ತೆಗೆಯ.ಬಾರದೆಂದು ಆಕೆಗೆ ಗೊತ್ತಿತ್ತು. ಆದರೆ ಸೀತೆಯು ಆ ಪತ್ರ ವನ್ನು ತನ್ನ ಕೈಯಿಂದ ವೃಂದಾವನದಲ್ಲಿ ಹಾಕಿ ಶ್ರೀರಾಮನ ಬಳಿಗೆ ಬಂದಳು. ಮತ್ತು ರಾಮಚಂದ್ರನೊಡನೆ ವಿನೋದವಾಗಿ ಮಾತನಾಡುತ್ತಾ ಕುಳಿತಿದ್ದಳು. ಇಷ್ಟರಲ್ಲಿ ನಾರದರು 'ಪಾಲಯ ಮಾಂ ದೀನಂ। ಪಾಲಯ ಮಾಂ ದೀನಂ' ಎಂಬ ಮಂತ್ರವನ್ನು ಪಠಣಮಾಡುತ್ತಾ ಬಂದರು. ಅವರನ್ನು ನೋಡಿ ಶ್ರೀರಾಮನು ಯೋಗ್ಯ ಪೂಜಾದಿಗಳಿಂದ ಸಂತೋಷಗೊಳಿಸಿದನು. ಮತ್ತು ಭೋಜನಕ್ಕೋ- ಸ್ಕರ ಸುವರ್ಣದ ಪಾತ್ರೆಯನ್ನು ಆ ಮುನಿಗಳ ಮುಂದೆ ಇರಿಸಿದನು. ಶ್ರೀ ರಾಮನು ಜಾಗ್ರತೆ ಭೋಜ್ಯ ಪದಾರ್ಥಗಳನ್ನು ಬಡಿಸುವಂತೆ ಜಾನಕಿಗೆ ಅಪ್ಪಣೆಮಾಡಿದನು. ಆಕೆಯು ಭಕ್ಷ-ಭೋಜ್ಯಗಳನ್ನು ಕೈಯಲ್ಲಿ ಧರಿಸಿ, ನಾರದರ ಬಳಿಗೆ ಬಂದಳು. ಸೀತಾದೇವಿಯನ್ನು ನೋಡಿದಕೂಡಲೆ, ನಾರದರು 'ರಾಮಚಂದ್ರ, ಈ ದಿವಸ ಸೀತೆಯು ದಿವ್ಯಾನ್ನವನ್ನು ಬಡಿಸಿದರೂ ನಾನು ಭೋಜನ ಮಾಡುವದಿಲ್ಲೆಂದನು. ಈ ಮಾತುಗಳನ್ನು ಕೇಳಿ ಸೀತೆಯು ಗಾಬರಿಹೊಂದಿದಳು. ಶ್ರೀರಾಮನು 'ಅದೇಕೆ ಮಹರ್ಷಿಗಳೇ, ಅಷ್ಟುಕೋಪ.' ಎಂದು ಕೇಳಿದನು. ಈ ವಚನಗಳನ್ನು ಕೇಳಿ ನಾರದರು "ಈ ವೃತ್ತಾಂತವು ನಿನಗೆ ಗೊತ್ತಿಲ್ಲದೆ ಇರಲಿಕ್ಕಿಲ್ಲ. ನನ್ನ ಮುಖದಿಂದ ಕೇಳಬೇಕೆಂದು ಇಚ್ಛೆಯಿದ್ದರೆ ಕೇಳು. ಹೇ ಪ್ರಭೋ, ಸೀತಾದೇವಿಯು ಈ ದಿವಸ ಮಹಾಪಾಪಮಾಡಿದಳು. ಈ ದಿವಸ ದ್ವಾದಶಿಯಾಗಿದ್ದರೂ ಜಾನಕಿಯು ತುಲ ಸೀಪತ್ರವನ್ನು ಬಿಡಿಸಿರುವಳು. ನನ್ನ ಮಾತು ಸುಳ್ಳೆಂದು ತೋರಿದರೆ ವೃಂದಾವನ ದಲ್ಲಿ ಹೋಗಿನೋಡು. ಸಂಕ್ರಾಂತಿ, ಚತುರ್ದಶಿ, ದ್ವಾದಶಿ, ವ್ಯತೀಪಾತ, ಪರ್ವ, ಸಂಧಿಸಮಯ, ಶುಕ್ರವಾರ, ಮಂಗಳವಾರ, ಚಂದ್ರಗ್ರಹಣ, ಪ್ರಸೂತಿಕೆ ಕಾಲ, ಮರಣಕಾಲ, ಇತ್ಯಾದಿ ಕಾಲಗಳಲ್ಲಿ ತುಳಸೀಪತ್ರವನ್ನು ಯಾರು ಹರಿಯು ವರೋ, ಅವರು ವಿಷ್ಣುಮಸ್ತಕವನ್ನು ಹೊಡೆದ ಪಾತಕಕ್ಕೆ ಗುರಿಯಾಗುವರು. ಆಕಾಲದಲ್ಲಿ ತುಲಸೀ ದಳಗಳನ್ನು ತೆಗೆಯುವ ಸ್ತ್ರೀ-ಪುರುಷರು ನರಕವನ್ನು ಹೊಂ ದುತ್ತಾರೆ. ಇತ್ಯಾದಿ -ಶಾಸ್ತ್ರವಚನಗಳು ಸೀತೆಯು ಮಹಾ ಪಾತಕ ಮಾಡಿದಳ

ಳೆಂದು ಹೇಳುತ್ತಿರುವಳು. ಆದ್ದರಿಂದ ರಾಮಚಂದ್ರ, ಸೀತಾದೇವಿಯು ಮುಟ್ಟಿ ಪಾತ್ರೆಯಲ್ಲಿ ನಾನು ನೀರುಸಹಿತ ಕುಡಿಯಲಾರೆ. ಅನ್ನದ ಮಾತು ಒಂದುಕ ಇರಲಿ' ಎಂದು ಹೇಳಿದರು. ಈ ಭಾಷಣಗಳನ್ನು ಕೇಳಿ ಶ್ರೀರಾಮನು 'ಹೇ ಮಹರ್ಷೆ, ನೀನು ನಮ್ಮ ಸೀತೆಯನ್ನು ಪರಿಶುದ್ಧಿ ಮಾಡಲು ಸಮರ್ಥನು. ಮಹ ಸ್ವಾಮೀ, ಈ ದೋಷವು ಪರಿಹಾರವಾಗುವ ಒಂದು ವ್ರತವನ್ನಾಗಲಿ, ದಾನ ನ್ನಾಗಲಿ ಹೇಳಿರಿ' ಎಂದು ಪ್ರಶ್ನೆಮಾಡಿ ಆತನು ಮತ್ತೆ ಮತ್ತೆ ನಾರದರಿಗೆ ನಮ ರಿಸಲಾರಂಭಿಸಿದನು. ಬಳಿಕ ನಾರದರು "ಘೋರ ಪಾತಕಗಳಿಗೆಲ್ಲಾ ಅನೇ ಪ್ರಾಯಶ್ಚಿತ್ತಗಳನ್ನು ಧರ್ಮಜ್ಞರು ಹೇಳಿರುವರು. ಅವುಗಳಲ್ಲಿ ದ್ವಾದಶೀ ದಿವ ತುಳಸೀ ಪತ್ರವನ್ನು ಕೊಯ್ದು ಪಾಪಕ್ಕೆ ಪ್ರಾಯಶ್ಚಿತ್ತವು ಕಂಡುಬರುವದಿಲ್ಲ ರಾಮಚಂದ್ರ, ಆದರೆ ನನಗೊಂದು ಉಪಾಯವು ತೋರುತ್ತಿರುವದು. ಅದೆ ನಂದರೆ, ಸೀತಾದೇವಿಯು ತನ್ನ ಪಾತಿವ್ರತ್ಯಬಲದಿಂದ ಆ ಪತ್ರವನ್ನು ತುಲಸಿಯ ಕೊಂಬೆಗೆ ಸೇರಿಸಿದರೆ, ಈ ಪಾಪವು ಪರಿಹಾರ ವಾದೀತು." ಎಂದರು.

ಈ ಮಾತುಗಳನ್ನು ಕೇಳಿ ಸೀತಾದೇವಿಯು ವೃಂದಾವನದ ಬಳಿಗೆ ತೆರಳಿದಳ ನಾರದರು, ರಾಮ ಲಕ್ಷ್ಮಣ ಇವರೇ ಮೊದಲಾದ ಸಮಸ್ತರೂ ಅಲ್ಲಿಗೆ ಸೇರಿದರು ಊರ್ಮಿಳೆ, ಚಂಪಕಾ, ಮೊದಲಾದ ಸಮಸ್ತ ಸ್ತ್ರೀಯರೂ ಆಶ್ಚರ್ಯದಿಂದ ಆ ಕೌ ಕವನ್ನು ನೋಡಲು ವೃಂದಾವನದ ಸುತ್ತಲೂ ಬಂದು ನಿಂತರು. ಆಗ ಸೀತಾದೇ ವಿಯು ವೃಂದಾವನಕ್ಕೆ ನಮಸ್ಕರಿಸಿ 'ಹೇ ತುಳಸೀದೇವೀ, ತಾಯೆ, ನನ್ನಲ್ಲಿ ಪ ಭಕ್ತಿಯು ಪೂರ್ಣವಾಗಿದ್ದದ್ದೇ ನಿಶ್ಚಯವಾದರೆ, ನಿನ್ನ ಈ ಪತ್ರವು ಮೊದಲು ಇದ್ದಂ ಕೊಂಬೆಗೆ ಸೇರಿಕೊಳ್ಳಲಿ" ಎಂದು ಹೇಳಿ ಸ್ವಲ್ಪ ಹೊತ್ತು ಸುಮ್ಮನೆ ನಿಂತಳ ಆದರೂ ಆ ತುಲಸೀಪತ್ರವು ಕೊಂಬೆಗೆ ಸೇರಲಿಲ್ಲ. ಇದನ್ನು ನೋಡಿದ ಕೂಡ ಸೀತಾದೇವಿಯ ಮನಸ್ಸು ಖಿನ್ನವಾಯಿತು. ಮುಖವು ಬೆವರೇರಿತು. ಈ ಚಮ ತ್ಕಾರವನ್ನು ನೋಡಲು ದೇವ, ಗಂಧರ್ವ, ಯಕ್ಷ, ಇವರೆಲ್ಲರೂ ಆಕಾಶದಲ್ಲಿ ನಿಂತಿದ್ದರು. ಸೀತೆಯ ಮುಖವು ಖಿನ್ನವಾದದ್ದನ್ನು ನೋಡಿ ನಾರದರು ಸೀತೆ, ನೀನು ಶ್ರೀರಾಮನಿಗಿಂತ ಮೊದಲು ಕಮಲದ ಪರಿಮಳವನ್ನು ಸ್ವೀಕರಿಸಿದೆ ಇದು ಪತಿವ್ರತೆಯರಿಗೆ ಅಯೋಗ್ಯವಾದದ್ದಲ್ಲವೆ? ಇದನ್ನು ತಿಳಿದು ನಿನ್ನನ್ನು ಶಾಸ ಮಾಡಬೇಕೆಂದೇ ಶ್ರೀರಾಮನು ಇಷ್ಟು ಆಟ ಹೂಡಿರುವನು. ಇತರ ತರುಣ ಯರೂ ನಿನ್ನಂತೆ ದುಷ್ಟನಡತೆಯಿಂದ ನಡೆಯಬಾರದೆಂದು ರಾಮಚಂದ್ರನು ಇಷ್ಟು ಖಟಾಟೋಪ ಮಾಡಿರುವನು. ಇರಲಿ. ನೀನು ಈಗ ತುಳಸೀದೇವಿಯ ಬಳಿ

ಹೋಗು. ಇದೊಂದು ನನ್ನ ಅಪರಾಧವು ಉಂಟೆಂದು ಒಪ್ಪಿಕೋ! ಇದೊಂದೇ ಅಪರಾಧದಿಂದ ನನ್ನ ಪಾತಿವ್ರತ್ಯವು ನ್ಯೂನವಾದದ್ದೇ ನಿಜವಾದರೆ ಈ ಪತ್ರವು ಕೊಂಬೆಗೆ ಸೇರಲಿ, ಎಂದು ಪ್ರಾರ್ಥಿಸು." ಎಂದು ಹೇಳಿದರು. ಬಳಿಕ ಸೀತಾದೇವಿಯು ಶ್ರೀರಾಮನಿಗೆ ನಮಸ್ಕರಿಸಿ, ವೃಂದಾವನದ ಬಳಿಗೆ ಹೋಗಿ ನಾರದರು ಉಪದೇಶಿಸಿದಂತೆ ಉಚ್ಚಾರ ಮಾಡಿದಳು. ಆಕ್ಷಣದಲ್ಲಿ ತುಲಸೀ ಪತ್ರವು ಕೊಂಬೆಯನ್ನು ಹೊಂದಿತು. ಇದನ್ನು ನೋಡಿ ಶ್ರೀರಾಮನು ಸೀತಾದೇವಿಯನ್ನು ಆಲಿಂಗನ ಮಾಡಿದನು. ಮತ್ತು ಆತನು ಸೀತೆಯನ್ನು "ಪತಿವ್ರತೆಯರು ಪತಿಯವಿಷಯದಲ್ಲಿ ಯಾವರೀತಿ ನಡೆಕೊಳ್ಳಬೇಕು! ಎಂಬ ವಿಷಯವನ್ನು ಸಮಸ್ತ ಸ್ತ್ರೀಯರಿಗೂ ತಿಳಿಸಬೇಕೆಂದು ನಿನ್ನ ಈ ಅಪರಾಧವನ್ನು ಕ್ಷಮಿಸಲಿಲ್ಲ" ಇತ್ಯಾದಿ ಮಧುರ ಭಾಷಣಗಳಿಂದ ಸಂತೋಷಗೊಳಿಸಿದನು. ಅನಂತರ ಶ್ರೀ ರಾಮನು ಸಮಸ್ತ ದೇವತೆಗಳನ್ನೂ ಪೂಜಿಸಿ, ನಾರದರೊಡನೆ ವಿನೋದವಾಗಿ ಮಾತನಾಡುತ್ತಾ ಭೋಜನಕ್ಕೆ ಕುಳಿತನು. ಸೀತಾದೇವಿಯು ವ್ಯಂಜನ್ನವನ್ನು ಸಮಸ್ತರಿಗೂ ಬಡಿಸಿದಳು. ನಾರದರು ಸೀತಾದೇವಿಯನ್ನು ಸ್ತೋತ್ರಮಾಡುತ್ತಾ, ಆಕೆಯು ಬಡಿಸಿದ ಅಮೃತ ಸಮಾನವಾದ ಅನ್ನವನ್ನು ಭೋಜನ ಮಾಡಿದರು. ಬಳಿಕ ಶ್ರೀ ರಾಮನು ನಾರದಾದಿಗಳಿಗೆ ತಾಂಬೂಲವನ್ನು ಕೊಟ್ಟು ವಿಶ್ರಾಂತಿಸ್ಥಾನದಲ್ಲಿ ಕುಳಿತು ತಾನೂ ತಾಂಬೂಲವನ್ನು ಭಕ್ಷಣೆಮಾಡುತ್ತ ಕುಳಿತನು. ಅನಂತರ ನಾರದರು ಶ್ರೀ ರಾಮನನ್ನು ಸ್ತುತಿಸಿದರು. (ಅದರಲ್ಲಿ ಈಶ್ವರನ ಸಾಮರ್ಥ್ಯ, ಪೂರ್ಣ ಗುಣಾನುವಾದಗಳು ಇವು ಅಡಗಿರುತ್ತವೆ.) ಮತ್ತು ಶ್ರೀ ರಾಮನ ಅಜ್ಞೆಯನ್ನು ಪಡೆದು ತಮ್ಮ ಲೋಕಗಳಿಗೆ ತೆರಳಿದರು.

ಆನಂದ ರಾಮಾಯಣದಿಂದ ಸಮಸ್ತರ ಉದ್ಧಾರ.

ಅಯೋಧ್ಯೆಯಲ್ಲಿ ಶ್ರೀ ರಾಮನು ರಾಜ್ಯಸಂರಕ್ಷಣೆ ಮಾಡುತ್ತಿರಲು, ಒಬ್ಬ ದೂತನು ರಾಮಚಂದ್ರನ ಎದುರಿಗೆ ಬಂದು "ಮಹಾಸ್ವಾಮಿ, ನಾನು ರಾಜಸೇವೆಗೆ ಮೊದಲುಮಾಡಿ ಬಹಳ ವರ್ಷಗಳಾದವು. ನನಗೆ ಅದರಲ್ಲಿ ಬಹಳ ಬೇಜಾರು ಬಂದಿರುವದು. ಆದ್ದರಿಂದ ನನಗೆ ತಪಸ್ಸುಮಾಡಲು ಅಪ್ಪಣೆಕೊಡು!" ಎಂದು ಕೇಳಿದನು. ಶ್ರೀ ರಾಮನು ಅವನ ವಚನಗಳನ್ನು ಕೇಳಿ ಪ್ರಯಾಣಮಾಡಲು ಅಪ್ಪಣೆ ಮಾಡಿದನು. ಕೂಡಲೆ ಅವನು ಮನೆಗೆ ಬಂದು, ಶುಚಿರ್ಭೂತನಾಗಿ ಒಂಭತ್ತುದಿವಸ ರಾತ್ರಿ ಆನಂದ ರಾಮಾಯಣವನ್ನು ಭಕ್ತಿಪೂರ್ವಕವಾಗಿ ಓದಿದನು. ಅನಂತರ ಅವನು ಹೊರಕ್ಕೆಬಂದನು. ಯಾವುದೋಒಂದು ದೇಶದ ರಾಜನು ಮೃತ

ನಾಗಿದ್ದನು. ಅವನ ಮಗನು ಬಹಳ ಚಿಕ್ಕವನಾದ್ದರಿಂದ ಬುದ್ಧಿವಂತನಾದ ಒಬ್ಬ ಮಂತ್ರಿಯನ್ನು ರಾಜ್ಯಸಂರಕ್ಷಣೆಗಾಗಿ ನಿಯಮಿಸಬೇಕೆಂದು ಪ್ರಜೆಗಳು ಇಚ್ಛೆಪಟ್ಟರು. ಇಂಥವನೇ ಮಂತ್ರಿಯಾಗಬೇಕೆಂದು ಮಾತ್ರ ನಿಶ್ಚಯವಾಗಲಿಲ್ಲ. ಪಜೆಗಳಲ್ಲಿ ಜಗಳಹುಟ್ಟಿತು. ಆಗ ಎಲ್ಲಾ ಪ್ರಜೆಗಳೂ ಒಂದುಕಡೆಸೇರಿ, 'ನಮ್ಮ ಪಟ್ಟದ ಆನೆಯ ಕೈಗೆ ಪುಷ್ಪಮಾಲಿಕೆಯನ್ನು ಕೊಡೋಣ. ಅದು ಯಾರಿಗೆ ಮಾಲಿಕೆಯನ್ನು ಹಾಕುವದೋ, ಅವರೇ ಮಂತ್ರಿಯಾಗತಕ್ಕದ್ದು' ಎಂದು ನಿಶ್ಚಯಮಾಡಿ ಆನೆಯ ಕೈಗೆ ಮಾಲಿಕೆಯನ್ನು ಕೊಟ್ಟರು. ಆ ಗಜವು ಆ ಪಟ್ಟಣವನ್ನೇ ಬಿಟ್ಟು ನೆಟ್ಟಗೆ ಅಯೋಧ್ಯಾ ನಗರಿಗೆಬಂತು. ಬೀದಿಯಲ್ಲಿ ನಿಂತಿರುವ ಆ ದೂತನಿಗೆ ಪುಷ್ಪಮಾಲೆಯನ್ನು ಹಾಕಿ, ಆ ಗಜವು ಅವನ ಎದುರಿಗೆ ನಿಂತಿತು. ಆ ಗಜದಮೇಲೆ ಕುಳಿತಿದ್ದ ಮಾವಟಿಗನು ಆ ದೂತನಿಗೆ ದಿವ್ಯ ವಸ್ತ್ರಾಭರಣಗಳನ್ನು ಕೊಟ್ಟು, ಆತನನ್ನು ಆನೆಯಮೇಲೆ ಕುಳ್ಳಿರಿಸಿಕೊಂಡು ತನ್ನ ನಗರಿಗೆ ನಡೆದನು. ಅಲ್ಲಿಯ ಪ್ರಜೆಗಳು ತಮ್ಮ ಸಂಕೇತದಂತೆ ಅವನಿಗೆ ಮಂತ್ರಿಪದವಿಯನ್ನು ಕೊಟ್ಟರು. ಬಳಿಕ ಆತನು ತನ್ನ ಪುತ್ರಮಿತ್ರರನ್ನು ಕರೆಸಿಕೊಂಡು ಸುಖದಿಂದ ವಾಸಮಾಡಿದನು. ಅಹಹ! ರಾಮಭಕ್ತಿಯ ಮಹಿಮೆ ಎಷ್ಟು ಬಲವತ್ತರವಾದದ್ದು!! ಈ ದೂತನ ಸಮಾಚಾರವನ್ನು ಕೇಳಿ ಶ್ರೀ ರಾಮನಲ್ಲಿ ಬಹಳ ವರ್ಷಗಳವರೆಗೆ ಸೇವಕರಾಗಿದ್ದ ಅನೇಕರು ಆತನ ಅಪ್ಪಣೆಯನ್ನು ಪಡೆದು, ಆತನ ಕೃಪೆಯಿಂದ ಬಹಳ ಉನ್ನತ ಪದವಿಗಳನ್ನು ಪಡೆದರು. ಕೆಲವರು ಧನಿಕರಾದರು. ಕೆಲವರು ರಾಜರಾದರು. ಕೆಲವರು ಮಂತ್ರಿಗಳಾದರು. ಕೆಲವರು ಸೂರ್ಯಮಂಡಲವನ್ನು ಹೊಂದಿದರು. ಕೆಲವರು ಚಂದ್ರಮಂಡಲವನ್ನು ಹೊಂದಿದರು. ಸಾರಾಂಶ ಅವರವರ ಪುಣ್ಯಾನುಸಾರವಾಗಿ ಉತ್ತಮ ಫಲಗಳೇ ಪ್ರಾಪ್ತವಾದವು. ಹೀಗೆ ಕೆಲವು ವರ್ಷಗಳು ಕಳೆಯಲು ಯಾವರಾಜ್ಯದಲ್ಲಿ ನೋಡಿದರೂ ದೂತರೇ ಸಿಗದಂತಾದರು. ಇದ್ದವರೆಲ್ಲಾ ಆನಂದರಾಮಾಯಣವನ್ನು ಭಕ್ತಿಯಿಂದ ಪಾರಾಯಣ ಮಾಡಲಾರಂಭಿಸಿದರು. ಅವರೆಲ್ಲಾ ಶ್ರೀ ರಾಮನ ಕೃಪೆಯಿಂದ ಶೀಘ್ರವಾಗಿ ಉತ್ತಮಲೋಕಗಳನ್ನು ಹೊಂದುತ್ತಾ ಬಂದರು. ಬಳಿಕ ಸಮಸ್ತ ರಾಜರೂ ತಮ್ಮ ದುಃಖವನ್ನು ಶ್ರೀ ರಾಮನಿಗೆ ಅರಿಕೆ ಮಾಡಿಕೊಂಡರು. ಆಗ ಶ್ರೀ ರಾಮನು ಲಕ್ಷ್ಮಣನನ್ನು ನೋಡಿ, ತನ್ನ ದೂತರನ್ನು ಕರೆಸುವಂತೆ ಆಜ್ಞಾಪಿಸಿದನು. ಸೇನೆಯಲ್ಲಿ ನೋಡಲು ಒಬ್ಬ ದೂತನೂ ಇರಲಿಲ್ಲ. ಬಳಿಕ ಶ್ರೀ ರಾಮನು ಇದು ಏನೋ ಚಮತ್ಕಾರವಾಗಿರುವದೆಂದು ತಿಳಿದು ಗುರುಗಳಾದ ವಸಿಷ್ಠರನ್ನು ಕರೆಸುವಂತೆ ಆಜ್ಞೆಮಾಡಿದನು. ಅನಂತರ ಸಭೆಗೆ ಬಂದ ಗುರುಗಳನ್ನು

ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ 'ಸ್ವಾಮೀ ಗುರುವರ್ಯರೆ, ನನ್ನ ಹಾಗು ಈ ರಾಜರ ದೂತರು ಎಲ್ಲಿರುವರು? ಅವರಿಗೆ ಏನು ಅವಸ್ಥೆ ಪ್ರಾಪ್ತವಾಗಿರುವದು?' ಎಂದು ಪ್ರಶ್ನ ಮಾಡಿದನು. ವಸಿಷ್ಠರು ಜ್ಞಾನದೃಷ್ಟಿಯಿಂದ ವಿಚಾರಿಸಿ, "ರಾಮಚಂದ್ರ, ವಾಲ್ಮೀಕಿ ಮುನಿಗಳಿಂದ ರಚಿತವಾದ ಆನಂದ ರಾಮಾಯಣದ ಪಾರಾಯಣದಿಂದ ಆ ಭೃತ್ಯರಲ್ಲಿ ಕೆಲವರು ನಿನ್ನ ಸ್ಥಾನವನ್ನು ಹೊಂದಿರುವರು. ಕೆಲವರು ಇಲ್ಲೇ ಉತ್ಕರ್ಷವನ್ನು ಹೊಂದಿರುವರು. ಕೆಲವರು ಸ್ವರ್ಗಲೋಕಕ್ಕೆ ಹೋಗಿರುವರು. ಸಾರಾಂಶ, ಅವರು ಹಿಂದಿನಂತೆ ನೀಚಸ್ಥಿತಿಗೆ ಬರುವದಿಲ್ಲ. ಇದೆಲ್ಲಾ ಆನಂದರಾಮಾಯಣದ ಪ್ರಭಾವವಾಗಿರುವದು. ಇದರ ಮೇಲೆ ನಿನಗೇನು ತೋರುವದೋ ಅದನ್ನು ನಡೆಸು" ಎಂದು ಹೇಳಿದರು. ಅತ್ತಲಾ ಯಮಪುರಿಯು ಬರಿದಾದದ್ದನ್ನು ನೋಡಿ ಯಮನು ಶಂಕರನಿಗೆ ಈ ವೃತ್ತಾಂತವನ್ನು ತಿಳುಹಿದನು. ಅನಂತರ ಶಂಕರನು ಸಮಸ್ತ ದೇವತೆಗಳೊಡನೆ ಶ್ರೀ ರಾಮನ ಬಳಿಗೆ ಬಂದು ನಡೆದ ಸಂಗತಿಯನ್ನು ವಿಜ್ಞಾಪನೆ ಮಾಡಿದನು. ಇದನ್ನೆಲ್ಲಾ ಕೇಳಿ ಶ್ರೀ ರಾಮನಿಗೆ ಬಹಳ ಯೋಚನೆಯಾಯಿತು. ಆತನು ವಾಲ್ಮೀಕಿಮಹರ್ಷಿಗಳ ಮುಖದಿಂದ 'ಈ ವಿಷ-ಯದಲ್ಲಿ ಏನು ಉಪಾಯಮಾಡಬೇಕು' ಎಂಬುದನ್ನು ಕೇಳಿ ಬರುವಂತೆ, ಶತ್ರುಘ್ನನಿಗೆ ಅಪ್ಪಣೆಮಾಡಿ ಕಳುಹಿಸಿಕೊಟ್ಟನು. ಆ ಮಹರ್ಷಿಗಳು 'ನಮ್ಮ ಕಾವ್ಯವು ನಾಶವಾಗದಂತೆ ಏನಾದರೂ ಉಪಾಯಮಾಡಿರಿ' ಎಂದು ಹೇಳಿದರು. ಮಹರ್ಷಿಯ ಈ ತಟಸ್ಥ ಉತ್ತರವನ್ನು ಕೇಳಿ, ಶ್ರೀರಾಮನು 'ಯಾವ ಪುರುಷನಿಗೆ ಏಳು ಜನ್ಮಗಳ ಪುಣ್ಯಸಂಗ್ರಹವಿರುವದೋ, ಅವನಿಗೆ ಈ ನನ್ನ ಚರಿತ್ರೆಯು ಲಬ್ಧವಾಗಲಿ. ಇತರರಿಗೆ ದೊರೆಯದೆ ಹೋಗಲಿ' ಎಂದು ಹೇಳಿದರು. ಶ್ರೀ ರಾಮನ ಈ ವಚನಗಳನ್ನು ಕೇಳಿ, ಸಮಸ್ತ ದೇವತೆಗಳೂ, ರಾಜರೂ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು.

## ಮೃತನಾದ ಸುಮಂತ್ರನನ್ನು ಶ್ರೀ ರಾಮನು ಹಿಂದಕ್ಕೆ ಕರೆಸಿದ್ದು.

ಒಂದಾನೊಂದು ದಿವಸ ಶ್ರೀ ರಾಮನು ಸಭೆಯಲ್ಲಿ ಕುಳಿತಿರಲು, ಒಬ್ಬ ದೂತನು ಬಂದು 'ರಾಮಚಂದ್ರ, ಸುಮಂತ್ರನು ಮರಣಹೊಂದಿದನು. ಆತನ ಹೆಂಡತಿಯು ಸಹಗಮನಮಾಡುವದಕ್ಕಾಗಿ ನಿನ್ನ ಅಜ್ಞೆಯನ್ನು ಅಪೇಕ್ಷಿಸುತ್ತಿರುವಳು' ಎಂದು ವಿಜ್ಞಾಪಿಸಿದನು. ಸೇವಕನ ಈ ಮಾತುಗಳನ್ನು ಕೇಳಿದೊಡನೆ ಶ್ರೀರಾಮನು ಖಿನ್ನನಾದನು. ಮತ್ತು ರಥದಲ್ಲಿ ಕುಳಿತು ಸುಮಂತ್ರನ ಮನೆಗೆ ಬಂದನು. ಶ್ರೀ ರಾಮನು ತನ್ನ ವೃದ್ಧಮಂತ್ರಿಯ ಜನ್ಮಪತ್ರವನ್ನು ನೋಡಿದನು. ಅದರಲ್ಲಿ

ಆತನಿಗೆ ೯೯೯೯ ವರ್ಷಗಳು, ೧೧ ತಿಂಗಳುಗಳು, ೨೧ ದಿವಸಗಳು ಆಯುಸ್ಸು ಕಳೆದಂತೆ ತಿಳಿಯಿತು. ಆಗ ಶ್ರೀರಾಮನು ಗುರುಗಳನ್ನು ಕುರಿತು 'ಸ್ವಾಮಿ, ಕೃತಯುಗದಲ್ಲಿ ಮನುಷ್ಯನಿಗೆ ಒಂದು ಲಕ್ಷ ವರ್ಷಗಳು ಆಯುಸ್ಸು ಇರತಕ್ಕದ್ದು. ತ್ರೇತಾಯುಗದಲ್ಲಿ ಹತ್ತು ಸಾವಿರ ವರ್ಷಗಳು, ದ್ವಾಪರದಲ್ಲಿ ಒಂದು ಸಾವಿರ ವರ್ಷಗಳು, ಕಲಿಯುಗದಲ್ಲಿ ನೂರುವರ್ಷಗಳು ಎಂದು ಶಾಸ್ತ್ರಪ್ರಸಿದ್ಧಯಿರುವದು. ಹೀಗಿರಲು, ನನ್ನನ್ನೂ, ಶಾಸ್ತ್ರವನ್ನೂ ತಿರಸ್ಕರಿಸಿ, ನನ್ನ ಮಂತ್ರಿಯಾದ ಈ ಸುಮಂತ್ರನನ್ನು ಯಮನು ಒಂಭತ್ತುದಿವಸಗಳಿಗೆ ಮುಂಚೆ ಹ್ಯಾಗೆ ತೆಗೆದುಕೊಂಡು ಹೋದನು? ಯಮನಿಗೆ ಬಹಳ ಸೊಕ್ಕುಬಂದಿರಬಹುದು. ಈಗಲೇ ಅವನನ್ನು ಶಾಸನ ಮಾಡಿ, ಸುಮಂತ್ರನನ್ನು ಹಿಂದಕ್ಕೆ ಕರೆತರುವೆನು' ಎಂದು ಪುಷ್ಪಕವಿಮಾನದಲ್ಲಿ ಕುಳಿತು ಯಮಲೋಕಕ್ಕೆ ಹೋದನು. ಹಾದಿಯಲ್ಲಿ ಸುಮಂತ್ರನನ್ನು ಪಾಶಗಳಿಂದ ಕಟ್ಟಿ ಎಳೆದುಕೊಂಡು ಹೋಗುವ ಯಮದೂತರನ್ನು ನೋಡಿ, ಶ್ರೀರಾಮನು ಆ ದೂತರನ್ನು ಹೊಡೆದು, ಸುಮಂತ್ರನನ್ನು ಬಂಧನದಿಂದ ತಪ್ಪಿಸಿದನು. ಮತ್ತು 'ಎಲೈ ದೂತರೆ, ಇವನಿಗೆ ಹತ್ತುಸಾವಿರ ವರ್ಷಗಳು ಮುಗಿಯುವದಕ್ಕೆ ಮುಂಚೆ ಇವನನ್ನು ನೀವು ಹ್ಯಾಗೆ ಮುಟ್ಟಿದಿರಿ?' ಎಂದು ಪ್ರಶ್ನೆ ಮಾಡಿದನು. ಆಗ ಯಮದೂತರು 'ರಾಜರೇ, ಈತನು ಮುಖ, ಹಸ್ತಗಳು ಇವು ಹೊರಗೆ ಬಂದ ಮೇಲೆ ತಾಯಿಯ ಉದರದಲ್ಲಿ ಒಂಭತ್ತುದಿವಸಗಳು ವಾಸವಾಗಿದ್ದನು. ಯಾವಾಗ ಮುಖವು ಹೊರಗೆ ಬಂತೋ ಅಲ್ಲಿಂದ ಈ ದಿವಸಕ್ಕೆ ಈತನ ಆಯುಷ್ಯವು ಮುಗಿಯಿತು' ಎಂದರು. ಆಗ ಶ್ರೀರಾಮನು, "ಎಲೈ ದೂತರೆ, ದೇಹವೆಲ್ಲಾ ಹೊರಗೆ ಬಂದ ಕಾಲದಿಂದ ಆಯುಷ್ಯವನ್ನು ಎಣಿಸಿರಿ. ಜೋಯಿಸರು ಪತ್ರಿಕೆಯಲ್ಲಿ ಅದೇ ರೀತಿಯಿಂದ ಬರೆದಿರುವರು. ಅದ್ದರಿಂದ ನೀವು ಈ ದಿವಸ ಇವನನ್ನು ಬಿಟ್ಟು ಹಿಂದಕ್ಕೆ ಹೋಗಿರಿ. ಒಂಭತ್ತು ದಿವಸಗಳು ಮುಗಿದ ಕೂಡಲೆ ಬಂದು ನಿಮ್ಮ ಕೆಲಸವನ್ನು ಮಾಡಿರಿ. ಆಗ ನಾನು ಅಡ್ಡೀಮಾಡುವದಿಲ್ಲ." ಎಂದು ಹೇಳಿ ಶ್ರೀರಾಮನು ಸುಮಂತ್ರನೊಡನೆ ಅಯೋಧ್ಯೆಗೆ ಬಂದನು. ಶ್ರೀರಾಮನು ಮಂತ್ರಿಯ ಮನೆಗೆ ಹೋದಕೂಡಲೆ ಸುಮಂತ್ರನು ಸಚೇತನನಾದನು. ಸುಮಂತ್ರನು ಎದ್ದು ಶ್ರೀರಾಮನಿಗೆ ನಮಸ್ಕರಿಸಿ, ಅನೇಕ ದಾನ-ಧರ್ಮಗಳನ್ನು ಮಾಡಿದನು. ಇತ್ತಲಾ ಯಮದೂತರು ಯಮನ ಬಳಿಗೆ ಹೋಗಿ, 'ಸ್ವಾಮಿ, ನಾವು ನೀರಿನಲ್ಲಿ ಬಿದ್ದು ಪ್ರಾಣಬಿಡುವೆವು. ನಮ್ಮನ್ನು ಭೂಲೋಕದ ರಾಜನು ಶಾಸನ ಮಾಡುವದು ಯೋಗ್ಯವಾದದ್ದಲ್ಲ' ಎಂದು ಹೇಳಿದರು.' ಈ ಮಾತುಗಳನ್ನು ಕೇಳಿ,

'ನನ್ನ ದೂತರನ್ನು ಶ್ರೀರಾಮನು ಹೊಡೆಯಲು ಕಾರಣವೇನು' ಎಂದು ಕೋಪ ಗೊಂಡು, ಯಮನು 'ಈಗಲೇ ಆ ಗರ್ವಿಷ್ಠನಾದ ರಾಮನಿಗೆ ಶಾಸನ ಮಾಡುವೆನು' ಎಂದು ಹೇಳಿ ಅಲ್ಲಿಂದ ಹೊರಟನು. ಆತನು ಇಂದ್ರನಿಗೆ ತನ್ನ ವಿಪತ್ತನ್ನು ತಿಳುಹಿ 'ನೀನು ನನಗೆ ಸಹಾಯಮಾಡು' ಎಂದು ಕೇಳಿದನು.

ಆಗ ದೇವೇಂದ್ರನು ಯಮನಿಗೆ 'ಆತನು ಸಾಕ್ಷಾತ್ ಪರಮೇಶ್ವರ ಸ್ವರೂಪಿ ಯಾಗಿರುವನು. ನಮಗೆ ಆತನೊಡನೆ ಸ್ಪರ್ಧೆಮಾಡುವದು ಯೋಗ್ಯವಾದದ್ದಲ್ಲ. ನಾನು ಆತನಿಗೆ ಕಲ್ಪವೃಕ್ಷವನ್ನು ಸಮರ್ಪಿಸಿರುವೆನು ನೋಡು' ಎಂದು ಬುದ್ಧಿಮಾತು ಗಳನ್ನು ಹೇಳಿದನು. ಅಲ್ಲಿಂದ ಯಮನು ಅಗ್ನಿಲೋಕಕ್ಕೆ ಹೋದನು. ಅಲ್ಲೂ ಆತನಿಗೆ ಸಹಾಯವು ದೊರೆಯಲಿಲ್ಲ. ಬಳಿಕ ಯಮನು ಇತರ ದಿಕ್ಪಾಲಕರು, ನವ ಗ್ರಹಗಳು, ಇತ್ಯಾದಿ ಸಮಸ್ತ ದೇವತೆಗಳನ್ನೂ ತನಗೆ ಸಹಾಯಮಾಡುವಂತೆ ಕೇಳಿ ಕೊಂಡನು. ಕೊನೆಗೆ 'ಆಗುವದಿಲ್ಲ' ಎಂಬುದೊಂದೇ ಉತ್ತರವಾಯಿತು. ಅನಂತರ ಯಮನು ತನ್ನ ಸೇನೆಯೊಡನೆ ಬಂದು ಅಯೋಧ್ಯೆಯ ಕೋಟೆಯನ್ನು ಮುತ್ತಿ ದನು. ಈ ವರ್ತಮಾನವನ್ನು ಕೇಳಿ ಶ್ರೀರಾಮನು ಯಮನೊಡನೆ ಯುದ್ಧಮಾಡಲು ಲವನನ್ನು ಕಳುಹಿಸಿದನು. ಆ ವಾಲ್ಮೀಕಿಶಿಷ್ಯನಾದ ಲವನು ಯಮನೊಡನೆ ಯುದ್ಧ ಮಾಡಲಾರಂಭಿಸಿದನು. ಆ ಯುದ್ಧವನ್ನು ನೋಡಲು ದೇವತೆಗಳು ವಿಮಾನಗಳಲಿ ಕುಳಿತು ಆಕಾಶಮಾರ್ಗದಲ್ಲಿ ಸಂಚಾರ ಮಾಡುತ್ತಿದ್ದರು. ಲವನು ತನ್ನ ಶಸ್ತ್ರಗಳಿಂದ ಯಮನ ಮಹಿಷವನ್ನು ಮೂರ್ಛೆಗೊಳಿಸಿದನು. ಯಮನು ಲವನಮೇಲೆ ಅತಿ ಕೋಪದಿಂದ ಯಮದಂಡವನ್ನು ಪ್ರಯೋಗಿಸಿದನು. ಲವನು ಆ ಉಗ್ರವಾದ ದಂಡವನ್ನು ನಾಶಮಾಡಲು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ನೋಡಿ ದೊಡನೆ ದಂಡವು ಹಿಂತಿರುಗಿತು. ಯಮನು ಗಡಗಡನೆ ನಡುಗಲಾರಂಭಿಸಿದನು. ಮತ್ತು ಹೆದರಿ ಓಡುತ್ತಿರುವ ಯಮನನ್ನು ಬ್ರಹ್ಮಾಸ್ತ್ರವು ಹಿಂಬಾಲಿಸಿತು. ಈ ಸಂ- ಕಟವನ್ನು ನೋಡಿ ಸೂರ್ಯನು ಲವನಬಳಿಗೆ ಬಂದು, 'ಎಲೈ ಲವನೆ, ಬ್ರಹಾಸ್ತ್ರ ವನ್ನು ಉಪಸಂಹರಿಸು. ನೀನು ಹ್ಯಾಗೆ ನನ್ನ ವಂಶದವನೋ. ಹಾಗೆ ಅವನೂ ನನ್ನ ಮಗನಲ್ಲವೆ? ಒಬ್ಬನು ಮೂರ್ಛಿನಾದನೆಂದು ಮತ್ತೊಬ್ಬನೂ ಹಾಗೆಯೇ ಆಗಬೇಕೇ? ಶತ್ರುವು ರಣದಲ್ಲಿ ಹಿಂತಿರುಗಿದನೆಂದರೆ ಅವನನ್ನು ಶೂರನಾದವನು ಕಾಪಾಡಬೇಕು.' ಈ ರೀತಿ ಬೋಧನೆಮಾಡಲು, ಲವನು ಬ್ರಹ್ಮಾಸ್ತ್ರವನ್ನು ಉಪ- ಸಂಹರಿಸಿದನು. ಆಗ ದೇವತೆಗಳು ಲವನಮೇಲೆ ಪುಷ್ಪಗಳನ್ನು ಎರಚಿದರು. ಜಯಜಯಕಾರಮಾಡಿದರು. ಜಯಭೇರಿಗಳು ಭೋರ್ಗರೆದವು. ಜಯಶಾಲಿ

ಯಾದ ಲವನು ಶ್ರೀರಾಮನ ಬಳಿಗೆ ಹೋಗಿ ನಮಸ್ಕರಿಸಿದನು. ಸೂರ್ಯನು ಬಂದಿರುವನೆಂಬ ವರ್ತಮಾನವನ್ನು ಕೇಳಿ ಶ್ರೀ ರಾಮನು ಎದ್ದುಬಂದು ಆತನಿಗೆ ನಮಸ್ಕಾರ ಮಾಡಿ, ಕೈಹಿಡಿದು ಸಭಾಮಂಟಪಕ್ಕೆ ಕರೆದುಕೊಂಡು ಹೋದನು. ಅಲ್ಲಿ ಸೂರ್ಯನನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, 'ನೀನು ನಮ್ಮ ವಂಶದ ಮೂಲಪುರುಷನಾಗಿರುವೆ. ಬಾಲಕನಾದ ಲವನು ಮಾಡಿದ ಅಪರಾಧವನ್ನು ಕ್ಷಮಿಸು' ಎಂದು ಶ್ರೀರಾಮನು ಪ್ರಾರ್ಥನೆ ಮಾಡಿದನು. ಈ ಮಾತುಗಳನ್ನು ಕೇಳಿ, ಸೂರ್ಯನು 'ನಿನ್ನ ನಾಭಿಕಮಲದಲ್ಲಿ ಬ್ರಹ್ಮ ಹುಟ್ಟಿದನು. ಅವನಿಂದ ಮರೀಚಿ, ಮರೀಚಿಯಿಂದ ಕಶ್ಯಪ, ಕಶ್ಯಪರಿಂದ ನಾನು ಈ ರೀತಿ ಉತ್ಪನ್ನರಾಗಿರುವೆವು. ಅಂದರೆ ನಾನು ನಿನ್ನ ಮೊಮ್ಮಗನಾಗಬೇಕು. ಹೇ ದಯಾನಿಧೆ, ನನ್ನ ಮಗನಾದ ಯಮನ ಅಪರಾಧವನ್ನು ಕ್ಷಮಿಸು' ಎಂದು ಹೇಳಿ ಯಮನನ್ನು ಶ್ರೀ ರಾಮನಿಗೆ ಶರಣಾಗತನನ್ನಾಗಿ ಮಾಡಿಸಿದನು. ಶ್ರೀ ರಾಮನು 'ಎಲೈ ಯಮನೆ, ನಾನು ಭೂಲೋಕದಲ್ಲಿ ರಾಜ್ಯಸಂರಕ್ಷಣೆ ಮಾಡುತ್ತಿರುವೆನು. ನೀನು ಯಾವಾಗಲೂ ಆಯುಸ್ಸು ಪೂರ್ಣ ಮುಗಿದವರನ್ನೇ ಯಮಲೋಕಕ್ಕೆ ಕರೆಸಿಕೋ' ಎಂದು ಆಜ್ಞಾಪಿಸಿದನು. ಬಳಿಕ ಎಲ್ಲರೂ ಶ್ರೀ ರಾಮನ ಅಪ್ಪಣೆಯನ್ನು ಪಡೆದು ತೆರಳಿದರು. ಮುಂದೆ ಸುಮಂತ್ರನಿಗೆ ಮರಣಕಾಲವು ಪ್ರಾಪ್ತವಾಗಲು, ಆತನು ಸ್ನಾನಮಾಡಿ, ಶ್ರೀ ರಾಮಮೂರ್ತಿಯನ್ನು ನೋಡುತ್ತ ಪ್ರಾಣತ್ಯಾಗ ಮಾಡಿದನು. ಆತನ ಹೆಂಡತಿಯು ಸಹಗಮನ ಮಾಡಿದಳು. ಶ್ರೀ ರಾಮನು ಸುಮಂತನೆಂಬ ಆತನ ಮಗನ ಕಡೆಯಿಂದ ಉತ್ತರಕ್ರಿಯೆಗಳನ್ನೆಲ್ಲ ನೆರವೇರಿಸಿದನು. ಲಕ್ಷ್ಮಣನು ಶ್ರೀ ರಾಮನ ಆಜ್ಞೆಯಂತೆ "ಯಾವ ಪ್ರಾಣಿ ಅಲ್ಪಾಯುಷ್ಯದಿಂದ ಮರಣಹೊಂದಿದರೂ ನಮಗೆ ತಿಳಿಸಬೇಕು. ನಿಶ್ಚಯಬುದ್ಧಿಯಿಂದ ಧರ್ಮಾಚರಣೆ ಮಾಡಬೇಕು" ಎಂದು ಸಮಸ್ತ ಪ್ರಜೆಗಳಿಗೂ ಪ್ರಸಿದ್ಧಿಪಡಿಸಿದನು. ಶ್ರೀ ರಾಮನು ಯಾವಾಗಲೂ ತನ್ನ ಪ್ರಜೆಗಳಿಗೆ 'ದುರ್ಗುಣಗಳನ್ನೆಲ್ಲ ಬಿಟ್ಟು ಸದ್ಗುಣಗಳನ್ನು ಸ್ವೀಕರಿಸಿರಿ' ಎಂದು ಉಪದೇಶಿಸುತ್ತಿದ್ದನು. ಈ ರೀತಿಯಾಗಿ ಶ್ರೀ ರಾಮನು ಅನೇಕ ಪುಣ್ಯಕರ್ಮಗಳನ್ನು ಮಾಡಿ, ತನ್ನ ನಡವಳಿಕೆಗಳಿಂದ ಲೋಕಕ್ಕೆ ಸದ್ಗುಣಗಳನ್ನು ಬೋಧಿಸುತ್ತ ಸೀತಾಸಮೇತನಾಗಿ ಪರಮಾನಂದದಿಂದ ರಾಜ್ಯಪಾಲನೆ ಮಾಡಿದನು.

ರಾಜ್ಯಕಾಂಡ ಉತ್ತರಾರ್ಧಸ್ಸಮಾಪ್ತಃ

ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾತ್ಮನೇ ।
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಳಂ ॥

# ಮನೋಹರಕಾಂಡ.



## ಶ್ರೀ ರಾಮನ ಸದುಪದೇಶ.

ಒಂದಾನೊಂದು ದಿವಸ ಶ್ರೀ ರಾಮನು ಸಿಂಹಾಸನದ ಮೇಲೆ ಕುಳಿತಿರಲು, ಪ್ರಜೆಗಳು 'ರಾಮಚಂದ್ರ, ನೀನು ಪರಮಾತ್ಮ ಸ್ವರೂಪನೆಂದು ನಾವು ಮತ್ತೆ ಮತ್ತೆ ಕೇಳುತ್ತಿರುವೆವು. ಅದ್ದರಿಂದ ನಮಗೆ ಏನಾದರೂ ಸದುಪದೇಶ ಮಾಡು' ಎಂದು ಪ್ರಾರ್ಥಿಸಿದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು "ಎಲೈ ಪ್ರಜೆಗಳಿರಾ, ನನ್ನ ದೂತರು ನಿಮಗೆ ಪ್ರತಿದಿವಸವೂ ಉಪದೇಶ ಮಾಡುತ್ತಿರುವರು. ಅದನ್ನು ನೀವು ಕೇಳೇ ಇಲ್ಲವೇ ಹ್ಯಾಗೆ? ಇರಲಿ. ಇವತ್ತಿನ ವರೆಗೂ ಆದದ್ದಾಯಿತು. ಈ ದಿವಸ ರಾತ್ರಿ ನೀವು ಎಚ್ಚರವಾಗಿದ್ದು ನನ್ನ ದೂತರ ಉಪದೇಶಗಳನ್ನು ಕೇಳಿರಿ" ಎಂದು ಹೇಳಿದನು. ಇದನ್ನು ಕೇಳಿ ಸಮಸ್ತ ಪುರಜನರೂ 'ಈ ದಿವಸ ರಾತ್ರಿ ಜಾಗರೂಕರಾಗಿದ್ದು ರಾಮದೂತರ ಉಪದೇಶವನ್ನು ಕೇಳಬೇಕು' ಎಂದು ನಿಶ್ಚಯ ಮಾಡಿದರು. ಬಳಿಕ ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಅವರಿಗೆ ಆ ದಿನ ರಾತ್ರಿ ನಿದ್ರೆ ಬರಲೇ ಇಲ್ಲ. ಇಷ್ಟರೊಳಗೆ ಮಧ್ಯರಾತ್ರಿಯಾಯಿತು. ಆಗ ರಾಮದೂತರು ದುಂದುಭಿಯನ್ನು ಬಾರಿಸುತ್ತಾ ನಗರದ ಪ್ರದಕ್ಷಿಣೆ ಮಾಡಲಾರಂಭಿಸಿದರು. ಆ ದೂತರು "ಎಲೈ ಪ್ರಜೆಗಳಿರಾ, ಎಚ್ಚರವಾಗಿರಿ. ನಿದ್ರೆಮಾಡಬೇಡಿರಿ. ಈ ನಿದ್ರೆಯು ನಿಮಗೆ ಒಳ್ಳೇದಲ್ಲ. ನಿಮಗೆ ಯಾವ ಕಾಲದಲ್ಲಿ ತೊಂದರೆಗಳು ಬರುವವೋ, ಅದು ಗೊತ್ತಾಗುವದಿಲ್ಲ. ಈ ಅಯೋಧ್ಯಾನಗರಿಗೆ ಒಂಭತ್ತು ಬಾಗಿಲುಗಳಿವೆ. ಮತ್ತು ಒಂದು ಬಹಳ ಚಿಕ್ಕ ಬಾಗಿಲೂ ಇರುವದು. 'ರಾಮರಾಜ್ಯದಲ್ಲಿ ಭಯದ ಸಂಬಂಧವೇ ಇಲ್ಲ'ವೆಂದು ತಿಳಿದು ದ್ವಾರಪಾಲಕರು ಕೆಲವು ಬಾಗಿಲುಗಳನ್ನು ಮುಚ್ಚುವರು. ಕೆಲವು ಬಾಗಿಲುಗಳನ್ನು ಮುಚ್ಚದೆ ಹಾಗೆಯೇ ಬಿಡುವರು. ಆ ಬಾಗಿಲುಗಳಿಗೆ (ಅರ್ಗಳಾಗಳು) ಅಗಳಿಗಳಿಲ್ಲ. ಚಿಲಕಗಳಿಲ್ಲ. ಎಲೈ ಜನರೇ, ದಕ್ಷಿಣದಿಕ್ಕಿನಲ್ಲಿ ಕಪ್ಪುಬಣ್ಣದ ಒಬ್ಬ ಚೋರನಿರುವನು. ಅವನು ಯಾರಿಗೂ ಎಂದಿಗೂ ಕಾಣುವದಿಲ್ಲ. ಅವನು ಗುಪ್ತರೂಪದಿಂದ ಇಲ್ಲಿಗೆ ಬರುವನು. ಆತನು ನಾಗರಿಕರಂತೆ ಕಾಣುತ್ತಾನೆ. ಅವನ ಸಹಾಯದಿಂದ ಒಬ್ಬ ದೂತನು ಹೊಳಗೆ ಬಂದನೆಂದರೆ, ದುರ್ಗವನ್ನು ಭೇದಿಸಿ, ಅದರಲ್ಲಿರುವ ಮುಖ್ಯರನ್ನು

ನಾಶಮಾಡುವನು. ಈ ಅಯೋಧ್ಯೆಯಲ್ಲಿ ಅನೇಕ ವಿಧವಾದ ವೇಷಗಳನ್ನು ಧರಿಸಿ, ಅವನ ದೂತರು ತಿರುಗುತ್ತಿರುವರು. ಶ್ರೀ ರಾಮನಿಗೆ ಅವರ ಭಯವು ಸ್ವಲ್ಪವಾದರೂ ಇಲ್ಲ. ಆದರೆ ನಮಗೆ, ನಿಮಗೆ ಬಹಳ ಭಯವಾಗಿರುವದು. ಕಾರಣ ನಾವು ದುರ್ಬಲರಾಗಿರುವೆವು. ದುರ್ಬಲರನ್ನೇ ಅವನು ಹಿಂಸಿಸಬೇಕೆಂದು ನಿಯಮವಿರುವದು. ವ್ಯವಹಾರದಲ್ಲಾದರೂ ಮೇಕೆ, ಕುರಿ ಇವುಗಳನ್ನೇ ಜನರು ದೇವತೆಗಳಿಗೆ ಬಲಿಕೊಡುತ್ತಾರೆ. ಆದರೆ ಸಿಂಹದ ಮರಿಗಳನ್ನು ಮಾತ್ರ ಯಾರೂ ಮುಟ್ಟುವದಿಲ್ಲ. ಈ ಕಳ್ಳನು ಯಾವಾಗ ಮನೆಯನ್ನು ಲೂಟಿಮಾಡುವನೋ ತಿಳಿಯದು. ಆದ್ದರಿಂದ ಎಚ್ಚರಗೊಂಡು, ಸಮಾಧಾನ ಹೊಂದಿದ ಅಂತಃಕರಣವುಳ್ಳವರಾಗಿ, ಕೈಯಲ್ಲಿ ಹದನವಾದ ಖಡ್ಗವನ್ನು ಧರಿಸಿ ನಿಲ್ಲಿರಿ. ಕವಚಗಳನ್ನು ಧರಿಸಿರಿ, ಧೈರ್ಯವನ್ನು ಹೊಂದಿರಿ. ಹೆದರಬೇಡಿರಿ. ಈ ಅಯೋಧ್ಯೆಯಲ್ಲಿ ಯಾರು ಯಾವಾಗಲೂ ಎಚ್ಚರದಿಂದಿರುವರೋ, ಅವರಿಗೆ ಕಳ್ಳರ ಭಯವೇ ಇಲ್ಲ. ಈ ನಮ್ಮ ಉಪದೇಶವನ್ನು ಮರೆಯಬೇಡಿರಿ. ಜನರೆ, ಎಚ್ಚರ, ಎಚ್ಚರ,!!" ಎಂದು ಅನೇಕ ರೀತಿಗಳಿಂದ ಬೋಧಮಾಡಲಾರಂಭಿಸಿದರು. ಜನರು ಭೃತ್ಯರ ಈ ವಚನಗಳನ್ನು ವಿಚಾರ ಮಾಡಿದರು. ಶ್ರೀ ರಾಮನ ಕೃಪೆಯಿಂದ ಅವರಿಗೆ ಜ್ಞಾನವಾಯಿತು. ಪ್ರಾತಃಕಾಲದಲ್ಲಿ ಅವರೆಲ್ಲರೂ ಸ್ನಾನಮಾಡಿ ನಿತ್ಯಕೃತ್ಯಗಳನ್ನು ಮುಗಿಸಿಕೊಂಡು, ಸಭಾಮಂಟಪಕ್ಕೆ ಬಂದರು. ಪ್ರಜೆಗಳು ಶ್ರೀ ರಾಮನ ಚರಣಗಳಿಗೆ ನಮಸ್ಕರಿಸಿ, 'ರಾಮಚಂದ್ರ, ನಮಗೆ ನಿನ್ನ ಕೃಪೆಯಿಂದ ಆತ್ಮಬೋಧವಾಯಿತು' ಎಂದು ವಿಜ್ಞಾಪಿಸಿದರು. ಆ ಮಾತುಗಳನ್ನು ಕೇಳಿ ಶ್ರೀರಾಮನು ನಗುತ್ತ 'ನಿಮಗೆ ಏನು ತಿಳುವಳಿಕೆಗೆ ಬಂದಿರುವದು? ಹೇಳಿರಿ' ಎಂದನು. ಆಗ ಪ್ರಜೆಗಳು "ರಾಮಚಂದ್ರ, ದೇಹವೇ ಅಯೋಧ್ಯೆಯು. ಒಂಭತ್ತು ಇಂದ್ರಿಯ ಗೋಲಕಗಳೇ ಒಂಭತ್ತು ಬಾಗಿಲುಗಳು. ಬ್ರಹ್ಮರಂಧ್ರವೇ ಸೂಕ್ಷ್ಮದ್ವಾರ. ಮೋಹವೆಂಬುದೇ ರಾತ್ರಿ, ಭ್ರಾಂತಿಯೇ ನಿದ್ರೆ, ಇಂಥಾ ಮೃತ್ಯುವಿಗೆ ಅಧೀನವಾಗಿರುವದು ಒಳ್ಳೇದಲ್ಲ. ಕಾಲವೇ ಒಬ್ಬ ಚೋರನು. ವಾತ, ಪಿತ್ತ, ಕಫಗಳೇ ಅವನ ದೂತರು. ಜ್ಞಾನವೇ ಒಂದು ಖಡ್ಗ. ಜೀವಾದಿಗಳೇ ದುರ್ಬಲರು. ಸಾರಾಂಶ, ಈ ದೇಹದ ಮಧ್ಯದಲ್ಲಿ ಎಲ್ಲಾ ಅಯೋಧ್ಯೆಯೂ ಇರುವದು. ಅದರ ನಾಶವಾಗಬಾರದು ಎಂಬ ಇಚ್ಛೆಯಿದ್ದರೆ, ಕಾಲನನ್ನೂ ಅವನ ದೂತರನ್ನೂ ಪುಷ್ಟರಾಗಗೊಡದೆ, ಅಯೋಧ್ಯೆಯಲ್ಲಿರುವ ರಾಮನನ್ನು ಆಶ್ರಯಿಸಬೇಕು. ರಾಮ, ಈ ರೀತಿಯಾಗಿ ನಿನ್ನ ಮಹಿಮೆಯನ್ನು ತಿಳಿದು ನಾವು ಕೃತಾರ್ಥರಾದೆವು" ಎಂದು ಹೇಳಿದರು. ಇರಲಿ.

ಒಂದು ದಿವಸ ಕೈಕೇಯಿಯು ಶ್ರೀರಾಮನ ಬಳಿಗೆ ಬಂದು 'ರಾಮ, ಪೂರ್ವದ ನನ್ನ ಅಪರಾಧವನ್ನು ಕ್ಷಮಿಸು. ನನಗೆ ಸದುಪದೇಶ ಮಾಡು' ಎಂದು ಕೇಳಿದಳು. ಆಗ ಶ್ರೀರಾಮನು 'ಲಕ್ಷ್ಮಣ, ಈ ನಮ್ಮ ತಾಯಿಯನ್ನು ನಾಳೆ ಬೆಳಿಗ್ಗೆ ಶರಯೂ ನದಿಗೆ ಕರಕೊಂಡು ಹೋಗು. ಅಲ್ಲಿ ಒಂದು ಕುರಿಯು ಈಕೆಗೆ ಉಪದೇಶ ಮಾಡುವದು' ಎಂದನು. ಈ ಮಾತುಗಳನ್ನು ಕೇಳಿ ಸಮೀಪದಲ್ಲಿದ್ದ ಲಕ್ಷ್ಮಣನು ಹಾಗೇಯೇ ಆಗಲೆಂದು ಒಡಂಬಟ್ಟನು. ಮರುದಿವಸ ಲಕ್ಷ್ಮಣನು ಕೈಕೇಯಿಯನ್ನು ಶರಯೂ ತೀರಕ್ಕೆ ಕರಕೊಂಡು ಹೋದನು. ಮತ್ತು ದಾಸದಾಸಿಯರನ್ನು ದೂರವಾಗಿರುವಂತೆ ಅಜ್ಞಾಪಿಸಿ, ಲಕ್ಷ್ಮಣನು ಕುರಿಯು ನಿಂತಿರುವ ಸ್ಥಳಕ್ಕೆ ಕೈಕೇಯಿಯನ್ನು ಕರೆದುಕೊಂಡು ಹೋದನು. ಆಕೆಯು ಆ ಕುರಿಯನ್ನು ಬಹಳ ವಿಶ್ವಾಸದಿಂದ ನೋಡಲಾರಂಭಿಸಿದಳು. ಅದು ಈ ರಾಜಪತ್ನಿಗೆ ಏನನ್ನೂ ಉಪದೇಶಿಸದೆ 'ಮೇ, ಮೇ' ಎನ್ನಲಾರಂಭಿಸಿತು. 'ಎಷ್ಟು ಹೊತ್ತು ಇಲ್ಲಿ ನಿಂತರೂ ಈ ಕುರಿಯು ನನಗೆ ಏನನ್ನೂ ಉಪದೇಶಿಸಲೊಲ್ಲದು. ಶ್ರೀ ರಾಮನು ನನಗೆ ಮೋಸಮಾಡಿರಬಹುದು' ಎಂದು ಕೈಕೇಯಿಯು ಯೋಚಿಸಿದಳು. ಮತ್ತು ಕುರಿಯ ಮೇ, ಮೇ, ಶಬ್ದವನ್ನು ಕೇಳಿ 'ಇದು ಹೀಗೆ ಕೂಗಲು ಕಾರಣವೇನು?' ಎಂದು ಕೈಕೇಯಿಯು ಒಂದೇ ಮನಸ್ಸಿನಿಂದಯೋಚಿಸುತ್ತಿರಲು ಶ್ರೀರಾಮನ ಕೃಪೆಯಿಂದ ಅದರ ಆಶಯವು ಗೊತ್ತಾಯಿತು. ಬಳಿಕ ಲಕ್ಷ್ಮಣನೊಡನೆ ಕೈಕೇಯಿಯು ಶ್ರೀರಾಮನ ಮಂದಿರಕ್ಕೆ ಬಂದಳು. ಆಗ ಶ್ರೀ ರಾಮನು ಸೀತೆಯೊಡನೆ ವಿನೋದವಾದ ಮಾತುಗಳನ್ನಾಡುತ್ತ ಕುಳಿತಿದ್ದನು. ಕೈಕೇಯಿಯು ಒಳಗೆ ಬಂದು ಸೀತಾರಾಮರ ಪಾದಗಳಿಗೆ ನಮಸ್ಕರಿಸಿ "ರಾಮಚಂದ್ರಾ, ನಿನ್ನ ಕೃಪೆಯಿಂದ ನನ್ನ ಅಜ್ಞಾನವು ದೂರವಾಯಿತು. ಆ ಕುರಿಯ ಮುಖದಿಂದ ಬಂದ ನಿನ್ನ ಉಪದೇಶವು ಲೋಕೋಪಕಾರಕವಾದದ್ದು. ಅದು ನನ್ನನ್ನು ನೋಡಿ ಮೇ, ಮೇ, ಎನ್ನಲಾರಂಭಿಸಿತು. ಮೇ. ಅಂದರೆ ನಾನು, ನನ್ನದು. ಇದರಿಂದಲೇ ಲೋಕಕ್ಕೆ ಸಮಸ್ತ ಅನರ್ಥಗಳೂ ಪ್ರಾಪ್ತವಾಗುವವು. ನನ್ನ ರಾಜ್ಯ, ನನ್ನ ಮಗ, ನನ್ನ ಸಖಿಯಾದ ಮಂಥರೆ, ಎಂಬ ಅಭಿಮಾನದಿಂದಲೇ ನನಗೆ ಜನಾಪವಾದವು ಪ್ರಾಪ್ತವಾಯಿತು. ಈ ಅಭಿಮಾನವು ನಿರರ್ಥಕವಾದದ್ದು. ರಾಮಚಂದ್ರಾ, ನಾನು, ನನ್ನದು ಎನ್ನುವದಕ್ಕಿಂತಲೂ ಅಕೃತ್ಯಗಳು ಯಾವವೂ ಇಲ್ಲ. ಅಂದರೆ ಯಾವ ವಿಷಯದಲ್ಲೂ ಅಭಿಮಾನಮಾಡಬಾರದು. ನಾನು ಈ ದಿವಸದಿಂದ ಇಂಥ ಮನೋವೃತ್ತಿಯನ್ನು ಬಿಡುವೆನು. ಇನ್ನು ಮೇಲೆ ನನಗೆ ಯಾವ ದುಃಖಗಳೂ ಇಲ್ಲ. ನನ್ನ ಈ ದೇಹವು ಇದ್ದರೂ ಸರಿಯೆ, ಇಲ್ಲವಾದರೂ ಸರಿ

ಯೆ. ಇದರ ವಿಷಯದಲ್ಲಿ ನನಗೆ ಸ್ವಲ್ಪವಾದರೂ ಯೋಚನೆಯಿಲ್ಲ. ನಾನು, ಮತ್ತು ನೀನು ಇಬ್ಬರೂ ಬೇರೆ ಅಲ್ಲ. ಬೇರೆ ಎಂದು ತಿಳಿಯುವದೇ ಮೂರ್ಖತನ" ಎಂದು ಹೇಳಿದಳು. ಕೈಕೇಯಿಯ ಈ ಮಾತುಗಳನ್ನು ಕೇಳಿ ಶ್ರೀ ರಾಮನು ಸಂತುಷ್ಟನಾದನು. ಮತ್ತು 'ಜನನಿಯೆ, ನಿನಗೆ ಪರಮಾರ್ಥಜ್ಞಾನವಾಯಿತು. ನಿನ್ನ ಸ್ಥಾನಕ್ಕೆ ಸುಖದಿಂದ ತೆರಳು' ಎಂದು ಹೇಳಿದನು. ಅನಂತರ ಸೀತಾರಾಮರುಗಳಿಗೆ ವಂದನೆ ಮಾಡಿ ಕೈಕೇಯಿಯು ಭರತನ ಗೃಹಕ್ಕೆ ಬಂದಳು. ಒಂದು ದಿವಸ ಲಕ್ಷ್ಮಣನ ತಾಯಿಯು ಶ್ರೀ ರಾಮನ ಬಳಿಗೆ ಬಂದು 'ರಾಮಚಂದ್ರಾ, ನನಗೆ ಪರಮಾರ್ಥವನ್ನು ಬೋಧಿಸು' ಎಂದಳು. ಈ ಮಾತುಗಳನ್ನು ಕೇಳಿ ಶ್ರೀರಾಮನು, 'ಜನನಿಯೇ, ನೀನು ಯಾರು? ಎಂಬದನ್ನು ತಿಳಿದು, ನಾಳಿನದಿವಸ ನನಗೆ ತಿಳಿಸು. ಅನಂತರ ನಿನಗೆ ಉಪದೇಶಿಸುವೆನು' ಎಂದನು. ಈ ಮಾತುಗಳನ್ನು ಕೇಳಿ ಸುಮಿತ್ರೆಯು ತನ್ನ ವಾಸಮಂದಿರಕ್ಕೆ ಬಂದು, ಆ ರಾತ್ರಿಯಲ್ಲಿ ನಿದ್ರೆಯಿಲ್ಲದೆ ಯೋಚಿಸಿ— "ನಾನು ಮನುಷ್ಯ ಸ್ತ್ರೀ ಎಂದು ತಿಳಿದರೆ, ನಾನು ಹಿಂದೆ ಯಾರಾಗಿದ್ದೆ, ಮುಂದೆ ನಾನು ಯಾರಾಗತಕ್ಕವಳಿದ್ದೇನೆ. ಈ ವಿಷಯದಲ್ಲಿ ನಿಯಮವಿಲ್ಲ. ಮತ್ತು ಸ್ತ್ರೀಯರಲ್ಲಿ ರಾಕ್ಷಸಿ, ಮಾನುಷಿ, ದೈವಿ, ಆಸುರಿ ಎಂಬ ಭೇದಗಳು ದೇಹಸಂಬಂಧದಿಂದ ಬರುತ್ತವೆ. ಆಭೇದಗಳು ಚೈತನ್ಯದಲ್ಲಿ ಹುಟ್ಟಲಾರವು. ಚೈತನ್ಯಮಾತ್ರ ನಿತ್ಯವಾಗಿದೆ. ಅದರ ಅಸ್ತಿತ್ವದಿಂದಲೇ ದೇಹದ ಕ್ರಿಯೆಗಳು ನಡೆಯುತ್ತವೆ. ಸಾರಾಂಶ ನಾನು ವಿಷ್ಣುವೇ ಇರುವೆನು. ಇದರಲ್ಲಿ ಸ್ವಲ್ಪವಾದರೂ ಸಂಶಯವಿಲ್ಲ" ಎಂದು ನಿಶ್ಚಯಮಾಡಿದಳು. ಪ್ರಾತಃಕಾಲದಲ್ಲಿ ಸುಮಿತ್ರೆಯು ಶ್ರೀರಾಮನಬಳಿಗೆ ಬಂದು 'ರಾಮಚಂದ್ರಾ, ನನಗೆ ಎಲ್ಲಾ ವಿಚಾರಗಳೂ ನಿನ್ನ ಅನುಗ್ರದಿಂದ ತಿಳಿದವು. ಇನ್ನು ವಿಚಾರಿಸುವ ವಿಷಯಗಳು ಯಾವವೂ ಇಲ್ಲ' ಎಂದು ಮಾತನಾಡಿದಳು. ಅನಂತರ ಕೌಸಲ್ಯೆಯೂ ಶ್ರೀರಾಮನ ಬಳಿಗೆ ಬಂದು 'ರಾಮ, ನನಗೆ ಸದುಪದೇಶಮಾಡು' ಎಂದು ಕೇಳಿಕೊಂಡಳು. ಆಗ ಶ್ರೀ ರಾಮನು 'ತಾಯಿಯೇ, ನಾಳೆ ಪ್ರಾತಃಕಾಲದಲ್ಲಿ ಗೋಶಾಲೆಗೆ ಹೋಗು. ಆಕಳಕರುವು ನಿನಗೆ ಉಪದೇಶ ಮಾಡುವದು' ಎಂದು ಹೇಳಿದನು. ಕೌಸಲ್ಯೆಯು ಆತನ ಮಾತಿನಂತೆ ಗೋಶಾಲೆಗೆ ಹೋದಳು. ಮತ್ತು ಅಲ್ಲಿ ನಿಂತಿರುವ ಒಂದು ಆಕಳಕರುವಿನ 'ಅಹಂ ಮಾ' ಎಂಬ ಶಬ್ದವನ್ನು ಕೇಳಿ, ಇದೇ ಉಪದೇಶವೆಂದು ತಿಳಿದು, ಕೌಸಲ್ಯೆಯು ಮನಸ್ಸಿನಲ್ಲಿ ವಿಚಾರ ಮಾಡಲಾರಂಭಿಸಿದಳು. ಶ್ರೀರಾಮನ ಕೃಪೆಯಿಂದ ಆಕೆಗೆ ಜ್ಞಾನವಾಯಿತು. ಬಳಿಕ ಆ ರಾಮಮಾತೆಯು ಶ್ರೀ ರಾಮನ ಬಳಿಗೆ ಬಂದು ರಾಮಚಂದ್ರಾ, ನಿನ್ನ ಅನುಗ್ರ

ಹದಿಂದ ನನಗೆ ಜ್ಞಾನವಾಯಿತು' ಎಂದು ಹೇಳಿದಳು. ಆಗ ಶ್ರೀ ರಾಮನು 'ಜನನಿಯೇ, ಉಪದೇಶಮಾಡುವದು ಗುರುವಿನ ಕೆಲಸ. ನಾನು ನಿನಗೆ ಮಗನಾದ್ದರಿಂದ, ಈ ಕೆಲಸವು ನನಗೆ ಯುಕ್ತವಲ್ಲವೆಂದು ತಿಳಿದು ಬೇರೆ ಯುಕ್ತಿಯನ್ನು ಹುಡುಕಿದೆನು. ತಾಯಿಯೇ ಯಾರಿಂದಲಾದರೇನು? ದುಃಖಪರಿಹಾರವಾಗುದು ಮುಖ್ಯ ಕೆಲಸ. ಇನ್ನು ಮೇಲೆ ನಿನಗೆ ಸಾಂಸಾರಿಕ ಸುಖದುಃಖಗಳ ಗಂಧವಾದರೂ ಇಲ್ಲ. ಅವೆಲ್ಲ ದೇಹದ ಪದರಿಗೆ ಬಂದವುಗಳಲ್ಲವೇ? ನೀನು ಮುಕ್ತಳಾದೆ' ಎಂದು ಹೇಳಿದನು. ಈ ರೀತಿಯಾಗಿ ಸರ್ವರಿಗೂ ಸುಖವನ್ನುಂಟುಮಾಡುತ್ತ ಸೀತಾರಾಮರು ಅಯೋಧ್ಯೆಯಲ್ಲಿ ಆನಂದದಿಂದ ವಾಸಮಾಡಿದರು.

### ರಾಮೋಪಾಸನಾಪ್ರಕಾರ.

ವಿಷ್ಣುದಾಸರು 'ಗುರುವರ್ಯರೆ, ರಾಮೋಪಾಸನೆಯನ್ನು ಯಾವ ರೀತಿಯಿಂದ ಮಾಡಬೇಕು? ಶ್ರೀ ರಾಮಮಂತ್ರವನ್ನು ಎಂಥಾ ಗುರುಗಳಿಂದ ಉಪದೇಶ ತೆಗೆದುಕೊಳ್ಳಬೇಕು? ಈ ವಿಷಯಗಳನ್ನು ನಮಗೆ ಕೃಪೆಮಾಡಿ ಹೇಳಿರಿ' ಎಂದು ಪ್ರಾರ್ಥನೆ ಮಾಡಿದರು. ಈ ಮಾತುಗಳನ್ನು ಕೇಳಿ ರಾಮದಾಸರು 'ಶಿಷ್ಯನೆ, ರಾಮೋಪಾಸನೆಗೆ ಮೊದಲು ಮಂತ್ರಬೇಕಾಗುವದು. ಅದು ಸದ್ಗುರುವಿನಿಂದ ಸಿಗಬೇಕು. ಗುರುಗಳು 'ಪರನಿಂದೆ, ಸಿಟ್ಟು, ತಾಪ, ಅಜ್ಞಾನ, ಅಹಂಕಾರ, ದಂಭ, ಕಳ್ಳತನ, ಇತ್ಯಾದಿ ದುರ್ಗುಣಗಳಿಲ್ಲದವರಾಗಿರಬೇಕು. ಅವರು ಸದ್ಗುಣಸಂಪನ್ನರೂ, ಜ್ಞಾನಿಗಳೂ ಆಗಿರತಕ್ಕದ್ದು. ಅಂಥಾ ಗುರುಗಳಿಂದ ಉಪದೇಶವನ್ನು ಹೊಂದುವ ಶಿಷ್ಯನು ದುಷ್ಟ ಗುಣಗಳಿಲ್ಲದವನಾಗಿಯೂ ಗುರುಭಕ್ತಿಯುಳ್ಳವನಾಗಿಯೂ ಇರಬೇಕು. ಉಪಾಸನೆಯು ಗುಣಗಳ ಬದಲಾವಣೆಗಳಿಂದ ಮೂರು ವಿಧವಾಗಿರುತ್ತದೆ. ಭಗವಂತನ ಅವತಾರಗಳು ಲೋಕದಲ್ಲಿ ಅನಂತವಾಗಿದ್ದರೂ ರಾಮ-ಕೃಷ್ಣಾವತಾರಗಳೇ ಮುಖ್ಯವಾದವುಗಳೆಂದು ಹಿಂದೆ ಹೇಳಿರುವೆನಷ್ಟೆ. ಸಾತ್ವಿಕೋಪಾಸಕರು ಅಂಥಾ ಮೂರ್ತಿಗಳನ್ನು ಆರಾಧನೆಮಾಡುವರು. ಅವುಗಳಲ್ಲೂ ರಾಮೋಪಾಸನೆಯು ಶ್ರೇಷ್ಠವಾದದ್ದು. ಗುರುಗಳು ಉಪದೇಶಿಸಿದ ಮಂತ್ರವನ್ನು ಪ್ರತಿದಿವಸವೂ ಜಪಮಾಡುತ್ತಿರಬೇಕು. ಆ ಮಂತ್ರವು ಎರಡು ಅಕ್ಷರಗಳಿಂದ ಹದಿನೈದು ಅಕ್ಷರಗಳವರೆಗೂ ಇರುವದು. ರಮಣೀಯವಾದ ಶ್ರೀ ರಾಮಮೂರ್ತಿಯನ್ನು ಒಂಬತ್ತು ವಿಧವಾದ ಪುಷ್ಪಗಳಿಂದ ಪೂಜಿಸಬೇಕು. ಇದಲ್ಲದೆ ಶ್ರೀ ರಾಮಮೂರ್ತಿಯನ್ನು ಅರ್ಘ್ಯ, ಪಾದ್ಯ, ಮಧುಪರ್ಕ, ಅಭಿಷೇಕ, ಸ್ನಾನ, ಪೀತಾಂಬರ, ಬ್ರಹ್ಮಸೂತ್ರ, ಅಲಂಕಾರ, ಚಂದನ, ತುಲಸೀಮಾಲೆ, ಧೂಪ, ದೀಪ,

ನೈವೇದ್ಯ, ತಾಂಬೂಲ, ನಮಸ್ಕಾರ, ದಕ್ಷಿಣೆ, ಪ್ರದಕ್ಷಣೆ ಇತ್ಯಾದಿಗಳಿಂದ ದ್ರವ್ಯ ಲೋಭಮಾಡದೆ ಪರಮಭಕ್ತಿಯಿಂದ ಪೂಜಿಸಬೇಕು. ಇದರಿಂದ ಉಪಾಸಕನಿಗೆ ಸಮಸ್ತ ಇಷ್ಟಾರ್ಥಗಳೂ ಸಿದ್ಧವಾಗುವವು. (ಈ ರಾಮೋಪಾಸನೆಯು ಸ್ಥಳ, ಕಾಲ, ದ್ರವ್ಯ, ಆಸನ, ಪೂಜಾ, ಇತ್ಯಾದಿ ವಿಷಯಗಳಲ್ಲಿ ಸಂಸ್ಕೃತ ಆನಂದರಾಮಾಯಣವೂ, ಇತರ ಸ್ಮೃತಿಗಳೂ ಬಹುವಿಧವಾಗಿ ಸಾರಿಹೇಳುತ್ತಿರುವವು. ಅವಶ್ಯವಾದ ವಿಷಯಗಳನ್ನು ಅಲ್ಲಿಂದ ತಿಳಿದುಕೊಳ್ಳುವದು ಅನುಕೂಲವು.)

ಎಲೈ ಶಿಷ್ಯನೇ, ಒಂಬತ್ತು ವಿಧವಾದ ಪುಷ್ಪಗಳಿಂದ ಶ್ರೀ ರಾಮನಿಗೆ ಪೂಜೆ ಮಾಡಿದ ರಾಮಭಕ್ತರ ಒಂದು ಸಣ್ಣ ಇತಿಹಾಸವನ್ನು ಹೇಳುವೆನು ಕೇಳು. ಪೂರ್ವದಲ್ಲಿ ರಾಮನಾಥಪುರದಲ್ಲಿ ವಾಸಮಾಡಿದ ಒಬ್ಬ ಬ್ರಾಹ್ಮಣನಿಗೆ ಒಂಬತ್ತು ಜನ ಮಕ್ಕಳಿದ್ದರು. ಒಂದು ವರ್ಷ ಆ ಬ್ರಾಹ್ಮಣಪುತ್ರರು ಶ್ರೀರಾಮನನ್ನು ನೋಡಬೇಕೆಂದು ಅಯೋಧ್ಯೆಗೆ ತೆರಳಿದರು. ಆಗ ಚೈತ್ರಮಾಸವಾದ್ದರಿಂದ ಶ್ರೀ ರಾಮನ ಸನ್ನಿಧಿಯಲ್ಲಿ ಜನಗಳ ದಾಟಿಯು ಬಹಳವಾಗಿತ್ತು. ಆ ದ್ವಿಜಪುತ್ರರಿಗೆ ರಾಮನ ದರ್ಶನವಾಗಲೇ ಇಲ್ಲ. ಅವರು 'ಶ್ರೀರಾಮನ ದರ್ಶನ ಮಾಡಿಕೊಳ್ಳಲು ಏನು ಪ್ರಯತ್ನಮಾಡೋಣ' ಎಂದು ಪರಸ್ಪರ ಯೋಚನೆಮಾಡಲಾರಂಭಿಸಿದರು. ಅವರಲ್ಲಿ ಹಿರಿಯನಾದ ಚಂದ್ರನು ರಾಮಭಕ್ತನಾದುದರಿಂದ ತಪಶ್ಚರ್ಯದಿಂದ ಶ್ರೀ ರಾಮನ ದರ್ಶನವಾಗುವದೆಂದು ನಿಶ್ಚಯಮಾಡಿ, ತಮ್ಮಂದಿರೊಡನೆ ಸರಯೂ ತೀರದಲ್ಲಿ ತಪಸ್ಸುಮಾಡಲು ಕುಳಿತನು. ಹೀಗೆಯೇ ಒಂಬತ್ತು ದಿವಸಗಳವರೆಗೆ ಏಕಾಗ್ರ ಮನಸ್ಸಿನಿಂದ ಅವರು ತಪಸ್ಸು ಮಾಡಿದರು. ಅಷ್ಟರಲ್ಲಿ ಶ್ರೀ ರಾಮನು ಅವರ ಭಕ್ತಿಗೆ ಮೆಚ್ಚಿ, ಅವರಿದ್ದಲ್ಲಿಗೇ ಬಂದು ಪ್ರತ್ಯೇಕವಾಗಿ ದರ್ಶನಕೊಟ್ಟನು. ಸೀತಾ, ಲಕ್ಷ್ಮಣ, ಭರತ, ಶತ್ರುಘ್ನರೊಡನೆ ಪ್ರಕಾಶಮಾನನಾದ ಶ್ರೀ ರಾಮನನ್ನು ನೋಡಿ ಆ ಬ್ರಾಹ್ಮಣಪುತ್ರರಿಗೆ ಪರಮಾನಂದವಾಯಿತು. ಜನರೆಲ್ಲ ಆ ಚಮತ್ಕಾರವನ್ನು ನೋಡಿ ಆಶ್ಚರ್ಯಪಟ್ಟರು. ಶ್ರೀರಾಮನು ಆ ದ್ವಿಜಪುತ್ರರಿಗೆ ಶಾಶ್ವತವಾದ ವರಗಳನ್ನಿತ್ತು, ಅಯೋಧ್ಯೆಗೆ ತೆರಳಿದನು. ಶ್ರೀ ರಾಮನು ಆ ಬ್ರಾಹ್ಮಣ ಪುತ್ರರಿಗೆ ಒಂಬತ್ತು ರೂಪಗಳನ್ನು ಧರಿಸಿ ದರ್ಶನಕೊಟ್ಟದ್ದರಿಂದ ಆತನಿಗೆ ಒಂಬತ್ತು ವಿಧವಾದ ಪುಷ್ಪಗಳನ್ನು ಸಮರ್ಪಿಸಬೇಕು. ಸಮಸ್ತ ಬ್ರಹ್ಮಾಂಡಗಳನ್ನೂ ತನ್ನ ಉದರದಲ್ಲಿ ಧರಿಸಿದ ಶ್ರೀ ರಾಮನ ಉಪಾಸನ ಮಾಡುವದು ರಾಮಭಕ್ತರಿಂದ ಹೊರತಾಗಿ ಮತ್ತಾರಿಂದಲೂ ಸಾಧ್ಯವಿಲ್ಲ. ಆ ರಾಮಭಕ್ತರು ಜಗತ್ತನ್ನೆಲ್ಲ ರಾಮರೂಪವೆಂದೇ ತಿಳಿಯುವರು. ಅವರ ಮಹಿಮೆಯನ್ನು ಎಷ್ಟೆಂದು ವರ್ಣಿಸಬೇಕು!

ಸಾರಾಂಶ ಆತನ ಹೊರತಾಗಿ ಜಗತ್ತಿನಲ್ಲಿ ಯಾವ ಪದಾರ್ಥಗಳೂ ಇಲ್ಲ. ಆತನು ಪ್ರಾಪ್ತವಾಗುವದು ಬಹಳ ಅಸಾಧ್ಯವೇ ಸರಿ. ಅನೇಕರು ಶ್ರೀ ರಾಮನ ಉಪಾಸನಮಾಡುವರು. ಆದರೆ ಅವರಿಗೆ ಇತರ ಪದಾರ್ಥಗಳ ಆದರಬುದ್ಧಿಯು ತಪ್ಪಿರುವದಿಲ್ಲ. ಅಹಹ, ಅಜ್ಞಾನಿಗಳಾದ ಜನರು ಮಕ್ಕಳನ್ನು ಪಡೆಯುತ್ತಾರೆ. ತೀರ್ಥಯಾತ್ರೆಗಳನ್ನು ಮಾಡುತ್ತಾರೆ. ಯಜ್ಞಯಾಗಾದಿಗಳನ್ನು ತಪ್ಪದೆ ನಡೆಸುತ್ತಾರೆ. ಇದರಿಂದ ಅವರ ಚಂಚಲವಾದ ಮನಸ್ಸು ಹ್ಯಾಗೆ ಸಮಾಧಾನವನ್ನು ಹೊಂದೀತು. ಬಹಳ ಹೇಳುವದೇನು? ಶಾಸ್ತ್ರಜ್ಞರಾದ ಜನರೂ ಕೂಡ ದ್ರವ್ಯದ ಆಶೆಗೆ ಬಿದ್ದು, ಧನಿಕರಿಂದ ಅನೇಕ ಸಮಯಗಳಲ್ಲಿ ಅವಮಾನವನ್ನು ಹೊಂದುತ್ತಾರೆ. ಇರಲಿ. ಅನೇಕ ಜನ್ಮಗಳ ಪುಣ್ಯಗಳಿಂದ ಪ್ರಾಣಿಯು ಉತ್ತಮ ಜನ್ಮದಲ್ಲಿ ಹುಟ್ಟುವನು-ಮತ್ತು ಅದರಿಂದಲೇ ಸಾಧುಸಜ್ಜನರ ಸಹವಾಸವನ್ನು ಹೊಂದುವನು. ಸತ್ಪುರುಷರು ತಮ್ಮ ಬೋಧಗಳಿಂದ ರಾಮರೂಪಿಯಾದ ಪರಮಾತ್ಮನನ್ನು ಆತನಿಗೆ ತಿಳಿಸಿಕೊಡುವರು. ಯಾವ ಪ್ರಕಾರವಾಗಿ ವ್ಯವಹಾರದಲ್ಲಿ ವೈದ್ಯರು ಅಂಜನಗಳಿಂದ ಕಣ್ಣುಗಳಲ್ಲಿರುವ ದೋಷವನ್ನು ಪರಿಹಾರಮಾಡುವರೋ, ಅದೇ ಮೇರೆಗೆ ಸತ್ಪುರುಷರ ಉಪದೇಶಗಳನ್ನು ತಿಳಿದು ನಡೆದನೆಂದರೆ, ಮೂಢಪ್ರಾಣಿಯೂ ಕೃತಾರ್ಥನಾಗುವನು. ಅಜ್ಞಾನಪಟಲವು ನಾಶವಾಗುವದು. ಈ ಅಜ್ಞಾನವೆಂಬ ರೋಗಕ್ಕೆ ಸತ್ಪುರುಷರೇ ವೈದ್ಯರು. ಆತ್ಮಜ್ಞಾನಕ್ಕೆ ವಿವೇಕ, ವೈರಾಗ್ಯ, ಶಮದಮಾದಿಗಳು, ಮುಮುಕ್ಷುತ್ವಗಳೆಂಬ ನಾಲ್ಕು ಮುಖ್ಯ ಸಾಧನಗಳು. ಸಾರಾಂಶ ಈ ಅಲಭ್ಯಲಾಭವಾಗುವದು ಬಹಳ ಕಠಿಣವಾಗುವ ವಿಷಯು. ದೇಹಕ್ಕೂ ಮನಸಿಗೂ ಯುಕ್ತರೀತಿಯಿಂದ ಕಷ್ಟಕೊಡದ ಹೊರತಾಗಿ ಈ ಫಲವು ಎಂದಿಗೂ ಸಿಗಲಾರದು. ಬಾಹ್ಯಸಾಧನಗಳಿಗಿಂತಲೂ ಅಂತಃಸಾಧನವೇ ಜಾಗ್ರತೆ ಫಲದಾಯಕವಾಗಿರುವದು. ಆದ್ದರಿಂದ ಅಂತಸ್ಸಾಧನದ ಕಡೆಗೆ ಬಹಳ ಲಕ್ಷ್ಯವಿರಬೇಕು.

### ಉಪಾಸನೆಯ ಫಲ.

ಲಿಂಗತೋಭದ್ರವೆಂಬ ಮಂಡಲದಲ್ಲಿ ಶ್ರೀ ರಾಮಚಂದ್ರನ ಪೂಜೆಯನ್ನು ಶಾಸ್ತ್ರೋಕ್ತರೀತಿಯಿಂದ ಮಾಡುವದು ಬಹಳ ಉತ್ತಮವಾದದ್ದು. ಅರ್ಚನ, ಪುಷ್ಪ, ಫಲ, ಧೂಪ-ದೀಪ ಇತ್ಯಾದಿಗಳಿಂದ ಪೂಜಿಸಬೇಕು. (ಈ ಪೂಜಾವಿಧಾನವನ್ನು ಪೂಜಾತಂತ್ರದಲ್ಲಿ ವಿಸ್ತೃತವಾಗಿ ಹೇಳಿರುವದು. ಆದರೆ ಸಾಧಕನು ಯಥಾಶಕ್ತಿ, ಭಕ್ತಿಯಿಂದ ಪೂಜೆಮಾಡಬೇಕು. ಯಾವ ಉಪಾಸನೆಯಲ್ಲಾದರೂ ಭಕ್ತಿಯು ಪ್ರಧಾನವಾಗಿರುವದು. ಅದಿಲ್ಲದೆ ಹೋದರೆ ಮಿಕ್ಕ ಸಮಸ್ತ ಬಾಹ್ಯೋ

ಪಚಾರಗಳೂ ನಿರರ್ಥಕಗಳಾಗುವವು.) ಇರಲಿ. ಹೇ ಶಿಷ್ಯನೇ, ಶ್ರೀರಾಮನಿಗೆ ಪ್ರೀತಿಪಾತ್ರವಾದ ಕಾಲ, ವಸ್ತು, ಇತ್ಯಾದಿಗಳನ್ನು ಹೇಳುವೆನು, ಕೇಳು. ಚೈತ್ರ ಮಾಸವು ಆತನಿಗೆ ಬಹಳ ಪ್ರಿಯವಾಗಿರುವದು. ಅದರಲ್ಲೂ ಶುಕ್ಲಪಕ್ಷ ನವಮಿ, ರವಿವಾರ, ಪುನರ್ವಸೂನಕ್ಷತ್ರ, ಚಂಪಕಪುಷ್ಪ, ತುಳಸೀ ಇವು ಶ್ರೀ ರಾಮನಿಗೆ ಬಹಳ ಪ್ರಿಯವಾದವುಗಳೆಂದು ತಿಳಿಯತಕ್ಕದ್ದು. ಶ್ರೀರಾಮನಿಗೆ, ಜಾಜೀಕುಸುಮ, ಕಮಲ, ಪಾರಿಜಾತ, ಇತ್ಯಾದಿ ಪುಷ್ಪಗಳೂ, ರುಚಿಕರವಾದ ಭಕ್ಷ್ಯಭೋಜ್ಯ ಗಳೂ ಪ್ರೀತಿಕರವಾದವುಗಳಾಗಿವೆ. ಇತ್ಯಾದಿ ಪೂಜಾಸಾಮಗ್ರಿಗಳಿಂದ ಶ್ರೀ ರಾಮನನ್ನು ಪೂಜಿಸಿ, ಆತನ ಸನ್ನಿಧಿಯಲ್ಲಿ ಆನಂದರಾಮಾಯಣವನ್ನು ಪಾರಾಯಣ ಮಾಡಬೇಕು. ಬಳಿಕ ಬ್ರಾಹ್ಮಣರು, ಸುಮಂಗಲೆಯರು, ಇವರೆಲ್ಲರನ್ನು ಪೂಜಿಸಿ, ಭಕ್ಷ್ಯ-ಭೋಜ್ಯಗಳಿಂದ ಭೋಜನ ಮಾಡಿಸಬೇಕು. ಮತ್ತು ಯಜಮಾನನು ಈ ವ್ರತದ ಫಲವನ್ನು ಶ್ರೀ ರಾಮನಿಗೇ ಅರ್ಪಣ ಮಾಡಬೇಕು.

ಪೂರ್ವಕಾಲದಲ್ಲಿ ಒಬ್ಬ ರಾಮಭಕ್ತನಾದ ಬ್ರಾಹ್ಮಣನು ಕೇರಳದೇಶದಲ್ಲಿ ವಾಸವಾಗಿದ್ದನು. ಆತನು ಬಹಳ ದರಿದ್ರನಾದ್ದರಿಂದ ಲಗ್ನವಾಗಿರಲಿಲ್ಲ. ಆತ ನಿಗೆ ಮನೆ, ತಾಯಿ, ತಂದೆ ಇವರ್ಯಾರೂ ಇರಲಿಲ್ಲ. ಆತನು ಪ್ರತಿದಿವಸವೂ ನದಿಗೆ ಹೋಗಿ ಸ್ನಾನಮಾಡಿ, ಶುಚಿಯಾದ ವಸ್ತ್ರಗಳನ್ನು ಧರಿಸಿ, ಮರಳಿನಿಂದ ಒಂಭತ್ತು ವೇದಿಗಳನ್ನು ರಚಿಸುವನು. ಶಾಸ್ತ್ರೋಕ್ತರೀತಿಯಿಂದ ಎಲೆಗಳ ಆಸನಗಳನ್ನು ಆ ವೇದಿಯ ಮೇಲೆ ಹಾಸಿ, ಶ್ರೀ ರಾಮಾದಿಗಳ ಪ್ರತಿಮೆಗಳನ್ನು ಆಸನಗಳ ಮೇಲೆ ಕ್ರಮವಾಗಿ ಇರಿಸುತ್ತಿದ್ದನು. ಅನಂತರ ಆ ಬ್ರಾಹ್ಮಣನು ಅವರಿಗೆ ಸಮ ಯೋಚಿತಕಾರ್ಯಗಳಿಗೆ ಹೊರಡುವಂತೆ ಪ್ರಾರ್ಥಿಸುತ್ತಿದ್ದನು. ಮತ್ತು ಆತನು ಶ್ರೀರಾಮಮೂರ್ತಿಯನ್ನು ತೆಗೆದುಕೊಂಡು ಸ್ವಲ್ಪ ದೂರ ಹೋಗಿ ವಿಜನವಾದ ಸ್ಥಳದಲ್ಲಿ ಆ ಮೂರ್ತಿಯನ್ನಿಟ್ಟು, ಅದರ ಮುಂದೆ ನೀರಿನ ತಂಬಿಗೆಯನ್ನೂ ಶುದ್ಧ ವಾದ ಮೃತ್ತಿಕೆಯನ್ನು ಇರಿಸಿ ಸ್ವಲ್ಪ ದೂರಕ್ಕೆ ಹೋಗಿ ನಿಲ್ಲುತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಆ ಮೂರ್ತಿಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಬಂದು, ಆ ಸನದ ಮೇಲೆ ಕುಳ್ಳಿರಿಸುತ್ತಿದ್ದನು. ಹೀಗೆಯೇ ಮಿಕ್ಕ ಎಂಟು ದೇವತೆಗಳಿಗೂ ಸೇವೆಮಾಡಿ, ಬಳಿಕ ಅವರೆಲ್ಲರ ಕರ, ಪಾದಗಳನ್ನು ಮೃತ್ತಿಕೆಯಿಂದ ಶುದ್ಧಿಮಾಡಿ ಕಾಷ್ಠಗಳಿಂದ ಆ ಮೂರ್ತಿಗಳ ಹಲ್ಲುಗಳನ್ನು ಉಜ್ಜಿ, ಸ್ನಾನಮಾಡಿಸುವನು. ಅನಂ ತರ ನೇಮಗಳಿಗನುಸರಿಸಿ ಆ ಮೂರ್ತಿಗಳ ಸೇವಾಮಾಡಿ, ಭೋಜನವಾದಬಳಿಕ ಆ ಮೂರ್ತಿಗಳನ್ನು ಹೆಗಲಮೇಲಿರಿಸಿಕೊಂಡು, ಪೂಜಾದ್ರವ್ಯಗಳನ್ನು ಪೆಟ್ಟಿಗೆಯಲ್ಲಿ

ಹಾಕಿಕೊಂಡು, ಅದನ್ನು ತನ್ನ ಹೆಗಲಿಗೆ ಕಟ್ಟಿಕೊಂಡು, ವನದಲ್ಲಿ ಸಂಚಾರ ಮಾಡಲು ಹೊರಡುತ್ತಿದ್ದನು. ಅಲ್ಲಿ ನಾನಾವಿಧವಾದ ಚಮತ್ಕಾರಗಳನ್ನು ನೋಡುವಂತೆ ಆ ಬ್ರಾಹ್ಮಣನು ಶ್ರೀ ರಾಮನಿಗೆ ಪ್ರಾರ್ಥನೆ ಮಾಡುವನು. ದಾರಿಯಲ್ಲಿ ಜನಗಳ ಗಲಾಟೆ ಬಹಳವಾಗಿದ್ದರೆ ಆ ಬ್ರಾಹ್ಮಣನು ತನ್ನ ಕೈಯಲ್ಲಿರುವ ಬೆತ್ತದಿಂದ ಅವರನ್ನು ಹೊಡೆಯುವನು. ಜನರು 'ಈ ಮನುಷ್ಯನು ಹುಚ್ಚನೆಂತಲೂ ತಮಾಷೆಗಾರನೆಂತಲೂ' ತಿಳಿದು ಇವನ ಮೇಲೆ ಕೋಪಮಾಡುತ್ತಿರಲಿಲ್ಲ. ಆತನು ತನ್ನ ಒಂದು ಹುಲ್ಲಿನ ಗುಡಿಸಿಲಿಗೆ ಬಂದು, ಒಂದು ಕಟ್ಟಿಗೆಯ ಮಂಚದ ಮೇಲೆ ಶ್ರೀ ರಾಮ–ಸೀತಾ ಇವರೇ ಮೊದಲಾದ ವಿಗ್ರಹಗಳನ್ನು ಮಲಗಿಸಿ, ತಾನು ಪೇಟೆಗೆ ತೆರಳುವನು. ಅಲ್ಲಿ ಆ ಬ್ರಾಹ್ಮಣನು ರಾಮಭಕ್ತನೆಂದು ತಿಳಿದು ಯಾರೂ ಭಿಕ್ಷಾ ಹಾಕದೆ ಇರುತ್ತಿದ್ದಿಲ್ಲ. ಭಿಕ್ಷವನ್ನು ತೆಗೆದುಕೊಂಡು ಮನೆಗೆ ಬಂದು ಆ ಬ್ರಾಹ್ಮಣನು ತಾನೇ ಪಾಕಮಾಡುವನು. ಮತ್ತು ಯೋಗ್ಯರಾದ ಬ್ರಾಹ್ಮಣರನ್ನು ಜೊತೆಗೆ ಕರೆದುಕೊಂಡು, ಆ ದ್ವಿಜನು ಪರಮಾನಂದದಿಂದ ಭೋಜನ ಮಾಡುತ್ತಿದ್ದನು. ಸಾರಾಂಶ, ಈ ರೀತಿ ಆ ಬ್ರಾಹ್ಮಣನು ಪ್ರತಿದಿವಸವೂ ರಾಮವ್ರತವನ್ನು ತಪ್ಪದೆ ನಡೆಸುತ್ತಿದ್ದನು. ಹೀಗೆ ಒಂಭತ್ತುವರ್ಷಗಳು ಕಳೆದವು. ಒಂದಾನೊಂದು ದಿವಸ ಆ ಬ್ರಾಹ್ಮಣನ ಗ್ರಾಮಕ್ಕೆ ಒಬ್ಬ ಸೇನಾಸಮೇತನಾದ ರಾಜನು ಬಂದನು. ಈ ಬ್ರಾಹ್ಮಣನು ತನ್ನ ಗುಡಿಸಿಲಿನಲ್ಲಿ ಮಲಗಿ ನಿದ್ರೆಮಾಡುತ್ತಿದ್ದನು. ಆಗ ಒಂದು ದೊಡ್ಡ ಮಳೆ ಬಂತು. ಆ ರಾಜನ ಸೇವಕರು ಮಳೆಯ ಹೊಡತವನ್ನು ತಡೆಯಲಾರದೆ, ಮನೆಗಳನ್ನು ಪ್ರವೇಶಿಸಿದರು. ಹತ್ತುಜನ ಸೇವಕರು ಈ ಬ್ರಾಹ್ಮಣನ ಗುಡಿಸಿಲಿನ ಬಳಿಗೆ ಬಂದರು. ಅವರಿಗೆ ಈ ಬ್ರಾಹ್ಮಣನು ಬಾಗಿಲ ಎದುರಿಗೆ ಮಲಗುವಂತೆ ತಿಳಿಯಿತು. ಅವರ ಜೊತೆಯಲ್ಲಿ ಕುದುರೆ ಶಸ್ತ್ರ ಇವುಗಳೆಲ್ಲಾ ಇದ್ದವು. ಅವರು ಆ ಬ್ರಾಹ್ಮಣನನ್ನು ಕೂಗಿ ಎಬ್ಬಿಸಿ, "ಹೇ ಬ್ರಾಹ್ಮಣ, ಈಗ ಬಹಳ ಮಳೆ ಬರುತ್ತಲಿದೆ. ನಾವು ಮಳೆ ನಿಲ್ಲುವವರೆಗೂ ಈ ಕುದುರೆಗಳೊಡನೆ ನಿನ್ನ ಝೋಪಡಿಯಲ್ಲಿ ವಾಸಮಾಡುವೆವು" ಎಂದರು. ಈ ಮಾತುಗಳನ್ನು ಕೇಳಿ ಬ್ರಾಹ್ಮಣನು 'ಈ ಗೃಹದಲ್ಲಿ ರಾಮ, ಸೀತೆ, ಲಕ್ಷ್ಮಣ ಇವರು ಮಲಗಿ ನಿದ್ರೆ ಮಾಡುತ್ತಿರುವರು. ಈಗ ಅವರನ್ನು ನಾನು ಹ್ಯಾಗೆ ಎಬ್ಬಿಸಲಿ? ಸ್ವಲ್ಪ ತಡೆಯಿರಿ. ಅವರು ಎದ್ದಕೂಡಲೆ ನಿಮಗೆ ಈ ಮನೆಯನ್ನು ಬೇಕಾದರೂ ಕೊಡುವೆನು' ಎಂದನು. ಈ ಮಾತುಗಳನ್ನು ಕೇಳಿ ಸೇವಕರು ಆ ಬ್ರಾಹ್ಮಣನನ್ನು ಹೊಡೆದರು. ಆಗ ಬ್ರಾಹ್ಮಣನು, "ಮಹಾಸ್ವಾಮಿ, ಸ್ವಲ್ಪ ನಿಧಾನಿಸಿರಿ, ಇಕೋ ಈಗಲೇ ಒಳಕ್ಕೆ

ಹೋಗಿ ಶ್ರೀ ರಾಮಾದಿಗಳನ್ನು ಎಬ್ಬಿಸಿಕೊಂಡು, ನಾನು ಹೊರಡುವೆನು' ಎಂದು ಹೇಳಿ ಒಳಕ್ಕೆ ಪ್ರವೇಶಮಾಡಿ, ದೇವತಾರ್ಚನೆಯ ಸಾಮಾನುಗಳನ್ನೂ, ದೇವರನ್ನೂ ಸ್ವೀಕರಿಸಿ ಕೈಯಲ್ಲಿ ಒಂದು ಕೋಲನ್ನು ತೆಗೆದುಕೊಂಡು ಹೊರಕ್ಕೆ ಬಂದನು. ಆ ನೀಚರು 'ಇವನು ಹುಚ್ಚನಿರಬಹುದೆಂದು ತಿಳಿದು' ಒಳಕ್ಕೆ ಪ್ರವೇಶಿಸಿದರು. ಆ ಬ್ರಾಹ್ಮಣನು ಅತಿ ಪ್ರಯಾಸದಿಂದ ಹೊರಕ್ಕೆ ಬಂದು ನಿಂತು, ಮಳೆಯ ಹೊಡತವನ್ನು ತಡೆಯಲಾರದೆ, ಮನಸ್ಸಿನಲ್ಲಿ 'ಈ ಮಾರುತಿಯ ಪರಾಕ್ರಮವನ್ನು ಪುರಾಣಗಳಲ್ಲಿ ಬಹಳವಾಗಿ ವರ್ಣಿಸಿರುವರು. ಆದರೆ ಇಂಥಾ ಸಮಯದಲ್ಲಿ ಅದೇನೂ ಉಪಯೋಗಕ್ಕೆ ಬರಲಿಲ್ಲ' ಎಂದು ತಿಳಿದು ಕೈಯಲ್ಲಿರುವ ಸಾಮಾನುಗಳನ್ನು ಕೆಳಗಿರಿಸಿ, ಪೆಟ್ಟಗೆಯಲ್ಲಿರುವ ಆಂಜನೇಯನ ಬಾಲವನ್ನು ಹಿಡಿದು ಮೇಲಕ್ಕೆ ಎಸೆದನು. ಅಷ್ಟರೊಳಗೆ ಆಕಾಶದಲ್ಲಿ ಭಯಂಕರವಾದ ಧ್ವನಿಯುಂಟಾಯಿತು. ಅದನ್ನು ಕೇಳಿ ರಾಜನ ಸೇನಾಜನಗಳು, ಕುದುರೆ, ಆನೆ ಇವೆಲ್ಲ ಮೂರ್ಛೆಹೊಂದಿದವು. ಆ ಗ್ರಾಮದಲ್ಲಿ ಒಬ್ಬ ಪುರುಷನಾದರೂ ಉಳಿಯಲಿಲ್ಲ. ಮಾರುತಿಯ ಹಾಗು ಶ್ರೀರಾಮನ ಕೃಪೆಯಿಂದ ಆ ಬ್ರಾಹ್ಮಣಪುತ್ರನು ಮಾತ್ರ ಬದುಕಿದ್ದನು. ಆ ಗ್ರಾಮದಲ್ಲಿರುವ ಸ್ತ್ರೀಯರೆಲ್ಲರೂ ತಮ್ಮ ಪತಿಗಳು ಮೃತರಾಗಿರುವದನ್ನು ನೋಡಿ ಗಾಬರಿಗೊಂಡರು. ಆ ಬ್ರಾಹ್ಮಣಪುತ್ರನು ಮಾತ್ರ ಬದುಕಿರುವನೆಂದು ಕೇಳಿ, ಅಲ್ಲಿಗೆ ಬಂದರು. ಆ ಸ್ತ್ರೀಯರು ಕೆಸರಿನಲ್ಲಿ ಬಿದ್ದಿರುವ ಮಾರುತಿಯವಿಗ್ರಹವನ್ನೂ, ಅದರ ಹತ್ತರ ಛಳಿಯಿಂದ ನಡುಗುತ್ತ ನಿಂತಿರುವ ಬ್ರಾಹ್ಮಣಪುತ್ರನ್ನೂ ನೋಡಿ ಆಶ್ಚರ್ಯಗೊಂಡರು. ಮತ್ತು ಆ ತರುಣಿಯರು 'ಹೇ ಬ್ರಾಹ್ಮಣೋತ್ತಮನೆ, ಇದೇನು? ಇಷ್ಟು ಛಳಿಗಾಲದಲ್ಲಿ ನಡುಗುತ್ತ ಹೊರಗೆ ನಿಂತಿರುವೆಯಲ್ಲ' ಎಂದು ಕೇಳಿದರು. ಆ ಬ್ರಾಹ್ಮಣನು ರಾತ್ರಿ ನಡೆದ ಸಂಗತಿಯನ್ನೆಲ್ಲ ಹೇಳಿದನು. ಬಳಿಕ ಆ ಸ್ತ್ರೀಯರು ಆ ರಾಮಭಕ್ತನನ್ನು ತಮ್ಮ ರಾಜ್ಯಕ್ಕೆ ರಾಜನಾಗುವಂತೆ ಪ್ರಾರ್ಥಿಸಿದರು. ಶ್ರೀ ರಾಮನ ಅಪ್ಪಣೆಯಂತೆ ಆ ಬ್ರಾಹ್ಮಣನು ರಾಜನಾಗಲು ಒಪ್ಪಿಕೊಂಡನು. ಅನಂತರ ಆ ರಾಮಭಕ್ತನು ಸಮಸ್ತ ಸ್ತ್ರೀಯರಿಗೂ ರಾಜನಾದನು. ಇರಲಿ. ಆ ರಾಜ್ಯದಲ್ಲಿ ಸ್ತ್ರೀಯರೇ ರಾಜ್ಯಕಾರ್ಯವನ್ನು ನಡಿಸುವರಾದ್ದರಿಂದ ಸ್ತ್ರೀರಾಜ್ಯವೆಂದು ಹೆಸರು ಬಂತು. ಆ ಬ್ರಾಹ್ಮಣನಿಗೆ ಮುಂದೆ ವಿಷ್ಣುಲೋಕವೇ ಪ್ರಾಪ್ತವಾಯಿತು. ಆದರಿಂದ ರಾಮೋಪಾಸನೆಯನ್ನು ಅಶಕ್ತನಾದರೂ ಭಕ್ತಿಯಿಂದ ಮಾಡಿದರೆ ಪರಮ ಫಲವನ್ನು ಹೊಂದುವನು.

—೩—

## ಚೈತ್ರಮಾಸ-ಚೈತ್ರಸ್ನಾನಾದಿಗಳ ಮಹಿಮೆ.

ಹೇ ಶಿಷ್ಯನೇ, ಚೈತ್ರಮಾಸದ ಮಹಿಮೆಯನ್ನು ಹೇಳುವೆನು ಕೇಳು. ಚೈತ್ರಮಾಸವು ಸಮಸ್ತ ಪ್ರಾಣಿಗಳಿಗೂ ತಾಯಿಯಂತೆ ಪ್ರೀತಿಕರವಾದದ್ದು. ಈ ತಿಂಗಳಲ್ಲಿ ಧರ್ಮ, ದಾನ, ಜಪ, ಇತ್ಯಾದಿಗಳನ್ನು ಮಾಡಲು, ಶೀಘ್ರವಾಗಿ ಫಲಪ್ರಾಪ್ತಿಯಾಗುವದು. ವಿದ್ಯೆಗಳಲ್ಲಿ ವೇದವಿದ್ಯೆ, ಮಂತ್ರಗಳಲ್ಲಿ ಪ್ರಣವ, ವೃಕ್ಷಗಳಲ್ಲಿ ಕಲ್ಪವೃಕ್ಷ, ಧೇನುಗಳಲ್ಲಿ ಕಾಮಧೇನು, ಸರ್ಪಗಳಲ್ಲಿ ಶೇಷ, ಇವು ಹ್ಯಾಗೆ ಶ್ರೇಷ್ಠವಾದವೋ, ಅದರಂತೆ ವರ್ಷದ ಹನ್ನೆರಡು ತಿಂಗಳುಗಳಲ್ಲಿ ಈ ತಿಂಗಳು ಉತ್ತಮವಾದದ್ದು. ಲಕ್ಷ್ಮೀಸಹಿತನಾದ ವಿಷ್ಣುವು ಈ ತಿಂಗಳಲ್ಲಿ ಉಪಾಸಕರ ಮನೋರಥವನ್ನು ಪೂರ್ಣಮಾಡುವನು. ಅನ್ನದಿಂದ ಪ್ರಾಣಿಯು ಹ್ಯಾಗೆ ತೃಪ್ತನಾಗುವದೋ, ಈ ತಿಂಗಳಲ್ಲಿ ಪ್ರಾತಃಸ್ನಾನ ಮಾಡುವದರಿಂದ ನಾರಾಯಣನು ತೃಪ್ತನಾಗುತ್ತಾನೆ. ಹೆಚ್ಚು ಮಾತುಗಳಿಂದ ಏನು? 'ಚೈತ್ರಮಾಸದಲ್ಲಿ ಪ್ರಾತಃಸ್ನಾನ ಮಾಡುವೆನು' ಎಂದು ಸಂಕಲ್ಪ ಮಾಡಿದರೆ ಮಹತ್ಪುಣ್ಯವು ಒದಗುವದು. ಚೈತ್ರಮಾಸದಲ್ಲಿ ತೀರ್ಥದೇವತೆಯು ವಿಷ್ಣುವಿನ ಅಪ್ಪಣೆಯಿಂದ ತೀರ್ಥಗಳಲ್ಲಿ ಏಳು ಘಳಿಗೆಗಳ ವರೆಗೂ ಇರುವಳು. ಅಷ್ಟರೊಳಗೆ ಸ್ನಾನಮಾಡದೆ ಇರುವ ಜನರಿಗೆ ಆಕೆಯು ಶಾಪಕೊಟ್ಟು ಹೋಗುವಳು. ಕೃತಯುಗದಂಥಾ ಯುಗವಿಲ್ಲ, ಚೈತ್ರಸ್ನಾನದಂಥಾ ಸ್ನಾನವಿಲ್ಲ, ವೇದಕ್ಕೆ ಸಮಾನವಾದ ಜ್ಞಾನವಿಲ್ಲ, ಗಂಗೆಗೆ ಸಮಾನವಾದ ತೀರ್ಥವಿಲ್ಲ, ಜಲದಾನಕ್ಕೆ ಸಮಾನವಾದ ದಾನವಿಲ್ಲ, ಚೈತ್ರಕ್ಕೆ ಸಮಾನವಾದ ಕಾಲವಿಲ್ಲ ಎಂದು ಲೋಕವ್ಯವಹಾರವಿರುವದು. ಈ ತಿಂಗಳಲ್ಲಿ ಯಾವನು ವ್ರತಾಚರಣೆ ಮಾಡದೆ ವೃಥಾಕಾಲ ಕಳೆಯುವನೋ, ಅವನು ಬ್ರಾಹ್ಮಣನಾಗಿದ್ದರೂ ಚಂಡಾಲನಾಗುವನು. ಉಪ್ಪಿಲ್ಲದ ಭಜ್ಜಿಯು ಹ್ಯಾಗೆ ರುಚಿಕರವಲ್ಲವೋ, ಮಂಗಳಸೂತ್ರವಿಲ್ಲದ ಕನ್ಯೆಯು ಹ್ಯಾಗೆ ಶುಭಕರಳಲ್ಲವೋ, ಹಾಗೆ ಚೈತ್ರಸ್ನಾನವಿಲ್ಲದವನು ಏನೂ ಉಪಯೋಗವಿಲ್ಲ. ಅದ್ದರಿಂದ ಚೈತ್ರಮಾಸದಲ್ಲಿ ಸ್ನಾನ-ದಾನಾದಿಗಳನ್ನಾಚರಿಸಬೇಕು. ಅಯೋಧ್ಯಾನಗರಿಯು ಬಹಳ ದುರ್ಲಭವಾಗಿದೆ. ಅಂಥಾ ನಗರಿಯ ದರ್ಶನ ಮಾಡಿದವನೇ ಧನ್ಯನು. ಚೈತ್ರವ್ರತ ಮಾಡುವಾಗ ತೈಲಾಭ್ಯಂಗ, ಹಗಲುನಿದ್ರೆ, ಇತ್ಯಾದಿಗಳನ್ನು ವರ್ಜಿಸಬೇಕು. ಒಂದು ಹೊತ್ತು ಊಟಮಾಡಬೇಕು. ಚೈತ್ರಮಾಸದಲ್ಲಿ ದಾರಿ ನಡೆಯುವ ಜನರಿಗೆ ಧರ್ಮಶಾಲೆಗಳನ್ನು ಕಟ್ಟಿಸೋಣ, ನೀರಿನ ಅನುಕೂಲಮಾಡುವಿಕೆ, ಇವೆಲ್ಲಾ ಉತ್ತಮ

ವಾದ ಕಾರ್ಯಗಳೆಂದು ತಿಳಿಯಬೇಕು. ಕುಟುಂಬಸ್ಥನಾದ ಬ್ರಾಹ್ಮಣನಿಗೆ ಕೊಡ ದಲ್ಲಿ ನೀರು ತುಂಬಿ ದಾನಮಾಡಬೇಕು. ಇತ್ಯಾದಿ ಶಾಸ್ತ್ರೋಕ್ತ ನಿಯಮಗಳನ್ನು ನಡೆಸುತ್ತಾ ಯಾವಾಗಲೂ ಶ್ರೀ ರಾಮನ ಧ್ಯಾನದಲ್ಲಿ ಲೀನರಾಗಿರಬೇಕು. ಶಿಷ್ಯೋತ್ತಮನೆ ಚೈತ್ರಮಾಸದ ಮಹಿಮೆಯನ್ನು ಮತ್ತೂ ಹೇಳುವೆನು ಕೇಳು.

ಈ ಚೈತ್ರಮಾಸದಲ್ಲಿ ಶ್ರೀ ರಾಮನು ಅವತಾರ ಮಾಡಿದ್ದರಿಂದ ಇದು ಪರಮ ಶ್ರೇಷ್ಠವೆನಿಸಿಕೊಂಡಿರುವದು. ಎಲೈ ಶಿಷ್ಯನೆ, 'ಈ ತಿಂಗಳಲ್ಲಿ ಶಾಸ್ತ್ರೋಕ್ತನಿಯ ಮದಿಂದ ಯಾರು ಸ್ನಾನಮಾಡಿದರು' ಎಂಬ ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳು ವೆನು ಕೇಳು. ನಮಗೆ ನೃಸಿಂಹನೆಂಬ ತಂದೆ ಇದ್ದರು. ಅವರು ನನ್ನ ತಾಯಿ ಯಾದ ಲಕ್ಷ್ಮಿಯೊಡನೆ ಅಬ್ಜರಕ್ಷೇತ್ರದಲ್ಲಿ ಅತಿಥಿಗಳಿಗೆ ಅನ್ನದಾನಮಾಡುತ್ತ ವಾಸವಾಗಿದ್ದರು. ನಮ್ಮ ತಾಯಿಗೆ ಬಹು ದಿವಸಗಳಾದರೂ ಮಕ್ಕಳಾಗಲಿಲ್ಲ. ಅನಂತರ ಅವರು ಮಕ್ಕಳ ಆಶೆಯನ್ನು ಬಿಟ್ಟು 'ತಮ್ಮ ಪಾತಕಗಳಾದರೂ ಪರಿ ಹಾರವಾಗಲಿ' ಎಂದು ಯೋಚಿಸಿ ನಿವಾಸವೆಂಬ ನಗರಕ್ಕೆ ಬಂದರು. ಮತ್ತು ಅಲ್ಲಿರುವ ಮೋಹಿನೀ ಎಂಬ ಇಷ್ಟದೇವತೆಯನ್ನು ಸೇವಿಸುತ್ತಿದ್ದರು. ಕೆಲವು ದಿವಸಗಳು ಕಳೆದ ಮೇಲೆ ದೇವಿಯು ಪ್ರಸನ್ನಳಾದಳು. ಆ ಮೋಹಿನೀದೇವಿಯು ನಮ್ಮ ತಂದೆಯನ್ನು ಕುರಿತು 'ಹೇ ಬ್ರಾಹ್ಮಣೋತ್ತಮನೆ, ನೀನು ಅಯೋಧ್ಯೆಗೆ ಹೋಗು. ಮೀನರಾಶಿಗೆ ಸೂರ್ಯನು ಬಂದಾಗ ಸರಯೂನದಿಯಲ್ಲಿ ಸ್ನಾನ ಮಾಡು. ಅದರಿಂದ ನಿನ್ನ ಪಾತಕಗಳೆಲ್ಲ ಪರಿಹಾರವಾಗುವವು. ಅನಂತರ ನಿನಗೆ ಒಂದು ಪುತ್ರಸಂತಾನವಾಗುವದು' ಎಂದು ಹೇಳಿ ಅಂತರ್ಹಿತಳಾದಳು. ಈವಚನ ಗಳನ್ನು ಕೇಳಿ ನಮ್ಮ ತಂದೆಯು ಅತಿಪ್ರಯಾಸದಿಂದ ನಮ್ಮ ತಾಯಿಯೊಡನೆ ಅಯೋಧ್ಯೆಗೆ ತೆರಳಿದನು. ಅಲ್ಲಿ ದೇವಿಯ ಆಜ್ಞೆಯಂತೆ ನಮ್ಮ ತಂದೆಯು ಯಥಾ ವಿಧಿ ರಾಮಪೂಜೆಯನ್ನು ನಡೆಸಿದನು. ಈತನ ಭಕ್ತಿಗೆ ಮೆಚ್ಚಿ ಶ್ರೀರಾಮನು ಪ್ರತ್ಯ ಕ್ಷನಾಗಿ 'ಎಲೈ ಬ್ರಾಹ್ಮಣನೆ, ನೀನು ಇಲ್ಲಿರಬೇಡ. ಇಲ್ಲಿಗೆ ಸಮೀಪದಲ್ಲಿರುವ ರಾಮತೀರ್ಥಕ್ಕೆ ಹೋಗು. ಅಲ್ಲಿ ನೀನು ಸ್ನಾನಮಾಡಿ ಪರಮಭಕ್ತಿಯಿಂದ ನನ್ನ ನ್ನು ಪೂಜಿಸು. ಅದರಿಂದ ನಿನ್ನ ಇಷ್ಟಾರ್ಥವು ಸಿದ್ಧವಾಗುವದು' ಎಂದು ಹೇಳಿ ದನು. ಆ ಮಾತುಗಳನ್ನು ಕೇಳಿ ನಮ್ಮ ತಂದೆಯು ಪತ್ನಿಯೊಡನೆ ರಾಮತೀರ್ಥಕ್ಕೆ ತೆರಳಿ, ಅಲ್ಲಿ ಯಥಾವಿಧಿಯಿಂದ ಸ್ನಾನಮಾಡಿ, ಒಂದು ತಿಂಗಳವರೆಗೆ ಶ್ರೀ ರಾಮ ಪೂಜೆಯನ್ನು ಮಾಡುತ್ತಿದ್ದರು. ಇರಲಿ—ಅನಂತರ ಅವರು ತಮ್ಮ ಗ್ರಾಮದ ಕಡೆಗೆ ತೆರಳಿದರು. ದಾರಿಯಲ್ಲಿ ಮೂರು ಪಿಶಾಚಿಗಳನ್ನು ಉದ್ಧಾರಮಾಡಿದರು.

ಕೆಲವು ದಿವಸಗಳಮೇಲೆ ಅವರಿಗೆ ಶ್ರೀ ರಾಮನ ಕೃಪೆಯಿಂದ ನಾನು ಮಗನಾಗಿ ಜನಿಸಿದೆನು. ಎಲೈ ಶಿಷ್ಯನೆ, ಆ ಪಿಶಾಚಿಗಳ ವೃತ್ತಾಂತವನ್ನೂ ಹೇಳುವೆನು ಕೇಳು. ಒಂದಾನೊಂದು ದಿವಸ ರಂಭೆಯೆಂಬ ಅಪ್ಸರ ಸ್ತ್ರೀಯು ಶರಯೂ ನದಿಯಲ್ಲಿ ಸ್ನಾನ ಮಾಡಿ, ಸುವರ್ಣದ ಕಲಶದಲ್ಲಿ ನೀರು ತುಂಬಿಕೊಂಡು ರಾಮೇಶ್ವರದ ಕಡೆಗೆ ಹೋಗುತ್ತಿದ್ದಳು. ದಾರಿಯಲ್ಲಿ ಆಕೆಯ ವಸ್ತ್ರದ ಸೆರಗು ಪಿಶಾಚಿಗಳಿಗೆ ತಗಲಿತು. ಆ ಕ್ಷಣದಲ್ಲಿಯೇ ಆ ಮೂರು ಪಿಶಾಚಿಗಳಿಗೂ ಪೂರ್ವಜನ್ಮದ ಸ್ಮರಣೆ ಬಂತು. ಅವು ಕೃತಜ್ಞತೆಯಿಂದ ಆ ತರುಣಿಯನ್ನು ಸ್ತುತಿಸಿದವು. ಅವುಗಳನ್ನು ನೋಡಿ ಆ ಯುವತಿಯು 'ನೀವು ಯಾರು' ಎಂದು ಪ್ರಶ್ನೆಮಾಡಿದಳು. ಆಗ ಎರಡು ಪಿಶಾಚಿಗಳು 'ತಾಯೇ, ಪೂರ್ವಜನ್ಮದಲ್ಲಿ ನಾವಿಬ್ಬರೂ ಹರನೆಂಬ ಬ್ರಾಹ್ಮಣನ ಪುತ್ರರು. ನಾವು ನಾರಾಯಣನೆಂಬ ಗುರುವಿನ ಬಳಿಯಲ್ಲಿ ಅಧ್ಯಯನ ಮಾಡುತ್ತಿದ್ದೆವು. ಗುರುಗಳ ಶುಶ್ರೂಷೆಮಾಡುತ್ತ ಬಹು ಕಾಲಗಳ ವರೆಗೆ ನಾವು ಅವರಲ್ಲಿ ವಾಸವಾಗಿದ್ದೆವು. ಅಷ್ಟರಲ್ಲಿ ಗುರುಗಳ ಸುಂದರಿಯಾದ ಮಗಳನ್ನು ನೋಡಿ ನಾವಿಬ್ಬರೂ ಮೋಹಿತರಾದೆವು. ಮತ್ತು ಆಕೆಯನ್ನು ವಶಮಾಡಿಕೊಂಡು ಉಪಭೋಗ ಮಾಡಿದೆವು. ಈ ಸಂಗತಿಯನ್ನು ಗುರುಗಳು ತಿಳಿದು ನಮಗೆ ಮೂವರಿಗೂ 'ನೀವು ಪಿಶಾಚಿಗಳಾಗಿರಿ' ಎಂದು ಶಾಪಕೊಟ್ಟರು. ಅನಂತರ ನಾವು ಗುರುಗಳನ್ನು ಬಹಳ ಪ್ರಾರ್ಥನೆ ಮಾಡಿದೆವು. ಆಗ ಅವರು ನಮ್ಮ ಮೇಲೆ ಕೃಪೆಮಾಡಿ 'ಎಲೈ ಪಿಶಾಚಿಗಳೇ, ಚೈತ್ರಮಾಸದಲ್ಲಿ ರಾಮತೀರ್ಥದಲ್ಲಿ ಸ್ನಾನ ಮಾಡಿದ ಒಬ್ಬ ಬ್ರಾಹ್ಮಣನು ಇಲ್ಲಿಗೆ ಬರುವನು. ಆತನು ತನ ಚೈತ್ರಸ್ನಾನದ ಫಲವನ್ನು ನಿಮಗೆ ಕೊಟ್ಟು ಉದ್ಧರಿಸುವನು' ಎಂದು ಹೇಳಿದರು.

ಈ ಮಾತುಗಳನ್ನು ಕೇಳಿ ರಂಭೆಯು ಆ ಪಿಶಾಚಿಗಳನ್ನು 'ಹೇ ಪಿಶಾಚಿಗಳೆ, ಇನ್ನು ಕೆಲವು ದಿವಸಗಳಲ್ಲಿ ಆ ಬ್ರಾಹ್ಮಣನು ಇಲ್ಲಿಗೆ ಬಂದು ನಿಮ್ಮನ್ನು ಉದ್ಧರಿಸುವನು' ಎಂದು ಸಮಾಧಾನಗೊಳಿಸಿ ರಾಮೇಶ್ವರಕ್ಕೆ ಪ್ರಯಾಣ ಮಾಡಿದಳು. ಕೆಲವು ದಿವಸಗಳಮೇಲೆ ನಮ್ಮ ತಂದೆಯು ಚೈತ್ರಸ್ನಾನವನ್ನು ಮುಗಿಸಿಕೊಂಡು ಅದೇ ಮಾರ್ಗದಲ್ಲಿ ಅಬ್ಧಿರಕ್ಷೇತ್ರಕ್ಕೆ ಪ್ರಯಾಣಮಾಡುತ್ತಿರಲು, ಆ ಪಿಶಾಚಿಗಳು ತಮ್ಮ ಪೂರ್ವವೃತ್ತಾಂತವನ್ನು ತಿಳುಹಿ ದೂರದಿಂದ 'ಮಹಾಸ್ವಾಮಿ, ನಮ್ಮನ್ನು ಈ ಸಂಕಟದಿಂದ ತಪ್ಪಿಸು' ಎಂದು ಕೂಗಿಕೊಂಡವು. ಈ ಮಾತುಗಳನ್ನು ಕೇಳಿ ನಮ್ಮ ತಂದೆಯು 'ಎಲೈ ಪಿಶಾಚಿಗಳೇ, ನೀವು ಹೆದರಬೇಡಿರಿ. ಪೂರ್ವದಲ್ಲಿ ಶಂಭುಶೆಂಬ ಬ್ರಾಹ್ಮಣನು ರಾಕ್ಷಸನನ್ನು ಬಿಡಿಸಿದಂತೆ ನಿಮ್ಮನ್ನು ನಾನು ಉದ್ಧರಿಸುವೆನು' ಎಂದು

ಘಾತನಾದಿದನು. ಈ ವಚನಗಳನ್ನು ಕೇಳಿ ಪಿಶಾಚಿಗಳು 'ಬ್ರಾಹ್ಮಣನೇ, ರಾಕ್ಷಸನ ವೃತ್ತಾಂತವೇನು?' ಎಂದು ಪ್ರಶ್ನೆಮಾಡಿದವು. ಆಗ ನಮ್ಮ ತಂದೆಯು "ಪೂರ್ವದಲ್ಲಿ ಕಾಂಚಿನಗರದಲ್ಲಿ ಶಂಭುವೆಂಬ ಬ್ರಾಹ್ಮಣನು ಪತ್ನೀಸಮೇತ ವಾಸಮಾಡುತ್ತಿದ್ದನು. ಅರಸನು ಏಕಾಂಬರೇಶ್ವರನ ಬಳಿಯಲ್ಲಿ ಕುಳಿತು ಚೈತ್ರಸ್ನಾನದ ಮಹಿಮೆಯನ್ನು ಪುರಾಣಿಕರ ಮುಖದಿಂದ ಕೇಳಿದನು. ಪ್ರತಿವರ್ಷ ಚೈತ್ರಮಾಸವು ಪ್ರಾಪ್ತವಾಗಲು ಆ ಬ್ರಾಹ್ಮಣನು ಪತ್ನೀಸಮೇತನಾಗಿ ಅಯೋಧ್ಯೆಗೆ ಸ್ನಾನಕ್ಕಾಗಿ ತೆರಳಿದನು. ಗಂಗಾನದಿಯನ್ನು ದಾಟಿ ಆತನು ಮುಂದೆಪ್ರಯಾಣ ಮಾಡುತ್ತಿರಲು, ಕರ್ಕಶನೆಂಬ ಒಬ್ಬ ಬೇಟೆಗಾರನು ದೃಷ್ಟಿಗೆ ಬಿದ್ದನು. ಆ ಬೇಟೆಗಾರನು ಬ್ರಾಹ್ಮಣನನ್ನು ಬಹಳವಾಗಿ ಹೆದರಿಸಿ ಅವನ ಮೈಮೇಲಿನ ಬಟ್ಟೆಗಳ ಹೊರತಾಗಿ ಮಿಕ್ಕ ಎಲ್ಲ ಪದಾರ್ಥಗಳನ್ನೂ ಲೂಟಿಮಾಡಿದನು. ಮತ್ತು ಆತನ ಕೈಯಲ್ಲಿಯ ವಸ್ತ್ರದ ಗಂಟನ್ನು ಬಿಚ್ಚಿನೋಡಿದನು. ಆಗ ಶಂಭುಬ್ರಾಹ್ಮಣನು 'ಎಲೈ ವ್ಯಾಧನೆ, ಇದರಲ್ಲಿರುವ ಹಿಟ್ಟನ್ನು ಮಾತ್ರ ನನಗೆ ಕೊಡು; ಮಿಕ್ಕದ್ದನ್ನೇನಾದರೂ ಮಾಡಿಕೋ, ಎಂದು ಪ್ರಾರ್ಥಿಸಿದನು. ಆ ವ್ಯಾಧನು ಅದನ್ನು ಬಿಚ್ಚಿನೋಡುವಲ್ಲಿ ಯಾವ ಸಾರವಾದ ಪದಾರ್ಥವೂ ಕಾಣಿಸಲಿಲ್ಲ. ಹತ್ತು ಒಣಗಿದಬಾಳೆಹಣ್ಣುಗಳು ಮಾತ್ರ ಕಾಣಿಸಿದವು. ಆ ವ್ಯಾಧನು ಇವುಗಳನ್ನು ತೆಗೆದುಕೋ, ಎಂದು ಹೇಳಿ ಆ ಬ್ರಾಹ್ಮಣನಕಡೆಗೆ ಹಣ್ಣುಗಳನ್ನು ಎಸೆದನು. ಆ ಬ್ರಾಹ್ಮಣನು ಪತ್ನಿಯೊಡನೆ ಆ ಹಣ್ಣುಗಳನ್ನು ಆಗಲೇ ಭಕ್ಷಣೆ ಮಾಡಿದನು. ಆ ಬಾಳೆಯ ಹಣ್ಣುಗಳನ್ನು ದಾನಮಾಡಿದ ಪುಣ್ಯದಿಂದ ವ್ಯಾಧನಿಗೆ ಸಮಾಧಾನಗುಣವುಂಟಾಯಿತು. ಅವನ ಕ್ರೂರತನವು ಹೆಸರಿಲ್ಲದಂತೆ ಮಾಯವಾಯಿತು. ಅನಂತರ ಆ ವ್ಯಾಧನು 'ಹೇಬ್ರಾಹ್ಮಣಾ, ನೀನು ಯಾರು? ಎಲ್ಲಿಂದ ಬಂದೆ?' ಇತ್ಯಾದಿ ಪ್ರಶ್ನೆಮಾಡಿದನು. ಆಗ ಶಂಭುವು 'ಹೇ ವ್ಯಾಧನೆ, ನಾನು ಕಾಂಚೀನಗರದಲ್ಲಿ ವಾಸಮಾಡುತ್ತೇನೆ. ಈಗ ಅಯೋಧ್ಯೆಗೆ ಚೈತ್ರಸ್ನಾನಕ್ಕಾಗಿ ಪ್ರಯಾಣ ಮಾಡುತ್ತಿರುವೆನು' ಎಂದು ಹೇಳಿದನು. ಆ ವ್ಯಾಧನು 'ಸ್ವಾಮಿ, ಚೈತ್ರಸ್ನಾನದಿಂದ ಏನು ಫಲವಾಗುವದು?' ಎಂದು ಕೇಳಿದನು. ಆಗ ಶಂಭುವು 'ಅಪ್ಪಾ ಚೈತ್ರಮಾಸದಲ್ಲಿ ಸ್ನಾನ, ರಾಮವ್ರತ ಇತ್ಯಾದಿಗಳಿಂದ ಈ ಲೋಕದಲ್ಲಿ ಸುಖವೂ, ಅನಂತ ಮೋಕ್ಷವೂ ಪ್ರಾಪ್ತವಾಗುವವು' ಎಂದನು. ಆ ಕರ್ಕಶನು 'ಬ್ರಾಹ್ಮಣಶ್ರೇಷ್ಠರೇ, ಮೋಕ್ಷವೆಂದರೇನು?' ಎಂದು ಪ್ರಶ್ನೆಮಾಡಿದನು. ಇಲ್ಲಿನ ಈ ವಚನಗಳು ಕಿವಿಗೆ ಬೀಳುವದರೊಳಗೆ ಶಂಭುವು ಪತ್ನಿಯನ್ನು ಕುರಿತು 'ಹೇ ಸುಂದರಿ, ಚೈತ್ರಮಾಸದಲ್ಲಿ ಬಾಳೆಯ ಹಣ್ಣುಗಳನ್ನು ದಾನಮಾಡಿದ್ದರಿಂದಲೇ

ಕ್ರೂರನಾದ ಇವನಿಗೆ ಇಷ್ಟು ಸದ್ಬುದ್ಧಿಯುಂಟಾಗಿರುವದು. ಇಲ್ಲದಿದ್ದರೆ ಕ್ರೂರನಾದ ವ್ಯಾಧನೆಲ್ಲಿ, ಮೋಕ್ಷವೆಲ್ಲಿ' ಎಂದು ಮಾತನಾಡಿದನು. ಇರಲಿ. ಸಾರಾಂಶ ಚೈತ್ರಮಾಸದಲ್ಲಿ ದಾನವು ಪ್ರಶಸ್ತವಾದದ್ದು. ಶಂಭುವು—ಎಲೈ ಕರ್ಕಶನೇ ಕೇಳು, ಮೋಕ್ಷವೆಂದರೆ ಯಾವ ಸ್ಥಳಕ್ಕೆ ಹೋದಮೇಲೆ ಹಿಂತಿರುಗಿ ಬರುವದು ಇಲ್ಲವೋ ಅದು' ಎಂದು ಹೇಳಿದನು. ಆಗ ಆ ವ್ಯಾಧನು 'ಸ್ವಾಮಿ, ಆ ಮೋಕ್ಷವು ನನಗೆ ಹ್ಯಾಗೆ ಪ್ರಾಪ್ತವಾದೀತು' ಎಂದನು.

ಈ ಮಾತುಗಳನ್ನು ಕೇಳಿ ಶಂಭುವು 'ಎಲೈ ಭಿಲ್ಲನೇ, ನೀನು ಪುತ್ರ, ಮಿತ್ರ, ಕಳತ್ರ, ಇತ್ಯಾದಿ ವಿಷಯಗಳಲ್ಲಿ ಮಮತೆಯನ್ನು ಬಿಟ್ಟು ಯಾವಾಗಲೂ ಶ್ರೀರಾಮನನ್ನು ಸ್ಮರಿಸುತ್ತಿರಬೇಕು. ಅನೇಕ ಪುಣ್ಯಕರ್ಮಗಳನ್ನು ಮಾಡುತ್ತಿರಬೇಕು. ಹೀಗಿರಲು ನಿನ್ನ ಮನಸ್ಸು ಶ್ರೀ ರಾಮನ ಪಾದಾರವಿಂದಗಳಲ್ಲಿ ಅಡಗಿತೆಂದರೆ ನೀನು ಮುಕ್ತನಾಗುವೆ' ಎಂದು ಹೇಳಿದನು. ಆ ಬ್ರಾಹ್ಮಣನ ಮಾತುಗಳನ್ನು ಕೇಳಿ ಕೇಳುತ್ತ, ವ್ಯಾಧನು ತನ್ನ ಕೈಯಲ್ಲಿರುವ ಧನುರ್ಬಾಣಗಳನ್ನು ಕೆಳಗೆಬಿಸುಟ 'ನನ್ನನ್ನು ಸಂರಕ್ಷಿಸು, ನನ್ನನ್ನು ಸಂರಕ್ಷಿಸು' ಎಂದು ಹೇಳುತ್ತ ಶಂಭುವಿನ ಪಾದಗಳನ್ನು ಗಟ್ಟಿಯಾಗಿ ಹಿಡಿದನು. ಇಷ್ಟರಲ್ಲಿ ಒಬ್ಬ ಭಯಂಕರನಾದ ರಾಕ್ಷಸನು, ಗಟ್ಟಿಯಾಗಿ ಕೂಗುತ್ತಾ, ಓಡುತ್ತಾ ಬರುವನೆಂದು ತಿಳಿಯಿತು. ಆ ರಾಕ್ಷಸನನ್ನು ನೋಡಿದ ಕೂಡಲೆ ಎಲ್ಲರೂ ಓಡಲಾರಂಭಿಸಿದರು. ಅಷ್ಟರಲ್ಲಿ ಆ ರಾಕ್ಷಸನು ಇವರ ಸಮೀಪಕ್ಕೆ ಬಂದನು. ಇದನ್ನು ನೋಡಿ ಶಂಭುವು ತನ್ನ ಕೈಯಲ್ಲಿರುವ ಕಮಂಡಲುವಿನಲ್ಲಿರುವ ನೀರನ್ನು ಕೈಯಲ್ಲಿ ತೆಗೆದುಕೊಂಡು ರಾಮನಾಮಸ್ಮರಣೆ ಮಾಡುತ್ತ ಆ ರಾಕ್ಷಸನಮೇಲೆ ಚೆಲ್ಲಿದನು. ಆ ಉದಕವು ರಾಕ್ಷಸನ ಮೈಮೇಲೆ ಬಿದ್ದಕೂಡಲೆ ಅವನಿಗೆ ಪೂರ್ವಜನ್ಮದ ಸ್ಮರಣವಾಯಿತು. ಕೂಡಲೆ ಆ ರಾಕ್ಷಸನು ದೂರ ನಿಂತು 'ಸ್ವಾಮಿ, ನನ್ನನ್ನು ಸಂರಕ್ಷಿಸಿರಿ' ಎಂದು ಪ್ರಾರ್ಥಿಸಿದನು. ಆಗ ಶಂಭುವು 'ಎಲೈ ರಾಕ್ಷಸನೆ, ನೀನೇಕೆ ಇಂಥ ಘೋರರೂಪವನ್ನು ಧರಿಸಿದೆ' ಎಂದು ಕೇಳಿದನು. ಆಗ ಆ ರಾಕ್ಷಸನು 'ನಾನು ಪೂರ್ವಜನ್ಮದಲ್ಲಿ ಜನಸ್ಥಾನವಾಸಿಯಾದ ಒಬ್ಬ ಬ್ರಾಹ್ಮಣನು. ಆದರೂ ನಾನು ಬ್ರಹ್ಮಕರ್ಮಗಳನ್ನು ಒಂದು ದಿವಸವೂ ಮಾಡಲಿಲ್ಲ. ಅದ್ದರಿಂದ ನಾನು ತೇಜೋಹೀನನಾದೆನು. ದುರ್ದಾನ-ದುಷ್ಪ್ರತಿಗ್ರಹಗಳನ್ನು ನಾನು ಯಾವಾಗಲೂ ಮಾಡುತ್ತಿದ್ದೆನು. ನಾನು ಬಹಳ ವ್ಯಸನಿಯಾಗಿದ್ದೆನು. ಒಂದು ದಿವಸ ನನ್ನ ಹೆಂಡತಿಯು ನನ್ನನ್ನು ಕೇಳದೆ, ರಾಮ-ತೀರ್ಥಕ್ಕೆ ಸ್ನಾನಮಾಡಲು ತೆರಳಿದಳು. ಆಕೆಯನ್ನು ದಾರಿಯಲ್ಲಿ ನೋಡಿ, ನಾನು 'ಎಲೆ ರಂಡೆ, ನನ್ನ

ಕೇಳದೆ ನೀನು ಎಲ್ಲಿಗೆ ಹೋಗುತ್ತಿರುವೆ' ಎಂದು ಗದ್ದರಿಸಿ ಕೇಳಿದೆನು. ಆಗಲಾ ತರುಣಿಯು ಹೆದರುತ್ತ 'ಸ್ವಾಮಿ, 'ರಾಮತೀರ್ಥಕ್ಕೆ' ಎಂದಳು. ಅದು ನನಗೆ ಸಹನಕ್ಕೆ ಬರಲಿಲ್ಲ. ಕೂಡಲೆ ಆ ನನ್ನ ಹೆಂಡತಿಯನ್ನು ಹೊಡೆದು ಮಧ್ಯಮಾರ್ಗದಿಂದ ಮನೆಗೆ ಕರೆತಂದೆನು. ಕೆಲವು ಕಾಲದಮೇಲೆ ನನಗೆ ಮರಣವು ಪ್ರಾಪ್ತವಾಯಿತು. ಆಗ ನನ್ನನ್ನು ಯಮದೂತರು ಚಿತ್ರಗುಪ್ತರ ಕಡೆಗೆ ಕರೆದುಕೊಂಡು ಹೋದರು. ಚಿತ್ರಗುಪ್ತರು ನನ್ನನ್ನು ನೋಡಿದೊಡನೆ ಬಹಳವಾಗಿ ನಿಂದಿಸಿ, 'ಯಮರಾಜ, ಇವನು ಮಹಾ ಪಾಪಿ, ರಾಮತೀರ್ಥಕ್ಕೆ ಸ್ನಾನಮಾಡಬೇಕೆಂದು ಹೊರಟ ಹೆಂಡತಿಯನ್ನು ಹೊಡೆದು, ಸ್ನಾನಕ್ಕೆ ಪ್ರತಿಬಂಧಕಮಾಡಿರುವನು. ಆದ್ದರಿಂದ ಇವನು ಮೊದಲು ರಾಕ್ಷಸಜನ್ಮವನ್ನು ಅನುಭವಿಸಲಿ. ಅನಂತರ ನರಕಯಾತನೆಗೆ ಗುರಿಮಾಡೋಣ' ಎಂದರು. ಧರ್ಮರಾಜನೂ ಅವರ ಮಾತಿಗೆ ಒಪ್ಪಿಕೊಂಡು, ನನ್ನನ್ನು ರಾಕ್ಷಸಯೋನಿಗೆ ನೂಕಿದನು. ಈಗ ಸಾವಿರಾರು ವರ್ಷಗಳಿಂದ ಈ ಕ್ರೂರಜನ್ಮವನ್ನನುಭವಿಸುತ್ತಿರುವೆನು. ಹೇ ಪ್ರಭೋ, ಯಾವ ನನ್ನ ಪೂರ್ವಜನ್ಮದ ಸುಕೃತದಿಂದಲೋ ಏನೋ ನಿನ್ನ ದರ್ಶನವಾಯಿತು. ಹೇ ದಯಾಳೋ, ಈ ಪಾಪಿಯಾದ ನನ್ನನ್ನು ಉದ್ಧಾರಮಾಡು" ಎಂದು ಪ್ರಾರ್ಥಿಸಿದನು.

ಈ ಮಾತುಗಳನ್ನು ಕೇಳಿ ಬ್ರಾಹ್ಮಣನು ಸ್ವಲ್ಪ ವಿಚಾರಮಾಡಿ "ನೀನು ಪೂರ್ವಜನ್ಮದಲ್ಲಿ ಚೈತ್ರಶುದ್ಧ ಏಕಾದಶೀ ದಿವಸ ಒಂದು ಶ್ರಾದ್ಧಭೋಜನಕ್ಕೆ ಹೋಗಿದ್ದಿ. ಅಲ್ಲಿ ನಿನಗೆ ಕೊಟ್ಟಿದ್ದ ತಾಂಬೂಲ-ದಕ್ಷಿಣೆ ಇವುಗಳನ್ನು ಟೊಂಕದಲ್ಲಿಟ್ಟುಕೊಂಡು ನೀನು ಮನೆಗೆ ಬಂದಿ. ಮರುದಿವಸ ಸ್ನಾನ ಮಾಡಲು ನದಿಗೆ ಹೋದಾಗ ಆ ತಾಂಬೂಲ-ದಕ್ಷಿಣೆಗಳು ನಿನ್ನ ವಸ್ತ್ರಗಳಿಂದ ಜಾರಿ ನದೀತೀರದಲ್ಲಿ ಬಿದ್ದವು. ಅಲ್ಲಿಗೆ ಸ್ನಾನಕ್ಕಾಗಿ ಬಂದಿದ್ದ ಒಬ್ಬ ಪಂಡಿತನಿಗೆ ಅವು ಸಿಕ್ಕವು. ಈ ಪುಣ್ಯದಿಂದಲೇ ನಿನಗೆ ಸತ್ಸಮಾಗಮವಾಗಿರುವದು. ಸಾರಾಂಶ, ತಾಂಬೂಲದಾನವು ಎಷ್ಟು ಫಲಪ್ರದವಾಗಿದೆ, ನೋಡು" ಎಂದು ಆ ರಾಕ್ಷಸನಿಗೆ ಚೈತ್ರಮಾಹಾತ್ಮ್ಯೆಯನ್ನು ತಿಳುಹಿದನು. ಅನಂತರ ಆ ಬ್ರಾಹ್ಮಣನು 'ಕರ್ಕಶನೇ, ನೀನು ನಮ್ಮ ಜೊತೆಗೆ ನಡೆ. ಈ ರಾಕ್ಷಸನು ನಾವು ಹಿಂತಿರಿಗಿ ಬರುವ ವರೆಗೂ ಇಲ್ಲೇ ಇರಲಿ. ಇವನಿಗೆ ಅಯೋಧ್ಯೆಯ ಪ್ರವೇಶಮಾಡಲು ಯೋಗ್ಯತೆ ಇಲ್ಲ' ಎಂದು ಹೇಳಿ, "ಹೇ ರಾಕ್ಷಸ, ನಾನು ಅಯೋಧ್ಯೆಯಿಂದ ಬರುವವರೆಗೂ ಇಲ್ಲೇ ಇರು. ಅಲ್ಲಿಂದ ಬರುವಾಗ ನಾನು ನಿನ್ನನ್ನು ಉದ್ಧಾರಮಾಡುವೆನು. ಇನ್ನೊಂದು ತಿಂಗಳು ಮಾತ್ರ ಈ ದುಃಖವನ್ನು ಸಹಿಸು. ನಾನು ಈ ಮಾತಿಗೆ ತಪ್ಪಿದರೆ, ಬ್ರಹ್ಮಹತ್ಯದ ಪಾತಕವೂ, ಗೋ-

ಬ್ರಾಹ್ಮಣ ನಿಂದೆಯ ದೋಷವೂ ನನಗೆ ಬರಲಿ" ಎಂದು ಶಪಥಮಾಡಿ ತನ್ನ ಹೆಂಡತಿ ಹಾಗೂ ಭಿಲ್ಲ ಇವರೊಡನೆ ಮುಂದಕ್ಕೆ ತೆರಳಿದನು. ಚೈತ್ರಮಹಿಮೆಯನ್ನು ಕೇಳಿ ದೊಡನೆ ವನಲಕ್ಷ್ಮಿಯು ಕುಲುಕುಲು ನಗುವಳೋ ಎಂಬಂತೆ ಪ್ರಕಾಶಿಸಿದಳು. ಈ ಮಹಿಮೆಗಳನ್ನೆಲ್ಲಾ ಕೇಳಿ ಕರ್ಕಶನು ಬಹಳ ಮೃದುವಾದನು. ಅಷ್ಟರಲ್ಲಿ ಎಲ್ಲಿಂದಲೋ ಕೂಗುವ ಶಬ್ದ ಕೇಳಿತು. ಅನಂತರ ಒಂದು ಆನೆಯನ್ನು ಸಿಂಹವು ಓಡಿಸಿಕೊಂಡು ಬರುವಂತೆ ಕಂಡಿತು. ಇದನ್ನು ನೋಡಿ ಶಂಭುವು 'ಕರ್ಕಶ' ನೋಡಿದೆಯಾ, ಚೈತ್ರಸ್ನಾನಕ್ಕೆ ಎಷ್ಟು ವಿಘ್ನಗಳು ಬರುತ್ತಿರುವವು. ಕಾಶೀ ಯಾತ್ರೆ, ವಿವಾಹ, ಗೀತಾಪಾಠ, ಗಯಾ, ರಾಮಸ್ಮರಣ, ಇತ್ಯಾದಿ ಶುಭಕಾರ್ಯ ಗಳಿಗೆ ವಿಘ್ನಗಳು ಬಹಳ ಬರುವವು ಎಂಬ ಮಾತು ಸತ್ಯವಾಗಿರುವದು' ಎಂದು ಮಾತನಾಡುತ್ತಿರಲು, ಆ ಕ್ರೂರ ಪ್ರಾಣಿಗಳೆರಡೂ ಶಂಭುವಿನ ಮುಂದೆ ಸುಮ್ಮನೆ ನಿಂತವು. ರಾಮ, ಚೈತ್ರ ಎಂಬ ಈ ಎರಡು ಶಬ್ದಗಳನ್ನು ಕೇಳಿದ ಕೂಡಲೆ ಆ ಪ್ರಾಣಿಗಳಿಗೆ ಪೂರ್ವಜನ್ಮದ ಸ್ಮರಣೆಯಾಯಿತು. ಮತ್ತು ಅವು 'ನಮ್ಮನ್ನು ರಕ್ಷಿಸು' ಎಂದು ಪ್ರಾರ್ಥಿಸಿದವು. ಅವುಗಳಲ್ಲಿ ಸಿಂಹವು "ಸ್ವಾಮಿ, ನಾನು ರಾಮೇಶ್ವರ ಕ್ಷೇತ್ರದಲ್ಲಿ ಬ್ರಾಹ್ಮಣನಾಗಿದ್ದೆನು. ಆಗ ನಾನು ಎಲ್ಲಾ ಧರ್ಮಗಳನ್ನು ನಿಂದಿಸುತ್ತಿದ್ದೆನು. ಪಾಖಂಡಿಯಾಗಿದ್ದೆನು. ಒಂದು ದಿವಸ ನಾನು ಚೈತ್ರಸ್ನಾನದ ಮಾಹಾತ್ಮೆಯನ್ನು ಪುರಾಣಿಕರ ಮುಖದಿಂದ ಕೇಳಿ ಅವರನ್ನು ನಿಂದಿಸಿದೆನು. ಇದನ್ನು ಒಬ್ಬ ತಪಸ್ವಿಯು ಕೇಳಿ 'ನೀನು ಘೋರಾರಣ್ಯದಲ್ಲಿ ಸಿಂಹವಾಗಿರು' ಎಂದು ಶಪಿಸಿದನು. ಅನಂತರ ನಾನು ಆ ಮುನಿಯನ್ನು ಬಹಳ ವಿಧವಾಗಿ ಪ್ರಾರ್ಥಿಸಲು, ಆತನು 'ನೀನು ಯಾವ ದಿವಸ 'ಚೈತ್ರ, ರಾಮ' ಎಂಬ ಶಬ್ದಗಳನ್ನು ಕೇಳುವೆಯೋ ಆ ದಿವಸವೇ ಮುಕ್ತನಾಗುವೆ' ಎಂದು ಹೇಳಿದನು" ಎಂದು ಹೇಳಿತು. ಬಳಿಕ ಆನೆಯು 'ಸ್ವಾಮಿ, ನಾನು ರಾಮನಾಥಪುರದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದೆನು. ಸ್ವಕರ್ಮಗಳನ್ನು ಬಿಟ್ಟು ನಾನು ದುರಾಚಾರಿಯಾದೆನು. ದ್ರವ್ಯಮದದಿಂದ ಕುರುಡನಾದ ನಾನು ಅನೇಕ ದುರ್ವ್ಯಾಪಾರಗಳನ್ನು ಮಾಡಿದೆನು. ರಾಮನವಮಿಯ ದಿವಸ ನನ್ನ ಸ್ನೇಹಿತನು ನನ್ನನ್ನು ಭೋಜನಕ್ಕೆ ಕರೆದನು. ಆ ದಿವಸ ನಾನು ಅಲ್ಲಿ ಭೋಜನ ಮಾಡಿದ್ದರಿಂದ ನಾನು ಆನೆಯಾಗಿ ಹುಟ್ಟಬೇಕಾಯಿತು. ಹೇ ದ್ವಿಜೋತ್ತಮನೆ, ಯಾವ ಪುಣ್ಯಪರಿಪಾಕದಿಂದ ನಿನ್ನ ದರ್ಶನವಾಯಿತೋ, ಅದು ಮಾತ್ರ ತಿಳಿಯದು" ಎಂದು ಮಾತನಾಡಿತು. ಈ ಮಾತುಗಳನ್ನು ಕೇಳಿ ಶಂಭುವು "ನೀನು ರಾಮನವಮಿಯ ದಿವಸ ಕಾವೇರಿ ಸ್ನಾನಮಾಡಿರುತ್ತೀ; ಮತ್ತು

ರಾಮಕಥೆಯನ್ನು ಕೇಳಿರುತ್ತೀ. ಅದರಿಂದ ಇಲ್ಲಿ ನಿನಗೆ ಸತ್ಸಮಾಗಮವು ದೊರೆಯಿತು. ಇರಲಿ, ನಾನು ಅಯೋಧ್ಯೆಗೆ ಹೋಗಿ, ಬರುವಾಗ ನಿಮ್ಮನ್ನು ಉದ್ಧರಿಸುವೆನು. ನಿಮ್ಮನ್ನು ಉದ್ಧರಿಸದೆ ನಾನು ಎಂದಿಗೂ ಮುಂದೆ ಹೋಗಲಾರೆನು" ಎಂದು ಹೇಳಿ ಮುಂದಕ್ಕೆ ತೆರಳಿದನು. ಇಷ್ಟರೊಳಗೆ ರಾಮಲಿಂಗನಿಗೆ ಗಂಗೆಯನ್ನು ತೆಗೆದುಕೊಂಡು ಹೋಗುವ ಕಾರ್ಪಟಿಕನು ದಾರಿಯಲ್ಲಿ ಶಂಭುವನ್ನು ಕಂಡು ನಮಸ್ಕರಿಸಿ, 'ಸ್ವಾಮಿಾ, ತಾವು ಎಲ್ಲಿಂದ ಬಂದಿರಿ? ಎಲ್ಲಿಗೆ ಹೋಗುವಿರಿ?' ಎಂದು ಪ್ರಶ್ನೆಮಾಡಿದನು. ಆಗ ಶಂಭುವು 'ಸ್ವಾಮಿಾ, ನಾವು ಕಾಂಚಿಯಿಂದ ಬಂದಿರುವೆವು. ಅಯೋಧ್ಯೆಗೆ ಹೋಗುವೆವು' ಎಂದನು. ಈ ಮಾತುಗಳನ್ನು ಕೇಳಿ ಕಾರ್ಪಟಿಕನು 'ಹೇ ಬ್ರಾಹ್ಮಣನೆ, ಕಾಂಚಿಯಲ್ಲಿ ಶಂಭುವನ್ನು ನೋಡಿದಿರಾ, ಎಂದು ಕೇಳಿದನು. ಆಗ ಶಂಭುವು 'ಆ ನಗರದಲ್ಲಿ ಅನೇಕರಿರುವರು. ಅವರ ಗೋತ್ರವಾವುದು? ತಂದೆಯ ಹೆಸರೇನು?' ಎಂದು ಕೇಳಿದನು. ಈ ವಚನಗಳನ್ನು ಕೇಳಿ ಕಾರ್ಪಟಿಕನು 'ಹೇ ದ್ವಿಜಶ್ರೇಷ್ಠನೇ ಕೇಳು; ಆತನ ತಂದೆಯು ಮಹಾದೇವನಂತೆ. ಭಾರದ್ವಾಜಗೋತ್ರದಲ್ಲಿ ಹುಟ್ಟಿದವನಂತೆ' ಎಂದು ಹೇಳಿದನು. ಈ ಮಾತುಗಳಿಂದ ಶಂಭುವು, ತನ್ನನ್ನೇ ಈಗ ಕೇಳುತ್ತಿರುವನೆಂದು ನಿಶ್ಚಯಿಸಿ 'ಸ್ವಾಮಿಾ, ನಾನೇ ಶಂಭುವೆಂಬ ಬ್ರಾಹ್ಮಣನು. ರಾಮತೀರ್ಥದಲ್ಲಿ ಸ್ನಾನಮಾಡಬೇಕೆಂದು ಅಯೋಧ್ಯೆಗೆ ಹೋಗುತ್ತಿರುವೆನು' ಎಂದನು.

ಈ ಮಾತುಗಳನ್ನು ಕೇಳಿ ಕಾರ್ಪಟಿಕನು "ಹೇ ದ್ವಿಜೋತ್ತಮನೇ, ನಾನು ಸಮುದ್ರಸ್ನಾನಕ್ಕಾಗಿ ಆ ಭಾಗಕ್ಕೆ ಹೋಗಿದ್ದೆನು. ಕೈಕಟದೇಶದಲ್ಲಿರುವ ಸೀತಾಕುಂಡದ ಬಳಿಯಲ್ಲಿ ನಾನು ಒಂದು ಪಿಶಾಚಿಯನ್ನು ಕಂಡೆನು. ಅದು ನನ್ನನ್ನು ಹಿಂಬಾಲಿಸಿತು. ನಾನು ಭಯದಿಂದ ರಾಮ, ರಾಮ ಎಂದು ಕೂಗಿಕೊಂಡೆನು. ಅದು ಅಷ್ಟರಲ್ಲೇ ಬಹು ದೂರ ಓಡಿಹೋಯಿತು. ಮತ್ತು ರಾಮನಾಮ ಸ್ಮರಣೆಯಿಂದ ಅದಕ್ಕೆ ಪೂರ್ವಜನ್ಮದ ಸ್ಮರಣೆಯು ಬಂತು. ಆಗ ಆ ಪಿಶಾಚವು 'ಹೇ ದ್ವಿಜಶ್ರೇಷ್ಠಾ, ನನ್ನನ್ನು ಪಾಲಿಸು' ಎಂದು ಕೂಗಿಕೊಂಡಿತು. ಈ ವಚನಗಳನ್ನು ಕೇಳಿ ನಾನು 'ಎಲೈ ಪಿಶಾಚಿಯೆ, ನೀನು ಪೂರ್ವಜನ್ಮದಲ್ಲಿ ಯಾವ ಜಾತಿಯವನು? ನಿನಗೆ ಇಂಥ ಸ್ಥಿತಿಯು ಯಾಕೆ ಬಂತು?' ಎಂದು ಕೇಳಿದೆನು. ಆಗಲಾ ಪಿಶಾಚಿಯು 'ಸ್ವಾಮಿಾ, ನಾನು ಪೂರ್ವಜನ್ಮದಲ್ಲಿ ಕಾಂಚೀನಗರವಾಸಿಯಾದ ಬ್ರಾಹ್ಮಣನು. ಈಗ ಸ್ವಲ್ಪವಾದರೂ ಅನ್ನದಾನಮಾಡಲಿಲ್ಲ. ಆ ದೋಷದಿಂದ ನಾನು ಈ ಜನ್ಮವನ್ನು ಹೊಂದಿರುವೆನು' ಎಂದಿತು. ಮತ್ತು ನಾನು 'ಈ ಜನ್ಮದಿಂದ ಬಿಡುಗಡೆ

ಯುನಿನಗೆ ಹ್ಯಾಗಾಗುವದು?' ಎಂದು ಪ್ರಶ್ನಮಾಡಿದೆನು. ಆಗ ಪಿಶಾಚಿಯು 'ನನ್ನ ಮಗನಾದ ಶಂಭುವೆಂಬ ಉತ್ತಮ ಬ್ರಾಹ್ಮಣನು ಕಾಂಚಿಯಲ್ಲಿ ವಾಸಮಾಡುವನು. ಆತನು ಚೈತ್ರ ಬಹುಳ ಅಮಾವಾಸ್ಯೆಯ ದಿವಸ ಅಯೋಧ್ಯೆಯಲ್ಲಿ ನನಗೋಸ್ಕರ ಪಿಂಡ ದಾನಮಾಡಿದರೆ ನಾನು ಮುಕ್ತನಾಗುವೆನು. ದಯವಿಟ್ಟು ನೀವು ದಾರಿಯಲ್ಲಿ ನನ ಮಗನನ್ನು ಕಂಡರೆ ಈ ಸಮಾಚಾರವನ್ನು ಹೇಳಿರಿ' ಎಂದು ಹೇಳಿತು. ಅನಾಯಾ ಸವಾಗಿ ತಮ್ಮ ದರ್ಶನವು ಇಲ್ಲೇ ಲಭಿಸಿತು" ಎಂದು ಹೇಳಿದನು. ಈ ಮಾತು ಗಳನ್ನು ಕೇಳಿ ಶಂಭುವು ಮೂರ್ಛಿತನಾದನು. ಬಳಿಕ ಕರ್ಕಶನ ಉಪಚಾರಗಳಿಂದ ಸ್ವಲ್ಪ ಚೇತರಿಸಿಕೊಂಡು, ಕಾರ್ಪಟಿಕನ ಅಪ್ಪಣೆಯನ್ನು ಪಡೆದು ಶಂಭುವು ಅಯೋ ಧ್ಯೆಗೆ ತೆರಳಿದನು. ಅಲ್ಲಿ ತೀರ್ಥವಿಧಿಯೇ ಮೊದಲಾದ ಸಮಸ್ತ ಕಾರ್ಯಗಳನ್ನೂ ನೆರವೇರಿಸಿ, ಸಕಾಲದಲ್ಲಿ ಶಂಭುವು ತನ್ನ ತಂದೆಗಾಗಿ ಪಿಂಡದಾನ ಮಾಡಿದನು. ಅದರಿಂದ ಆ ಪಿಶಾಚಿಜನ್ಮವನ್ನು ಬಿಟ್ಟು ಆ ಬ್ರಾಹ್ಮಣನು ಪುಣ್ಯಗತಿಯನ್ನು ಹೊಂ ದಿದನು. ಬಳಿಕ ಶಂಭುವು ಅಯೋಧ್ಯೆಯಲ್ಲಿ ಕೆಲವು ಕಾಲಗಳಿದ್ದು ರಾಮೋಪಾ ಸನೆಯನ್ನು ಪೂರ್ಣಮಾಡಿ, ಕಾಂಚೀನಗರಿಗೆ ಪ್ರಯಾಣ ಬೆಳೆಸಿದನು. ದಾರಿಯ ಲ್ಲಿ ಆತನು ತನ್ನ ಎರಡು ದಿವಸದ ಪೂಜಾಫಲದಿಂದ ಸಿಂಹ, ಗಜ ಇವುಗಳನ್ನೂ, ತನ್ನ ಪತ್ನಿಯು ಒಂದು ದಿವಸದ ಪೂಜಾಫಲದಿಂದ ಆ ರಾಕ್ಷಸನನ್ನೂ ಉದ್ಧಾರ ಮಾಡಿ ತನ್ನ ಪಟ್ಟಣವನ್ನು ಹೊಂದಿದನು" ಎಂದು ಹೇಳಿ ತನ್ನ ಎರಡು ದಿವಸದ ಪೂಜಾಫಲವನ್ನೂ ತನ್ನ ಹೆಂಡತಿಯು ಒಂದು ದಿವಸದ ಪೂಜಾಫಲವನ್ನೂ ಆ ಪಿಶಾಚಿ ಗಳಿಗೆ ಸಮರ್ಪಿಸಿದನು. ಆಕ್ಷಣವೇ ಅವರು ತಮ್ಮ ಪೂರ್ವಜನ್ಮದ ರೂಪಗಳನ್ನು ಹೊಂದಿದರು. ಬಳಿಕ ತಮ್ಮ ತಂದೆತಾಯಿಗಳ ಬಳಿಗೆ ಪ್ರಯಾಣಮಾಡಿ, ಅವರೆಲ್ಲರ ನ್ನೂ ಸಂತೋಷಗೊಳಿಸಿದರು. 'ನಮ್ಮ ತಂದೆಯೂ ಕುಟುಂಬ ಸಹಿತ ಅಬ್ಬುರ ಕ್ಷೇತ್ರದಲ್ಲಿ ವಾಸಮಾಡಿದನು. ಮುಂದೆ ಚೈತ್ರಸ್ನಾನದ ಮಹಿಮೆಯಿಂದ ನಾನು ಅವರಿಗೆ ಮಗನಾಗಿ ಜನಿಸಿದೆನು. ಈ ವ್ರತದ ಮಹಿಮೆಯು ಹೀಗಿರುವದು ಆದ ರಿಂದ ರಾಮತೀರ್ಥದಲ್ಲಿ ಶ್ರೀ ರಾಮವ್ರತವನ್ನು ಅವಶ್ಯವಾಗಿ ಮಾಡಲೇ ಬೇಕು.

## ಎಲ್ಲಾ ದೇವಿಯರು ಸೀತಾಸ್ವರೂಪರು.

ಒಂದಾನೊಂದುದಿವಸ ಕುಶ, ಲವ, ಲಕ್ಷ್ಮಣ ಇತ್ಯಾದಿಗಳೊಡನೆ ಶ್ರೀರಾ ಮನು ಬೇಟೆಗೋಸ್ಕರ ಅರಣ್ಯಕ್ಕೆ ತೆರಳಿದನು. ದೊಡ್ಡ ಅರಣ್ಯಕ್ಕೆ ಹೋಗಲು ಅಲ್ಲಿ ಒಂದು ಹರಿಣವನ್ನು ನೋಡಿ, ಶ್ರೀರಾಮನು ಧನುರ್ಧಾರಿಯಾಗಿ ಅದನ್ನು ಹಿಂಬಾಲಿಸಿದನು. ಆ ಮೃಗವು ಬಹಳ ದೂರ ಓಡಿತು. ಶ್ರೀರಾಮನು ಬಹಳ

ದಣಿದು, ಒಂದು ಮರದ ಕೆಳಗೆ ಕುಳಿತನು. ಹಸಿವೆ ಬಾಯಾರಿಕೆಗಳಿಂದ ಕಳವಳಿಸುತ್ತಿರುವ ಶ್ರೀರಾಮನ ಬಳಿಗೆ ಒಬ್ಬ ಶಬರಿಯು ಓಡಿಬಂದಳು. ಮತ್ತು ಶ್ರೀರಾಮನನ್ನು ಉಡುಪುಗಳಿಂದ ರಾಜನೆಂದು ತಿಳಿದು ನಮಸ್ಕರಿಸಿದಳು. ಶ್ರೀರಾಮನು ತನ್ನ ಸ್ಥಿತಿಯನ್ನು ಆಕೆಗೆ ತಿಳುಹಿದನು. ಈ ವಚನವನ್ನು ಕೇಳಿ ಆ ಶಬರಿಯು "ರಾಜ, ಇಲ್ಲಿಗೆ ಸಮೀಪದಲ್ಲಿ ಒಂದು ದುರ್ಗಾದೇವಾಲಯುವದೆ. ಈ ದಿವಸ ಮಂಗಳವಾರವಾದ್ದರಿಂದ ಸಾವಿರಾರುಜನ ಭಕ್ತರು ದೇವಿಯ ಸೇವೆಗಾಗಿ ಬರುವರು. ನಾವು ಅಲ್ಲಿಗೆ ಹೋದರೆ ಮೃಷ್ಟಾನ್ನವು ದೊರೆಯುವದು" ಎಂದಳು. ಈ ಮಾತುಗಳನ್ನು ಕೇಳಿ ಶ್ರೀರಾಮನು 'ಸೀತಾ, ಲವ, ಕುಶ ಇತ್ಯಾದಿಗಳ ಹಾದಿಯನ್ನು ಕಾಯುತ್ತಾ ನಾನು ಇಲ್ಲೇ ಕುಳಿತಿರುವೆನು. ನೀನು ಹೋಗಿ ಆ ಪರಿಷೆಗೆ ಬಂದ ಜನರಿಗೆ ನನ್ನ ಸ್ಥಿತಿಯನ್ನು ತಿಳುಹು, ಅಂದರೆ ನಿನಗೆ ಅನ್ನ ದೊರೆಯುವದು' ಎಂದು ಹೇಳಿದನು. ಆ ತರುಣಿಯು ಶ್ರೀರಾಮನ ಅಪ್ಪಣೆಯನ್ನು ದುರ್ಗಾದೇವಾಲಯಕ್ಕೆ ಬಂದ ಸ್ತ್ರೀಯರಿಗೆತಿಳುಹಿದಳು. ಅವರು ಪರಮಾನಂದದಿಂದ ದುರ್ಗಾಪೂಜೆಯನ್ನು ಮುಗಿಸಿಕೊಂಡು ಶ್ರೀರಾಮನ ಕಡೆಗೆ ಹೊರಡಬೇಕೆಂದು ನಿಶ್ಚಯಿಸಿದರು. ಮತ್ತು ಪೂಜಾಸಾಮಗ್ರಿಗಳನ್ನು ತೆಗೆದು-ಕೊಂಡು ದುರ್ಗಾಪೂಜೆಗಾಗಿ ಹೊರಟರು. ದೇವಾಲಯಕ್ಕೆ ಹೋಗುವಲ್ಲಿ ದೇವಾಗಾರದ ಬಾಗಿಲುಗಳೆಲ್ಲಾ ಮುಚ್ಚಿಕೊಂಡಿದ್ದವು. ಇದನ್ನು ನೋಡಿ ಆ ಸ್ತ್ರೀಯರಿಗೆ ಬಹಳ ಆಶ್ಚರ್ಯವಾಯಿತು. ಅಷ್ಟರಲ್ಲಿ ಒಳಗಿನಿಂದ ದೇವಿಯು 'ಹೇ ಸ್ತ್ರೀಯರೆ, ಮೊದಲು ಶ್ರೀರಾಮನನ್ನು ತೃಪ್ತಿಗೊಳಿಸಿರಿ. ಅನಂತರ ನಾನು ನೈವೇದ್ಯವನ್ನು ಸ್ವೀಕರಿಸುವೆನು. ನಾನು ಸೀತೆಯಾಗಿರುವೆನು. ಪರಮೇಶ್ವರನೇ ರಾಮನಿರುವನು. ಆದಕಾರಣ ಆತನಿಗಿಂತ ಮೊದಲು ನಾನು ನೈವೇದ್ಯವನ್ನು ಸ್ವೀಕರಿಸಲಾರೆನು" ಎಂದು ಕೂಗಿ ಹೇಳಿದಳು. ಈ ಮಾತುಗಳನ್ನು ಕೇಳಿ ಆ ಸ್ತ್ರೀಯರು ಶ್ರೀರಾಮನ ಕಡೆಗೆ ಬಂದರು. ನಾನಾ ವಿಧವಾದ ಭಕ್ಷ್ಯಭೋಜ್ಯಗಳಿಂದ ತುಂಬಿದ ಪಾತ್ರೆಗಳನ್ನು ಶ್ರೀರಾಮನ ಎದುರಿಗೆ ಇರಿಸಿ ಸ್ವೀಕರಿಸಬೇಕೆಂದು ಪ್ರಾರ್ಥನೆ ಮಾಡಿದರು. ಆಗ ಶ್ರೀರಾಮನು 'ತರುಣಿಯರೇ, ನಿಮ್ಮ ದೇವಿಯು ನಿಮಗೇನು ಹೇಳಿದಳು. ಅದನ್ನು ನನಗೆ ಮೊದಲು ಹೇಳಿರಿ' ಎಂದನು. ಬಳಿಕ ಆ ಲಲನೆಯರು ಸಮಸ್ತ ವೃತ್ತಾಂತವನ್ನು ತಿಳುಹಿದರು. ಈ ಮಾತುಗಳನ್ನು ಕೇಳಿ ಶ್ರೀರಾಮನು 'ನಿಮ್ಮ ದೇವಿಯಮಾತು ಸತ್ಯವಾಗಿದ್ದರೆ ಆಕೆಯು ಇಲ್ಲಿಗೆ ಬರಬೇಕು' ಎಂದನು. ಈ ವಚನವನ್ನು ಸ್ತ್ರೀಯರು ದೇವಿಗೆ ತಿಳುಹಿದರು. ಈ ಮಾತುಗಳನ್ನು ಕೇಳಿ ದೇವಿಯು ಸೀತೆಯ ರೂಪದಿಂದ ಹೊರಗೆಬಂದು, ಪುನಃ

ಬಾಗಿಲನ್ನು ಪೂರ್ವದಂತೆ ಘಟ್ಟಿಯಾಗಿ ಹಾಕಿ, ಕೈಯಲ್ಲಿ ಉದಕಪಾತ್ರೆಯನ್ನು ಹಿಡಿದು ಶ್ರೀರಾಮನ ಬಳಿಗೆ ತೆರಳಿದಳು. ಶ್ರೀರಾಮನನ್ನು ನೋಡಿ ಸ್ವಲ್ಪನಗುತ್ತಾ ದೇವಿಯು ಆತನಿಗೆ ನಮಸ್ಕರಿಸಿ ಸಮೀಪದಲ್ಲಿ ನಿಂತಳು. ಇದೆಲ್ಲವನ್ನೂ ನೋಡಿ ಆ ಸ್ತ್ರೀಯರು ಬೆರಗಾದರು. ಅನಂತರ ಶ್ರೀರಾಮನು ಸ್ನಾನವಮಾಡಬೇಕೆಂದು ಯೋಚಿಸಿ ಭೂಮಿಯನ್ನು ಬಾಣದಿಂದ ಹೊಡೆದನು. ಆ ಬಾಣದ ಮಾರ್ಗದಿಂದಲೇ ಪಾತಾಳಗಂಗೆಯು ಮೇಲಕ್ಕೆ ಬಂದಳು. ಶ್ರೀರಾಮನು ಆ ಗಂಗೆಯಲ್ಲಿ ಸ್ನಾನ ಮಾಡಿ ತನ್ನ ನಿತ್ಯಕರ್ಮಗಳನ್ನು ನೆರವೇರಿಸಿ ಸ್ವಸ್ಥವಾಗಿ ಕುಳಿತನು. ಅಷ್ಟರಲ್ಲಿ ಕುಶನೇ ಮೊದಲಾದ ಶ್ರೀ ರಾಮನ ಅನುಯಾಯಿಗಳು ಅಲ್ಲಿಗೆ ಬಂದರು. ಸೀತಾ ಮತ್ತು ಇತರ ಸ್ತ್ರೀಯರು ಇಲ್ಲಿರುವದನ್ನು ನೋಡಿ ಅವರಿಗೆ ಬಹಳ ಆಶ್ಚರ್ಯವಾಯಿತು. ಶಬರಿಯು ಇದು ವರೆಗೂ ನಡೆದ ವೃತ್ತಾಂತವನ್ನು ಕುಶ-ಲವಾದಿಗಳಿಗೆ ತಿಳುಹಿದಳು. ಆಗ ಅವರ ಸಂಶಯವು ಪರಿಹಾರವಾಯಿತು. ಅವರು ರಾಮನನ್ನು ಶಂಕರನೆಂತಲೂ ಸೀತೆಯನ್ನು ದುರ್ಗೆಯೆಂತಲೂ ಹೇಳಲಾರಂಭಿಸಿದರು. ರಾಮ ಹಾಗೂ ಶಂಕರ, ಸೀತಾ, ಹಾಗೂ ಪಾರ್ವತಿ ಇವರ ವಿಷಯದಲ್ಲಿ ಅವರಿಗಿದ್ದ ಭೇದಬುದ್ಧಿಯು ಸಂಪೂರ್ಣನಷ್ಟವಾಯಿತು. ಅನಂತರ ಶ್ರೀ ರಾಮನು ಸಮಸ್ತ ಪರಿವಾರದೊಡನೆ ಭೋಜನವಮಾಡಿದನು. ಆತನು 'ಹೇ ತರುಣಿಯರೇ, ನಿಮಗೆ ಬೇಕಾದ ವರವನ್ನು ಬೇಡಿರಿ!' ಎಂದು ಹೇಳಿದನು. ಆಗಲಾ ಸ್ತ್ರೀಯರು 'ಸ್ವಾಮಿಾ, ರಾಮ, ಯಾತರಿಂದ ನಮ್ಮ ಕೀರ್ತಿಯು ನಿರಂತರವಾಗಿರುದೋ! ಅಂಥಾ ವರವನ್ನು ನಮಗೆ ದಯಪಾಲಿಸು' ಎಂದು ಪ್ರಾರ್ಥಿಸಿದರು. ಇದನ್ನು ಕೇಳಿ ಶ್ರೀ ರಾಮನು "ಹೇ ಸುದತಿಯರೆ, ಇಂದಿನಿಂದ ರಾಮಾ ಎಂಬ ನನ್ನ ಹೆಸರಿನಿಂದ ನೀವು ಪ್ರಸಿದ್ಧರಾಗಿರಿ. ಸೃಷ್ಟಿಯಲ್ಲಿ ಯಾವ ಪುರುಷನಿಗೂ ನೀವು ಅಪ್ರಿಯರಾಗಬೇಡಿರಿ. ಯಾವ ಸ್ಥಳದಲ್ಲಿ ನಾನು ಪಾತಾಳಗಂಗೆಯನ್ನು ಮೇಲಕ್ಕೆ ತಂದಿರುವೆನೋ, ಆ ಸ್ಥಳವು ನನ್ನ ಹೆಸರಿನಿಂದ ಪ್ರಸಿದ್ಧವಾಗಿರಲಿ" ಎಂದು ಹೇಳಿದನು. ಅನಂತರ ಆ ಸ್ತ್ರೀಯರು 'ಹೇ ಪ್ರಭೋ, ನಿನ್ನ ದರ್ಶನವು ನಮಗೆ ಯಾವಾಗ ದೊರೆಯುವದು' ಎಂದು ಕೇಳಿದರು. ಶ್ರೀ ರಾಮನು "ದ್ವಾಪರಯುಗದಲ್ಲಿ ಕೃಷ್ಣಾವತಾರಮಾಡಬೇಕಾಗುವದು. ಆಗ ನಿಮ್ಮೆಲ್ಲರಿಗೂ ದರ್ಶನಕೊಡುವೆನು. ಈ ಶಬರಿಯು ನನಗೆ ಪ್ರೀತಿಪಾತ್ರಳಿರುವಳು. ಈಕೆಯನ್ನಾದರೂ ಮುಂದೆ ಉದ್ಧರಿಸುವೆನು. ಈಗ ನೀವು ನಿಮ್ಮ ಮನೆಗಳಿಗೆ ನಡೆಯಿರಿ" ಎಂದು ಹೇಳಿದನು. ಶ್ರೀ ರಾಮನ ಈ ವಚನಗಳನ್ನು ಕೇಳಿ, ಆ ಲಲನೆಯರು ಬಹಳ ಹರ್ಷಗೊಂಡು ದೇವಿಯೊ

ಡನೆ ದೇವಾಲಯದ ಕಡೆಗೆ ತೆರಳಿದರು. ದೇವಾಲಯದ ಒಳಗೆ ಹೋಗಿ ನೋಡಲು, ದೇವಿಯು ಸೀತಾರೂಪವನ್ನು ಅಡಗಿಸಿ, ತನ್ನ ಪೂರ್ವದ ರೂಪವನ್ನೇ ಧರಿಸಿದ್ದಳು. ಆ ದೇವಿಯ ಪೂಜೆಯನ್ನು ತೀರಿಸಿಕೊಂಡು ಆ ಸ್ತ್ರೀಯರು ತಮ್ಮ ಮಂದಿರಗಳಿಗೆ ತೆರಳಿದರು. ಇತ್ತಲಾ ಕುಶ-ಲವಾದಿಗಳು ಅಯೋಧ್ಯೆಗೆ ಬಂದರು. ಕುಶ-ಲವರು ಸೀತಾದೇವಿಗೆ ಅರಣ್ಯದಲ್ಲಿ ನಡೆದ ಸಮಾಚಾರವನ್ನೆಲ್ಲ ತಿಳುಹಿದರು. ಇದನ್ನೆಲ್ಲ ಕೇಳಿ ಸೀತೆಯು 'ಶ್ರೀ ರಾಮನ ಲೀಲೆಯು ಯಾರಿಗೂ ತಿಳಿಯಲು ಸಾಧ್ಯವಿಲ್ಲ' ಎಂದು ನುಡಿದಳು. ಇರಲಿ, ರಾಮ ಎಂಬ ಮಂತ್ರವು ಸ್ತ್ರೀ ಪುರುಷರೆಲ್ಲರಿಗೂ ಬಹಳ ಸುಕರವಾದದ್ದು. ಕಲಿಯುಗದಲ್ಲಿ ಬ್ರಾಹ್ಮಣರು ಆಚಾರಹೀನರಾಗುವರು. ಅವರಾದರೂ ಭಕ್ತಿಯಿಂದ 'ರಾಮ, ರಾಮ' ಎಂದರೆ ಅನುಕೂಲವಾಗುವದು. ಈ ರಾಮಮಂತ್ರವನ್ನು ಪರಮೇಶ್ವರನು ಪಾರ್ವತಿಗೆ ಉಪದೇಶ ಮಾಡಿರುವನು. ಶ್ರೀ ರಾಮವ್ರತದ ಮಹಿಮೆಯನ್ನೂ, ರಾಮಮಂತ್ರವನ್ನೂ ಸದ್ಗುರುಮುಖದಿಂದ ತಿಳಿದು ಸದಾಚರಣೆಗಳಿಂದ ಆಚರಿಸಬೇಕು.

## ಅರ್ಜುನನು ಕಪಿಧ್ವಜನಾಗಲು ಕಾರಣ.

ಶಿಷ್ಯ 'ಗುರುವರ್ಯರೆ, ಅರ್ಜುನನು ಕಪಿಧ್ವಜನಾಗುವನೆಂದು ಕೇಳಿರುವೆನು. ಅವನು ಕಪಿಧ್ವಜನಾಗಲು ಕಾರಣವೇನು? ಇದನ್ನು ನನಗೆ ದಯವಿಟ್ಟು ತಿಳುಹಿರಿ,' ಎಂದನು. ರಾಮದಾಸರು ಹೇಳುತ್ತಾರೆ—ಪ್ರಿಯಶಿಷ್ಯನೇ, ಕೇಳು. ದ್ವಾಪರಯುಗದ ಕೊನೆಯಲ್ಲಿ ನಡೆಯತಕ್ಕ ಇತಿಹಾಸವನ್ನು ನಿನಗೆ ಹೇಳುವೆನು. ಒಂದು ದಿವಸ ಅರ್ಜುನನು ರಥದಲ್ಲಿ ಕುಳಿತು ಬೇಟೆಗಾಗಿ ಅರಣ್ಯಕ್ಕೆ ತೆರಳಿದನು. ಆ ದಿವಸ ಕೃಷ್ಣನು ಜೊತೆಗೆ ಇರಲಿಲ್ಲ. ಅರ್ಜುನನು ರಥವನ್ನು ತಾನೇ ನಡೆಸುತ್ತಾ ವೇಗದಿಂದ ರಾಮೇಶ್ವರದ ಬಳಿಗೆ ಹೋದನು ಧನುಷ್ಕೋಟಿತೀರ್ಥದಲ್ಲಿ ಸ್ನಾನಮಾಡಿ ಅರ್ಜುನನು ರಥದಲ್ಲಿ ಬಂದು ಕುಳಿತನು. ಮತ್ತು ಸ್ವಲ್ಪ ಗರ್ವದಿಂದ ಸಮುದ್ರದ ತೀರದಲ್ಲಿ ರಥವನ್ನು ತಿರುಗಿಸಲಾರಂಭಿಸಿದನು. ಇಷ್ಟರಲ್ಲಿ ಪರ್ವತದ ಮೇಲೆ ಕುಳಿತಿರುವ ಸಾಮಾನ್ಯಕಪಿಯಂತೆ ಕಾಣುವ ಆಂಜನೇಯನನ್ನು ನೋಡಿದನು. ಆತನು ಯಾವಾಗಲೂ 'ರಾಮ ರಾಮ' ಎಂದು ಉಚ್ಚಾರವಾಡುತ್ತಿದ್ದನು. ಆತನ ಬಳಿಗೆ ಹೋಗಿ ಅರ್ಜುನನು 'ಹೇ ವಾನರ, ನಿನ್ನ ಹೆಸರೇನು?' ಎಂದು ಕೇಳಿದನು. ಈ ಮಾತುಗಳನ್ನು ಕೇಳಿ ಮಾರುತಿಯು ನಗುನಗುತ್ತ 'ನೂರುಯೋಜನ ಸಮುದ್ರವನ್ನು ಹಾರಿ ಯಾವನು ಶ್ರೀರಾಮಕಾರ್ಯವನ್ನು ನಡೆಸಿದನೋ, ಅಂಥಾ ಆಂಜನೇಯನೇ ನಾನು' ಎಂದನು. ಆ ಮಾತುಗಳನ್ನು ಕೇಳಿ ನಗುತ್ತ

ಅರ್ಜುನನು "ಛೀ, ಶ್ರೀ ರಾಮನ ಈ ಸೇತುಬಂಧನಪ್ರಯಾಸವು ವ್ಯರ್ಥವೇ ಸರಿ. ಬಾಣಗಳಿಂದ ಸೇತುವೆಯನ್ನು ಕಟ್ಟಿದ್ದರೆ ಸಾಕಾಗಿತ್ತು" ಎಂದನು. ಬಳಿಕ ಮಾರುತಿಯು "ನನ್ನಂಥ ವಾನರರ ಭಾರದಿಂದ ಆ ಶರಸೇತುವು ಸಾಗರಕ್ಕೆ ಮುರಿದು ಬಿದ್ದೀತು. ಎಂಬ ಹೆದರಿಕೆಯಿಂದ ಶ್ರೀರಾಮನು ಕ್ಷುದ್ರಸೇತುವೆಯನ್ನು ಕಟ್ಟಲಿಲ್ಲ" ಎಂದನು. ಈ ಮಾತುಗಳನ್ನು ಕೇಳಿ ಅರ್ಜುನನು ನಗುತ್ತ "ನಿನ್ನಂಥ ಕಪಿಯ ತುಳಿತದಿಂದ ಶರಸೇತುವು ಮುರಿದುಹೋದರೆ, ಧನುರ್ಧಾರಿಯ ಧನುರ್ವಿದ್ಯೆಯು ತಾನೆ ಎಷ್ಟು ಶ್ಲಾಘ್ಯವಾಗಿರಬಹುದು! ನಾನು ಈಗ ಶರಸೇತುವೆಯನ್ನು ತೋರಿಸುವೆನು. ಅದರಮೇಲೆ ನಿನ್ನಂಥ ಎಷ್ಟೋ ಕಪಿಗಳು ಕುಣಿದಾಡಿದರೂ ಸೇತುವು ಸ್ವಲ್ಪವಾದರೂ ಅಲ್ಲಾಡಲಾರದು" ಎಂದು ಹೇಳಿದನು. ಇದನ್ನು ಕೇಳಿ ಮಾರುತಿಯು "ನಿನ್ನ ಸೇತುವೆಯನ್ನು ನನ್ನ ಈ ಎಡಗಾಲಿನ ಅಂಗುಷ್ಠದಿಂದ ಮುರಿದರೆ! ಅನ್ನಲು, ಆಗ ಅರ್ಜುನನು "ನಿನ್ನ ಭಾರದಿಂದ ಸೇತುವು ಮುರಿದು ಸಮುದ್ರದಲ್ಲಿ ಬಿದ್ದರೆ ನಾನು ಆಗಲೇ ಅಗ್ನಿಪ್ರವೇಶಮಾಡುವೆನು" ಎಂದನು.

ಈ ಪ್ರತಿಜ್ಞೆಯನ್ನು ಕೇಳಿ ಮಾರುತಿಯು ಅರ್ಜುನನಿಗ ಸೇತುವೆಯನ್ನು ಕಟ್ಟುವಂತೆ ಹೇಳಿ' ನಾನು ನಿನ್ನ ಸೇತುವೆಯನ್ನು ಮುರಿದುಹಾಕದೆ ಹೋದರೆ, ನಿನ್ನ ರಥದ ಮೇಲೆ ಧ್ವಜವಾಗಿ ಕೂತಿರುವೆನು, ಎಂದು ಪ್ರತಿಜ್ಞೆ ಮಾಡಿದನು. ಅರ್ಜುನನು ಒಂದು ಕ್ಷಣದಲ್ಲಿ ನೂರುಯೋಜನ ವಿಸ್ತೀರ್ಣವುಳ್ಳ ಸೇತುವೆಯನ್ನು ನಿರ್ಮಾಣಮಾಡಿದನು. ಸೇತುವೆಯು ಸಿದ್ಧವಾದ ಕೂಡಲೆ ಮಾರುತಿಯು ತನ್ನ ಪಾದಾಂಗುಷ್ಠದ ಭಾರದಿಂದ ಸೇತುವೆಯನ್ನು ಮುರಿದು ಹಾಕಿದನು. ಆಗ ವಿದ್ಯಾಧರರು ಮಾರುತಿಯ ಮೇಲೆ ಪುಷ್ಪವರ್ಷಣ ಮಾಡಿದರು. ಆ ಕ್ಷಣದಲ್ಲಿ ಅರ್ಜುನನು ಚಿತೆಯನ್ನು ಸಿದ್ಧಮಾಡಿ, ಮಾರುತಿಯು ಬೇಡ, ಬೇಡವೆನ್ನುತ್ತಿರಲು, ಪ್ರತಿಜ್ಞೆಯಂತೆ ಅಗ್ನಿಯಲ್ಲಿ ಹಾರಲನುವಾದನು. ಇಷ್ಟರಲ್ಲಿ ಶ್ರೀಕೃಷ್ಣನು ವಟು ರೂಪದಿಂದ ಅಲ್ಲಿಗೆ ಬಂದನು. ಮತ್ತು ಅರ್ಜುನನ ಮುಖದಿಂದ ಸಮಸ್ತವೃತ್ತಾಂತವನ್ನೂ ವಿಚಾರಿಸಿ ತಿಳಿದನು. ಮತ್ತು ಆ ಬ್ರಹ್ಮಚಾರಿಯು "ಎಲೈ ವೀರರೇ, ಸಾಕ್ಷಿ ಇಲ್ಲದ ನ್ಯಾಯವು ಶೋಭಿಸಲಾರದು. ಹಿಂದೆ ನಡೆದದ್ದು ಕೆಲಸವಿಲ್ಲ. ನನ್ನ ಎದುರಿಗೆ ನಿಮ್ಮ ಪಣವನ್ನು ಸಾಧಿಸಿರಿ ನೋಡೋಣ' ಎಂದನು. ಈ ಮಾತು ಇಬ್ಬರಿಗೂ ಮಾನ್ಯವಾಯಿತು. ಅರ್ಜುನನು ಆತನ ಎದುರಿಗ ಮೊದಲಿನಂತೆ ಸೇತುವೆಯನ್ನು ನಿರ್ಮಿಸಿದನು. ಮಾರುತಿಯು ಪಾದಾಂಗುಷ್ಠದಿಂದ ಮುರಿಯಲು ನೋಡಿದನು. ಪ್ರಯೋಜನವಾಗಲಿಲ್ಲ. ಕಾಲು, ಹಸ್ತ, ಭುಜ ಇವುಗಳನ್ನೆಲ್ಲಾ ಉಪಯೋಗಿಸಿ

ದರೂ ಸೇತುವು ಮುರಿಯಲಿಲ್ಲ. ಆಗ ಮಾರುತಿಯು 'ಇದಕ್ಕೇನು ಕಾರಣವಿರಬಹುದು, ಎಂದು ಯೋಚಿಸಿದನು. ಅವನಿಗೆ ಸೇತುವಿನ ಮಧ್ಯದಲ್ಲಿ ಸುದರ್ಶನಚಕ್ರವಿದೆ ಯೆಂಬ ಯೋಚನೆಯು ಹೊಳೆಯಲೇ ಇಲ್ಲ. ಅವನು "ಈ ನನ್ನ ಅಪಜಯಕ್ಕೆ ಈ ವಟುವೇ ಕಾರಣವಾಗಿರುವನು. ಈತನು ವಟುವಲ್ಲ. ಸಾಕ್ಷಾತ್ ರಾಮನೇ ಆಗಿರಬೇಕು. ಶ್ರೀ ರಾಮನು ಈಗ ನನ್ನ ಗರ್ವವನ್ನು ಭಂಗಮಾಡಿದನು. ರಾಮ ನ ಮುಂದೆ ಈ ಕಪಿಯ ಬಲವೇನು ಪ್ರಯೋಜನ?' ಎಂದು ನಿಶ್ಚಯಿಸಿ, 'ಹೇ ಅರ್ಜುನ, ನೀನು ಈ ವಟುವಿನಿಂದ ಜಯ ಹೊಂದಿದೆ' ಎಂದು ಹೇಳಿದನು. ಮತ್ತು ಮಾರುತಿಯು "ಈತನು ವಟುವಲ್ಲ. ಸಾಕ್ಷಾತ್ ಕೃಷ್ಣನೇ ಆಗಿರಬೇಕು. ಆತನು ಈ ಸೇತುವಿನ ಕೆಳಗೆ ಚಕ್ರವನ್ನು ಧರಿಸಿರುವನು. ನಿನಗೆ ಸಹಾಯಮಾಡಬೇಕೆಂದು ಇವನು ಇಲ್ಲಿಗೆ ಬಂದದ್ದರಿಂದ ನಿನಗೆ ಜಯವಾಯಿತು. ಯಶಸ್ಸೂ ಬಂತು. ಯಾವ ಕೃಷ್ಣನು ಹಿಂದಿನ ಯುಗದಲ್ಲಿ ನನಗೆ ವರಕೊಟ್ಟಿದ್ದನೋ? ಆತನೇ ಈ ಯುಗದಲ್ಲಿ ನನಗೆ ದರ್ಶನಕೊಟ್ಟನು" ಎಂದು ಮಾತನಾಡಿದನು. ಅಷ್ಟರಲ್ಲಿ ವಟುರೂಪವನ್ನು ಬಿಟ್ಟು ಶ್ರೀ ಕೃಷ್ಣನು ತನ್ನ ನಿಜರೂಪವನ್ನು ಧರಿಸಿ ಅರ್ಜುನನನ್ನು ಆಲಿಂಗನ ಮಾಡಿದನು. ಮಾರುತಿಯ ಅಂಗಗಳಲ್ಲಿ ರೋಮಾಂಚಗಳಾದವು. ಮತ್ತು ಆತನು ಶ್ರೀ ಕೃಷ್ಣನಿಗೆ ನಮಸ್ಕಾರ ಮಾಡಿದನು. ಶ್ರೀ ಕೃಷ್ಣನು ತನ್ನ ಚಕ್ರವನ್ನು ತೆಗೆದುಬಿಡಲು, ಸೇತುವೆಯನ್ನು ತೆರೆಗಳು ನೀರಿನಲ್ಲಿ ಮುಳುಗಿಸಿದವು. ಅನಂತರ ಅರ್ಜುನನ ಗರ್ವವು ಭಂಗವಾಯಿತು. ಮತ್ತು ಅರ್ಜುನನು ಶ್ರೀ ಕೃಷ್ಣ ನ ಚರಣಗಳಿಗೆ ವಂದಿಸಿದನು. ಆಗ ಶ್ರೀ ಕೃಷ್ಣನು "ಹೇ ಅರ್ಜುನ, ನೀನು ಶ್ರೀ ರಾಮನನ್ನು ತಿರಸ್ಕಾರ ಮಾಡಿದೆಯಾದ್ದರಿಂದ ಮಾರುತಿಯು ನಿನ್ನ ಸೇತುವೆಯನ್ನು ಮುರಿದನು. ಹೇ ಮಾರುತಿ, ನೀನು ಅಂತರಂಗದಲ್ಲಿ ಗರ್ವವನ್ನು ವಹಿಸಿದೆಯಾ ದ್ದರಿಂದ ನಿನಗೂ ಗರ್ವಭಂಗವಾಯಿತು. ಇನ್ನು ಮುಂದೆ ನೀವು ಗರ್ವವನ್ನು ಹೊಂದದೆ ನನ್ನನ್ನು ಭಜಿಸಿರಿ. ಹೇ ಅಂಜನೇಯ, ನೀನು ಅರ್ಜುನನ ರಥದ ಮೇಲೆ ಕುಳಿತುಕೋ!" ಎಂದು ಹೇಳಿ, ಅರ್ಜುನನೊಡನೆ ತೆರಳಿದನು. ಸಾ‌ರಾಂಶ, ಈ ರೀತಿ ಅರ್ಜುನನು ಕಪಿಧ್ವಜನಾಗುವನು. ಈಗ ನಾನು ಜ್ಞಾನದೃಷ್ಟಿ ಯಿಂದ ತಿಳಿದು ನಿನಗೆ ಹೇಳುವೆನು.

ಮನೋಹರಕಾಂಡಃ ಸಮಾಪ್ತಃ

ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾತ್ಮನೇ।
ಚಕ್ರವರ್ತಿ ತನೂಜಾಯ ಸಾರ್ವಭೌಮಾಯ ಮಂಗಳಂ॥

# ಪೂರ್ಣಕಾಂಡ.

---

## ನಳರಾಜನು ಹಸ್ತಿನಾಪುರಕ್ಕೆ ಮುತ್ತಿಗೆ ಹಾಕಿದ್ದು.

ಶ್ರೀ ರಾಮನು ಸೀತಾಸಮೇತನಾಗಿ ಅಯೋಧ್ಯೆಯಲ್ಲಿ ರಾಜ್ಯಪಾಲನೆ ಮಾಡುತ್ತಿರಲು, ಹಸ್ತಿನಾಪುರದಿಂದ ಭಯಗ್ರಸ್ತನಾದ ಒಬ್ಬ ದೂತನು ಬಂದನು. ಸುಷೇಣನ ಕಡೆಯಿಂದ ಬಂದ ಆ ದೂತನನ್ನು ಶ್ರೀ ರಾಮನು 'ಇಷ್ಟು ಭಯಪಡಲು ಕಾರಣವೇನು' ಎಂದು ವಿಚಾರಿಸಿದನು. ಆಗಲಾ ದೂತನು 'ರಾಜಾಧಿರಾಜ, ಸೋಮವಂಶದವರಾದ ನಳಾದಿಗಳು ಹಸ್ತಿನಾಪುರಕ್ಕೆ ಮುತ್ತಿಗೆ ಹಾಕಿರುವರು' ಎಂದನು. ಈ ಮಾತುಗಳನ್ನು ಕೇಳಿ ಶ್ರೀ ರಾಮನು ವಸಿಷ್ಠರನ್ನು ಕುರಿತು 'ಗುರುಗಳೇ, ಇದುವರೆಗೂ ನನಗೆ ವಿರೋಧಿಗಳು ಯಾರೂ ಇರಲಿಲ್ಲ. ಈಗಲೇ ಈ ರೀತಿ ದ್ವೇಷಮಾಡಲು ಕಾರಣವೇನು? ಎಂದು ಕೇಳಿದನು. ಆಗ ವಸಿಷ್ಠರು 'ರಾಮಚಂದ್ರ, ಈ ವಿಷಯವನ್ನು ವಾಲ್ಮೀಕಿ ಮಹಾಮುನಿಗಳಕಡೆ ವಿಚಾರಿಸಿದರೆ ಸ್ಪಷ್ಟವಾಗುವದು' ಎಂದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು ವಾಲ್ಮೀಕಿ ಮಹರ್ಷಿಗಳ ಆಶ್ರಮಕ್ಕೆ ಲಕ್ಷ್ಮಣನನ್ನು ಕಳುಹಿಸಿ ಶೀಘ್ರವಾಗಿ ಆ ಮುನಿಗಳನ್ನು ಸತ್ಕಾರಪೂರ್ವಕವಾಗಿ ಕರೆಸಿದನು. ಆ ಮುನಿಗಳಲ್ಲೂ ಶ್ರೀ ರಾಮನು ಇದೇ ಪ್ರಶ್ನೆಯನ್ನೇ ಕೇಳಿದನು. ಈ ಮಾತುಗಳನ್ನು ಕೇಳಿ, ವಾಲ್ಮೀಕಿ ಮುನಿಗಳು "ರಾಮಚಂದ್ರ, ನಾನು ಪೂರ್ವದಲ್ಲಿ ಬರೆದ ಗ್ರಂಥದಲ್ಲಿ ಹನ್ನೊಂದುಸಾವಿರದ ಹನ್ನೊಂದು ವರ್ಷಗಳು, ಹನ್ನೊಂದುತಿಂಗಳು, ಹನ್ನೊಂದುದಿವಸ, ಹನ್ನೊಂದುಘಳಿಗೆ, ಹನ್ನೊಂದುಪಳ ಇಷ್ಟು ಕಾಲಗಳವರೆಗೆ ನೀನು ರಾಜ್ಯಪಾಲನ ಮಾಡುತ್ತೀ ಎಂದು ಉಲ್ಲೇಖವಿರುವದು. ಈಗ ಆ ಕಾಲಗಳಲ್ಲಿ ವರ್ಷಗಳೆಲ್ಲಾ ಕಳೆದಂತಾಯಿತು. ಇನ್ನು ತಿಂಗಳು, ದಿವಸ, ಘಳಿಗೆ ಇಷ್ಟು ಮಾತ್ರ ಉಳಿದಿರುವವು. ಆದ್ದರಿಂದ ಇದು ಈ ರೀತಿಯಾಗಿ ನಡೆದಿರುವದು; ಅದಲ್ಲದೆ ನಳಾದಿರಾಜರು ಚಿರಂಜೀವಿಗಳು." ಎಂದು ಹೇಳಿದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು "ಮುನಿಗಳೇ, ಅವರು ಚಿರಂಜೀವಿಗಳಾದರೆ ಇದುವರೆಗೂ ಎಲ್ಲಿ ವಾಸವಾಗಿದ್ದರು? ಈಗ ಬಂದರೆಲ್ಲಿಂದ?" ಎಂದು ಕೇಳಿದನು. ಆಗ ವಾಲ್ಮೀಕಿಗಳು 'ರಾಮಚಂದ್ರ, ಆ ವಿಷಯವನ್ನು ಪೂರ್ಣವಾಗಿ ಹೇಳುವೆನು ಕೇಳು. ಪೂರ್ವದಲ್ಲಿ ಅತ್ರಿಮಹರ್ಷಿಗಳು ಚೈತ್ರ ಶುಕ್ಲ ಪೌರ್ಣಿಮೆಯ ಚಂದ್ರನನ್ನು ನೋಡಿ, ಸ್ತ್ರೀಯ ಮುಖವೆಂದು ತಿಳಿದು ಭೂಮಿಯಮೇಲೆ ತಮ್ಮ ರೇತಸ್ಸನ್ನು ಬಿಟ್ಟರು. ಅದರಿಂದ ಒಬ್ಬ ಮಗನು ಹುಟ್ಟಿದನು. ಅವನು ಸೋಮ

ನ ನಿಮಿತ್ತವಾಗಿ ಹುಟ್ಟಿದ್ದರಿಂದ ಆ ಕುಮಾರನಿಗೆ ಸೋಮನೆಂಬ ಹೆಸರು ಬಂತು. ಅವನು ಗಂಗಾತೀರದಲ್ಲಿ ಬಹಳ ವರ್ಷಗಳ ವರೆಗೂ ತಪಸ್ಸು ಮಾಡುತ್ತಿದ್ದನು. ಇಷ್ಟರಲ್ಲಿ ಅಲ್ಲಿಗೆ ಒಂದು ಆನೆ ಬಂತು. ಅದನ್ನು ಒಂದು ಪಕ್ಷಿಯು ಕೊಂದುಹಾಕಿತು. ಇದೆಲ್ಲವನ್ನೂ ನೋಡುತ್ತಿದ್ದ ಸೋಮನು ಆ ಭೂಮಿಯ ಗುಣವು ಬಹಳ ಶ್ರೇಷ್ಠವಾದದ್ದೆಂದು ತಿಳಿದು, ಅಲ್ಲಿ ಒಂದು ನಗರಿಯನ್ನು ನಿರ್ಮಾಣ ಮಾಡಿದನು. ಆ ಸ್ಥಳದಲ್ಲಿ ಹಸ್ತಿಯು ಮರಣಹೊಂದಿದ್ದರಿಂದ ಆ ನಗರಿಗೆ ಹಸ್ತಿನಾಪುರಿ ಎಂಬ ಹೆಸರು ಬಂತು. ಅಲ್ಲಿಗೆ ಸೋಮನು ತಾನೇ ರಾಜನಾದನು. ಆತನಿಗೆ ಬುಧನೆಂಬ ಮಗನು ಜನಿಸಿದನು. ಆ ತಂದೆಮಕ್ಕಳು ಏಳುದ್ವೀಪಗಳನ್ನೂ, ಸಮಸ್ತ ಪೃಥ್ವಿಯನ್ನೂ ಸ್ವಾಧೀನ ಮಾಡಿಕೊಂಡರು. ಅವರು ಅಮರಾವತಿಯನ್ನೂ ಜಯಿಸಿದರು. ಆದರೆ ಆ ರಾಜರು ಬ್ರಹ್ಮಾದಿದೇವತೆಗಳನ್ನು ಬಾಧೆಪಡಿಸಲಿಲ್ಲ. ಅದರಿಂದ ದೇವತೆಗಳು ಸಂತುಷ್ಟರಾಗಿ ಇವರಿಗೆ ಅನೇಕ ವರಗಳನ್ನು ಕೊಟ್ಟರು. ದೇವೇಂದ್ರನು ಇವರ ಸೌಜನ್ಯಕ್ಕೆ ಮೆಚ್ಚಿ ಪದ್ಮಾವತಿ ಎಂಬ ತನ್ನ ಮೊಮ್ಮಗಳನ್ನು ಬುಧರಾಜನಿಗೆ ವಿವಾಹ ಮಾಡಿಕೊಟ್ಟನು. ಆತನು ಸ್ವರ್ಗಲೋಕದಲ್ಲೇ ಬಹಳ ದಿವಸಗಳವರೆಗೂ ವಾಸವಾಗಿದ್ದನು. ಬುಧಪುತ್ರನು ಭೂಲೋಕದಲ್ಲಿ ರಾಜ್ಯಪಾಲನ ಮಾಡುತ್ತಿದ್ದನು. ಆತನಿಗೆ ಗವ್ಯನೆಂಬ ಮಗನು ಹುಟ್ಟಿದನು. ಗವ್ಯನಿಗೆ ಅಲ್ಪನೆಂಬ ಪುತ್ರನೂ, ಅಲ್ಪ ಮಹಾರಾಜನಿಗೆ ನಲನೆಂಬಮಗನೂ ಹುಟ್ಟಿದರು. ಆ ನಳ ಮಹಾರಾಜನು ದಿಕ್ಪಾಲಕರನ್ನು ಜಯಿಸಬೇಕೆಂದು ಹೊರಟನು. ತಾನು ಹಸ್ತಿನಾಪುರವನ್ನು ಬಿಟ್ಟು ಪ್ರಯಾಣಮಾಡುವಾಗ ತನ್ನ ಮೂವರು ಹಿರಿಯರಿಗೆ ನಗರಿಯನ್ನು ಕಾಪಾಡಿಕೊಂಡಿರುವಂತೆ ಹೇಳಿ ಹೊರಟನು. ಆತನು ಮೊದಲು ಸಪ್ತದ್ವೀಪಪತಿಗಳನ್ನು ಜಯಿಸಿ, ಅವರನ್ನೂ ತನ್ನ ಸಹಾಯಕ್ಕೆ ಕರೆದುಕೊಂಡು ಅಗ್ನಿಲೋಕಕ್ಕೆಹೋಗಿ ಅಗ್ನಿಯನ್ನು ಜಯಿಸಿ, ಯಮ, ನಿರ್ಋತಿಗಳನ್ನು ಕ್ರಮವಾಗಿ ಜಯಿಸಿ, ರಾವಣನೊಡನೆ ವರುಣಲೋಕಕ್ಕೆ ಪ್ರಯಾಣಮಾಡಿದನು. ಇಷ್ಟರಲ್ಲಿ ರಾವಣನು ಸೇನೆಯೊಡನೆ ಸ್ವರ್ಗಲೋಕಕ್ಕೆ ಹೋಗಿ ಸಮಸ್ತ ದೇವತೆಗಳನ್ನೂ ಸೆರೆಹಿಡಿದು ಲಂಕೆಗೆ ತಂದನು.

ಈ ವರ್ತಮಾನವನ್ನು ಕೇಳಿ ಸೋಮರಾಜನು ದೇವತೆಗಳನ್ನು ಬಂಧನದಿಂದ ತಪ್ಪಿಸಬೇಕೆಂದು ತನ್ನ ಬಂಧುಗಳೊಡನೆ ಹೊರಟನು. ಆದರೆ ಬ್ರಹ್ಮದೇವನು ಮುಂದೆ ನಡೆಯುವ ವಿಷಯಗಳನ್ನು ಸೋಮರಾಜನಿಗೆ ಗುಪ್ತವಾಗಿ ತಿಳುಹಿ ಎಲ್ಲರನ್ನೂ ಹಿಂತಿರುಗಿಸಿದನು. ಇತ್ತಲಾ ನಳನು ವರುಣ, ವಾಯು ಇತ್ಯಾದಿಗಳನ್ನು

ಜಯಿಸಿ, ಇಂದ್ರನನ್ನು ಜಯಿಸಬೇಕೆಂದು ಸ್ವರ್ಗಕ್ಕೆ ನಡೆದನು. ಈ ರೀತಿಯಾಗಿ ನಳಮಹಾರಾಜನು ಸುತ್ತುತ್ತಿರುವದರೊಳಗೆ ಕೃತಯುಗವು ಮುಗಿದುಹೋಯಿತು. ತ್ರೇತಾಯುಗದ ಕೊನೆಯಲ್ಲಿ ನಳನು ತನ್ನ ಸೇನೆಯ ಜನರನ್ನೆಲ್ಲ ವಿಚಾರಮಾಡಿದನು. ಆಗ ಸೇನೆಯಲ್ಲಿ ರಾವಣನು ಕಾಣಲಿಲ್ಲ. ಬಳಿಕ ನಳನು ದೂತರಿಂದ ರಾವಣನ ಸಮಸ್ತ ವಿಚಾರಗಳನ್ನೂ ತಿಳಿದನು. ಮತ್ತು ಆತನಿಗೆ ನದ್ಯ್ಕನೆಂಬ ಮಗನೂ, ನದ್ಯ್ಕನಿಗೆ ಜಾರೇಳ, ಜಾರೇಳನಿಗೆ ವಸುದ, ವಸುದನಿಗೆ ಲಘುಶ್ರುಕ, ಲಘುಶ್ರುಕನಿಗೆ ಸುರಥ, ಸುರಥನಿಗೆ ಅಜವಿೂಢ, ಈ ರೀತಿ ಸೋಮವಂಶವು ಅಭಿವೃದ್ಧಿಯನ್ನು ಹೊಂದಿತು. ನಳನು 'ಸ್ವರ್ಗದಲ್ಲಿ ಇಂದ್ರಾದಿಗಳಿಲ್ಲದಮೇಲೆ ನಮಗೇನು ಕೆಲಸವಿರುವದು? ರಾವಣನು ನಮಗೆ ಸೇವಕನಿರುವನು. ಇರಲಿ. ನಾವು ಮೊದಲು ಹಸ್ತಿನಾಪುರಕ್ಕೆ ಹೋಗಿ ನಮ್ಮ ಪೂರ್ವಜರನ್ನು ನೋಡಿಕೊಂಡು ಮುಂದಿನ ಕಾರ್ಯಗಳನ್ನು ನಡೆಸೋಣ' ಎಂದು ಮಂತ್ರಿಗಳೊಡನೆ ಆಲೋಚಿಸಿ ಹಸ್ತಿನಾಪುರದ ಬಳಿಗೆ ಬಂದನು. ಅಲ್ಲಿಗೆ ಬರುವಷ್ಟರಲ್ಲಿ ತನ್ನ ವಂಶದವರಾದ ಪುರುರವಾದಿಗಳು ಮರಣಹೊಂದಿದರೆಂತಲೂ, 'ಶ್ರೀ ರಾಮನು ಈಗ ಚಕ್ರವರ್ತಿಯಾಗಿರುವನೆಂತಲೂ ತಿಳಿಯಬಂತು. ಸಪ್ತದ್ವೀಪಗಳ ಪುರಾತನ ರಾಜರು ನಳನ ಜೊತೆಗೆ ಪ್ರಯಾಣಮಾಡಿದ್ದರು. ಅವರ ವಂಶಜರನ್ನು ಶ್ರೀರಾಮನು ತನ್ನ ಸ್ವಾಧೀನ ಪಡಿಸಿಕೊಂಡಿದ್ದನು. ಈ ವೃತ್ತಾಂತಗಳೆಲ್ಲವನ್ನೂ ಕೇಳಿ ನಳಮಹಾರಾಜನು ಬಹಳ ಕೋಪದಿಂದ ಹಸ್ತಿನಾಪುರವನ್ನು ಮುತ್ತಿದನು. ರಾಮಚಂದ್ರಾ, ಇನ್ನು ಮುಂದೆ ನಿನಗೂ ನಳಮಹಾರಾಜನಿಗೂ ಯುದ್ಧವಾಗುವದು. ನಳಾದಿಗಳು ಬಹಳ ಬಲಿಷ್ಠರು. ಆದರೂ ಬ್ರಹ್ಮಾದಿದೇವತೆಗಳು ಅವರನ್ನು ನಿನ್ನ ಬಳಿಗೆ ಕರೆತಂದು ನಿನ್ನ ದಾಸರನ್ನಾಗಿ ಮಾಡುವರು. ಈ ರೀತಿ ಯುದ್ಧವು ಶಾಂತವಾದ ಬಳಿಕ ನಿನ್ನನ್ನು ಪರಿವಾರಸಹಿತವಾಗಿ ಬ್ರಹ್ಮದೇವನು ವೈಕುಂಠಕ್ಕೆ ಕರೆದುಕೊಂಡು ಹೋಗುವನು. ಈ ರೀತಿಯಾಗಿ ನಿನ್ನ ಚರಿತ್ರವನ್ನು ಮೊದಲೇ ವರ್ಣಿಸಿರುವೆನು. ಆದರೆ ಈ ಸಂಗತಿಯನ್ನು ಇದುವರೆಗೂ ನಿನಗೆ ತಿಳುಹಿರಲಿಲ್ಲ" ಎಂದು ಹೇಳಿದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನಿಗೆ ಬಹಳ ಹರ್ಷವಾಯಿತು. ಶ್ರೀ ರಾಮನು ಇಷ್ಟರಲ್ಲಿ ನಿಜಮಂದಿರಕ್ಕೆ ಪ್ರಯಾಣಮಾಡುವನೆಂಬದು ನಗರದ ಜನರೆಲ್ಲರಿಗೂ ಗೊತ್ತಾಯಿತು.

### ನಳನ ಪೂರ್ವವೃತ್ತಾಂತ.

ಅನಂತರ ಶ್ರೀ ರಾಮನು 'ಹೇ ವಾಲ್ಮೀಕಿಮುನಿಗಳೇ, ನೀವು ಹಸ್ತಿನಾಪುರ

ಕ್ಕೆ ಬರಬೇಕು' ಎಂದನು. ಶ್ರೀ ರಾಮನ ಈ ವಚನವನ್ನು ಮುನಿಗಳು ಮಾನ್ಯ ಮಾಡಿದರು. ಶ್ರೀ ರಾಮನು ಲಕ್ಷ್ಮಣನನ್ನು ಕುರಿತು 'ಹೇ ಸೌಮಿತ್ರೇ, ಸಪ್ತದ್ವೀಪಗಳ ಸಮಸ್ತ ರಾಜರನ್ನೂ, ಯೂಪಕೇತುವೇ ಮೊದಲಾದ ಪುತ್ರರನ್ನೂ ಜಾಗ್ರತೆಯಾಗಿ ತಮ್ಮ ತಮ್ಮ ಸೇನಾಸನ್ನಿವೇಶಗಳೊಡನೆ ಕರೆಸು' ಎಂದು ಆಜ್ಞಾಪಿಸಿದನು. ಮತ್ತು ತನ್ನ ಸೇನಾಪತಿಗಳಿಗೆ 'ಚತುರಂಗಸೇನೆಯೊಡನೆ ಹಸ್ತಿನಾಪುರದ ಕಡೆಗೆ ಜಾಗ್ರತೆ ತೆರಳಿರಿ' ಎಂದು ಅಪ್ಪಣೆ ಮಾಡಿದನು. ಸೀತಾ, ಅಂತಃಪುರದ ಸ್ತ್ರೀಯರು, ಅಗ್ನಿಹೋತ್ರ, ಇತ್ಯಾದಿ ಸಮಸ್ತ ಪರಿವಾರಗಳನ್ನೂ ಶ್ರೀ ರಾಮನು ಮೊದಲೇ ಹಸ್ತಿನಾಪುರದ ಕಡೆ ಕಳುಹಿದನು. ಮತ್ತು ರಾಮಚಂದ್ರನು ಅಯೋಧ್ಯೆಗೆ ಕುಶನನ್ನು ಅಧಿಪತಿಯನ್ನಾಗಿ ಮಾಡಬೇಕೆಂದು ನಿಶ್ಚಯಿಸಿದನು. ಶ್ರೀ ರಾಮನ ಈ ವಿಲಕ್ಷಣ ಪ್ರಯತ್ನಗಳನ್ನು ನೋಡಿ ಪುರಜನರು ಗಾಬರಿಯಿಂದ ಹಾ,ಹಾ, ಎಂದು ರೋದನೆ ಮಾಡುತ್ತ ಭೂಮಿಯಮೇಲೆ ಬಿದ್ದರು. ಆಗ ವಸಿಷ್ಠರು 'ರಾಮಚಂದ್ರಾ, ಈ ನಿನ್ನ ದೀನರಾದ ಪ್ರಜೆಗಳ ದುಃಖವನ್ನು ನೋಡು' ಎಂದರು. ಗುರುಗಳ ಈ ವಚನವನ್ನು ಕೇಳಿ, ಶ್ರೀ ರಾಮನು 'ಸ್ವಾಮಿ, ನಾನು ಈಗ ಏನು ಮಾಡಲಿ' ಎಂದನು. ಅಷ್ಟರಲ್ಲಿ ಪ್ರಜೆಗಳು 'ರಾಮಚಂದ್ರಾ, ನಾವೂ ನಿನ್ನೊಡನೆ ಬರುವೆವು. ನಮ್ಮನ್ನು ನಿನ್ನ ಲೋಕಕ್ಕೆಕರೆದುಕೊಂಡು ಹೋಗು' ಎಂದು ಪ್ರಾರ್ಥಿಸಿದರು. ಶ್ರೀ ರಾಮನು ಪ್ರಜೆಗಳ ಈ ವಿನಂತಿಗೆ 'ತಥಾಸ್ತು' ಎಂದು ಅಭಯಕೊಟ್ಟನು. ಅನಂತರ ರಾಜ್ಯಾಭಿಷೇಕದ ಸನ್ನಾಹಗಳೆಲ್ಲ ಸಿದ್ಧವಾದವು. ಶ್ರೀ ರಾಮನು ಶುಭಮುಹೂರ್ತದಲ್ಲಿ ಕುಶನಿಗೆ ಅಯೋಧ್ಯೆಯ ರಾಜ್ಯಾಭಿಷೇಕ ಮಾಡಿದನು. ಆಗ ಅಯೋಧ್ಯೆಯಲ್ಲಿ ಅನೇಕ ಉತ್ಸವಗಳು ನಡೆದವು. ಬಳಿಕ ಶ್ರೀ ರಾಮನು ಹಸ್ತಿನಾಪುರದ ಕಡೆಗೆ ಹೊರಡಲು ಸಿದ್ಧನಾದನು. ಅಷ್ಟರಲ್ಲಿ ಸಪ್ತದ್ವೀಪಗಳ ರಾಜರೂ ಚಿತ್ರಕೇತು, ಪುಷ್ಕಲ, ಇತ್ಯಾದಿ ಪುತ್ರರೂ ತಮ್ಮ ತಮ್ಮ ಸೈನ್ಯಗಳೊಡನೆ ಶ್ರೀ ರಾಮನ ಸಮೀಪಕ್ಕೆ ಬಂದು ಸೇರಿದರು. ಆಗ ಶ್ರೀ ರಾಮನು 'ಸಪ್ತದ್ವೀಪಗಳ ರಾಜರನ್ನು ಕುರಿತು "ಎಲೈ ಮಿತ್ರರೇ, ನೀವು ನನ್ನ ಕಡೆಗೆ ಬಂದರೆ ನಿಮ್ಮ ಪೂರ್ವಜರೊಡನೆ ಯುದ್ಧಮಾಡಬೇಕಾಗುವದು. ನನಗೋಸ್ಕರ ನೀವು ಇಷ್ಟು ಕಷ್ಟಪಡಲು ಕೆಲಸವಿಲ್ಲ. ನಿಮಗೆ ಬೇಕಾದರೆ ನಿಮ್ಮ ಬಂಧುಗಳ ಕಡೆಗೆ ಹೋಗಬಹುದು" ಎಂದು ಮಾತನಾಡಿದನು. ಈ ವಚನಗಳನ್ನು ಕೇಳಿ ಆ ರಾಜರು "ಸ್ವಾಮಿ ರಾಮಚಂದ್ರಾ, ನಿನ್ನ ಕೃಪೆಯಿಂದ ಅಭಿವೃದ್ಧಿಯನ್ನು ಹೊಂದಿ, ನಿನ್ನ ಅನ್ನ ತಿಂದು ಬೆಳೆದು ಈ ಯುದ್ಧಕಾಲದಲ್ಲಿ ನಾವು ಅವರಕಡೆಗೆ ಹೋಗಬೇಕೆ? ರಾಮ

ಸರ್ವಥಾ ಹಾಗೆ ಮಾಡಲಾರೆವು. ನಮಗೆ ಯಾವ ಗತಿಯಾದರೂ ನಿನ್ನ ಜೊತೆ ಯಲ್ಲಿಯೇ ಆಗಿ ಹೋಗಲಿ” ಎಂದು ವಿಜ್ಞಾಪನೆ ಮಾಡಿದರು. ಈ ಮಾತುಗಳನ್ನು ಕೇಳಿ ಶ್ರೀ ರಾಮನು ಪರಮಾನಂದಭರಿತನಾದನು. ಯುದ್ಧಕ್ಕೆ ಹೊರಡುವ ದಿವಸ ಶ್ರೀ ರಾಮನು ಪರಿವಾರಸಮೇತ ಸರಯೂ ನದಿಗೆ ಹೋಗಿ ಸ್ನಾನಮಾಡಿದನು. ಮತ್ತು ಸರಯೂ ನದಿಯನ್ನು ತನಗೆ ಅಪ್ಪಣೆಕೊಡುವಂತೆ ಕೇಳಿಕೊಂಡನು. ಆಗ ಆ ನದಿಯು ಸ್ತ್ರೀರೂಪದಿಂದ ಬಂದು ‘ರಾಮ, ನಾನು ಇನ್ನು ಮೇಲೆ ಇಲ್ಲಿರುವದಿಲ್ಲ’ ಎಂದು ಹೇಳಿದಳು. ಈ ವಚನಗಳನ್ನು ಕೇಳಿ ಶ್ರೀರಾಮನು ‘ಹೇ ತಾಯಿಯೇ, ನನ್ನ ಚರಿತ್ರೆಯು ಭೂಮಂಡಲದಮೇಲೆ ಇರುವವರೆಗೂ ನೀನು ಈ ನದಿಯಲ್ಲಿ ಒಂದು ಅಂಶದಿಂದ ವಾಸವಾಗಿರು’ ಎಂದು ಹೇಳಿದನು. ಆಕೆಯು ಶ್ರೀರಾಮನ ಈ ಮಾತುಗಳಿಗೆ ಮಾನ್ಯಮಾಡಿ ಅಂತರ್ಹಿತಳಾದಳು. ಅನಂತರ ಶ್ರೀರಾಮನು ರಾಜಗೃಹಕ್ಕೆ ಬಂದು ಭೋಜನಾದಿಗಳನ್ನು ಮುಗಿಸಿಕೊಂಡು ವಾಹನಾರೂಢನಾಗಿ ಪರಿವಾರಸಹಿತ ಅಯೋಧ್ಯೆಯಿಂದ ಹೊರಕ್ಕೆ ತೆರಳಿದನು. ಆಗ ಶ್ರೀ ರಾಮನು ಅಯೋಧ್ಯೆಯನ್ನು “ಎಲೈ ಪುಣ್ಯನಗರಿಯೇ, ನನ್ನ ಅಪರಾಧಗಳನ್ನು ಕ್ಷಮಿಸು. ನಾನು ಈ ದಿವಸ ನಿನ್ನ ಅಪ್ಪಣೆಯನ್ನು ತೆಗೆದುಕೊಳ್ಳುವೆನು” ಎಂದು ಪ್ರಾರ್ಥನೆ ಮಾಡಿದನು. ಈ ಮಾತುಗಳನ್ನು ಕೇಳಿ ಅಯೋಧ್ಯೆಯು ತನ್ನ ನಿಜಸ್ವರೂಪವನ್ನು ಧರಿಸಿ ‘ರಾಮಚಂದ್ರಾ, ನಾನು ಇಲ್ಲಿರುವದಿಲ್ಲ. ನಿನ್ನೊಡನೆ ಬರುವೆನು. ದಯವಿಟ್ಟು ಈ ದೀನಳನ್ನು ಕರೆದುಕೊಂಡು ಹೋಗು’ ಎಂದು ಪ್ರಾರ್ಥಿಸಿದಳು. ಶ್ರೀ ರಾಮನು ಆಕೆಯನ್ನು ಅಂಶರೂಪದಿಂದ ಅಲ್ಲಿ ವಾಸಮಾಡುವಂತೆ ಹೇಳಿ ಪೂರ್ಣರೂಪದಿಂದ ತನ್ನ ಜೊತೆಗೆ ಕರೆದುಕೊಂಡು ಹೊರಟನು. ಆಗ ಶ್ರೀ ರಾಮನ ಹಿಂದೆ ಲೆಖ್ಖವಿಲ್ಲದಷ್ಟು ಜನರು ಹೋಗುತ್ತಿದ್ದರು. ಲವನೇ ಮೊದಲಾದ ವೀರರು ಶ್ರೀ ರಾಮನೊಡನೆ ಬಹಳ ಉತ್ಸಾಹದಿಂದ ಹೊರಟರು. ಸೇನೆಯು ಸಾಗರದಂತೆ ಅಗಾಧವಾಗಿ ದಾರಿಯಲ್ಲಿ ಹೋಗುತ್ತಿತ್ತು. ಇದೆಲ್ಲವನ್ನು ನೋಡಲು ವಿದ್ಯಾಧರರು, ಗಂಧರ್ವರು, ಇವರೆಲ್ಲರೂ ಆಕಾಶದಲ್ಲಿ ನಿಂತಿದ್ದರು.

### ಹಸ್ತಿನಾಪುರದಕಡೆಗೆ ಗಮನ.

ಶ್ರೀ ರಾಮನು ಹನ್ನೊಂದು ದಿವಸಗಳಿಗೆ ಹಸ್ತಿನಾಪುರವನ್ನು ಸೇರಿದನು. ಶ್ರೀ ರಾಮನು ಬಂದಿರುವನೆಂಬ ವರ್ತಮಾನವನ್ನು ಕೇಳಿ ಸುಷೇಣನು ಅಷ್ಟಷ್ಟು ಕಪಿಸೇನೆಯೊಡನೆ ಆತನ ಬಳಿಗೆ ಬಂದನು. ಮತ್ತು ರಾಮಚಂದ್ರನನ್ನು ನೋಡಿ ‘ಹೇ ಪ್ರಭೋ, ನಿನ್ನ ಅನುಗ್ರಹದಿಂದ ಇಷ್ಟು ದಿವಸಗಳವರೆಗೂ ಈ ಅರಣ್ಯ

ಸೈನ್ಯವನ್ನು ಕಾದಿದ್ದೇನು' ಎಂದನು. ಶ್ರೀ ರಾಮನು ಹೆದರುತ್ತಿದ್ದ ಆ ವಾನರರನ್ನು ಸಮಾಧಾನಗೊಳಿಸಿ, ತನ್ನ ಸೇನೆಯನ್ನು ಭಾಗೀರಥಿಯ ಉತ್ತರತೀರದಲ್ಲಿ ನಿಲ್ಲು ವಂತೆ ಆಜ್ಞೆಮಾಡಿದನು. ನಳನು ಶ್ರೀ ರಾಮನ ಈ ಸೈನ್ಯವನ್ನು ನೋಡಿ ಹೆದರಿ ದರೂ, ಕ್ಷತ್ರಿಯಧರ್ಮವನ್ನನುಸರಿಸಿ ಧೈರ್ಯದಿಂದ ಯುದ್ಧಮಾಡಲು ತೆರಳಿದನು. ಶ್ರೀ ರಾಮನು ಆ ದಿವಸ ನಳನೊಡನೆ ವಾನರರಿಗೆ ಯುದ್ಧಮಾಡುವಂತೆ ಅಜ್ಞಾಪಿಸಿ ದನು. ವಾನರರು ಭಾಗೀರಥಿಯಲ್ಲಿ ಸ್ನಾನಮಾಡಿ, ಸೀತಾ–ರಾಮರ ಪಾದಗಳ ಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿ ನಳನೊಡನೆ ಯುದ್ಧಮಾಡಲು ಉಪಕ್ರಮಿಸಿದ ರು. ಉಭಯಪಕ್ಷದವರಿಗೂ ದೊಡ್ಡ ಯುದ್ಧವಾಯಿತು. ವಾನರರು ನಳನ ಸೇನಾ ಜನರನ್ನು ಪರ್ವತ, ಮರ, ಇತ್ಯಾದಿಗಳಿಂದ ಹೊಡೆದರು. ಸುಗ್ರೀವ, ಅಂಗದ, ಮಾರುತಿ ಇತ್ಯಾದಿ ವೀರರು ನಳನ ಸೈನ್ಯವನ್ನು ಒಣಗಿದ ಎಲೆಗಳಂತೆ ಕೆಳಗುರುಳಿ ಸಿದರು. ಇರಲಿ, ಕೊನೆಗೆ ನಳನ ಸೇನಾಪತಿಗಳು ಅಪಜಯವನ್ನು ಹೊಂದಿ ಹಿಂತಿ ರುಗಿದರು. ಆ ಕಾಲದಲ್ಲಿ ಅನೇಕ ವಾನರರು ಶತ್ರುಗಳ ಹೊಡತದಿಂದ ಭೂಮಿ ಯ ಮೇಲೆ ಬಿದ್ದಿದ್ದರೂ ಮಾರುತಿಯ ಕೃಪೆಯಿಂದ ಅವರೆಲ್ಲರೂ ಚೇತರಿಸಿಕೊಂ- ಡರು. ಅನಂತರ ನಳನ ಕಡೆಯಿಂದ ಸಪ್ತದ್ವೀಪಗಳ ಪೂರ್ವದ ರಾಜರು, ರಾಮ ಸೇನೆಯೊಡನೆ ಯುದ್ಧಮಾಡಲು ತೆರಳಿದರು. ಆಗಲಾತಂದೆ ಮಕ್ಕಳಿಗೆ ಯುದ್ಧವು ನಡೆಯಿತು. ತಂದೆಯನ್ನು ಮಗ ಕೊಲ್ಲುವನು, ಮೊಮ್ಮಗನನ್ನು ಅಜ್ಜ ಕೊಲ್ಲು ವನು. ಈ ರೀತಿ ಅನರ್ಥಗಳು ನಡೆದು ಕೊನೆಗೆ ಶ್ರೀ ರಾಮನ ಕಡೆಯ ಸಪ್ತದ್ವೀ ಪಗಳ ನೃಪತಿಗಳಿಗೇ ಜಯವಾಯಿತು. ಬಳಿಕ ನಳನು ತನ್ನ ವಂಶದವರನ್ನು ಶ್ರೀ ರಾಮನ ಸೇನೆಯೊಡನೆ ಯುದ್ಧಮಾಡುವಂತೆ ಅಜ್ಞಾಪಿಸಿದನು. ಆಗ ಶ್ರೀರಾಮನು ಕುಶಾದಿ ಪುತ್ರರಿಗೆ ಯುದ್ಧಮಾಡುವಂತೆ ಅಪ್ಪಣೆ ಮಾಡಿದನು. ಆ ರಾಜ ಬಂಧು ಗಳಿಗೆ ಪರಸ್ಪರ ಘೋರವಾದ ಯುದ್ಧವು ನಡೆಯಿತು. ತನ್ನ ಕಡೆಯವರಿಗೆ ಅಪ ಜಯವಾಗುವದೆಂಬ ಸೂಕ್ಷ್ಮವನ್ನು ತಿಳಿದು ನಳ.. ಯುದ್ಧಕ್ಕೆ ಬಂದನು. ಆತ ನನ್ನು ನೋಡಿದ ಕೂಡಲೆ ಕುಶನು ನಳನ ಎದುರಿಗ..ಂತು ಯುದ್ಧಮಾಡಲಾರಂಭಿ ಸಿದನು. ಅವರ ಯುದ್ಧವು ವರ್ಣಿಸಲು ಸಾಧ್ಯವಿಲ್ಲದಂತೆ ಇತ್ತು. ಆಗ ರಕ್ತದ ಪ್ರವಾಹಗಳು ಗಂಗಾನದಿಗೆ ಸೇರಲಾರಂಭಿಸಿದವು. ಕುಶನು ನಳನ ಕಡೆಯ ರಾಜಪುತ್ರರನ್ನೆಲ್ಲಾ ಭೂಮಿಗುರುಳಿಸಿ, ನಳನನ್ನು ಬಾಣಗಳಿಂದ ಬಹಳ ಹಿಂಸಿಸಿದ ನು. ಅವರಿಬ್ಬರಿಗೂ ಬಹಳ ಕಾಲಗಳ ವರೆಗೆ ಅಸ್ತ್ರಯುದ್ಧಗಳು ನಡೆದವು. ಇರಲಿ, ಕೊನೆಗೆ ಕುಶನು ತನ್ನ ದಿವ್ಯಾಸ್ತ್ರಗಳಿಂದ ನಳನ ಕುದುರೆ, ರಥ, ಸಾರಥಿ, ಕವಚ,